# SEETHA CHARITRE



# ಸೀತಾ ಚರಿತ್ರೆ.

ರಾಬರ್ಟ್‌ಸನ್‌ಪೇಟೆ ಗೌ. ಎ. ವಿ. ಸ್ಕೂಲ್ ಸಹಾಯೋಪಾಧ್ಯಾಯರಾದ

ಸಿ. ಎ. ಅಣ್ಣಯ್ಯನವರಿಂದ

ವಿರಚಿಸಲ್ಪಟ್ಟುದು.

ಪ್ರಥಮ ಮುದ್ರಣ ೧೦೦೦ ಪ್ರತಿಗಳು.

ಬೆಂಗಳೂರು:

ಟಿಪ್ರೂ ಮುದ್ರಾಕ್ಷರ ಶಾಲಾಧಿಕಾರಿಗಳಾದ ಹರಿರಾವ್ ಮಿತ್ರರವರಿಂದ

ಮುದ್ರಿಸಲ್ಪಟ್ಟಿತು.

1914



ಕ್ರಯ ರೂ. 1-0-0.] [ಪೋಸ್ಟೇಜ್ 0-2-0.

# ಪೀಠಿಕೆ.



ಈ ಗ್ರಂಥಕ್ಕೆ ಸಂಸ್ಕೃತದಲ್ಲಿರುವ ಶ್ರೀಮದ್ರಾಮಾಯಣ, ಆನಂದ ರಾಮಾಯಣಗಳೇ ಮುಖ್ಯಾಧಾರವಾಗಿವೆ. ಕನ್ನಡ ದೇಶದ ವಿದ್ಯಾರ್ಥಿಗಳ ಉಪಯೋಗಕ್ಕಾಗಿಯೂ, ಬಾಲಿಕಿಯರಿಗೆ ಪತಿವ್ರತಾ ಭಕ್ತಿ ಯುಂಟಾಗುವುದಕ್ಕಾಗಿಯೂ, ಪದ್ಯಕಾವ್ಯದಲ್ಲಿ ಜ್ಞಾನ ಲಭಿಸುವುದಕ್ಕಾಗಿಯೂ, ಸಹಾ ಸುಲಭಶೈಲಿಯಿಂದ ಭಾಮಿನಿ ಷಟ್ಪದಿಯ ರೂಪವಾಗಿ ಈ ಗ್ರಂಥವು ವಿರಚಿಸಲ್ಪಟ್ಟಿದೆ. ಲೋಕದಲ್ಲಿ ಪ್ರತಿಯೊಂದು ವಸ್ತುವೂ, ದೋಷಯುಕ್ತವಾಗಿರುವಂತೆ ಈ ಗ್ರಂಥವೂ ಹೆಚ್ಚಾದ ದೋಷದಿಂದ ಕೂಡಿದೆ ಎಂಬುವುದರಲ್ಲಿ ಸಂದೇಹವಿಲ್ಲ. "ಗುಣದೋಷೌ ಬುಧೋಗೃಹ್ಣನ್ನಿಂದುಕ್ಷ್ವೇಳಾವಿವೇಶ್ವರಃ । ಶಿರಸಾಶ್ಲಾಘತೇಪೂರ್ವಂ ಪರಂಕಂಠೇನಿಯಚ್ಛತಿ ॥" ಎಂಬಂತಿರುವುದರಿಂದ ಗುಣಗ್ರಾಹಿಗಳಾದ ಪಂಡಿತರು ತಮಗೆ ಕಾಣಬರುವ ದೋಷವನ್ನು ತಿದ್ದಿ ನನಗೆ ತಿಳಿಸಿ ಉತ್ತರೋತ್ತರ ಗ್ರಂಥವು ಸುಬದ್ಧವಾಗುವಂತೆ ಸಹಾಯ ಮಾಡಬೇಕೆಂದು ಕೇವಲ ವಿಧೇಯನಾಗಿ ಪ್ರಾರ್ಥಿಸುತ್ತೇನೆ. ಈ ಗ್ರಂಥವನ್ನು ಓದುವ ಜನರು ಇದರಲ್ಲಿರುವ ಒಳ್ಳೆಯ ಸಂಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅದರಂತೆ ಆಚರಿಸುತ್ತಾ ಬಂದರೆ ಅದೇ ನನಗೆ ಪ್ರತಿಫಲವೆಂದು ಹಾರೈಸುವೆನು. ಈ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಹಲವು ತಿದ್ದುಪಾಟುಗಳನ್ನು ಮಾಡಿ ಪ್ರಿಂಟಾಗುವ ಭಾಗದಲ್ಲಿ ಬಹಳ ಸಹಾಯವನ್ನು ಮಾಡಿರುವ ಕವಿಶಿಖಾಮಣಿಗಳಾದ ಮಾಗಡಿ ಗೌ. ಏ. ವಿ. ಸ್ಕೂಲ್ ಹೆಡ್ಮಾಸ್ಟರವರಾದ ಮಹಾರಾಜಶ್ರೀ ಕೆ. ರಾಮಸ್ವಾಮ್ಯಯ್ಯಾಚಾರ್ಯರವರಿಗೂ, ಗುಡಿಬಂಡಾ ಗೌ. ಏ. ವಿ. ಸ್ಕೂಲ್ ಹೆಡ್ಮಾಸ್ಟರವರಾದ ಮಹಾರಾಜಶ್ರೀ ಏ. ಕೇಶವಯ್ಯನವರಿಗೂ ನಾನು ಬಹಳ ಕೃತಜ್ಞನಾಗಿದ್ದೇನೆ. ಕೊನೆಯಲ್ಲಿ ಕೊಟ್ಟಿರುವ ಶುದ್ಧಾಶುದ್ಧ ಪತ್ರಿಕೆಯನ್ನು ನೋಡಿ ಅದರಂತೆ ಅಲ್ಲಲ್ಲಿ ಸರಿಮಾಡಿಕೊಂಡು ಪಠಿಸಬೇಕೆಂಬದಾಗಿ ವಾಚಕರೆಲ್ಲರನ್ನೂ ಬೇಡಿಕೊಳ್ಳುವೆನು.


ಸಿ. ಎ. ಅಣ್ಣಯ್ಯ,

ಸಹಾಯೋಪಾಧ್ಯಾಯಕ,

ಗೌ. ಏ. ವಿ. ಸ್ಕೂಲ್

ರಾಬರ್ಟ್ಸನ್‌ಪೇಟೆ. ಕೆ. ಜಿ. ಎಫ್.

# ವಿಷಯಾನುಕ್ರಮಣಿಕೆ.



| ಸಂಖ್ಯೆ. | ವಿಷಯು. | ಪುಟ. |
|---|---|---|
| 36 | ಸೀತೆಯು ರಾವಣನನ್ನು ಬಹುವಿಧವಾಗಿ ನಿಂದಿಸುವಿಕೆ. | 78 |
| 37 | ರಾವಣನು ಸೀತೆಯನ್ನು ಅಶೋಕವನದಲ್ಲಿರಿಸಿ ಕ್ರೂರರಾದ ರಾಕ್ಷಸಾಂಗನೆಯರನ್ನು ಕಾವಲಿರಿಸುವಿಕೆ. | 80 |
| 38 | ಅಶೋಕ ವನದ ವರ್ಣನೆ. | 82 |
| 39 | ಕ್ರೂರರೂಪಿಗಳಾದ ರಾಕ್ಷಸ ಸ್ತ್ರೀಯರು ಸೀತೆಯನ್ನು ಅಶೋಕವನದಲ್ಲಿ ಸುತ್ತಿಕೊಂಡು ಪಾಲಿಸುವುದು. | 87 |
| 40 | ರಾಮನು ಮಾಯಾಮೃಗವನ್ನು ಕೊಂದು ಪರ್ಣಶಾಲೆಗೆ ಬರುವಾಗ ದಾರಿಯಲ್ಲಿಬರುತ್ತಿದ್ದ ಲಕ್ಷ್ಮಣನನ್ನುನೋಡುವಿಕೆ | 90 |
| 41 | ಲಕ್ಷ್ಮಣನು ರಾಮನೊಡನೆ ಸೀತೆ ತನ್ನನ್ನು ನಿಂದಿಸಿದ ವಿವರವನ್ನು ತಿಳಸುವಿಕೆ. | 91 |
| 42 | ರಾಮನು ಜಟಾಯುವಿಗೆ ಮುಕ್ತಿಯನ್ನುಕೊಟ್ಟು ಕಬಂಧನನ್ನು ಸಂಹರಿಸಿ ಅವನಿಂದ ಸುಗ್ರೀವನ ವಿವರವನ್ನು ತಿಳಿದುಕೊಳ್ಳುವಿಕೆ. | 92 |
| 43 | ಸುಗ್ರೀವನು ರಾಮನೊಡನೆ ಸ್ನೇಹವನ್ನು ಮಾಡುವಿಕೆ. | 93 |
| 44 | ಸುಗ್ರೀವನು ಸೀತೆಯನ್ನು ಹುಡುಕುವುದಕ್ಕಾಗಿ ನಾಲ್ಕು ದಿಕ್ಕುಗಳಿಗೂ ಕಪಿಗಳನ್ನು ಕಳುಹುವಿಕೆ. | 95 |
| 45 | ಹನುಮಂತನು ಸಮುದ್ರವನ್ನು ದಾಟಿ ಲಂಕೆಯನ್ನು ಸೇರಿದ್ದು | 98 |
| 46 | ಹನುಮಂತನು ಸೀತೆಯನ್ನು ನೋಡುವಿಕೆ. | 101 |
| 47 | ರಾವಣನು ಸೀತೆಯಬಳಿಗೆ ಬಂದು ತನ್ನನ್ನು ವರಿಸಬೇಕೆಂದು ಅನೇಕ ವಿಧವಾಗಿ ಬೇಡಿಕೊಳ್ಳುವಿಕೆ. | 103 |
| 48 | ಸೀತೆಯು ರಾವಣನನ್ನುನಿರಾಕರಿಸಿ ಪ್ರತ್ಯುತ್ತರವನ್ನುಹೇಳುವಿಕೆ | 105 |
| 49 | ಮಂಡೋದರಿಯು ಸಮಾಧಾನಮಾಡಿ ರಾವಣನನ್ನು ಮನೆಗೆ ಕರೆದುಕೊಂಡು ಹೋಗುವಿಕೆ. | 107 |
| 50 | ಕಾವಲಿನ ಸ್ತ್ರೀಯರು ರಾವಣನನ್ನು ವರಿಸಬೇಕೆಂದು ಸೀತೆಗೆ ಅನೇಕವಿಧವಾಗಿ ಬೋಧಿಸುವಿಕೆ. | 108 |
| 51 | ಸೀತೆಯು ರಾಕ್ಷಸಾಂಗನೆಯರಿಗೆ ಮುಂದೆ ಲಂಕಾಪಟ್ಟಣವು ನಾಶವಾಗುವುದೆಂಬುದನ್ನು ತಿಳಸುವಿಕೆ. | 114 |

| ಸಂಖ್ಯೆ. | ವಿಷಯ. | ಪುಟ. |
|---|---|---|
| 98 | ದಶರಥನು ನೂರೆಂಟುಸಲ ತಾನು ಕೊಟ್ಟಮರಳ ಮುದ್ದೆಗಳನ್ನು ತೆಗೆದುಕೊಂಡ ಸಂಗತಿಯನ್ನು ಸೀತೆಯು ರಾಮನಿಗೆ ತಿಳಿಸುವಿಕೆ. | 214 |
| 99 | ರಾಮನು ಸೀತೆಯೊಡನೆ ಪೂರ್ವದಿಕ್ಕಿನ ಯಾತ್ರೆಯನ್ನು ಮುಗಿಸಿಕೊಂಡು ದಕ್ಷಿಣದಿಕ್ಕಿಗೆ ಬರುವಿಕೆ. | 216 |
| 100 | ರಾಮನು ಸೀತೆಯೊಡನೆ ದಕ್ಷಿಣದಿಕ್ಕಿನ ಯಾತ್ರೆಯನ್ನು ಮುಗಿಸಿಕೊಂಡು ಉಡುಪಿಗೆ ಬರುವಿಕೆ. | 221 |
| 101 | ಪಶ್ಚಿಮದಿಕ್ಕಿನ ಯಾತ್ರೆಯನ್ನು ಮುಗಿಸಿಕೊಂಡು ಹೆಂಡತಿಯಸಹಿತ ರಾಮನು ಉತ್ತರದಿಕ್ಕಿಗೆ ಬರುವಿಕೆ. | 223 |
| 102 | ಉತ್ತರದಿಕ್ಕಿನ ಯಾತ್ರೆಯನ್ನು ಪೂರೈಸಿಕೊಂಡು ಸಮಸ್ತಬಂಧುಗಳಸಹಿತ ರಾಮನು ಅಯೋಧ್ಯೆಗೆ ಬರುವಿಕೆ. | 224 |
| 103 | ರಾಮನು ಹಯಮೇಧಯಾಗಕ್ಕೆ ಪ್ರಾರಂಭಮಾಡಿ ದೇಶದಮೇಲೆ ಕುದುರೆಯನ್ನು ಬಿಡುವಿಕೆ, | 227 |
| 104 | ರಾಮನು ಅಶ್ವಮೇಧಯಾಗವನ್ನು ಸಾಂಗವಾಗಿ ನೆರವೇರಿಸುವಿಕೆ. | 229 |
| 105 | ರಾಮನು ಸೀತೆಯನ್ನು ವಸಿಷ್ಠಮುನಿಗೆ ದಾನಮಾಡುವಿಕೆ | 230 |
| 106 | ರಾಮನ ಶಯ್ಯಾಗೃಹದ ವರ್ಣನೆ. | 233 |
| 107 | ರಾಮನು ಸೀತೆಯನ್ನು ವರ್ಣಿಸುವಿಕೆ. | 234 |
| 108 | ಸೀತೆಯು ತನಗೆ ಉಪದೇಶಮಾಡಿದ ದೇಹರಾಮಾಯಣವನ್ನು ಶ್ರೀರಾಮನಿಗೆ ತಿಳಿಸುವಿಕೆ. | 236 |
| 109 | ರಾಮನು ತನ್ನ ಮನೆಗೆಬಂದ ಕೋಟಿ ಮುನಿಗಳನ್ನು ಭೋಜನಮಾಡಿಸಿ ತೃಪ್ತಿಪಡಿಸುವಿಕೆ. | 240 |
| 110 | ಸೀತೆಯು ಬಡಹೆಂಗಸನ್ನು ಕರೆಯಿಸಿ ಅವಳಿಗೆ ಅನೇಕಾಭರಣಾದಿಗಳನ್ನು ಕೊಟ್ಟುಕಳುಹಿಸುವಿಕೆ. | 241 |
| 111 | ರಾಮನು ವ್ಯಾಸರುಹೇಳಿದಂತೆ ಚಿನ್ನದಿಂದ ಹದಿನಾರು ಪ್ರತಿಮೆಗಳನ್ನು ಮಾಡಿಸಿ ಬ್ರಾಹ್ಮಣರಿಗೆದಾನಮಾಡುವಿಕೆ. | 243 |
| 112 | ಪಿಂಗಳೆಯೆಂಬ ವಾರಾಂಗನೆಯು ರಾಮನೊಡನೆ ಕ್ರೀಡಿಸಬೇಕೆಂಬದಾಗಿ ಬಂದು ಆತನನ್ನು ಪ್ರಾರ್ಥಿಸುವಿಕೆ. | 243 |
| 113 | ಲೋಪಾಮುದ್ರಾ ಸೀತಾಸಂವಾದ | 245 |

---

ಶ್ರೀಃ

॥ ಜಯ ಶ್ರೀ ಸೀತಾರಾಮಚಂದ್ರ ಭಗವಾನ್ ॥



# ಸೀತಾ ಚರಿತ್ರೆ.

॥ ಭಾಮಿನೀ ಷಟ್ಪದಿ ॥

ಶ್ರೀರಮಣವರ ವಾಸುಕಿಶಯನ । ಕ್ರೂರರಾವಣ ಸಂಹರಣಸರ । ನೀರಜನಯನ ಖಗಪತಿಗಮನ ಕೌಸ್ತುಭಾಭರಣ ॥ ವಾರಪಿತದೇವ ನುತಜನಹಿತ । ನಾರಸಿಂಹ ಮಧುರಿಪುನೀದಯ । ದೋರಿನಿನ್ನವನೆಂದು ರಕ್ಷಿಸು ನಮ್ಮ ನನವರತ ॥ ೧ ॥ ಕ್ಷೀರಸಾಗರ ಮಥನದೊಳು ತಲೆ । ದೋರಿದವಿಷವ ಕೊರಳೊಳ್ಧರಿಸಿದ । ಮಾರನರಿದ ಪಂಚವಿಂಶತಿ ಲೀಲೆಗಳತಳೆದ ॥ ನಾರದಾದಿ ಮುನೀಂದ್ರನುತ ಗಿರಿ । ಜಾರಮಣ ಭುಜಗಾಭರಣ ತ್ರಿಪುರ । ರಾರಿ ಸೋಮಧರಗಿರಿಶ ಸಲಹು ನಮ್ಮ ನನವರತ ॥ ೨ ॥ ವಾರಣವದನ ಮೂಷಕಗಮನ । ತೋರಭುಜಗಾವರಣ ವಿಘ್ನವಿ । ದೂರಲಂಬೋದರ ದಯಾಕರ ಸಿದ್ಧಿದಾಯಕ ನೀಂ ॥ ದಾರಿಕೊಡದಿರೆ ಕರುಣಿಸುವೆಸುರ । ರಾರುಪೂಜಿಸಿ ನಮಿಸಿ ನುತಿಸುವೆ । ಸಾರಸುಗುಣವನಿತ್ತು ಪಾಲಿಸು ನಮ್ಮ ನನವರತ ॥ ೩ ॥ ವಾಣಿ ಕಮಲಜರಾಣಿ ವೀಣಾ । ಪಾಣಿ ಕೋಕಿಲವಾಣಿ ಪನ್ನಗ । ವೇಣಿ ಕಲ್ಯಾಣಿವರಸುಗುಣಶ್ರೇಣಿ ಸು

ಶ್ರೋಣಿ || ಕಾಣಿಸಿಮತಿಯ ಸಲಹುಶಾರದೆ | ಜಾಣೆಯುಪ್ಪಂತೆ ನಿರುತ
ವುನೀಂ | ಮಾಣದೆಭಜಿಪೆನು ಸತತವುನಿನ್ನಯ ಪದಕಮಲವ || ೪ ||
ಧಾರುಣಿಯೊಳು ತನಯರನಂಕದೊ | ಳೇರಿಸಿಕಲಿಸಿ ನುಡಿಗಳನು ಕೈ |
ದೋರಿಯವುಗಳ ತಂದೆತಾಯಿಗಳಾಲಿಸಿ ನಿರುತವು | ಮೀರಿದಾನಂದದಿ
ನಲಿವವೊಲು | ಸಾರಸಜ್ಜನರಿದರೊಳಡದೆ ವಿ | ಚಾರವೆನಮಲಮತಿ
ಯೊಳಾಲಿಪುದೆನುತ ನಮಿಸುವೆನು || ೫ || ಬಾರದೆನಗೆ ಕವಿತೆಯುಪದ್ಧತಿ |
ಸೇರಿಯರಿಯೆನು ವಿಬುಧರಸಭೆಯು | ಮಾರಜನಕನ ಪಾದಕಮಲವ
ಭಜಿಸಿದವನಲ್ಲ || ಭೂರಿಪಾತಕಿಯಾಗಿರುವೆ ನೀ | ಸಾರಕಥೆಯೊಳಹ
ಮಗುಣಂಗಳ | ತಾರದೆಮನಕೆ ಸತ್ಕಥೆಯಿದೆಂದಾಲಿಪುದು ಜನರು || ೬ ||
ವನಧಿಯಂತೆ ನವರಸಭರಿತಂ | ವನಜಭವನಂತೆ ವಿಬುಧಹಿತಂ | ವನಜ
ದಂತಾರಡಿಯುತಂ ವನಮಾಲಿಯಂತ್ರಿದುತಾಂ || ಘನಮೆನಿಪಲಂಕಾರ
ಮಹಿತಂ | ವಿಸ್ತುತಿವೆತ್ತಿಹುದನ್ವಯದೆ ಸ | ಜ್ಜನರಪರಿಯಂತಾಮೆಗಂಮ
ತ್ಕವಿತೆಧರಣಿಯೊಳು || ೭ || ಘನಯತಿಗಣಪ್ರಾಸದಿಂ ಕವಿ | ವಿನುತಸಂ
ಧಿಸಮಾಸದಿಂ ದಲ | ವನಿಯೊಳೊಪ್ಪಿಹುದು ವರಲಕ್ಷಣಭಾವವನ್ವಯ
ದಿಂ || ಜನಕಜಾತೆಯ ಚರಿತೆಯಿದು ಪಾ | ವನಕೆ ಪಾವನಮತಿ ಶುಭಾ
ವಹ | ಮೆನಿಸಿ ರಾರಾಜಿಪುದು ಪಾಪವಹರಿಸಿ ಮಾನವರ || ೮ || ಇದು
ಜನರ್ಗೆ ಸುಮತಿಯನೀವುದು | ಇದುವೆಪತಿಭಕ್ತಿಯನುವಧುಗ | ಳ್ಗೊ
ದಗಿಪುದು ಸಕಲರ್ಗಮಿಹಪರಸುಖವನಾಗಿಪುದು || ಇದುಸಮಸ್ತಕಲುಷ
ಗಳನುಹರಿ | ಪುದು ಜಗದೊಳಿದಕೆಣೆಯೆಮಿಕ್ಕಾ | ಸುದತಿಯರಚರಿತೆ
ಗಳು ಲಾಲಿಪುದಿದನು ಮುದದಿಂದೆ || ೯ || ವಿನುತಸೀತಾಕಥೆಯನಾಕೆ
ಯು | ಘನತರಕೃಪೆ ಯಿಂದಪೇಳ್ದನು | ಮುನಿಪಕಶ್ಯಪ ಗೋತ್ರದಾಪ
ಸ್ತಂಭಸೂತ್ರದೊಳು || ಜನಿಸಿವೇದಾಧ್ಯಯನದೊಳು ದ | ಕ್ಷನೆನಿಸಿದ
ಹೋಬಿಲಬುಧವರನ | ತನಯ ನರಸಿಂಹನುನಮಿಸಿ ಹಿಂದಣಸುಕವಿ
ಗಳ್ಗೆ || ೧೦ || ಮೆರೆವಶೃಂಗಗಿರಿಮಠದೊಳು ಶಂ | ಕರನುತಾನೆನೆ ರಂಜಿ
ಪ ಜಗ | ದ್ಗುರುಗಳೆನಿಸಿದ ಸಚ್ಚಿದಾನಂದ ಸುಶಿವಾಭಿನವ || ಬಿರುದನಾಂ
ತ ನೃಸಿಂಹಭಾರತಿ | ವರಯತೀಂದ್ರ ಸ್ವಾಮಿಗಳಮಲ | ಚರಣಪಂಕ
ಜಗಳನು ಚಾನಿಸುತೊರೆವೆನೀಕೃತಿಯ || ೧೧ || ತನಯನಂತೀಕ್ಷಿಸುತ
ನನ್ನನು | ಮನೆಯೊಳಾವಗ ಮಿರಿಸಿಕೊಂಡು ಸ | ವಿನುಡಿಯಿಂದೊಲಿ

ಪೆತ್ತ ಕನ್ನಡ ಸಂಸ್ಕೃತಂಗಳನು ‖ ಅನುಗೊಳಿಸಿ ದಳ ಸಿಂಗರಾಚಾ ।
ರ್ಯನೆನಿಸುವ ವಿದ್ಯಾಗುರೂತ್ತಮ । ರನಿಜಬೋಧನೆಯ ಬಲದಿಂದೆರ
ಚಿಸುವೆನೀಕಥೆಯ ‖ ೧೨ ‖

ಇಂತು ಮೊದಲನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೧೨.



## ೨ನೆಯ ಅಧ್ಯಾಯ.

ಸೂಚನೆ ‖ ಸೋಮವಂಶಲಲಾಮ ನಾಹವ ।
ಭೀಮಜನಕನು ಪೊರದನುಸಕಲ ।
ಭೂಮಿಯನುರಾಜರೊಳಧಿಕನೆನಿಸುತ್ತ ಧರ್ಮದಲಿ ‖

ವನರುಹಭವಾಂಡದೊಳುನೆರೆದಿಪ । ವಿನುತಜಂಬೂದ್ವೀಪಮಧ್ಯದೆ । ಕನಕಗಿರಿಕಂಗೊಳಿಸುವುದದರ ತೆಂಕಣದೆಸೆಯೊಳು ‖ ಜನರದುರಿತವ ನೀಗುತವಿಮಲ । ಮನಿಪಗಂಗಾ ನದಿಯತೀರದೊ । ಳುನೆರೆಮೆರೆದುದು ಮಿಥಿಲದೇಶವು ಸಕಲ ಸಿರಿಯಿಂದ ‖ ೧ ‖ ಮೆರೆದುದಾ ಮಿಥಿಲಾಪುರಂ ಗರಿ । ತುರಗಪಾದಾತ ರಥಗಳಲಾ । ಹೊರವಳಯದುಪವನಗಳಲಿ ಸಾಧಾಳಿಯಲಿ ಹೊಳೆವ ‖ ಹರಿಹರರ ದೇವಾಲಯಂಗಳ । ಲಿರತುನಾವಳಿ ಸಂಗಡಿಗಳಲಿ । ವರಕವಿವಿಬುಧ ಸಂಚಯದಲಿ ಧನಕನಕಂಗಳಲಿ ೨ ‖ ಹಿಮಕಿರಣ ವಂಶದೊಳುದಿಸಿದನು । ನಿಮಿ ಮಿಥಿಲೆಯರಸರೊಳು ಮೊದಲಿಗ । ನಮಿತ ತೇಜೋವಂತನಾತನ ಬಳಿಕ ಕ್ರಮದಿಂದ ‖ ಅಮ ಗುಣಯುತ ರಾಳ್ದರವರೊಳು । ಸುಮಹಿತ ಪರಾಕ್ರಮನೆನಿಸುತೀ । ಕ್ಷಮೆಯನಾಳ್ದನು ಹ್ರಸ್ವರೋಮಖ್ಯಾತ ಭೂಮಿಪತಿ ‖ ೩ ‖ ಧರಣಿ ಪತಿಯಾ ಹ್ರಸ್ವರೋಮನು । ದರದೆ ಸಂಜನಿಸಿದನು ವಿಧುಕುಲ । ಶರ ಸೋಮನು ತಾನೆನಲ್ಜನಕಾವನೀಧವನು ‖ ಪರಿಪರಿಯ ರಾಜೋಪ ಚರದ । ಲರಗುವರನಭಿ ವೃದ್ಧಿಯಾಗುತ । ಮೆರೆದನುತ್ತಮ ಬಾಲಲೀ ಗಳನ್ನು ತೋರಿಸುತ ‖ ೪ ‖ ಎಳೆಯುತನದೊಳಗಾ ಜನಕಗುರು । ಳಸನಿಪದೊಳು ಕಲಿತನೆಲ್ಲಾ । ಕಲೆಗಳವಿತತ ವೇದ ಶಾಸ್ತ್ರ ಪುರಾಣಗಳ

ತತಿಯು || ತಿಳಿದನಾ ಬಳಿಕಸ್ತ್ರ ಶಸ್ತ್ರ | ವಳಿಗಳ ಶರಶರಾಸನಂಗಳ | ನಿಳೆಯೊಳನುಸಂಧಿಸುತ್ತದನು ಬಿಡುವುದನುಕೂಡ || ೫ || ಜನರೊಡೆಯನಾ ಹ್ರಸ್ವರೋಮನು | ತನಯನ ಕಲಾಕೌಶಲಂಗಳ | ಮನದೊಳೀಕ್ಷಿಸಿ ಧರಣಿ ರಕ್ಷಣೆ ಗರ್ಹನಿವನೆನುತ || ಜನಕನ ಪ್ರಭು ಪದವಿಯೊಳಗಿರಿಸಿ ನಡೆದನು ಸತಿಸಹಿತತಾಂ ಕಾ | ನನಕೆ ತಾಪಸವೃತ್ತಿಯಲಿ ಕಳೆಯುತ್ತ ಕಾಲವನು || ೬ || ಪಿತನದೆಸೆಯಿಂ ತಾನು ಪಡೆದಿಹ || ವಿತತರಾಜ್ಯವ ನಾಜನಕನೂ | ಪತಿಪೊರೆದ ನಿಳೆಯಲ್ಲಿ ತನಗೆಣೆಯಾರುಮಿಲ್ಲೆನಿಸಿ || ನುತಿವಡೆದನು ಸಗರ ಭಗೀರಥ | ರತೆರದೊಳಖಿಳ ಧರ್ಮವೆಸಿಡದೆ | ಸತತವು ಸಕಲ ರಾಜನೀತಿಯ ತಿಳಿದು ಮನದೊಳಗೆ || ೭ || ಜನಕನರಸಿ ಸುಮೇಧೆಯೆಂಬಾ | ವನಿತೆ ಪತಿವ್ರತೆಯರೊಳಧಿಕಳೆಂ | ದೆನಿಸಿಪಳಾವಗವೂಪತಿಗೆ ಸಂಮುದವನೆಸಗುವಳು || ತನಗೆ ಸಮರಾರೀ ಜಗದೊಳೆಂ | ದೆನಸುಮೇಧೆ ನಮಿಸಿ ನಿರಂತರ | ವು ನೆರೆಪೂಜಿಸುವಳು ಸಕಲದೇವತೆಗಳನುಪದೆದು || ೮ || ಮುನಿಶತಾನಂದನು ಪುರೋಹಿತ | ನೆನಿಸುವನು ಭೂಮಿಪತಿ ಜನಕಗೆ | ವಿನುತಿವಡೆದಾ ವೇದಶಾಸ್ತ್ರಂಗಳಲಿ ವಿದಿತವಶ || ಜನಪರಾಗಿಸುವಖಿಳ ಕರ್ಮಗ | ಳನುನಯದಿ ತಾನಾಗಿಸುವನಾ | ಜನಪತಿಗೆಗೌತಮನ ಪುತ್ರನು ದಿನದಿನಂಗಳಲಿ || ೯ || ವರಸುಧಾಮನು ಮಂತ್ರಿಯೆನಿಪನು | ನರಪತಿಯಖಿಳ ರಾಜಕಾರ್ಯದೆ | ನಿರತನಾಗಿಪನಾ ಜನಕಭೂಪನ ಸಕಲಮಹಿಯು || ಪುರಧನ ಬಲ ಕರಿ ತುರಗಂಗಳ | ಸರಿಯೆನೆ ವಿಚಾರಿಪನು ಸತತವು | ಧರಣಿಯೊಳಗಾರೀತನಿಗೆ ಸಮನೆಂಬ ಸಚಿವನೆನೆ || ೧೦ || ಸುರಗುರುವಿನ ಸಹಾಯದಲಿ ವಿಬು | ಧರಬಲವಲಿ ನಿಶಾಚರರಸಂ | ಹರಿಸಿನಾಕವ ನಾಳುವಾ ದಿವಿಜಪತಿಯಂದದಲಿ || ವರಸಚಿವ ಬಲದಿಂದೆರಾಜಿಸಿ | ನೆರೆವಸೈನ್ಯದೊಳಾಹಗೆಗಳನು | ತರಿದು ಪಾಲಿಸಿದ ನವನಿಯನಾಜನಕ ಭೂಮಿಪನು || ೧೧ || ಆಡರಾತನ ಮನುಜರನ್ನತವ | ಕೂಡರನ್ಯರ ಸತಿಯರನು ತಾ | ವ್ಬೇಡರಿತರ ಜನರನು ಮಾಡುವರಖಿಳಧರ್ಮಗಳ || ನೋಡಿ ತಿಳಿಯರು ದುಃಖ ಬಳಗವ | ಕೇಡು ಮಾಡರು ಪರರಿಗೆಂದುಂ | ನೋಡಲಾತನ ಧರೆಯೊಳಿಪರೇ ಖೂಳ ಮಾನವರು || ೧೨ || ಆರು ಕರ್ಮಂಗಳನು ಮಾಳ್ಪರು | ಧಾರುಣೀಸುರರೆಲ್ಲ ಪಗೆಗಳ | ವೀರಬಾಹುಜರಿರಿದು ರಣದಲಿ ಮಹಿಯ ನಾಳುವರು |

ಗೂರುಜರಧಿಕರೆಂದೆನಿಸಿಹರು । ವಿಾರಿದ ಕ್ರಯ ವಿಕ್ರಯಗಳಲಿ । ಮೂರು ವರ್ಣದೊಳೆಲ್ಲರಂ ಶೂದ್ರತತಿ ಸೇವಿಪ್ಪುದು ॥ ೧೩ ॥ ಇಳೆಯ ನಾಳುತ್ತಿರಲು ಜನಕನು । ಮಳೆಯುಸುರಿವುದು ಕಾಲಕಾಲಕೆ । ನೆಲದೆ ಬೆಳೆವುವು ಸಕಲ ಧಾನ್ಯಗಳರಿಯೆ ಹುಲುಸಾಗಿ ॥ ಫಲಭರಿತವಾಗಿಹ ವೃಕ್ಷ ಪಾದಪ । ಗಳು ವಿವಿಧ ಕುಸುಮಂಗಳಾ ಲತೆ । ಗಳಲಿ ತೋರ್ಪುವು ಘನಪರಿಮಳವನಾಂತು ಶೋಭಿಸುತ ॥ ೧೪ ॥ ಕಳವುಪುಸ್ಸಿಪಾದರ ಕಪಟ ನಯು । ವಿಲಗ ಮೋಸ ಕುಟಿಲ ಕಠಿಣತೆ ಜ । ಗಳಜನದ್ವೇಷ ಪರದೂಷಣೆ ಕೋಪ ಧನಲೋಭ ॥ ಗಳ ಹತನ ಮದ ಮತ್ಸರ ಕೊಲೆ ನಿ । ಗಡದ ಬಂಧನ ಸಂಕಟಜಡತೆ । ಗಳು ಮುಳಿದುನೋಡಿ ದೊಡೆಕಾಣವು ಜನಕನುರ್ವಿಯಲಿ ॥ ೧೫ ॥ ಧರೆಯನಾಜನಕನು ಸಲಹುತಿರೆ । ಧರಣಿಯು ಸಮಸ್ತ ಜನತತಿಯಲಿ । ನಿರುತವುಂ ನೆಲಸಿಹವುಸತ್ಯವಿನಯವು ಭೂತದಯೆ ॥ ಪರಸಹಾಯವ ಹಿಂಸೆ ಗುರು ಹಿರಿ । ಯರ ಭಕುತಿ ವಿಶ್ವಾಸ ಮೇದಿನಿ । ಸುರರಸೇವೆಯುಮಲಮತಿ ಸಕಲ ದಾನ ಧರ್ಮಗಳು । ೧೬ ॥ ಎಲ್ಲರುಂ ವಿದ್ಯಾನಿಪುಣ ರಹ । ರೆಲ್ಲರುಂ ದಾನಗಳನಾಗಿಪ । ರೆಲ್ಲರುಂ ತೋಷಿಪ ರತಿಥಿಯಭ್ಯಾಗತರುಗಳನು ॥ ಎಲ್ಲರುಂ ಸುಖಗಳನು ಪೊಂದುವ । ರೆಲ್ಲರುಂ ಸಂತಸವನಾಂತಿಹ । ರೆಲ್ಲರುಂ ದೇವಾರ್ಚನೆಗಳ ನೆಸಗುತಿಹ ರನುದಿನ ॥ ೧೭ ॥ ಆವಕಾಲದ ಲಾವತಾಣದ ಲಾವವಿಧದೊಳ ಗಾವಮಾನವ । ನಾವನೋವನು ಮೊಡಲರಿಯನು ಜನಕರಾಜ್ಯದಲಿ ॥ ತಾವು ಸತಿಸುತ ಬಂಧುಗಳ ಸಹಿ । ತಾವಗಂ ಸಂತಸವ ತಳೆದಾ । ದೇವದೇವನ ಪಾದಕಮಲವ ಪೂಜಿಸುತಲಿಹರು ॥ ೧೮ ॥ ಕಮಲ ಭವನಂತೆ ವಿಬುಧಯುತಂ । ಹಿಮಕಿರಣನಂತೆ ಕುವಲಯ ಯುತ । ನಮರಪತಿಯಂತೆ ವಸುವಿನುತಂ ರಜತಗಿರಿಯಂತೆ ॥ ವಿಮಲ ವಿಭವಭರಿತಂ ಗಗನದಂ । ತೆ ಮಹಿತ ಕವಿಗುರುವಿನುತಂ ಸಿರಿ । ರಮಣನಂತೆ ಚತುರಬಲಾನ್ವಿತ ನೆನಿಸಿದನು ಜನಕ ॥ ೧೯ ॥ ಸುರಮಣಿಯುತಂ ಧರಣಿಧರನಂ । ತರುತರದ್ವಿಜ ರಾಜಮಹಿತಂ । ಗಿರಿಶನಂತೆ ನಿದೋರ್ಷ ನಾ ದಿವಸಾಧಿಪತಿಯಂತೆ ॥ ಸುರುಚಿರಭುವನ ರಮ್ಯನಾಥನ । ಸರಸಿಯಂತೆ ಸುಮನಸವಿಹಿತಂ । ಸುರನಿಲಯದಂತಾವಗಂ ತಾನೆನಿಸಿದನು ಜನಕ ॥ ೨೦ ॥ ಈ ಪರಿಯೊಳಾರಾಜ ಧರ್ಮದೆ । ಭೂಪತಿಜನಕ ಪಾಲಿ

ಸುತ್ತಿರೆ । ಭೂಪನೆ ಸಕಲ ಭೂಮಿಯ ನನುಜಸತಿ ಸಚಿವರಿಂದೆ ॥ ಲೋಪವಿಲ್ಲದೆ ರಾಜ ಸುಖದೊಳು । ಕೋಪವುಳಿದೀ ಭೂತಳದೊಳಹ । ತಾಪಸರವುತದಿಂದೆಸಗಿದನು ಸಕಲ ಧರ್ಮಗಳ ॥ ೨೧ ॥ ದೇವರಾತ ನೃಪಾಲಗೆ ಮಹಾ । ದೇವನಿತ್ತಾ ಶಿವಧನುವ ತಾ । ನಾವಕಾಲದೆ ತಪ್ಪದೆಯನುಜ ನಾಕುಶಧ್ವಜನ ॥ ತೀವಿದ ಸಹಾಯದೊಳು ಪೂಜಿಸಿ । ನೋವನಾನದೆ ವಿಮಲಸುಮನೋ । ಭಾವದಲಿರಕ್ಷಿಸಿದ ನಾಜನಕ ನವನೀತಳವ ॥ ೨೨ ॥ ಮುನಿಪ ವಿಶ್ವಾಮಿತ್ರ ಗೌತಮ । ಜನನುತಾತ್ರಿವಸಿಷ್ಠ ಶೌನಕ । ರೆನಿಪಮುನಿಪರು ಶಿಷ್ಯರೊಡನೈತಂದು ನೃಪನಿಂದ ॥ ಮನದಣಿಯೆ ಕೈಕೊಂಡು ಪೂಜೆಗ । ಳನು ಬಳಿಕ ಭೋಜನವ ನಾಗಿಸಿ । ಜನಕನಂ ಪರಸುತ್ತ ಪೋದರು ತಿಳಿಸಿ ಧರ್ಮಗಳ ॥ ೨೩ ॥ ಮುನಿಪತಿಗಳಿಂದೀ ತೆರದೊಳಾ । ಜನಕ ಭೂಪತಿ ಸಕಲ ಧರ್ಮಗ । ಳನು ವರಿತು ನಿಜನಿತ್ಯ ಕೃತ್ಯಂಗಳನು ತಾನೆಸಗಿ ॥ ಮುನಿಸಮೂಹವ ನಖಿಳಭೂಸುರ । ರನಿವಹವ ಸಂತೋಷಗೊಳಿಸುತ । ದಿನದಿನದೆ ಧರ್ಮದಲಿ ಪಾಲಿಸುತಿರ್ದನು ಧರಣಿಯ ॥ ೨೪ ॥ ಭೂತಳವ ನೀಪರಿಯೊಳು ಸಲಹು । ವಾತನ ಸತಿಸುಮೇಧೆಯೆಂದೆನಿ । ಪಾ ತರುಣಿಮಣಿ ಪತಿಯತೋಷಿಸುತಖಿಳಕೃತ್ಯದಲಿ ॥ ಖ್ಯಾತಿವಡೆದಾ ವ್ರತಗಳೆಸಗುತ । ಮಾತೆ ಸಕಲ ಜನರಿಗೆ ತಾನೆನೆ । ನೀತಿಯಿಂದೆಸಗಿದಳು ದೇವನಿಕರಕೆ ಪೂಜೆಗಳ ॥ ೨೫ ॥ ಸತಿಸುಮೇಧೆಯೆನಿಪ ವಧೂಮಣಿ । ಸುತರು ತನ್ನುದರದೊಳುದಿಸದಿರೆ । ಗತಿಯೊದಗದೆಂದೆನುತ ಮನದಲಿನೊಂದು ಕೊರಗುತ್ತ ॥ ಸತತಮುಂಚಿಂತಿಸುತ ತನ್ನಯ । ಪತಿಯೊಡನೆ ಸಂಕಟವಪೇಳ್ದು ಪ । ಲತೆರದಿಂ ಮರುಗಿದಳು ಬೇವುತ ತನ್ನ ಚಿತ್ತದಲಿ ॥ ೨೬ ॥ ಪಲತೆರದ ರಾಜೋಪಚಾರಗ । ಳಲಿ ಮನವನಾಗಿಸದುಳಿದು ಸುಖ । ಗಳಗೆಳೆಯರೊಡನಾನದೆ ಮುದವನೊಂದು ಬಿಸುಸುಯ್ದು ॥ ಇಳೆಯೊಳೆಲ್ಲರು ಬಂಜೆಯೆಂದೆನು । ತಲಿ ಕರೆದಪರು ತನ್ನನೆಂದಾ । ಲಲನೆಪೇಳಿದಳಂತರಂಗದೊಳಳುತ ನಿಜಪತಿಗೆ ॥ ೨೭ ॥ ಒಂದುಸಮಯದೊಳಾ ಗಣಪತಿಯ । ನೊಂದು ಸಮಯದೊಳಂಬಿಕೆಯ ಮ । ತ್ತೊಂದುಸಮಯದೆ ತುಲಸಿಬಿಲ್ವಾಶ್ವತ್ಥ ತರುಗಳನು ॥ ಒಂದುಸಮಯದೊಳಾ ಸವಿತೃವ । ನೊಂದು ಸಮಯದಲಿ ನಾಗಿಣರರಸು । ಚಂದದಲಿ ಪೂಜಿಸುತಲಿರ್ದಳು ಸುತರುದಿಸಲೆನುತ

॥ ೨೮ ॥ ಸತಿಯು ದುಃಖವಕಾಣುತಾ ಜನ । ಪತಿಮನದೊಳುರೆ ಚಿಂತಿಸುತತನ । ಗತಿಹಿತನೆನಿಪ ಮಂತ್ರಿಯಾದ ಸುಧಾಮನನು ಕರೆದು ॥ ನುತಿವಡೆದ ಮುನಿಪಾಲರಿಗೆ ನೀಂ । ನತಿಭಕುತಿಯಿಂದೆರಗಿ ಕೂಡೆ ಕ । ರೆ ತಪುದೆನ್ನಯ ಬಿನ್ನಪವ ಮನ್ನಿಸುತಬಹುದೆಂದು ॥ ೨೯ ॥ ಅರಸನಾಜ್ಞೆಯೊಳಾಸುಧಾಮನು । ವರಮುನಿಗಳನಿಪತ್ರಿಗೌತಮ । ಗುರುವಸಿಷ್ಠಸುಯಜ್ಞ ವಾಲ್ಮೀಕಿಗಳ ಬಳಿಗೈದಿ ॥ ಚರಣಕೆರಗುತ ಬಿನ್ನವಿಸಿದನು । ಧರಣಿಪಾಲಕ ಜನಕನಾತನ । ಪುರಕೆ ತಮ್ಮನು ಕರೆತರುವುದೆಂದು ಕಳುಹಿದನೆನುತ ॥ ೩೦ ॥ ಸಚಿವವಿನಯದಿ ಬಿನ್ನವಿಸಿದಾ । ವಚನವನು ಕೇಳುತ್ತ ಮುನಿಪರಿ । ದುಚಿತವೆಂದೆನುತಾಗಳೆಲ್ಲರು ಸಂತಸವ ತಳೆದು ॥ ಉಚಿತವೃತ್ತಿಯೊಳು ಮಿಥಿಲೆಗೆ ಶಿ । ಷ್ಯಚಯದೊಡವೆರಸುತ್ತ ಬಂದರು । ಪಚಿತಸಂತಸದಿಂದೆ ಪೇಳುತಮಧುರವಚನಗಳ ॥ ೩೧ ॥ ಬಂದಮುನಿಪೋತ್ತಮರ ನನುಚರ । ರಿಂದೆತಾಂತಿಳಿ ದಿದಿರುವಂದಾ । ನಂದದಿಂ ನಿಜಮಂದಿರಕೆ ಕರೆತಂದುಚಿತದಿಂದ ॥ ಬಂಧುರಾಸನಗಳಲಿ ಕೂಡಿಸು । ತಂದುಮುನಿಪತಿಗಳ ಚರಣಕ್ಕೆ । ತಂದು ನಮಿಸುತ ಪೂಜಿಸಿದನಾ ಜನಕಭಕ್ತಿಯಲಿ ॥ ೩೨ ॥ ನಮಿಸಿಮಾಡಿದ ಪೂಜೆಯನು ಪಡೆ । ದುಮುನಿಪಾಲರು ವೇದಮಂತ್ರದೊ । ಳಮಲ ಮಂತ್ರಾಕ್ಷತೆಯನಿತ್ತು ಪರಸಿನಿಜಾಸನದೆ ॥ ಸಮುಚಿತದೊಳಾತನನು ಕುಳ್ಳಿರಿ । ಸಿ ಮಧುರ ವಚನದಿಂದ ಕೇಳಿದ । ರುಮನುಜೇಂದ್ರನ ದೇಶಕೋಶಂಗಳಲಿ ಕುಶಲವನು ॥ ೩೩ ॥ ಕ್ಷೇಮದಿಂದಿಹೆನೆಲ್ಲರಿಂದಾಂ । ಕ್ಷೇಮನಾಗಿಹ ರಖಿಳ ಮಾನವ । ರೀಮಹಿಯೊಳಗೆ ತಮ್ಮನುಗ್ರಹದಿಂದಲೀವರೆಗೆ ॥ ಕ್ಷೇಮವೆಲ್ಲೆಲ್ಲಿಯು ನೆಲಸಿಹುದು । ಭೂಮಿಯೊಳು ತಮ್ಮಯತಪಂಗಳು । ನೇಮವಾಗಿಯೆ ನಡೆವುವೇ ನಿರ್ವಿಘ್ನದೊಳಗೆಂದ ॥ ೩೪ ॥ ಪೊಡವಿಪತಿ ಕೇಳೆಮ್ಮ ತಪಗಳು । ನಡೆವುವು ನೆಲದೊಳಾವವಿಘ್ನವ । ಪಡೆಯದೆಸಗುವ ನಿನ್ನ ನೆರವಿಂ ಸುಕರವೆಂದೆನಿಸಿ ॥ ಒಡೆಯನೀಂ ಕರಿಸಿದಬಗೆಯದೇಂ । ತಡೆಯದರುಹೆಂದೆನಲು ಭೂಪತಿ । ನುಡಿದನಧ್ವರವನೆಸಗುವ ಭೀಷ್ಟವನು ಪವಕೆರಗಿ ॥ ೩೫ ॥ ನಮ್ಮಹಿಂದಣ ಜನಪರಂದದೆ । ತಮ್ಮಗಳನುಜ್ಞೆಯೊಳಖಿಳಜನ । ಸಮ್ಮತವೆನಿಪ ಯಾಗವನುನಾಂ ಮಾಡಬೇಕೆನುತ ॥ ತಮ್ಮ ಚರಣಾಂಬುಜಕೆ ನಮಿಸಿಯೆ । ಸಮ್ಮವದೆಬೇಡುವೆನು ಸ

ರರಿಗೆ । ಸಮ್ಮತವೆನಿಪ್ಪಂತೆ ಮಾಡಿಸಿ ಸಲಹಿನೀವೆಂದ ॥ ೩೬ ॥ ಜನಕ ಭೂಮಿಪ ನಿನ್ನ ಕೋರಿಕೆ । ಜನವಿನುತವಾಗಿಹುದು ನೃಜವಿ । ದುನಿ ಮಿಕುಲ ಭೂಪರಲಿ ಸಂತಸವೆನಿಪುದಿದು ನಮಗೆ ॥ ಘನತರವೆನಿಪ ಕ್ರತುವವಮಾಳ್ಪುದು । ಮುನಿಶತಾನಂದನನ ಮತದೊಳಿ । ದನು ನಡಿಸುವೆವು ನಾವೆನುತೊರೆದು ಪರಸಿಗಮಿಸಿದರು ॥ ೩೭ ॥ ಮುನಿವರ ಶತಾನಂದನನ ಪದ । ಕೆ ನಮಿಸುತ್ತಲೊರೆದನು ನನ್ನಯ । ವಿನುತಯಾಗಕೆ ಯಾಜಮಾನ್ಯವನಾಂತು ನೀಂ ಬಳಿಕ ॥ ಘನತರವಹಸುಕ್ರಿಕ್ರ್ರ ವಾದಿಗ । ಳನು ಬಗೆಬಗೆಯ ಸಕಲವಿಧವೆಂ । ದಿನಿಪ ವಸ್ತು ಚಯವನು ಮಾಡಿಸು ಮನುಜರಿಂದೆನುತ ॥ ೩೮ ॥ ಬಳಿಕ ಸಚಿವಸುಧಾಮನಿಗೆ ತಾಂ । ತಿಳಿಸಿದನು ನೀಂ ಸಕಲಮೇದಿನಿ । ತಳದೊಳಿಪ ರಾಜರನು ತಾಪಸವರರ ಕರೆತರುತ ॥ ತಳೆದುಸಂತಸವನು ನಡೆವವುಬ । ದೊಳು ಸಕಲಮಾನವರು ದಿನದಿನ । ಗಳೊಳು ತೃಪ್ತಿ ಪಡೆವಪ್ರೊಲೊದಗಿಸು ಧಾನ್ಯಗಳನೆನುತ ॥ ೩೯ ॥ ಸೋದರಕುಶಧ್ವಜನ ತಾಕರೆ । ದಾವರಿಸುತ ಹಿತವಚನದೊಳಾ । ವೋದದಿಂದೆ ನುಡಿದನು ನೀನೀ ಪುರದ ಹೊರಗಡೆಯ ॥ ಮೇದಿನಿಯೊಳು ವಿರಚಿಸುವುದು ಬೇ । ಕಾದ ಸದನಂಗಳನವುಗಳಲಿ । ಸಾದರದೊಳಿರಿಸುವುದು ವಿವಿಧ ಪದಾರ್ಥಗಳನೆನುತ ॥ ೪೦ ॥ ಆಗಳಾ ಭೂಪತಿ ನುಡಿದ ನನು । ರಾಗದಿಂದಾ ಪರಿಚರರಿಗೆ ಸ । ರಾಗದೊಳುನೀ ವೀಯಮಾತ್ಯ ಪುರೋಹಿತರ ಮತದೆ ॥ ಯಾಗದಖಿಳ ವಿಧಕೆಲಸಂಗಳ । ಬೇಗವಿರಚಿಸಿ ಜನಕೆಸುಖಗಳ । ನಾಗಿಸಿ ನನಗೆ ಸಂತಸವನಾಗಿಸುವುದೆಂದೆನುತ ॥ ೪೧ ॥ ಹಿತದೆ ಭವನಕ್ಕೈತರುತ ನಿಜ ಸತಿಗೆ ಪೇಳದನಾಜನಕ ಭೂ । ಪತಿ ಮಖವನೆಸಗುವೆನು ತಾಪಸರಾಜ್ಞೆಯನುತಾಳ್ದು ॥ ಗತಿಯೊದಗುವುದೆಮಗೆ ಸಮಸ್ತ ಜ । ನ ತತಿತೃಪ್ತಿ ಪಡೆವುದು ದಿವಿಜರಿ । ಗತಿಹಿತವೆನಿಪುದೆಂದು ಪೇಳುತ ಸಂತಸಪಡಿಸಿದ ॥ ೪೨ ॥ ಆವಚನವನು ಕೇಳುತಾಸತಿ । ನೋವನುಳಿದಾನಂದಗೊಳ್ಳುತ । ಭೂವರನೊಡನೆ ನುಡಿದಳೀ ಯಾಗದೊಳು ಸಕಲರಿಗೆ ॥ ಆವಕೊರತೆಯು ಜನಿಸದಂದದೆ । ತಾವು ಮಾಡಿಸಿ ತೃಪ್ತಿಪಡಿಸುತ । ದೇವ ತತಿಯನು ನಮಿಸಿ ಪೂಜಿಪುದಧಿಕ ಭಕ್ತಿಯಲಿ ॥ ೪೩ ॥ ಪುರದ ಹೊರಭಾಗಗಳೊಳು ಸಮೆದನು । ಮೆರೆವ ಸದನಮಂದಿರಗಳು ವಿವಿದ । ಚರಿತುಗಗ

ರಥಶಾಲೆಗಳು ವರವುಂಟಪಾದಿಗಳು || ತರತರದ ಭವನಗಳು ನೀರಾ | ಕರಗಳುಂ ಮಜ್ಜನಮನೆಗಳುರು | ತರದ ಪಾಕಭವನಗಳಾ ಭೋಜ ನದ ಶಾಲೆಗಳು || ೪೪ || ಅರಸನಾಣತಿಯಿಂ ಸುಧಾಮನು | ತರಿಸಿದನು ನವಧಾನ್ಯಗಳ ನವು | ಗಿರಿಗೆ ಸಮವಹ ರಾಶಿಗಳೆನಿಸಿ ತೋರಿದವು ಕಣ್ಗೆ || ಪರಿಪರಿಯ ಪರಿಕರದ ವಸ್ತು ನಿ | ಕರಗಳೆಲ್ಲವನನುಗೊಳಿಸು ತಖಿ | ಳರಿಗೆ ಸಾಕಾಗುವಪ್ರೊಲಿರಿಸಿದನು ವರವಸನಗಳ || ೪೫ || ಮುನಿರತಾನಂದನನುವಾಡಿಸಿ | ದನು ವರಬಹಗಿಮುನುಜರಿಂದೆಸ | ವ ನದ ಸಾಮಗ್ರಿಗಳನು ವಿಧಿವಿಹಿತ ಘನಮಾರ್ಗದಲಿ || ಮುನಿಪತಿಗಳೊ ಪ್ಪುವ ಪರಿಯೊಳಾ | ಮನುಜ ಪತಿಮೆಚ್ಚುವ ತೆರದೊಳಾ | ವಿನುತ ನಗರಿಯೊಳೆಸೆದುದು ಸಕಲವಸ್ತು ಸಂದೋಹ || ೪೬ || ಬರಿಸಿದನು ಬಳಿಕಾಜನಕ ಭೂ | ವರನು ಲಗ್ನಪತ್ರಿಕೆಗಳನು ಭೂ | ಸುರರಿಗೆ ಸಮಸ್ತ ಮುನಿಪಾಲಕರಿಗಖಿಳ ನೃಪರಿಗೆ || ಪರಿಪರಿಯ ವರ್ಣಾಶ್ರಮ ದವರಿ | ಗೆ ರಚಿಸುವೆನನ್ನ ವರಯಾಗಕೆ | ಬರುವುದೆಲ್ಲರ ಗೂಡಿ ಸಕು ಟುಂಬದೊಳು ನೀವೆನುತ || ೪೭ || ಬಗೆಬಗೆ ಯಲಂಕಾರದಿಂದಲೆ | ಸಗಿದರು ವಿವಿಧ ಚಪ್ಪರಗಳನು | ನಗರಿಯಲ್ಲೆಲ್ಲಿಯುಂ ಮನೆಮನೆಗೆ ಕ್ರಮದಿಂದ || ಸೊಗಸುವಂದದೆ ವರಘನಪತಾ | ಕೆಗಳ ನಿರಿಸಿದರಾ ಮಿಥಿಲೆಯ ಗು | ಡಿಗಳನಾಪರಿಯೊಳಗಲಂಕರಿಸಿದರು ಭಾಪೆನೇ || ೪೮ || ಸಕಲಜನರಾ ಭೂಪತಿ ನುಡಿವು | ದಕೆ ಮೊದಲೆ ತಾವತಿಮು ದನೆಸವ | ನಕೆಲಸಗಳೆಲ್ಲವನು ಶೀಘ್ರದೊಳಾಗಿಸುತ ಕೂಡೆ || ಸಕಲರಿಗೆ ಕುಂದುಕೊರತೆ ಗಳಾ | ವೆಕಡೆಯೊಳು ಸಂಜನಿಸದಂತೆಪ | ರಿಕರಗಳ ತುಂಬಿದರು ಕಣ್ಣನದಣಿಯೆ ಸಕಲರ್ಗೆ || ೪೯ || ಜನಕಭೂಪತಿ ಸೋದ ರನ ಸಹಿ | ತ ನಗರದೊಳು ಜನರೆಸಗಿದಾ | ಘನಸವನಕೃತ್ಯಗಳನೆಲ್ಲ ಪಂಕಿಸಿದಬಳಿಕ || ಮುನಿಪರಾಗಮ ನವನಿರೀಕ್ಷಿಸು | ತ ನಿಜಮಂತ್ರಿ ಪುರೋಹಿತರುಗಳೊ | ಡನೆ ಸಲೆನುಡಿಯುತಿದ್ದನಧ್ವರ ವೆಸಗುವಾಪ ರಿಯ || ೫೦ ||

ಇಂತು ಎರಡನೇ ಅಧ್ಯಾಯ ಸಂಪೂರ್ಣವು ಪದ್ಯಗಳು ೬೦.



# ಮೂರನೆಯ ಅಧ್ಯಾಯ.

ಸೂಚನೆ ॥ ಯಾಗಕೆ ನೆಲವ ಶೋಧಿಸುತ್ತಿರೆ ।
ನೇಗಿಲ ಕೊನೆಗೆ ಸಿಕ್ಕಿದ ಶಿಶುವೆ ।
ನಾಗಲೆ ಕರೆದು ಸೀತೆಯೆನುತ ಸಲಹಿದನಾಜನಕ ॥

ಬಳಿಕಲಾ ಸಚಿವನವಚನವನು । ತಿಳಿದುಲಿಖಿಸಿದ ಪತ್ರಗಳ ಕಂ । ಡಿಳೆಯೊಳಿಹ ಮುನಿಪಾಲರೆಲ್ಲರು ಶಿಷ್ಯರೊಡನೆರಸಿ ॥ ತಳೆದ ಸಂತಸ ದಿಂದೆಬಂದರು । ನೆಲದೊಡೆಯರ್ಕೈತಂದರು ವರಮಿ । ಥಿಳೆಗೆ ಸಕಲ ಪರಿಚರರಿಂದೊಡಗೂಡಿ ನೆರೆನೆರೆದು ॥ ೧ ॥ ಬಂದ ಮುನಿಪಾಲ ಕರಬಳಿಗೈ । ತಂದು ಪದಪಂಕಜಕೆರಗಿ ಕರೆ । ತಂದುಚಿತನೀಯುಗ ಳೋಳಿರಿಸಿದ ನಿರದೆಹರ್ಷದಲಿ ॥ ಚಂದದ ವಸ್ತುಗಳನಿಡಿಸಿದ । ನಂದು ಕೊರತೆಗಳಾವುದುಂ ಸಲೆ । ಸಂಧಿಸದವೊಲುನೇಮಿಸಿದನು ಚಮುರರೆನಿಸ ಜನರ ॥ ೨ ॥ ಅವನಿಪತಿಗಳ ನಾನ್ನಪಾಲಕ । ತವಕದೊಳಿದಿರುಗೊ ಳ್ಳುತಿರಿಸಿದ । ನು ವರರಾಜಭವನಗಳಲಿ ಮನ್ನಿಸಿ ಯುಪಚರಿಸುತ ॥ ಸವಿನುಡಿಗಳಿಂದೆಲ್ಲರ ಮನದ । ಣಿವಬಗೆಯೊಳಾಜನಪರಸಕಲ । ಭವನ ಗಳ ತುಂಬಿಸಿದನು ವಿವಿಧ ವಸ್ತುಚಯದಿಂದ ॥ ೩ ॥ ರಾಯಜನಕನು ಸಕಲದೇಶದ । ರಾಯರನುಮತದಿಂದೆ ಮುನಿಸಮು । ದಾಯದಲಿ ಚೈತ್ರಸಿತ ಪಂಚಮಿ ಸೋಮವಾರದೊಳು ॥ ಶ್ರೀ ಯರಸನಿಗೆ ಪ್ರೀತಿ ಕರಮೆನಿ । ಪಾ ಯಜನಶಾಲೆಯನು ಹೊಕ್ಕನು । ಶ್ರೇಯವನೊದಗಿ ಸುವ ವಿಮಲಗೋಧೂಳಿ ಲಗ್ನದಲಿ ॥ ೪ ॥ ಪರಮಪಾವನರೆನಿಪಕಶ್ಯಪ । ಗುರುವಸಿಷ್ಠ ಸುಯಜ್ಞಗೌತಮ । ವರಭಾರದ್ವಾಜ ಜಮದಗ್ನಿಯ ಗಸ್ತ್ಯಶೌನಕರು ॥ ನೆರೆದುಜಾಬಾಲಿ ಶುಕಮುಖರ । ಧ್ವರದವೇದಿಯ ನೆಸಗಲವನಿಯ । ನರಿತು ಶೋಧಿಸಲೊರೆದರತ್ರಿಯು ಮತವನನುಸರಿಸಿ ॥ ೫ ॥ ಕ್ರತುವಿಗೆಂದೆನು ತಾಮುನೀಂದ್ರರ । ಮತದೊಳವನಿಯ ಶೋ ಧಿಸುತ್ತಿರ । ಲು ತಗಲಿದುದೊಂದು ಘನಪೆಟ್ಟಿಗೆ ನೇಗಲಿನ ಕೊನೆಗೆ ॥ ಅತಿ ಹರುಷದಿಂದಾಜನಕ ಭೂ । ಪತಿಯು ನೋಡಿದನದನು ತೆಗೆಯಿಸಿ । ಹಿತರೊಡನೆ ಕನಕಾಂಬುಜದ ಮಧ್ಯದಲಿ ಕೋಮಲೆಯ ॥ ೬ ॥ ಎನಿ ದೆಂದೆನು ತಚ್ಚರಿವಡೆದು । ತಾನುನೆರೆನೋಡುತ ಮನದೊಳನು । ಮಾ

ನಿಶಿನೊಳವಲಿ ನಂತ್ರಿವನಿರಿಸುವೆನವನಿಯೊಳೆನುತ ॥ ಜ್ಞಾನನಿಧಿಗಳಹ ಮುನಿ
ಪಾಲರಿ । ಗಾ ನರಪತಿ ನಮಿಸಿ ನುಡಿದನು ನಿ । ಧಾನದಲಿ ತಡಬಡಿಸುವಾ
ಗನ್ನವನುಡಿಗಳಂದ ॥ ೭ ॥ ಕೇಳಿಸಿದುದಾಗಳೆ ಜನಕಭೂಪೆ । ಪಾಲಕನಿ
ಗಶರೀರವಾಣಿಯು । ಮೇಲೆಯಾಗಸದಲ್ಲಿ ಜನಕನೆನಿನ್ನಸುತೆ ಯೆನುತ ॥
ಆಲಿಸಿದುದನು ಬಹಳಸಂತಸ । ತಾಳುತಂಕದೊಳೇರಿಸೀಕ್ಷಿಸು । ತಾ
ಲಲನೆಯನು ಸೀತೆಯೆನ್ನುತ ಕರೆದನಾಜನಕ ॥ ೮ ॥ ಸೀರದಗ್ರಕೆ ನೆಲ-
ದೆಸಿಕ್ಕಿದ । ಕಾರಣಾದೆ ಸೀತೆಯೆನುತ ಜನಕ । ಭೂರಮಣನಾಶಿಶುಗೆ
ನಾಮಕರಣವ ತಾಂಮಾಡಿ ॥ ಬಾರಿಬಾರಿಗೆ ಮುದ್ದಿಸಿನಗಿಸಿ । ವಿಾರಿದಾ
ನಂದವನು ತಾಳ್ದು । ಬ್ಬೇರಿದನು ಚಂದ್ರನನು ಕಂಡುಕ್ಕುವಜಲಧಿ
ಯಂತೆ ॥ ೯ ॥ ತೊಟ್ಟ ಹೊಸಯುಪವೀತವ ಪಣೆಯೊ । ಳಿಟ್ಟ ನಾಮದ
ಪಿರಿದವಿಭೂತಿಯು । ಕಟ್ಟಿದ ಕರಣಗಳತಳೆದ ರುದ್ರಾಕ್ಷಮಾಲೆಗಳ ॥
ಮುಟ್ಟಿ ಮಾಡುವ ಜಪದಮುರಮುನಿ । ನೆಟ್ಟನೆ ಭಜಿಸುತ ಹರಿನಾಮ
ವ । ಘಟ್ಟನಾಗಪದಿಂದಿಳಿದು ನಿಂದನೃಪ ನಿದಿರಿನಲಿ ॥ ೧೦ ॥ ಅರಸಕೇ
ಳ್ಳೊಜಾತಿ ಯೆನಿಸಿಪ । ತರುಣಿ ಸಾಕ್ಷಾಲ್ಲಕ್ಷ್ಮಿಯೆನಿಸುವ । ಳುರೆಸಲ
ಹುಸೀನೀ ಶಿಶುವನೀಕೆಯನುವರಿಸುಪ್ರೊಡೆ ॥ ಹರನಚಾಪವ ಭಂಗಿ
ಸುವ ಮನು । ಜರು ಬಹುದೆನುತ ಪಾವಿಡುಧನುವ । ಮುರಿದುಪಡೆ
ವನು ವಿಷ್ಣುವೆನ್ನುತ ನಾರದನುಡಿದನು ॥ ೧೧ ॥ ಸುರಿದುದಾಗಳೆ
ಕುಸುಮವೃಷ್ಟಿಯು । ಸುರರ ದುಂದುಭಿಗಳು ಮೊರೆದವ । ಪ್ಸರರು
ಸಂತಸದಿಂದೆ ನಾಟ್ಯವಮಾಡಿದರುಕೂಡೆ ॥ ನೆರೆದುಗಾನವಮಾಡಿದರು
ತುಂ । ಬುರರು ಬಳಿಕಾಜನಕ ನಿಜಸತಿ । ಗೊರೆದು ತಾನಿತ್ತನಿವಳನು
ಪಾಲಿಪುದು ಸೀನೆನುತ ॥ ೧೨ ॥ ಬಡವ ನೀಭೂಮಿಯೊಳು ನಿಧಿಯ
ನು । ಪಡೆದವನೊಲು ಬರವೊಳುರೆಬತ್ತಿದ । ಗಿಡವು ವೃಷ್ಟಿಯನಾಂತ
ವೊಲುಹಸಿವಿಂದೆ ಬಳಲಿದ್ದು ॥ ಜಡತೆಯಾಂತವನಮೃತದನ್ನವ ।
ಪಡೆವ ತೆರದಿಂದಾ ಮಹೀಪತಿ । ಪಡೆದು ಬಾಲೆಯುಮನದೊಳಾಂತನು
ಮಿಗಿಲುಸಂತಸವ ॥ ೧೩ ॥ ಬಳಿಕಲಾಮುನಿವರರಿಗೆ ವರಣ । ಗಳನು
ಕೊಟ್ಟಶ್ವತ್ಥದಾಮರ । ದೊಳು ಪಡೆಮುವರವಷ್ನಿಯನು ಘನಯಾಗ
ಶಾಲೆಯೊಳು ॥ ಥಳಥಳಿಪ ತ್ರೇತಾಗ್ನಿಗಳ ನನು । ಗೊಳಿಸುತಾರಂಭಿಸಿ
ದನು ಜನಕ । ಬಳಸಿದಾ ಋತ್ವಿಕ್ಕುಗಳನೇಮವನು ಕೈಕೊಳು

ತ ॥ ೧೪ ॥ ಉದಯಮಧ್ಯಾಹ್ನ ವರಸಾಯಂ । ತ್ರಿದ ಸಮಯಗಳೊಳಾ ಮನುಜಪತಿ । ಮುದದೊಳಾಹವನೀಯಗಾರುಹಪತ್ಯದಕ್ಷಿಣದ ॥ ಸದ ಮಲಸುಕುಂಡಗಳೊಳು ಮುನಿ ಮ । ತದೊಳು ಹೋಮವನಾಗಿಸಿ ದನತಿ । ಚಮರದೊಳು ಸತಿಸಹಿತ ಘನತರಸಾಮಗಾನದಲಿ ॥ ೧೫ ॥ ಒಂದುಕಡೆ ಘನಸಾಮಗಾನ ಮ । ದೊಂದುಕಡೆ ವರಹೋಮಧೂಮ ಮ । ದೊಂದುಕಡೆ ಭೂವರನಿವಹ ಮಿನ್ನೊಂದುಕಡೆಯಲ್ಲಿ ॥ ಬಂದು ತುಂಬಿದ ಜನನಿವಹ ಮ । ತ್ತೊಂದು ಕಡೆಯೊಳು ಸವನವಸ್ತುಗ । ಳಿಂಪು ತೋರುತ್ತಿರಲು ರಾರಾಜಿಸಿತು ಮಂಟಪವು ॥ ೧೬ ॥ ಆತ ಮಖವನು ತಾನಡಿಸಿದನು । ಹೋತ ಮೈತ್ರಾವರಣ ಬ್ರಹ್ಮೋ । ದ್ಗಾತನಾಗ್ನೀಧ್ರರನು ಯಧ್ವರ್ಯುಗಳ ಪೆಸರುಗಳ ॥ ಪ್ರೀತಿಯಿಂ ಪಡೆದಖಿಳ ಋತ್ವಿ । ಗ್ವ್ರಾತಮುಚ್ಚರಿಸುವ ವಿವಿಧಮಂ । ತ್ರಾತಿಶಯದಿಂ ಗೈದು ಹೋಮವನಾತ್ರಿಕಾಲದಲಿ । ೧೭ ॥ ವಿನುತ ಯೂಪಸ್ತಂಭಕಿ ಬಿಗಿದ । ಘನಪಶುಗಳೆಡೆಗೈದಿ ಮಂತ್ರಗ । ಳನು ನುಡಿದು ಋತ್ವಿಕ್ಕು ಗಳು ಸಂಹರಿಸಿ ಯವುಗಳನು ॥ ಜನರುನೋಡುತಿರೆ ಪಶುಗಳ ವಪೆ ಯನು ತೆಗೆದು ಗೋಘೃತವ ಸುರಿಸುತ । ಜನಕ ಭೂಪತಿಯಿಂದೆ ಘನಹೋಮವನು ರಚಿಸಿದರು ॥ ೧೮ ॥ ಸವನಕಾರಂಭಿಸಿದ ದಿನದಿಂ । ದವನಿಪತಿ ಭೂಸುರರು ಮೊದಲಹ । ವಿವಿಧ ವರ್ಣಾಶ್ರಮದ ಮನುಜ ರಿಗೆರಡುವೇಳೆಯಲಿ ॥ ಸವಿವಡೆದಖಿಳ ಭಕ್ಷ್ಯ ಭೋಜ್ಯಗ । ಳ ವಿತ ರಣೆಯಿಂದೆ ಘನಭೋಜನ । ವ ವಿರಚಿಸಿದನು ತೃಪ್ತಿ ಪಡೆದೆಲ್ಲರು ಪೊಗಳುವಂತೆ ॥ ೧೯ ॥ ಚರುಪುರೋಡಾಶಗಳನು ಸಕಲ । ತರದ ಸಮಿಧೆಗಳ ನನಲನೊಳಾ । ನರಪತಿ ವರಘೃತಸಹಿತಾಘನ ವೇದಮಂತ್ರ ದಲಿ ॥ ಪರಮಭಕ್ತಿಯೊಳಾಹುತಿಗೊಡುತ । ಸರರನೆಲ್ಲರ ದಣಿಸಿವಿ ಗೆ ಸೋ । ಮರಸಪಾನವಮಾಡಿದನುಋತ್ವಿಗ್ಜನರಸಹಿತ ॥ ೨೦ ॥ ಎಲ್ಲ ಋತ್ವಿಕ್ಕುಗಳೊಡನೆ ತಾ । ನಲ್ಲಿ ಯವಭೃತವ ನೆಸಗಿಬಳಿಕ । ಸಲ್ಲ ಲಿತ ಮನದಿಂದೆ ಮಾಡಿದ ನಖಿಳದಾನಗಳ ॥ ಎಲ್ಲೆಡೆಯೊಳಾತನನು ಪೊಗಳದ । ರಲ್ಲಿ ಪಡೆದಾದಕ್ಷಿಣೆಗಳನು । ಚೆಲ್ಲಿದರು ಪೊರಲಾರದಾಭೂ ಸುರರು ಮಾರ್ಗದಲಿ ॥ ೨೧ ॥ ವರಹವಿರ್ಭಾಗದಲಿ ದಣಿದರು । ಸು ರರು ಗೋಧನಕನಕ ವಸ್ತ್ರ ನಿ । ಕರದಲತಿಸಂತಸವನಾಂತರು ಸಕಲ

ಋಷಿವ್ರಜರು ॥ ತರತರದ ಸನ್ಮಾನಗಳ ನಾಂ । ತರುವನೀಪತಿಗಳು ಬಳಿ
ಕಳುಹಿದ । ನರರು ತಾವೈದಿದರು ಬಗೆಬಗೆಯುಡಿಗೆ ತೊಡಿಗೆಗಳ ॥ ೨೨ ॥
ಈಪರಿಯೊಳಾ ಘನಸವನವನು । ತಾಪಸರನುಜ್ಞೆಯೊಳಗಿನಿಸುಂ । ಲೋ
ಪವಿಲ್ಲದತೆರದೊಳೆಲ್ಲರ ಕಣ್ಮನಂದಣಿಯೆ ॥ ಭೂಪನೆಸಗಿ ಭವನಕೆಬಂದ
ನು । ಭೂಪನೆ ಧನಕನಕ ವಸನಗಳ । ತಾಪದೆದುಕೊಡುತಂದು ಮನ್ನಿಸಿ
ಕಳುಹುತವರುಗಳ ॥ ೨೩ ॥ ಮುನಿಪತ್ರಿಗಳಾಶೀರ್ವದಿಸುತಾ । ಜನಕ
ಭೂಪತಿಯನು ತೆರಳಿದರು । ಘನತಪೋವನಗಳಿಗೆ ತಮ್ಮಯಶಿಷ್ಯರೊಡ
ವೆರಸು ॥ ಜನಪತಿ ನಿಜಭವನದೊಳಾ ಸುತೆ । ಯನು ಸಲಹಿದನು ಸತಿ
ಸುಮೇಧೆಯೊ । ಡನೆವಿವಿಧ ರಾಜೋಪಚಾರಗಳಿಂದೆ ಮುದ್ದಿಸುತ ॥ ೨೪ ॥
ಸುತರನಾನವ ಜನಕಭೂವರ । ನತಿಮುದದೊಳಾ ಸೀತೆಯನು ನಿಜ ।
ಸುತೆಗಧಿಕಳೆಂದೆಣಿಸಿ ಪಾಲಿಸಿದನು ಮಡದಿಸಹಿತ ॥ ಅತಿಮುದದೊಳಾ
ಕೋಮಲೆಗೆ ಸಕ । ಲತೊಡಿಗೆಯುಡಿಗೆಗಳನಿರಿಸುತವ । ಳ ತನುವಿನ
ಸೋಂಕಿಂದೆ ಪಡೆದರು ಸಂತಸವನವರು ॥ ೨೫ ॥ ಕರಕಮಲದಿಂದಾಯು
ಣುಗಿ ನಿಜ । ಚರಣಕಮಲವನು ಸಲೆಪಿಡಿಯುತ । ದರಪೊದಲಿನಾ ಬೆರ
ಳವದನ ಕಮಲದೊಳರಿಸುತ್ತ ॥ ತೆರೆದು ಮುಚ್ಚುತ ಕಣ್ಮಲರ್ಗಳ ।
ನರಸನಿಗುಮಾತನ ಸತಿಗುಮನ । ವರತತಾನೆಸಗಿವಳು ಸಂತಸವನ್ನು
ಪಲತೆರದೆ ॥ ೨೬ ॥ ದಿನದಿನದೊಳಾ ಕೋಮಲೆಗೆ ಜನ । ಕನರಸಿಸುಮೇ
ಧೆಘನಸಂತಸ । ವನುತಳೆದು ಸುಪಗೆಯತೈಲವನಿರಿಸಿ ತಲೆಯಲ್ಲಿ ॥ ವನ
ಜನೇತ್ರೆಯರೊಡನೆ ಬಿಸುನೀ । ರಿನೊಳು ಮಜ್ಜನವೆಸಗಿ ಯೊರಸುತ ।
ತನುವತಿಲಕವನಿಟ್ಟು ಮಲಗಿಸುತಿಹಳು ತೊಟ್ಟಿಲಲಿ ॥ ೨೭ ॥ ಆದಿಲಕ್ಷ್ಮಿ
ಯು ತಾನೆನಿಸಿದಾ । ಮೇದಿನೀಸುತೆ ಲೋಕಶಿಶುಗಳ । ಪಾದರಿಯೊಳು
ಸಕಲತರತರದ ಬಾಲಲೀಲೆಗಳ ॥ ಸಾದರದೊಳೆಸಗಿ ನಗಿಸುತ ಬೇ । ಕಾ
ದುದನು ತಾನೀವಳೆಂಬವೊ । ಲಾಧರಣಿಪನ ರಾಜಮಂದಿರದೊಳು ಬೆಳೆ
ದಳಂತು ॥ ೨೮ ॥ ನೆರೆಹೊರೆಯ ಭವನಗಳ ಸತ್ರಿಯರು । ನರಪತಿಯ
ಮನೆಗೈದಿಕಾಣುತ । ಕರಗಳಿಂದಾಯುಣುಗಿಯನು ತಾವೆತ್ತಿ ಕೌಂಕುಳೊ
ಳು ॥ ಇರಿಸಿಮುದ್ದಿಸಿ ಯುವಳಸೊಬಗನು । ನೆರೆವಿಲೋಕಿಸಿ ಮನದಣಿ
ಯೆಭೂ । ವರನ ರಾಣಿಯುಹೊಗಳಿಪೋಪರು ತಮ್ಮಮನೆಗಳಿಗೆ ॥ ೨೯ ॥
ಚಂದಿರನನುರೆಪಳವ ವದನದ । ಕುಂದಕುಟ್ಮಲಗಳನು ಧಿಕ್ಕರಿ । ಪಂ

ಪಡೆವುರೆಸ ರಸನಪಜ್ಙ್ತಿಯು ಕಮಲದಂಗವನು ॥ ಕಂದಿಪಾನಯನಗಳ ಮ್ಯದುತರ । ದಿಂ ರಂಜಿಪ ಕರಚರಣಗಳ । ನಂದುಪಡೆದಾ ಧರಣಿಸುತೆ ತಾನೆಸೆವಳಡಿಗಡಿಗೆ ॥ ೨೦ । ಹಸುಳೆನಾನೊರೆವಾಲ ನೃಪಸತಿ । ಮಿಸು ಪಚಿನ್ನದ ಬಟ್ಟಲೊಳಿರಿಸಿ । ಪಸುಳೆಗತಿಸಂತಸದಿ ಕುಡಿಸುವಳನುದಿನಂ ಗಳಲಿ ॥ ವಸುಧೆಯೊಳು ಸರ್ವೋತ್ತಮವೆನಿಪ । ವಸನಗಳನುಡಿಸುತ್ತ ಮೇಲೆನಿ । ಪ ಸಕಲಾಭರಣಂಗಳನಿರಿಸಿ ಸಿಂಗರಿಸುತಿಹಳು ॥ ೨೧ ॥ ಹೊತ್ತುಹೊತ್ತಿಗೆ ಹಾಲನೀಯುತ । ಮತ್ತೆ ಚಿನ್ನದ ತೊಟ್ಟಿಲೊಳು ತಾ । ನುತ್ತಮದ ಹಾಸಿನೊಳು ಮಲಗಿಸುವಳು ಮಹೀಸುತೆಯು ॥ ಚಿತ್ತರವ ಜೋಗುಳವ ಪಾಡುವ । ಳುತ್ತಮ ಸ್ವರದಿಂದೆ ಪತಿಕ್ಯೆ । ಗಿತ್ತಣುಗಿಯನು ನೋಳ್ಪಳಾಕೆಯು ಬಾಲಲೀಲೆಗಳ ॥ ೨೨ ॥ ವನಜ ನಾಭನ ಕರುಣೆಯಿಂದೀ । ವನಜನೇತ್ರೆ ನಮಗೆಲಭಿಸಿದಳ । ವನಿಯೊ ಳೆಮ್ಮಯ ಭಾಗ್ಯಕೆಣೆಯುಂಟೆ ನರಿಸಿವಹದಲಿ ॥ ವನಜನೇತ್ರನ ಸತಿಯೆನಿಸು ವೀ । ವನಜವದನೆಯು ನೇಹೆಯಿಂದಾ । ಘನಸುಗತಿಸಂ ಜನಿಪುದೆಮಗೆಂದನು ಸತಿಗೆ ಜನಕ ॥ ೨೩ ॥ ಒಮ್ಮೆತನ್ನೊಳು ತಾನೆ ನಗುವಳು । ಒಮ್ಮೆ ನಗಿಸುವಳೆಲ್ಲರನು ಮ । ತ್ತೊಮ್ಮೆ ತನ್ನಯ ಬಾಲಲೀಲೆಗಳಿಂದೆ ಸಕಲರಿಗೆ ॥ ಸಮ್ಮುದವನೀವಳು ಲಕುಮಿಯೆನೆ । ನಮ್ಮ ಕವತಾನೆಸಗುವಳು ಸಲೆ । ಚಿಮ್ಮುವಳಣುಗಿದೇಪ ಕಾಂತಿ ಯನೆಲ್ಲತಾಣದೊಳು ॥ ೨೪ ॥ ಪುರದನಾರಿಯು ರಾಕುವರಿಯನು । ಕರೆದುತಂದು ನಿಜಭವನಗಳಿಗೆ । ತೊರೆದು ತಮ್ಮಯ ಸುತರಹಾಲನು ಕುಡಿಸಿ ಹರೆಯೊಳಗೆ ॥ ಇರಿಸಿ ತಿಲಕವ ಕಾಡಿಗೆಯನಾ । ಕರಗಳಂ ತಿದ್ದಿ ಜಡೆಹಾಕುತ । ಲಿರಿಸಿ ಪುಷ್ಪಂಗಳ ನಲಂಕರಿಪರು ವಸನಗಳಲಿ ॥ ೨೫ ॥ ಪತಿಗಳಿಗೆ ತೋರಿಪರು ಧರಣೀ । ಸುತೆಯನಾವಾಸಿನಿಯ ರೀವರು । ಹಿತದೊಳವರಲಿ ನೋಡುವರ ವಳದೇಹಕಾಂತಿಯನು ॥ ನುತಿಸುವರು ತಾವಾವಿಲಕ್ಷ್ಮಿಯೆ । ನು ತುರೆಸಂತಸವನು ಪಡೆವರು ಸ । ತತವು ಮುದ್ದಿಸಿಲಾಲಿಸಿ ನಗಿಸಿ ನುಡಿಸಿನಡೆಯಿಸುತ ॥ ೨೬ ॥ ಇರಲು ಏಳನೆ ತಿಂಗಳಲಿ ಭೂ । ವರನು ಶುಭವಾಸರದೊಳಣುಗಿ ಗೆ । ವರವಿಭವದಿಂದೆಸಗಿದನು ಪದೆದನ್ನಪ್ರಾಶನವ ॥ ಧರಣಿ ಸುರರಾದಿ ಯುಹ ಸಕಲಜ । ನರಿಗೆ ವರಭೋಜನವನಾಗಿಸಿ । ತರತರದೊಳಿತ್ತನು

ಚಿತವರಿತು ದಿವ್ಯ ವಸನಗಳ ‖ ೩೭ ‖ ಇಂತು ಕಳೆಯುಲು ಕೆಲವುದಿನ ಸವು | ನಂತರದೊಳಾ ಭೂವರನ ಸತಿ | ಕಂತು ಸತಿಸಮರೂಪಿ ತಾಂಗ ಗರ್ಭವನು ತಾಳಿದಳು ‖ ಅಂತವಿಲ್ಲದ ತೆರದೊಳು ಬಳಿಕ | ಸಂತಸ ವ ನೈದಿದನವನಿಪತಿ | ಸಂತಸವನೈದಿದರು ಪಟ್ಟಣದಖಿಳಮಾನವರು ‖ ೩೮ ‖ ಜನಕ ನರಪಸುವೇಧೆಧರಿಸುತ | ತನುವಿನೊಳು ಗರ್ಭವನು ಪಡೆದಳು | ದಿನದಿನದೊಳತ್ಯಧಿಕ ವಿಭವವನಾಜನಕನಿಂದ ‖ ವನಿತೆ ತಾಂ ಕಳೆದು ನವಮಾಸಗ | ಳನು ಬಳಿಕ ಶುಭವಾಸರದಿ ಶಿಶು | ವನು ಪಡೆದಳುನವಗ್ರಹಂಗಳು ತೋರುತಿರೆ ಶುಭವ ‖ ೩೯ ‖ ವಸುಮತೀಶನು ಜಾತಕರ್ಮವ | ನೆಸಗುತ ಶತಾನಂದ ಮುನಿಯಿಂ | ಪಸುಳೆಗಿಟ್ಟನು ಪೆಸರನೂರ್ಮಿಳೆಯೆನುತ ಹರ್ಷದಲಿ ‖ ಎಸಗಿದನಧಿಕ ದಾನಗಳನು ಜ | ನಸಮುದಾಯಕೆ ಭೋಜನವ ನಾ | ಗಿಸುತ ತಾಸಿತ್ತನು ಸಕಲರಿಗೆ ದಿವ್ಯ ವಸ್ತ್ರಗಳ ‖ ೪೦ ‖ ಪಿಡಿದು ಕೈವೆರಳನಡೆ ಕಲಿತಳು | ನುಡಿದನು ಡಿಗೇಳ ನುಡಿಕಲಿತಳು | ಪಡೆದಳಾ ಜನಪಾಲನಿಂದುರೆರಾಜ ಭೋಗಗಳ ‖ ಪ್ರೊಡವಿಯಾತ್ಮಜೆ ಸೀತೆಮುದದಿ | ದಡಿಗಡಿಗೆ ತಾ ತಿಳಿದಳು ಗುರುಗ | ಳೆಡೆಯೊಳಾದರದಿಂದಖಿಳನೀತಿಗಳನು ಮನದಲಿ ‖ ೪೧ ‖ ಪಲತೆರದರಾಜೋಪಚಾರಗ | ಳಲಿ ಪೊರೆದನಾಜನಕ ಭೂವರ | ಸಿಳೆ ಯುಣುಗಿಯುನು ಸೀತೆತಾಸಾಜನನಿ ಜನಕರನು ‖ ಲಲಿತ ವಚನಗಳಿಂದೆ ತೋಷಿಸು | ತ ಲನುದಿನದೊಳು ತಾನು ತೋರುತ | ಖಿಳವಿನೋದಗಳನು ಬೆಳೆದಳಾರಾಜ ಭವನದಲಿ ‖ ೪೨ ‖ ಉದಯಕಾಲದೊಳೆದ್ದು ಸೀತೆ ಮ | ನದೊಳು ಜಾನಿಸಿ ದೇವರನುಬಳಿ | ಕುದಯಿಸುವಭಾನು ವಿಗೆ ಕೈಮುಗಿದು ಜನನಿಜನಕರ ‖ ಪದಗಳಿಗೆರಗಿ ಮಜ್ಜನವ ನೆಸ | ಗಿದಬಳಿಕ ತಾನುಡುವಳಮಲತ | ರ ಧವಳವಸನಗಳನು ತಪ್ಪದೆ ದಿನ ದಿನಂಗಳಲಿ ‖ ೪೩ ‖ ಸೀತೆ ಭೂವರನಂಕದೊಳು ಸಂ | ಪ್ರೀತಿಯಿಂ ತಾಂ ಕುಳಿತು ಕೇಳುವ | ಳಾತನುಪದೆದು ಪೇಳುವ ವಿವಿಧ ನೀತಿ ವಾಕ್ಯಗಳ ‖ ಮಾತೆಯು ಲಲಿತವಚನಗಳ ನಾ | ಭೂತಳಾತ್ಮಜೆ ಕೇಳ್ದುಬಳಿಕಲಿ | ತಾತೆರಳುವಳು ಸಖಿಯರೊಡನಾಡಲ್ಕವರಮನೆಗೆ ‖ ೪೪ | ಬಾಲೆಯರೊಡನೆ ಮೇದಿನೀಸುತೆ | ಬಾಲಕೇಳಿಗಳ ನೆಸಗಿಬಳಿಕ ‖ ಕಾಲವನರಿತು ರಾಜಭವನಕೆ ತಾನು ನಡೆತಂದು ‖ ಲೀಲೆಯಿಂದಲೆ

ತೊಳೆದು ಮೊಗ ಕೈ । ಕಾಲುಗಳ ಕುಂಕುಮವನಿಟ್ಟು ನ್ಯ । ಪಾಲ ನೆಡೆಯೊಳು ಕುಳಿತು ಭೋಜನವಮಾಡುವಳನುದಿನ ॥ ೪೫ ॥ ಮೇದಿನೀ ಸುತೆ ಯನವನೀಧವ । ನಾದರದೊಳುರೆಪೋಷಿಸುತ್ತಿರ । ಲಾದುದಣು ಗಿಗೆ ನಾಲ್ಕು ವತ್ಸರಗಳುವಿನೋದದಲಿ ॥ ಮೋದದಿಂದಾ ಜನಕಭೂ ವರ । ನೈದನೆ ವರುಷದಲಿ ಸುತೆಗೆ ಬೇ । ಕಾದ ವಿದ್ಯೆಗಳನು ಕಲಿಸಿ ಚಿಂತಿಸಿದನು ಮನದಲಿ ॥ ೪೬ ॥ ಮುನಿಶತಾನಂದನನ ಕರೆದೊರೆ । ದನು ಮಹೀವರನಾಬಳಿಕ ಮೇ । ದಿನಿಯುಣುಗಿ ಗೋದುಬರಹಂಗಳ ಕಲಿಸಿ ನೀವ್ಬಳಿಕ ॥ ವಿನುತ ಪಾತಿವ್ರತ್ಯ ಚರಿತೆಗ । ಳನು ವಿವಿಧ ನೀತಿಗಳನು ಸಕಲ । ಮೆನಿಪ ಧರ್ಮಗಳನ್ನು ಕಲಿಸುವುದೆಂದು ನೇಮಿ ಸುತ ॥ ೪೭ ॥ ಬಳಿಕಲಾಮುನಿ ಸಂತಸವತಳೆ । ದಿಳೆಸುತೆಗೆ ಭೂವರನ ಮಂದಿರ । ದೊಳು ದಿನದಿನಂಗಳಲಿ ಯೋದುಬರಹಗಳ ಕಲಿಸುತ ॥ ಇಳೆಯೊಳತಿ ವಿಖ್ಯಾತರೆನಿಸಿದ । ಖಿಳಪತಿವ್ರತೆಯರ ಚರಿತೆಗಳ । ತಿಳಿಸಿದನು ಭೂಪಾಲನಿಗೆ ಸಂತಸವೊದಗುವಂತೆ ॥ ೪೮ ॥ ಸೀತೆತಾಪಸ ವರನಬಳಿಯೊಳು । ತಾತಿಳಿದಳತಿ ಭಕ್ತಿಯೊಳಖಿಳ । ನೀತಿಗಳ ನನ ಸೂಯೆ ರೋಹಿಣಿಕೇಶಿನಿ ಮೊದಲಹ ॥ ಭೂತಲದೆ ವಿಖ್ಯಾತಿವಡೆದಾ । ಪಾತಿವ್ರತೆಯರ ಕಥೆಗಳನು ಸಂ । ಪ್ರೀತಿಯಿಂದೆಲ್ಲಜನರು ಸಲೆಪೊಗ ಳ್ವವ್ರೊಲನುದಿನ ॥ ೪೯ ॥ ಪಟ್ಟಣದೊಳಹ ಜೋಯಿಸರ್ಕಳು । ನೆಟ್ಟ ನೈತಂದಿಳೆಯ ಸುತೆಯನು । ದಿಟ್ಟಿಸಿಯೆ ಕೈನೋಡಿ ಸಂತಸದಿಂದೆ ತಿಳುಹುವರು ॥ ಪಟ್ಟಮಹಿಷಿಯೆನಿಪೆ ಪತಿಸಹಿತ । ಕಟ್ಟಡವಿಗೈದು ವೆಯುದಿಸುವರು । ಗಟ್ಟಿಗರೆನಿಪಬಾಲ ರಿರ್ವರು ನಿನ್ನ ಗರ್ಭದಲಿ ॥ ೫೦ ॥ ನಿನ್ನ ಪತಿ ಮುರಹರನೆನಿಪ್ಪನು । ಮನ್ನಿಸುತ ಮಾನವರ ಪೊರೆದಪ । ನುನ್ನತದಿಹನ್ನೊಂದುಸಾವಿರ ವರ್ಷಪರಿಯಂತ ॥ ಸನ್ನುತ ಮಖಂಗಳನು ರಚಿಸುವೆ । ನಿನ್ನ ಪತಿಸಹಿತಖಿಳಸುಖಗಳ । ಮನ್ನಣೆ ಯೊಳ್ಳೈದುತ್ತಮಾಡುವೆ ಸಕಲ ಯಾತ್ರೆಗಳ ॥ ೫೧ ॥ ಧಾರುಣಿಯ ಭಾರವನು ಹರಿಸುವೆ । ನಾರಿಯರೊಳುತ್ತಮಳೆನಿಪೆನೀ । ತೋರುತಿಹೆ ಧರ್ಮಗಳನೆಲ್ಲವ ಜನರಿಗಿಳೆಯೊಳಗೆ ॥ ಸಾರತರ ಮುಕ್ತಿಯನು ಕೊಡು ವೆ ವಿ । ಚಾರಿಸಲು ನಿನಗೀ ಧರಣಿಯೊಳ । ಗಾರು ಸರಿಯೆನು ತೊರೆದು ತಾವೈದುವರು ಮನೆಗಳಿಗೆ ॥ ೫೨ ॥ ಕುರುಡರಿಗೆ ಕುಂಟರಿಗೆ ದೀನಜ

ನರಿಗೆ ಯಂಗವಿಹೀನರಿಗೆ ತಾ | ತರಿಸುತೀವಳು ಧನ ಕನಕ ವಸನಗಳ
ನನುದಿನವು || ಕರುಣೆಯಿಂದಾ ಪುರದ ಬಡವನು | ಜರವಿಚಾರಿಸಿ ಕೊಡಿ
ಸುತಿರ್ಪಳು | ಧರಣಿಪತ್ರಿಯಿಂದವರ ಬಡತನ ತೊಲಗುವಂದದಲಿ || ೫೩ ||
ಎಳೆಯ ಬಾಲಕಿಯರೊಡನಾಡು | ತ್ತಿಳೆಯಸುತೆ ಜನಕಂಗೆವೋದವ |
ಪಲತೆರದೊಳಾಗಿಸುತ ಸೋದರಿಸಹಿತ ಸಂತತವು || ತಳೆದುಸಕಲವಿನೋ
ದಗಳನ್ನನ | ದೊಳಗೆ ಮಾತಾಪಿತೃವಚನಂ | ಗಳನು ತಾಳ್ದರುತೆ
ನಡೆಯುತ್ತಿದರ್ಳತಿನಯದೆ || ೫೪ || ಗುರುಗಳಲಿ ದೇವರಲಿ ಹಿರಿಯರ | ಲಿ
ರಿಸಿಭಯವನು ಪರಮಪಾವನ | ತರಸುತೀರ್ಥಕ್ಷೇತ್ರಗಳಲುರು ಭಕ್ತಿ
ಯನುತಳೆದು || ಪರಿಜನದಕರುಣೆಯನು ತೋರುತ | ನೆರೆದಬಂಧುಬಳ
ಗವರಲಾ | ದರಣೆಯೊಸಗುತಲೆಲ್ಲರಲಿ ವಿಶ್ವಾಸವಿರಿಸಿದಳು || ೫೫ || ಅಮ
ಲ ವಸ್ತ್ರಂಗಳನುಡುವಳತಿ | ವಿಮಲವಾಗಿಡುವಳ ವಯವಗಳ | ನು
ಪಮತಿಯಿಂದರಿತು ಭುಜಿಸುವಳಾಪಕ್ವಫಲಗಳನು || ನಮಿಸಿಪೂಜಿಸಿ ದೇವ
ತತಿಯನು | ಸಮದ ಭೋಜನಮಾಡುತಿರ್ಪಳು | ಸಮಯವರಿತಸ್ವ
ರಿಗೆ ಸುಖವನುಮಾಳ್ಪಳಾಸಿತೆ || ೫೬ || ಒಂದುದಿನತಾನೋರ್ವಭಿಕ್ಷುಕಿ |
ಬಂದುನೋಡಿ ಯುವಸಿಜೆಯಬಳಿ | ಕಂದ ಪೇಳ್ದಳು ನೀನು ಪದಿನಾ
ಲ್ಕುಬುದಪರಿಯಂತ || ಮುಂದೆತೆರಳುವೆ ವನಕೆನಿಂ ಪತಿ | ಯಿಂದೆ ಭೂ
ಭಾರವನು ಪರಿಸುವೆ | ಯೆಂದರೆಯನೀನೆನಿಪೆಯನ್ನುತ ಪೇಳತೆರಳಿದ
ಳು || ೫೭ || ವಿವಿಧಲೀಲೆಗಳಿಂದೆ ಸಕಲರ | ನವನಿಸುತೆ ಸಂತಸವಡಿಸು
ತಿರೆ | ತವಕದಿಂದಾವರುಷಗಳು ಕಳೆದವು ಮಹೀಸುತೆಗೆ || ಅವನಿ
ಪತಿಯಾಸುತೆಗೆ ಪಾಸಟಿ | ಯುವರನಾವನೆನುತ್ತಲನುಜ ಸ | ಚಿವರೊಡನೆ
ತಾಯೋಚಿಸಿದನಾ ರಾಜಕುವರರಲಿ || ೫೮ || ಇಂತು ಭೂಪತಿ ಮನದೊ
ಳಗೆತಾ | ಚಿಂತಿಸುತ್ತಿರೆ ಗೌತಮಾತ್ಮಜ | ನಂತರಂಗದೊಳರುಹಿದನುಸೀ
ತೆಯನುವರಿಸುವೊಡೆ || ಸಂತಸದೊಳಾ ದೇವರಾತನು | ಪಿಂತೆಪಡೆದಾ
ಶಿವಧನುವಮುರಿ | ವಂತವನಿಗಾಸೀತೆನೆನುತಲೆ ಪಣವನೆಸಗೆಂದು || ೫೯ ||
ಪತಿಪರಾಯಣರೆನಿಸಿ ಲೋಕದೊ | ಳತಿಜಸವನಾನುತೆ ಮೆರೆವರುಂ |
ಧತಿಸುಕನ್ಯೆಯಹಲ್ಯೆ ಲೋಪಾಮುದ್ರೆ ಸಾವಿತ್ರಿ || ನುತಿವಡೆದ ರೋಹಿ
ಣಿ ಮೊದಲಹ ಸು | ದತಿಯರ ಚರಿತ್ರೆಗಳತಿಳಿದರು | ಹಿತದೊಳಾ ಪುರ
ದಬಲೆಯರು ಮೇದಿನಿತನುಜೆಯಿಂದ || ೬೦ || ಆದಿಲಕ್ಷ್ಮಿಯು ತಾನೆನಿ

ಸಿದಾ। ಮೇದಿನೀಸುತೆ ಭೂವರನ ಸಂ। ಮೋದಕೆಡೆಯೆನೆ ಬಳೆದುಕಳೆ ದಳು ಬಾಲ್ಯದಾದೆಶೆಯ ॥ ಐದಿದಳು ಪರಿಣಯಕೆ ತಕ್ಕ ವ। ಯೋದಶೆ ಯನೇನೆಂಬುದಾಕೆಯ । ಸಾಧುಲಾವಣ್ಯಾಂಬುನಿಧಿ ತುಳ್ಕಿದುದು ತುಂ ಬುತಲಿ ॥ ೬೧ ॥

ಇಂತು ಮೂರನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೧೬೩.

## ನಾಲ್ಕನೆಯ ಅಧ್ಯಾಯ.

ಸೂಚನೆ ॥ ಸೀತೆಯ ವರಿಸಲ್ಕೈದಿ ಮಿಥಿಳೆಗೆ ।
ಭೂತಳದ ರಾಜಸುತರೆಲ್ಲರು ।
ಸೋತು ಹರಧನುವಿಂಗೆ ನಡೆದರು ವಿಮುಖರಾಗುತಲಿ ॥

ಜನಕ ಭೂವರನೊಂದುದಿನದೊಳು । ವಿನುತ ಸಂಧ್ಯಾವಂದ ನಾದಿಗ। ಳನು ರಚಿಸಿ ದೇವರನು ಪೂಜಿಸಿ ಬಳಿಕವೋಲಗಕೆ ॥ ಘ ನವಿಭವದಿಂದೈದಿ ಬರಿಸು। ತ್ತ ನಿಬರನು ತಾಂ ನುಡಿದ ನೀವೇ। ದಿ ನಿಯಣಾಗಿ ವೈವಾಹ ವೆಸಗುವ ಪರಿಯದೆಂತೆನುತ ॥ ೧ ॥ ಅವನಿ ಸುರರಾನಂದ ವೈದುತ। ಲವನಿಪತಿಗಾ ಗೌತಮಾತ್ಮಜ। ನ ವಚನವ ಕೇಳುತ್ತ ಪೇಳದರುಚಿತ ವಚನದಲಿ ॥ ಅವನಿಜಾತೆಯ ವರಿಸುವೊಡೆ ಘನ। ಶಿವಧನುವ ಭಂಗಿಸುವ ಭೂವರ। ಕುವರರೈತಹುದೆಂದು ಸಾರಿಸು ರಾಜ್ಯದೊಳಗೆನುತ ॥ ೨ ॥ ಬರಿಸಿದನು ಪತ್ರಿಕೆಗಳನು ನೃಪ। ಧರಣಿ ಮಂಡಲದೊಳು ವಿನುತಿವಡೆ। ದಿರುವ ಛಪ್ಪನ್ನಾರು ದೇಶದ ಪೊಡವಿಪಾಲರಿಗೆ ॥ ಹರಧನುವ ಭಂಗಿಸುವ ಸಾಹಸ। ಪರರೆನಿಪರಾಜ ಸುತರೈದೀ। ಪುರಕೆ ಶಿವಚಾಪವತರಿದು ಸೀತೆಯ ಪಡೆವುದೆನುತ ॥ ೩ ॥ ತುಂಗ ಬಲವಿಕ್ರಮನೆನಿಸಿದಾ । ವಂಗದೇಶದ ರಾಯಗುವರನು । ಭಂಗಿಸಿಯೆ ಹರಧನುವ ಪಡೆವೆನು ಸೀತೆಯನೆನುತ್ತ ॥ ಪಂಗಡದೊಳಾ ಮಿಥಿಳೆಗುರು ಚತು। ರಂಗ ಬಲಸಹಿತೈದಿ ಚಾಪವ। ಭಂಗಿಸದೆ ದುಮ್ಮಾನದಿಂ ಪಿಂದಿರುಗಿದನು ಪುರಕೆ ॥ ೪ ॥ ಖಂಡಿಸಿಯೆ ಶಿವಚಾಪವನು ಭೂ। ಮಂಡಲದೊಳಾ ಸೀತೆಸಹಿತಾ । ಖಂಡಲನತೆರದಿಂದಿಹೆನೆನುತ

ಮಗಧನೃಪಸುತನು ॥ ಚಂಡಬಲದಿಂದೈದಿ ಹರಕೋ । ದಂಡವನು ಭಂಗಿಸದ ವನಿಪರ । ತಂಡದಲಿತಾನೈದಿದನು ಖೇದವನುತಲೆವಾಗಿ ॥ ೫ ॥ ಕೇರಳಾಧಿಪನು ತನೊಲಿಸುವೆನು । ಧಾರುಣೀಸುತೆ ಯನುಘನವೆಯಾ । ಮಾರಹರಚಾಪವು ಮುರಿವೆನದನು ಭರದಿಂದೆನುತ ॥ ಭೂರಿಶೌರ್ಯಾ ಲಾಪಗಳನುರೆ । ಬೀರುತ್ತೈತಂದು ಶಿವಚಾಪವ । ಸೇರಿ ತಾಕದಲಿಸದೆ ಪೋದನು ಮಾನಹಾನಿಯಲಿ ॥ ೬ ॥ ಹರನಚಾಪವ ಭಂಗಿಸುತ್ತಾ । ಧರಣಿಜಾತೆಯ ನೊಲಿಸುವೆನೆನು । ತ್ತುರುತರದ ಪೌರುಷವನುಡಿದಾ ಚೋಳನೃಪಸುತನು ॥ ಚರರಸಹಿತೈತಂದು ಧನುವನು । ಕರಗಳಿಂ ಪಿಡಿದೆತ್ತಲಾರದೆ । ಧರೆಗೆಬಿದ್ದನು ಚೀರಿಮಿಗೆತಾಂ ಬಳಲಿಬಾಯಾರಿ ॥ ೭ ॥ ಮುರಿವೆಚಾಪವ ಪಡೆವೆ ಸೀತೆಯ । ಮೆರೆವೆ ಸುಖದಿಂ ಪೆಸರುವಡೆವೆನು । ನರಪತಿಗಳೊಳೆನುತ್ತ ನೇಪಾಳಾವನಿಪಸುತನು ॥ ಭರದೊಳೈತಂದಾಪುರಿಗೆ ಪುರ । ಹರನ ಚಾಪವನೋಡಿ ಕಂಪಿಸಿ । ಧರಣಿಯೊಳು ಕಾರುತ್ತ ರಕ್ತವ ಮೂರ್ಛೆಯೈದಿದನು ॥ ೮ ॥ ವರಕಳಿಂಗ ಮಹೀಪತಿಯ ಸುತ । ನುರುಪರಾಕ್ರಮದಿಂದೆ ಬಂದಾ । ಹರನ ಚಾಪವನೀಕ್ಷಿಸಿಬೆತಾಂ ನೀಡಿ ಕರಗಳನು ॥ ತರಹರಿಸಿ ಬಿಸು ಸುಯ್ದು ಬಲಕುಂ । ದಿರದೆ ಕಣ್ಮುಚ್ಚುತಲಿ ಬಿದ್ದನು । ಧರಣಿಯೊಳು ಗಪ್ಪಗಹಿಸೆ ಜನರಾಸಭೆಯ ಮಧ್ಯದಲಿ ॥ ೯ ॥ ಕಡಿದು ಚಾಪವ ಪಡೆದು ಸೀತೆಯ । ಜಡಿದು ವೈರಿಗಳನು ಸುಖದೊಳೀ । ಪೊಡವಿಯನು ಪಾಲಿ ಸುವೆ ಪೆಸರಿಂದಧಿಕ ಬಲನೆನುತ ॥ ನುಡಿದು ಕೊಂಕಣ ರಾಜಸುತನದ । ರೆಡೆಗೆಬಂದಾ ಶೈವಚಾಪದ । ಕಡೆಗೆ ತಾನೀಕ್ಷಿಸದೆ ನಡೆದನು ತನ್ನ ಪಟ್ಟಣಕೆ ॥ ೧೦ ॥ ಅಂಗದೇಶದ ಭೂಪಸುತನು । ತ್ತುಂಗಭುಜಬಲ ನೆಯ್ದಿಮಿಥಿಲೆಗೆ । ಕಂಗಳಿಂದಾ ಶೈವಚಾಪವ ನೀಕ್ಷಿಸುತ್ತದನು ॥ ಭಂಗಿ ಸುವೆನೆಂದೆನುತ ಪಿಡಿಯೆ ಕ । ರಂಗಳುರೆಮುರಿಯಲ್ಕೆತಿರುಗಿದ । ನಂ ಗಲಾಚುತ ನಿಜಪುರಿಗೆ ಬಲುಖೇದವನುಪಡೆದು ॥ ೧೧ ॥ ಬಲಪೊಳಾ ಕಾಶ್ಮೀರದೇಶದ । ನೆಲದೊಡೆಯನಾತ್ಮಜನು ನಡೆತಂ । ದೆಳೆಯಲಾ ಶಿವ ಚಾಪ ಕದಲದೆ ನಿಂತಿರಲು ಕಂಡು ॥ ಪಲತೆರದಸಾಹಸಗಳೆಸಗುತ । ಕಲಿತನದ ಶಕ್ತಿಯನು ತೋರಿಸಿ । ಫಲಿಸದಿಹ ಬಯಕೆಯೊಳು ಹಿಂದಿ ರುಗಿದನು ದುಗುಡದಲಿ ॥ ೧೨ ॥ ವಿನುತ ಘೂರ್ಜರದೇಶದಾನೃಪ ।

ತನುಜನೈತಂದಾ ಪುರವರಕೆ। ಧನುವ ಕಾಣುತ್ತದರ ಮಹದಾಕೃತಿಯ
ನೆರೆನೋಡಿ ॥ ತನಗಿದರ ಹಂಗೇಕೆನುತ್ತಲೆ। ಮನದೊಳದರ ಮಹತ್ತ
ನು ಪೊಗಳು। ತ ನಿಜಪುರಕೈತಂದ ತನ್ನಯ ಪರಿಜನಗಳಿಂದ ॥ ೧೩ ॥
ತೆಂಕಣ ಮಹೀಪಾಲ ಸುತ ನುರು। ಬಿಂಕದಿಂದಾ ಪಟ್ಟಣಕೆ ಧನು।
ವಂ ಕಡಿವೆನೆಂದೈದಿ ಚಾಪಕೆ ನಿಜಕರಂಗಳನು ॥ ಶಂಕಿಸದೆ ಚಾಚುತದ
ನೆತ್ತದೆ। ಸಂಕಟವನಾನುತ್ತೆ ಬಳಲುತ। ವೇಂಕಟೇಶನ ನೆನೆಯುತೈ
ದಿದ ತನ್ನ ಪಟ್ಟಣಕೆ ॥ ೧೪ ॥ ಪಿತನ ಚರಣಂಗಳಿಗೆರಗಿ ನಿಜ। ರಥ
ದೊಳಾ ಮಿಥಿಲೆಯನುಸೇರುತ। ಲತಿ ಪರಾಕ್ರಮದಿಂದೆ ಬರ್ಬರದೇಶದ
ವನಿಪನ ॥ ಸುತನು ಚಾಪವ ನೆತ್ತಲಾರದೆ। ಖತಿಯನಾನುತ ಬೈದು
ಜನಕನ। ನು ತಡೆಮಾಡದೆ ಪಾರಿಪೋದನು ತನ್ನ ಪುರಿಗಾಗಿ ॥ ೧೫ ॥
ಒಂದುದಿನ ಸೌರಾಷ್ಟ್ರ ಭೂವರ। ನಂದನನು ತಾನೈದಿ ಚಾಪದ। ಮುಂ
ದೆನಿಂದದ ನೆತ್ತಲಾ ಧನು ಧಾರುಣೀತಲದ ॥ ಮುಂದಕಿನಿಸುಂ ಚಲಿಸದಿರೆ
ಮನ। ನೊಂದುತಾ ನಚ್ಚರಿವಡೆದು ನಡೆ। ತಂದನಾಘನ ಸೈನ್ಯದಿಂ
ನಿಜಪುರಕೆ ಭರದಿಂದ ॥ ೧೬ ॥ ಶೈವಚಾಪವ ಭಂಗಿಸಿಯೆ ಯಾ। ಭೂ
ವರನ ಸುತೆಯಂ ಪಡೆವೆನೆಂ। ದಾ ವಿದರ್ಭಾಧಿಪನ ಸುತನೈತಂದು ಶೀ
ಘ್ರದಲಿ ॥ ದೇವದೇವನ ಧನುವಕಾಣುತ। ಭಾವಿಸದದರ ಚಿಂತೆಯನು
ನರ। ದೇವ ನೆಡೆಗೈತಂದು ಪೇಳಿದನವರ ಮಹಿಮೆಯನು ॥ ೧೭ ॥ ಮನು
ತನಹ ಭೂಪಾಲದೇಶದ। ವನಿಪನಾತ್ಮಜ ನೈದಿಮಿಥಿಳೆಗೆ। ಧನುವಕಾ
ಣುತ ನಿಜಕರಂಗಳನದಕೆ ಚಾಚುತ್ತ ॥ ಘನಬಲದೊಳೆತ್ತಲ್ಕೆ ಯಾಹರ।
ಧನುಚಲಿಸದಿರೆ ಬೆರಗುಗೊಳ್ಳುತ। ಮನದೊಳುರೆಬಳಲುತ್ತ ಬಂದನು
ತನ್ನ ಪಟ್ಟಣಕೆ ॥ ೧೮ ॥ ದ್ರವಿಡದೇಶದ ರಾಜಸುತನಾ। ಶಿವಧನುವ
ಭಂಗಿಸಿ ಮಹೀಸುತೆ। ಯನರಿಸುವೆನೆಂದಾ ಮಿಥಿಲೆಗೈತಂದು ಪಡೆಸಹಿ
ತ ॥ ತವಕದಿಂತಾ ನೆತ್ತಲಾಚಾ। ಪವದು ಧರೆಯೊಳು ಚಲಿಸದಿರಲಾ।
ವಿವಿಧಯತ್ನಂಗಳಲಿ ಚಿಂತಿಸಿನಡೆದನಾಪುರಕೆ ॥ ೧೯ ॥ ಪರಿಚರರನೊಡ
ಗೊಂಡ ಮಂತ್ರಿಯ। ಧರಣಿಪಾಲನ ತನಯನೈತಂ। ದುರವಣಿಸಿ
ಚಾಪವನು ಪಿಡಿದೆತ್ತಲದು ಚಲಿಸದಿರೆ ॥ ತರಹರಿಸಿ ಯಚ್ಚರಿವಡೆದು ಪ
ರಿ। ಹರಿಸಿಕೊಂಡಾ ಬಳಲಿಕೆಯ ನಿಜ। ಪುರಕೆ ತಾನೆಯ್ದಿದನು ತನ್ನಯ
ಸೇನೆಯೊಡಗೂಡಿ ॥ ೨೦ ॥ ಉಳಿದಖಿಳದೇಶಂಗಳರಸರು। ಗಳ ಕು

ಪೌರರು ಬೇರೆಬೇರೆ ಮಿ । ಥಿಳೆಗೆ ಬಂದಾಶೈವಚಾಪವನೆತ್ತದೆಯೆ ಮ
ಸದಿ ॥ ತಳೆದು ಖೇದಪರಂಪರೆಗಳನು । ಬಳಿಕ ತಾವಾಜನಕಭೂವ
ರ । ನೊಳು ಪಗೆಯುಕೈಕೊಳುತ ಸೇರಿದರೊಂದು ತಾಣದಲಿ ॥ ೨೧ ॥
ಶೈವಚಾಪದ ಘನಮಹಿಮೆಯನು । ತಾವು ಕೇಳುತ ಲಜ್ಜರಿವಡೆದು ।
ಭೂವಿಸುತಲಾ ವೀರ್ಯಶುಲ್ಕಳೆನಿಪ್ಪ ಸೀತೆಯನು ॥ ಭೂವರರು ತಾವೈದಿ
ಮಿಥಿಲೆಗೆ । ಶೈವಚಾಪವ ಭಂಗಿಸದೆ ನೆರೆ । ನೋವನಾನುತಕದನ
ಕುಜ್ಜುಗಿಸಿದರು ಜನಕನೊಳು ॥ ೨೨ ॥ ಧರಣಿಪಾಲಕ ರೊಟ್ಟುಗೂಡು
ತ । ನೆರೆದು ಸಂಗರದೊಳುರೆಘಾತಿಸಿ । ದರು ಜನಕಭೂಪನನು ಬತ್ತೀ
ಸಾಯುಧಂಗಳಲಿ ॥ ಪರಿಪರಿಯ ಶಸ್ತ್ರಾಸ್ತ್ರನಿಕರದ । ಲುರೆಬಳಲಿ ನೊಂ
ದಾಜನಕಭೂ । ವರನು ಕೈಕೊಂಡನು ತಪವನಾಶಿವನಜಾನಿಸುತ
॥ ೨೩ ॥ ತೊರೆದು ತಾನಾಹಾರವನು ಪಗ । ಲಿರುಳು ಪಂಚಾಗ್ನಿಗಳ
ಮಧ್ಯದೊ । ಳುರುತರ ತಪವನಾಚರಿಸುತಾವ್ಯೋಮಕೇಶನನು ।
ಸ್ಮರಿಸುತಿರಲಾ ಜನಕ ನೃಪನಾ । ಪುರಪರನು ಬಂದಾತನಿಗೆ ತಾಂ ।
ಕರುಣಿಸಿದ ಸಾನಂದದಿಂದುರುತರದ ಶಕ್ತಿಯನು ॥ ೨೪ ॥ ಜನಕ
ಭೂವರ ಬಳಿಕಲಾ ಮೇ । ದಿನಿಯೊಡೆಯರೆಲ್ಲರನು ಸೋಲಿಸಿ । ದನು
ಗಿರಿಶನಿತ್ತಧಿಕ ಬಲದಿಂದೆ ರಣರಂಗದೊಳು ॥ ಧನುವ ಭಂಗಿಸದಾಜಿ
ಯೊಳು ನೊಂ । ದು ನಿಜನಗರಂಗಳನು ಸೇರುತ । ಮನದೊಳಾತನ
ಶಕ್ತಿಯನು ಮೆಚ್ಚಿದರು ಪಲತೆರದಿ ॥ ೨೫ ॥ ಸುರನರೋರಗ ಯಕ್ಷ
ಕಿನ್ನರ । ಗರುಡ ಗುಹ್ಯಕ ಕಿಂಪುರುಷ ಸಿ । ದ್ಧರು ಮೊದಲೆಸಿಪ
ದೇವತೆಗಳೈತಂದು ಕೋಪದಲಿ ॥ ಹರಧನುವನೆಲ್ಲರವಲೋಕಿಸಿ । ಪರಿ
ಪರಿಯ ಸಾಹಸಗಳಿಂದದ । ಮುರಿಯಲಾರದೆ ತೊರೆದರಾಜಾನಕಿಯು
ಚಿಂತೆಯನು ॥ ೨೬ ॥ ಬಳಿಕ ರಾವಣ ನಾಪ್ರೊಢವಿಪತಿ । ಗಳ ಪರಾಜ
ಯವನುಜನಕನತಿ । ಬಲವನಾಶಿವ ಚಾಪಮಹಿಮೆಯ ನಾಲಿಸುತ್ತೊ
ಡನೆ ॥ ತಿಳಿದು ಸೀತೆಯ ರೂಪು ರೇಖಾ । ವಳಿಗಳನು ನಿಜರಥದೊಳೈ
ದಿ ಮಿ । ಥಿಳೆಗೆ ತೋರಿಸು ಶೈವಚಾಪವನೆನುತ ಗರ್ಜಿಸಿದ ॥ ೨೭ ॥
ನಡುಗಿಬಿಸುಸುಯ್ದಾಜನಕನೃಪ । ನಡಿಗಡಿಗೆ ಕೈಮುಗಿದು ದೈನ್ಯದೆ ।
ನುಡಿದನಾ ರಾವಣನಿಗಂಜುತ ವೀರ್ಯಶುಲ್ಕಳಹ ॥ ಪ್ರೊಢವಿಯಾತ್ಮಜೆ
ಶೈವಧನುವನು । ಕಡಿವ ಶೂರನ ಮೆಚ್ಚುವಳೆನುತ । ನಡೆದ ಸಂಗತಿ

ಗಳನು ತಾ ಮೊದಲಿಂದ ಪೇಳಿದನು ॥ ೨೮ ॥ ಜಡಿದೆ ದಿಕ್ಪಾಲಕರ ಸಮರದೆ । ಕಡಿದೆ ದೇವಸಮೂಹವನು ನಾಂ । ಪಿಡಿದೆ ಪನ್ನಗ ಯಕ್ಷ ಕಿನ್ನರ ದೇವನಾರಿಸುರ ॥ ಮ್ಮೃಡನನೊಚ್ಚಿಸಿ ಸಕಲ ವರಗಳ । ಪಡೆದ ನನಗೀ ಧನುವಧಿಕವೇ । ಕಡಿವೆನಾನದತರಿಸೆನುತ್ತಲೆ ನುಡಿದ ರಾವಣನು ॥ ೨೯ ॥ ಧನುವನವಲೋಕಿಸುತ ಬಂದಾ । ದನುಜವಲ್ಲಭಸಿರದೆ ಗರ್ಜಿಸು । ತ ದನುವಿಂಶತಿಕರಗಳಿಂದೆತ್ತಲದು ಕದಲದಿರೆ ॥ ಮನದೊಳುರೆನೊಂದು ತೊರೆದಾಮೋ । ದಿನಿಯುಣುಗಿ ಮೇಲಣಭಿಮಾನವ । ನು ನಡೆತಂದನು ಲಂಕೆಗಂದಾ ಮಾನಹಾಸಿಯುಲಿ ॥ ೩೦ ॥ ಧನುವ ಭಂಗಿಸಿ ವರಿಸುವೆನುಮೇ । ದಿನಿಯುಣುಗಿಯ ನೆನುತ್ತ ಸೈನ್ಯದೊ । ಡನೆ ಹೊರಟು ಸಾಂಕಾಶ್ಯದೇಶದ ಧೊರೆಸುಧನ್ವನುತಾಂ ॥ ಜನಕನೆಡೆಗೈತಂದು ತೋರಿಸು । ಧನುವನೆನಗೆಂದು ಜನಮಧ್ಯದೊ । ಳು ನುಡಿದನು ರೋಷದಲಿ ಪಲ್ಗಳ ಕಡಿದು ಗರ್ಜಿಸುತ ॥ ೩೧ ॥ ಮೀರಿದ ಪರಾಕ್ರಮದೊಳಾ ತ್ರಿಪು । ರಾರಿ ಚಾಪವನೆತ್ತಲಾರದೆ । ಧಾರುಣೀಪತಿಯಾ ಸುಧನ್ವನು ನೊಂದುಬಿಸುಸುಯ್ದು ॥ ಸೇರಿ ಜನಕ ಮಹೀವರನೊಡನೆ । ಘೋರಸಂಗರ ಕುಜ್ಜುಗಿಸಿದನು । ಸಾರತರವೆಂದೆನಿಪ ಶಸ್ತ್ರಾಸ್ತ್ರ ನಿಕರಂಗಳಲಿ ॥ ೩೨ ॥ ಸಂಗಳಿಸಿದ ಸುಧನ್ವನನು ಘನ । ಸಂಗರದೊಳಾ ಜನಕಭೂಪತಿ । ಭಂಗಿಸಿದನೇನೆಂಬೆನಾತನ ಘನಪರಾಕ್ರಮವ ॥ ಕಂಗಳನು ಮುಚ್ಚುತ ಬಳಲಿ ರಣ । ರಂಗದೊಳು ಕಾಲಗತ್ರಿಯೈದಿದ । ನಂಗಜಾರಿಯುನಾಮವನು ತಾನುಚ್ಚರಿಸುತಂದು ॥ ೩೩ ॥ ಕೊಂದು ಸಾಂಕಾಶ್ಯದಸುಧನ್ವನ । ಹೊಂದಿ ತಾನಾದೇಶವನು ಸಲ । ಹೆಂದೆನುತ ಪೇಳದನು ವೀರಕುಶಧ್ವಜಂಗೊಲಿದು ॥ ಸಂದಣಿಸೆ ರಾಜಾಧಿರಾಜರು । ಚಂದದಿಂ ಪಟ್ಟವನು ಕಟ್ಟಿದ । ನಂದು ದಿಕ್ಕುಗಳೆಲ್ಲ ವಾದ್ಯಧ್ವನಿಯೊಳಳ್ಳಿರಿಯೆ ॥ ೩೪ ॥ ಭೂತಳದ ರಾಜರೊಳಗಾರುಂ । ಭೂತಪತಿಚಾಪವ ಮುರಿಯದಿರೆ । ಭೂತಳಾತ್ಮಜೆಯನುಳಿದ್ದೈದಿದರೆಂದೆನುತ ನುಡಿದು ॥ ಕ್ಷ್ಮಾತಳದೊಳಾವನುದಿಸಿಹನೋ । ಸೀತೆಯನು ಕೈವಿಡಿವನೆಂದುರೆ । ಕಾತರಿಸುತಾಜನಕ ದೈನ್ಯವನೈದಿದನು ಬಳಿಕ ॥ ೩೫ ॥ ಎಲ್ಲಿಪೋಗಲಿ ಧಾರುಣಿಯೊಳಿ । ನ್ನೆಲ್ಲಿ ಹುಡುಕಲಿ ನಾನೆನುತ ಮನ । ದಲ್ಲಿ ಚಿಂತಿಸಿ ಮುಂದುಗಾಣದೆ ಜನಕಭೂವರನು ॥ ಉಲ್ಲಸದೊಳೆಂತ

ವನಿಯಾತ್ಮಜೆ । ಗಿಲ್ಲಿ ಮದುವೆಯುನಡೆವುದೆಂದೆನು । ತೆಲ್ಲ ರೊಡನಂ
ದು ನುಡಿದನು ದೈನ್ಯವನುತೋರಿಸುತ ॥ ೩೭ ॥ ವಾಸುದೇವನು
ದೇವರಾತಗೆ । ಸೋಮಧರ ಕೋದಂಡವನತಿ । ಪ್ರೇಮದಿಂದೇತಕೆ
ಕರುಣಿಸಿದನೋ ಧರಣಿಸುತೆಯು । ಭೂಮಿಯೊಳುತಾನೇಕೆ ಸಿಕ್ಕಿದ ।
ಳೋ ಮಹಿಯೊಳುವ ವರನಿಪನೋ । ಕೋಮಲೆಗೆನುತ ಜನಕ
ಚಿಂತಿಸುತಿರ್ದನನುದಿನವು ॥ ೩೭ ॥ ನಾರದನಮಾತೆಲ್ಲಿ ನುಡಿವ ಶ । ರೀ
ರವಾಣಿಯುಗೆಲ್ಲಿ ಗಿರಿಶನ । ಭೂರಿಚಾಪವಿದೆಲ್ಲಿ ಧರಣೀತನುಜೆತಾನೆಲ್ಲಿ ॥
ತೋರದೆನಗೊಂದು ಮನುತಾಮುರ । ವೈರಿಯನು ತಾ ನೆನೆದಡಿಗಡಿಗೆ ।
ವಿಸಾರಿದತಿಚಿಂತೆಯನು ಕೈಕೊಂಡನು ಜನಕನಿರದೆ ॥ ೩೮ ॥ ಮೇದಿನೀ
ಸುತೆಯಿಂದೆ ನನಗೀ । ಮೇದಿನಿಯೊಳಪಯಶವುಬಂತೆನು । ತಾ ಧರ
ಣಿಪತಿ ಜನಕನೊಂದುವರನನು ಕಾಣದೆಯೆ ॥ ಖೇದದಿಂದಾ ಮುನಿಶ
ತಾನಂ। ದಾದಿಗಳೊಡನೆ ಪೇಳಿದನು ತಾ । ನೈದಿದಮನಃಖೇದವನು ದೈನ್ಯ
ವನು ತೋರಿಸುತ ॥ ೩೯ ॥ ಸೀತೆಯ ಮದುವೆಗೆಂದೆನುತ ನಾ । ನೀತೆರದೆ
ಬಳಲುತ್ತಿಹೆ ನಿತರರ । ಮಾತದೇತಕೆ ಜಗದೆಪೆಂಗಳ ಪಡೆದವರೂನವರು ॥
ಭೂತಳದೊಳುರೆ ಚಿಂತಿಪರು ಪ್ರರು । ಹೂತಸಮರಾದೊಡಮವರ ಬಿಡ ।
ದೀತೆರದ ತೊಡಕೆನುತ ಯೋಚಿಸುತಿರ್ದನಾಜನಕ ॥ ೪೦ ॥

ಇಂತು ನಾಲ್ಕನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೧೬೩.



## ಐದನೆಯ ಅಧ್ಯಾಯ.

ಸೂಚನೆ ॥ ಮುನಿಪ ವಿಶ್ವಾಮಿತ್ರನೊಡನಾ ।
ಜನಕಪುರಿಗೈತಂದು ಗಾಧಿಸು ।
ತನ ಮಹಾತ್ಮೆಯನರಿದು ರಾಮನು ಧನುವ ಭಂಗಿಸಿದ ॥

ಮತ್ತೆ ಸಚಿವಪುರೋಹಿತರ ಬರಿ । ಸುತ್ತ ಬಿನ್ನವಿಸಿದನು ಭಕ್ತಿ
ಯೊ । ಳುತ್ತಮೋತ್ತಮಮುನಿಪ ಯಾಗವನಾಗಿಸುವೆನಿದಕೆ ॥ ಚಿತ್ತ
ದೊಳು ನಿಮಗೆಂತು ತೋರ್ಪುದೆ । ನುತ್ತ ಬೆಸಗೊಳಲಾಗ ಬಹು
ದೆಂ । ದುತ್ತರವ ನವರಿತ್ತರಾಜನಕಂಗೆ ಸಮ್ಮುದದಿ ॥ ೧ ॥ ಸಕಲ

ಸಂಭಾರಗಳ ನೊದಗಿಸು । ತ ಕಡುಸಂತ್ರಸದಿಂದವನಿಪಾ । ಲಕರ
ಬರಿಸಿದ ನಧ್ವರಕೆನುತಲಾಗ ವಹಿಂದಲಿ ॥ ಸುಕವಿಗಳ ಕಣ್ಮನದಣಿಯು
ಜನ । ನಿಕರ ಕಾಗಿಸಿದನು ಭವನಗಳ । ಸುಕರಸೋಪಸ್ಕರಗಳಿಂ
ಮೆರೆವಂತೆ ಭೂಮಿಪತಿ ॥ ೨ ॥ ಕ್ಷಿತಿಯೊಳುಳ್ಳ ಸಮಸ್ತ ಮುನಿಪರ ।
ನತಿನಯದೆ ಕರೆಯಿಸುತ ಸುರಸಂ । ಮತಮೆನಿಪ ಯಾಗಕೆ ಶುಭ
ಮುಹೂರ್ತವನು ನಿಶ್ಚಯಿಸಿ ॥ ಶ್ರುತಿ ವಿಧಾನವನನುಸರಿಸುತಾ । ಕ್ರ
ತುವನಾಚರಿಸುವನಿ ಸುರರ । ಮತದೊಳಂದುಜ್ಜುಗಿಸಿದನು ನಿಜಸತಿ
ಸಹಿತನಲಿದು ॥ ೩ ॥ ಬಂದುದಿನಗಾಧೇಯ ದಶರಥ । ನಂದನರೆನಿಪ ರಾಮ
ಲಕ್ಷ್ಮಣ । ರಿಂದೊಡವೆರಸಿ ಬಂದನು ಮಿಥಿಳೆಗೆ ಮುದದನಿವಲಿ ॥
ಬಂದಮುನಿಪೋತ್ತಮನ ತಿಳಿದೈ । ತಂದು ಸಾಷ್ಟಾಂಗದೊಳೆರಗಿ
ಪದ । ಕಂದು ಕೊಟ್ಟನು ಯರ್ಘ್ಯಪಾದ್ಯಾಚಮನಗಳನೊಲಿದು ॥ ೪ ॥
ಪರಸಿ ಮಂತ್ರಾಕ್ಷತೆಗಳನು ಕೊ । ಟ್ಟರಸನನು ಕುಳ್ಳಿರಿಸಿ ಕೇಳಿದ ।
ನಿರದೆಮುಖದಲಿ ದೇಶಕೋಶ ಪುರಗಳಲಿ ಕುಶಲವ ॥ ಕರಗಳನು ಜೋ
ಡಿಸುತ ತಾಪಸ । ವರನೊಡನೆ ತಮ್ಮ ಕೃಪೆಯಿಂದೆ । ಲ್ಲರು ಕುಶಲದಿಂ
ದಿಹರೆನುತ್ತಲಿ ನುಡಿವಭೂಮಿಪತಿ ॥ ೫ ॥ ಮುನಿಪ ಶುಭಮೆಕ್ಕೆನಿವ
ಗೀನೃಪ । ತನಯ ರಾರ್ಯೆದೇವತುಲ್ಯರು । ವಿನುತಭುಜಬಲ ಯುತರು
ಗಜ ಪುಲಿಸಿಂಹ ವೃಷಭಗಳ ॥ ಘನಗಮನಗಳನಾಂತಿಪರು ಮೇ ।
ದಿನಿಯೊಳತ್ರಿವೀರರೆನಿಪರು ರೂ । ಪಿನೊಳಗಶ್ವಿಪಿದೇವತೆಗಳಂದದೆ ವಿ
ರಾಜಿಪರು ॥ ೬ ॥ ಇವರು ಯೌವನದಿಂದೆ ಕೂಡಿಪ । ರಿವರು ತಾಪ
ನ್ಯೋನ್ಯಸಮರೆನಿ । ಸುವರು ಪರಿಮಾಣೇಂಗಿತಸು ಚೇಷ್ಟೆಗಳ
ನಿವಹದಲಿ ॥ ಇವರು ಶಶಿರವಿಗಳತೆರದೆ ತೋ । ರುವರು ಧಾರುಣಿಗಿಳಿ
ದಮರರಂ । ತೆ ವಿನುತಿವಡೆದಿಹರು ಧರಿಸಿಹರು ಕಾಕಪಕ್ಷಗಳ ॥ ೭ ॥
ಇವರು ಬೆನ್ನೊಳು ಖಡ್ಗತೂಣೀ । ರವರ ಚಾಪಗಳನು ಧರಿಸಿಹರು ।
ಇವರು ತೋರುವರಖಿಳಭೂಮಿಯ ನಾಳುವಾಬಗೆಯ ॥ ಕುವಲಯ
ದಳಾಯತನಯನ ರೆನಿ । ಸುವಿವರಾವ ನೃಪಾಲನತನಯ ॥ ರಿವರ ಸಂ
ಗತಿಯೆಲ್ಲವನು ತಿಳುಹುವುದುತನಗೆಂದ ॥ ೮ ॥ ಜನಕಭೂವರ ಸಾವ
ಧಾನದ । ಮನದೊಳಾಲಿಸು ಶುಭಗಳಾಗಲಿ । ನಿನಗೆ ಈ ರಾಜಸುತರಿನ
ವಂಶಾಬ್ಧಿಸೋಮನಹ ॥ ವಿನುತ ದಶರಥ ಸಾರ್ವಭೌಮನ । ತನಯ

ರಾಗಿಹ ರಾಮ ಲಕ್ಷ್ಮಣ । ರೆನಿಸುವರುನೀ ನಿವರ ವೃತ್ತಾಂತವನು ಕೇಳೆಂದ
॥ ೯ ॥ ನಾನುಮಾಡುವ ಮಖಕೆವಿಘ್ನವ । ನಾನಿಸುತ್ತಿರೆ ಬಂದಡಿಗಡಿಗೆ ।
ದಾನವರಹ ಸುಬಾಹುಮಾರೀಚಾದಿಘಾತುಕರು ॥ ದೀನತೆಯನೈದಿ ಮನ
ನೊಂದು ನಿ । ದಾನಿಸದೆ ದಶರಥನ ಯಾಚಿಸಿ । ನಾನಿವರನೊಡಗೊಂಡು ಬಂ
ದೆನು ಯಾಗ ರಕ್ಷಣೆಗೆ ॥ ೧೦ ॥ ಬರುವದಾರಿಯೊಳೀ ಕುಮಾರರಿ । ಗರುಹಿ
ದೆ ಬಲಾತಿ ಬಲಗಳೆನಿಸು । ವೆರಡುವಿದ್ಯೆಗಳನು ಸಕಲ ಮಂತ್ರಾಸ್ತ್ರಗಳ
ಪರಿಯ । ತರಿದು ತಾಟಕಿಯನುಸುಬಾಹುವ । ನಿರಿದು ಮಾರೀಚನನು ದಕ್ಷಿ
ಣ । ಶರಧಿಗೈದಿಸಿ ನನ್ನ ಯಾಗವ ಪೊರೆದನೀ ರಾಮ ॥ ೧೧ ॥ ತದುಪರಿಯೊ
ಳಿನ್ನಿಂದೆ ಗಂಗಾ । ನದಿಯ ವಿಸ್ತಾರವನು ಕೇಳಿ ಮು । ದದೊಳು ತಾನೀಕ್ಷಿ
ಸಿ ವಿಶಾಲಾನಗರಿಯನು ಬಳಿಕ ॥ ಉದಿಸಿದಾನಂದದೊಳು ಮುನಿವೃಂ । ದ
ದೊಡನೆ ಮಿಥಿಲೆಗೈ ತರುತ ಮಾ । ರ್ಗದೊಳಹಲ್ಯೆಯ ಶಾಪವನು
ಪರಿಹರಿಸಿದನು ರಾಮ ॥ ೧೨ ॥ ಗೌತಮನು ನಿಜಸತಿಸಹಿತ ತಾ । ಸೀ
ತನನು ಹರಿಯೆಂದು ಬಗೆದತಿ । ಪ್ರೀತಿಯಿಂದರ್ಚಿಸಿದ ವೇದವಿಹಿತ
ವಿಧಾನದಲಿ ॥ ಆತನಾ ಸತಿಸಹಿತಸ್ಯೈದಿದ । ನಾತುಹಿನಗಿರಿಗೀಶಚಾಪವ ।
ನೀತನಿಗೆ ತೋರಿಸಲು ಬಂದೆನು ನಿನ್ನ ಬಳಿಗೆಂದ ॥ ೧೩ ॥ ಮುನಿಶತಾ
ನಂದನನೊಡನೆ ರಾ । ಮನ ಚರಿತ್ರಂಗಳನು ಕೇಳುತ । ಮನದೊಳ
ಚ್ಚರಿವಡೆದು ಮಾತೆಯ ಶಾಪ ಭಂಗವನು ॥ ಜನಸಮೂಹದೊಳಾ
ಲಿಸುತ ಜನ । ಕ ಸಿದಿರೊಳು ರಾಮನಿಗೆ ಗಾಧಿಸು । ತನ ಮಹಿಮೆಗಳ
ಪೇಳಿದನು ಸಂತಸದೆ ಮೊದಲಿಂದ ॥ ೧೪ ॥ ರಾಮಕೇಳೈಗಾಧಿಸುತ
ನೀ । ಭೂಮಿಯನು ಪಾಲಿಸುತ ಸತ್ಯದೊ । ಳಾ ಮುನಿವರವಸಿಷ್ಠ
ನಾಶ್ರಮಕೊಂದುದಿವಸದಲಿ ॥ ತಾಮುದದೊಳೈತರಲು ನೃಪನ । ಕ್ಷೇ
ಮವನು ಕೇಳ್ದತ್ತನಾಮುನಿ । ಪ್ರೇಮದೊಳು ತಾನರ್ಘ್ಯಪಾದ್ಯಾಚ
ಮನಗಳನಂವು ॥ ೧೫ ॥ ಮನುಜಪತಿಗಾ ಧೇಯುನಿಗುಮಾ । ತನ
ಸಕಲ ಸೈನ್ಯಕುಮೊಡನೆ ಭೋ । ಜನವ ನಾಗಿಸಬೇಕೆನುತ್ತ ವಸಿಷ್ಠ
ನಾನೃಪನ ॥ ಜನಿಸಿ ದಾನಂದದೊಳೊಡಂಬಡಿ । ಸಿ ನಿಜನಂದಿನಿ ಧೇ
ನುವನು ಕರೆ । ದು ನುಡಿವನು ಭೋಜನಪದಾರ್ಥಂಗಳ ನೊದಗಿಸೆ
ನುತ ॥ ೧೬ ॥ ಮುನಿವಸಿಷ್ಠನನುಜ್ಞೆಯಿಂದಾ । ಜನಪತಿಯ ಸೈನ್ಯ
ಕ್ಕೊದಗಿಸಿತು । ವಿನುತ ಭಕ್ಷ್ಯಸುಭೋಜ್ಯಗಳನಾಲೇಹ್ಯ ಚೋಷ್ಯ
ಗಳ ॥ ಘನತರದ ಶಾಲ್ಯನ್ನರಾಶಿಗ । ಳನು ವಿಮಲಪಾನೀಯಗಳ
ನಾ । ವನದ ಮಧ್ಯದೊಳೆಲ್ಲರಚ್ಚರಿವಡೆವ ರೀತಿಯಲಿ ॥ ೧೭ ॥ ಬಳಿಕ

ವಿಶ್ವಾಮಿತ್ರ ನಾವನ । ದೊಳುಭುಜಿಸಿ ಬಲದೊಡನೆ ಮುನಿಪನ ।
ಬಳಿಗೆ ಬಂದಾ ಕಾಮಧೇನುವ ನಿರದೆ ಬೇಡಿದನು ॥ ತಳುವದೀಧೇನುವ
ನೆನಗೆ ಕೊಡಿ । ರಿಳೆಯೊಳಗ್ಗದ ರತ್ನಗಳ ನೀ । ಗಳೆ ಕೊಡು ಪೆಮನ
ವೊಪ್ಪುವಂದದೆ ನಿಮಗೆ ನಾನೆಂದ ॥ ೧೮ ॥ ಭೂಮಿಪತಿ ನೀನಾಲಿಸೈ
ವರ । ಕಾಮಧೇನುವ ಬಯಸದಿರೆನಗೆ । ಕಾಮಿತಾರ್ಥಗಳೆಲ್ಲವನು
ತಾನೀವು ತಿರ್ಪುದಿವು ॥ ಪ್ರೇಮದೊಳದರಘನಸಹಾಯು ದೊ । ಳೀ
ಮಹಿಯೊಳಾಚರಿಸುವೆನು ಘನ । ಹೋಮ ಜಪತಪ ಹವ್ಯಕವ್ಯಂಗ
ಳನು ನಾನೆಂದ ॥ ೧೯ ॥ ನಂದಿನೀಧೇನುವಿನ ನೆರವಿಂ । ಬಂದತಿಥಿಯ
ಭ್ಯಾಗತರ ನಾ । ನಂದಿಸುವೆ ನಾನಗ್ನಿಹೋತ್ರಗಳ ನೆಸಗುವೆನೊಲಿ
ದು ॥ ಚಂದದಿಂ ಮುನಿಕೃತ್ಯವೆಲ್ಲವ । ನೊಂದು ಲೋಪವೆನಿಸದೆ
ಮಾಡುವೆ । ನಿಂದಿದನುಳಿದು ನಿನಗೆ ಬೇಕಾದುದನು ಕೇಳೆಂದ ॥ ೨೦ ॥
ಧೇನು ವಿದನುಳಿದಾವ ವಸ್ತುವ । ನಾನಪೇಕ್ಷಿಸೆ ನಿದನೆ ಬೇಡುವೆ ।
ನೀನೆಲವೊಳದಕಾವುದುಂ ಸಮವೆನಿಸದೆಲೆಮುನಿಪ ॥ ನಾನು ಕೊಡು
ವೆನು ಧರಣಿತಲದೊಳ । ಗೇನುಬೇಕಾದೊಡವೊಡನೆಯನು । ಮಾನ
ಮಿಲ್ಲದೆನಗಿದನಿಷ್ಟು ಪೂರೆವುದುನೀವೆಂದ ॥ ೨೧ ॥ ಜನಪ ವಿಶ್ವಾಮಿ
ತ್ರ ನಿನ್ನಯ । ಮನವೊಲಿವರೀತಿಯೊಳು ಧೇನುವ । ನಿನಗೆ ಕೊಡೆ
ನಾಂ ಕೇಳುಮತ್ತೇನಾದೊಡ ಮೆನುತ್ತ ॥ ಮುನಿವಸಿಷ್ಠನು ನುಡಿಯ
ಲಾ ಮೇ । ದಿನಿಪತಿ ತಮಗೆಸಾವಿರ ಹಸುಗ । ಳನು ಕೊಡುವೆನೀ ಧೇನು
ವನು ಕೊಡಿರೆನುತ ಬೇಡಿದನು ॥ ೨೨ ॥ ಏನು ಕೊಟ್ಟರು ಬೇಡ ನಾನೀ
ಧೇನುವನು ಕೊಡೆನೆನಲು ಗಾಧಿಜ । ನಾನುಡಿಯ ಕೇಳ್ದರದೆ ಲಕ್ಷ ದನಂ
ಗಳನು ಕೊಟ್ಟು ॥ ನಾನಿದನು ಕೇಳುವೆನೆನಲ್ಕೆ ತ । ಪೋನಿಧಿಯೊಡಂ
ಬಡದಿರಲೊಡನೆ । ತಾನು ತನ್ನೈಸಿರಿಯನೆಲ್ಲವ ಕೊಡುವೆ ನಿದಕೆಂದ
॥ ೨೩ ॥ ಕಾಮಧೇನುವ ಕೊಡುವುದಿಲ್ಲೆನು । ತಾ ಮುನೀಂದ್ರನು
ನುಡಿಯಲೊಡನಾ । ಭೂಮಿಪತಿ ಗಾಧೇಯ ಕೋಪವತಾಳ್ದು ಮನ
ದೊಳಗೆ ॥ ಕಾಮಧೇನುವ ನೆಳೆಯೆಮನನೊಂ । ದಾ ಮುನಿಪತಿಗೆ
ಧೇನು ನುಡಿದುದು । ತಾಮಸವೆನುಳಿದೆನ್ನ ಸಲಹುವುದೆನುತ ಬಿಸು
ಸುಯ್ದು ॥ ೨೪ ॥ ನಂದಿನಿಯೆನೀಂ ಕೇಳು ಗಾಧಿಯ । ನಂದನನು
ಬಲಶಾಲಿಯಾ ಜನ । ವೃಂದದೊಳು ರಾಜನೆನಿಸಿಹನು ಕ್ಷತ್ರಿಯನು
ತಾನು ॥ ಸಂದಣಿಸಿ ಬಲಸಹಿತ ಮಿಲ್ಲಿಗೆ । ಬಂದಿಹನು ನಾನೇನುಮಾಡಲಿ ।
ಯೆಂದೆನಲು ನಂದಿನಿ ನುಡಿದುದಾಮುನಿಗೆ ವಂದಿಸುತ ॥ ೨೫ ॥ ಕೇಳು

ರಾಘವ ಧೇನುವಾಮುನಿ । ಪಾಲನಿಗೆ ಬಿನ್ನವಿಸಿದುದು ದಯ । ಪಾಲಿಸಿ ಪೊಡವಪ್ಪಳೆಯ ನೆನಗೀನೃಪನ ಸೈನ್ಯವನು ॥ ಬೀಳಿಸುವೆ ನಿಮಿಷದಲಿ ಬಲದಿಂ । ದಾಳಿಪುದು ನೀವೆನಲು ವರಮುನಿ । ಪಾಲ ನಿತ್ತನನುಜ್ಞೆ ಯನು ನಿರ್ಮಿಪುದು ಬಲವೆನುತ ॥ ೨೬ ॥ ಒಡನೆ ಚತುರಂಗ ಬಲವನು ತಾ । ನಡವಿಯೊಳು ನಿರ್ಮಿಸುತ ನಂದಿನಿ । ಪೊಡವಿಪಾಲನ ಸೈನ್ಯದೊಡನಾ ಯುದ್ಧರಂಗದೊಳು ॥ ಕಡುಮುಳಿದುತಾಂ ಹೋರಲವನಿಪ । ನಡಿ ಗಡಿಗೆ ಸೈನ್ಯವನು ಸೋಲಿಸಿ । ಕಡಿಕಡಿದು ಬೀಳಿಸಿದ ನವನಿಯೊಳಸ್ತ್ರ ಶಸ್ತ್ರದಲಿ ॥ ೨೭ ॥ ಭಂಗವಡೆದಾ ಸೈನ್ಯವನು ಕಂ । ಡಂಗಕೊಡ ಹಲು ಧೇನುವಾರಣ । ರಂಗದೊಳು ಜನಿಸಿದರು ಶಕರು ಮ್ಲೇಛ್ಛರು ಯವನರು ॥ ಸಂಗಳಿಸಿತಾವೆಲ್ಲರಾ ಜನ । ವಂಗೆ ಬೀರಿದ ರಥಿಕಶಸ್ತ್ರಾ । ಸ್ತ್ರಂಗಳನು ಮೀರಿದ ಪರಾಕ್ರಮದೊಳುರೆಬೊಬ್ಬಿರಿದು ॥ ೨೮ ॥ ಮತ್ತೆ ವಿಶ್ವಾಮಿತ್ರನೊಡನಾ । ಬತ್ತಳಿಕೆಯಿಂದಸ್ತ್ರಗಳ ತೆಗ । ದೆತ್ತಲುಂ ಮುತ್ತಿ ಬಳಸಿದ ಸೈನ್ಯವನು ಖಂಡಿಸುತ ॥ ವೃತ್ತಮಮೆನಿಸಿದಾಶ್ರ ಮಂಗಳ । ನೆತ್ತಲುಂ ಶೂನ್ಯವೆನಿಸಿದ ನಾ । ಹೊತ್ತಿನೊಳು ಬಳಿಕಾ ವಸಿಷ್ಠಮುನೀಂದ್ರ ಖತಿಗೊಂಡ ॥ ೨೯ ॥ ದಂಡವನು ಮುನಿಪೋ ತ್ತಮನು ಕೈ । ಕೊಂಡವನಿಪಾಲಕನ ಸೈನ್ಯವ । ಖಂಡಿಸಿದನಾ ಬ್ರಹ್ಮ ತೇಜೋಬಲಮಹಿಮೆಯಿಂದ ॥ ಕಂಡು ವಿಶ್ವಾಮಿತ್ರ ನೀಭೂ । ಮಂಡ ಲದೊಳು ಕ್ಷತ್ರಿಯಬಲವು । ಭಂಡತನವನು ಹೊಂದಿತೆನ್ನುತ ಮನದೆ ದುಃಖಿಸಿದ ॥ ೩೦ ॥ ನಿಂದಿಸು ಕ್ಷತ್ರಿಯರ ಬಲವನು । ಯಿಂದುಮೇದಿನಿ ತಳದೊಳಗಧಿಕ । ಮೆಂದೆನಿಸಿತೀ ಬ್ರಹ್ಮತೇಜೋ ಬಲಮೆನುತಲೊ ಡನೆ ॥ ಅಂದುಕೊಂಡಾ ರಣವನುಳಿದೈ । ತಂದು ಬ್ರಾಹ್ಮಣನಾಗಲು ಭಕುತಿ । ಯಿಂದೆ ವಿಶ್ವಾಮಿತ್ರನಾರಂಭಿಸಿದ ನಾತಪಕೆ ॥ ೩೧ ॥ ಶಂಕಿಸದೆ ನೀ ಕೇಳು ರಘುಪತಿ । ತೆಂಕಣದೆಸೆಗೆ ಬಂದು ಗಾಧಿಜ । ಶಂಕರನ ಜಾನಿಸುತಸಾಸಿರ ಯಬುದಪರಿಯಂತ ॥ ಬಿಂಕದಿಂದೆಸಗಿದನು ಬರುವಾ । ತಂಕಗಳನೀಕ್ಷಿಸದೆ ಭರ್ಗನ । ಕಿಂಕರನು ತಾನೆನಲು ದೇವ ಸಮೂಹ ಮೆಚ್ಚುವೊಲು ॥ ೩೨ ॥ ತಪವನಾಚರಿಸುತಿರೆ ಗಾಧಿಜ । ವಿಪುಲೆಯೊಳು ಚಂಡಾಲನೆನಿಸಿದ । ತಪನಕುಲದ ತ್ರಿಶಂಕುಯಾಗವ ಮಾಡಿಸೆಂದೆನುತ ॥ ವಿಪಿನದೊಳು ಬೇಡಲವನಮುಖವ । ನುಪದೆದಾಗಿ ಸುತಾತನನು ವಿ । ಷ್ಣುಪದದೊಳು ತಾಗೆಯ್ದು ಸಗ್ಗದೊಳಸಿರಿದನು ಕೂಡೆ ॥ ೩೩ ॥ ಬಳಿಕ ಪಶ್ಚಿಮದಿಕ್ಕಿನೊಳಗೆ ತಾ । ನೊಲಿದು ಘೋರ

ತಪವನೆಸಗಿದನು । ಬಳೆದ ಪಂಚಾಗ್ನಿಗಳ ಮಧ್ಯದೆನಿಂದನವರತವು ॥ ಕಳೆದುದೀಪರಿ ಸಾಸಿರಬುದಂ । ಗಳೊಡನೆ ಶುನಶ್ಯೇಫನೀತನ । ಬಳಿಗೆ ಬಂದಾಂಮುಖಕೆ ಪಶುವೆನಿಸಿರ್ದ ಸಲಹೆಂದ ॥ ೩೪ ॥ ಕರುಣ ದಿಂದೀ ಗಾಧಿಸುತನಂ । ದಿರದೆಮನ್ನಿಸಿ ಬಾಲಕನಿಗೊಲಿ । ದೆರಡು ಮಂತ್ರಗಳ ನುಪದೇಶಿಸಿದನು ತಪೋವನದೆ ॥ ಧರಣಿಯೊಳು ನಡೆವಂಬ ರೀಷನ । ವರಮುಖದ ಯೂಪದೊಳು ಬಿಗಿದೊಡ । ಸಿರದೆ ಯುಚ್ಚರಿಸಿ ದನು ದೇವೇಂದ್ರನು ಪೊರೆವನೆಂದ ॥ ೩೫ ॥ ಉತ್ತರದೆಸೆಗೆ ಪೋಗಿ ತಪವನು । ಮತ್ತೆ ತಾನೆಸಗಿದನು ಜಾನಿಸಿ । ಚಿತ್ತದಲಿ ತಾನೊಂದು ಸಾವಿರ ಯುಬುದಶಂಕರನ ॥ ಬಿತ್ತರಿಸ್ಸಿದೀತನ ತಪಕೆ ಮೆ । ಚ್ಚುತ್ತ ಬ್ರಹ್ಮನು ಬಂದುಪೇಳಿದ । ನುತ್ತಮದ ಬ್ರಾಹ್ಮಣನು ಋಷಿವರನೆನಿಪೆ ನೀನೆಂದು ॥ ೩೬ ॥ ಈತನೆಡೆಗೈತಂದು ರಂಭೆಯು । ಭೀತಿಯಿಂದೀಕ್ಷಿಸಲೊಡನೆ ಮನ । ಸೋತು ತಾನವಳೊಡನೆ ಭೋಗಿಸಿದ ನುಳಿದು ತಪವನು ॥ ತಾತ್ರಿಳಿದು ತನ್ನಜ್ಞತೆಯ ನಿರ । ದೀತಶಾಪವನಿತ್ತ ನವಳಗೆ । ಭೂತಲದೆಶಿಲೆಯಾಗು ನೀನೆನುತಧಿಕ ರೋಷದಲಿ ॥ ೩೭ ॥ ಬಂದು ಮೂಡಣ ದೆಸೆಗೆ ಕೌಶಿಕ । ದೊಂದು ಸಾವಿರ ಯುಬುದಮಾಡಿದ । ನಂದು ಘೋರತರ ತಪವನು ಬಳಿಕೀತನ ಶಿರದೊಳು ॥ ಚಂದದಿಂದುದಿಸಿದುದು ಧೂಮವು । ನೊಂದುತಲ್ಲಣಿಸಿ ದುದು ಜಗನಡೆ । ತಂದು ಬೇಡಿದ ನಿಂದ್ರನಿವನ ತಪಃಫಲವನಿರದೆ ॥ ೩೮ ॥ ಪಡೆದು ತಾಸಿತ್ತನು ತಪಃಫಲ । ವ ದಿವಿಜೇಂದ್ರನಿ ಗೀತನು ಬಳಿಕ । ಲುದಧಿಶೋಷಿಸಿ ತವನಿಕಂಪಿಸಿ ತೀತನ ತಪಸಿಗೆ ॥ ಕದಲಿ ಪುಡಿಪುಡಿಯಾದವು ಗಿರಿಗ । ಳು ದುಗುಡವನೈದಿದರು ಮಾನವ । ರಿದನರಿದು ಬಂದನು ಪಿತಾಮಹ ನಮರರೊಡಗೊಂಡು ॥ ೩೯ ॥ ನೀನು ಬ್ರಹ್ಮರ್ಷಿಯೆನುತಾ ಚತು । ರಾನನ ನೊರೆದನ ಮರರೆಲ್ಲರು । ನೀನು ಬ್ರಹ್ಮರ್ಷಿಯೆನಿಸಿದೆ ನಿಲ್ಲಿಸು ತಪವನೆನುತ ॥ ಸಾನುರಾಗದೊಳೊರೆದರು ಘನತ । ಪೋನಿಧಿವಸಿಷ್ಠಮುನಿ ನುಡಿದನು । ನೀನು ಬ್ರಹ್ಮರ್ಷಿಯುಹೆ ನಿನ್ನಯ ಸಖ್ಯವಿರಲೆಂದು ॥ ೪೦ ॥ ಇಂತು ಬ್ರಾಹ್ಮಣನೆಂದೆನಿಸಿದನು । ಸಂತಸದೊಳಾಲಿಸೆಲೆ ರಾಘವ । ಪಿಂತೆಸಗ್ಗದೊಳು ವಸಿಷ್ಠನೊಡನೆಸಗಿ ಶಪಥವ । ಅಂತವಿಲ್ಲದ ತಪದ ಫಲವನ । ನಂತರದೊಳತ್ತನು ಮನದೊಳಗೆ । ಚಿಂತಿಸದೆ ಕೌಶಿಕ ಹರಿಶ್ಚಂದ್ರಂಗೆ ತಾಂ ಪಡೆದು ॥ ೪೧ ॥ ಈತ ತಪದೊಳಗಧಿಕನಾಗಿಹ । ನೀತ ಕುಲದೊಳ ಗಗ್ಗಳನೆನಿಪ । ನೀತ ನುತ್ತಮನೆಂದೆನಿಸಿದನು ತಾಪಸರುಗಳಲಿ ॥ ಈತ

ನಿಗೆ ಸಮರಿಲ್ಲ ಲೋಕದೊ । ಳೀತ ನಾಮಹಿಮೆಯ ತಿಳಿಯೆನುತ ।
ಗೌತಮತನಯನೆಂದು ಪೇಳಿದನೊಲಿದು ರಾಮನಿಗೆ ॥ ೪೦ ॥ ಜನಕ ಭೂ
ಪತಿ ಬಿನ್ನವಿಸಿದನು । ಮುನಿಪ ವಿಶ್ವಾಮಿತ್ರನಿಗೆ ಕರ । ವನುಮುಗಿದು
ತಮ್ಮ ದರುಶನದಿಂದೆನ್ನ ವಂಶವಿದು ॥ ಘನತೆಯನುತಾಳ್ದುದುರೆ ಧನ್ಯನ ।
ಹೆನು ಮಹಿಯೊಳೆನಗಾರು ಸರಿಯೆಂ । ದೆನಿಸುವರು ಫಲಿಸಿದುದು ಯಾಗ
ವು ನಿಮ್ಮ ದಯೆಯಿಂದ ॥ ೪೩ ॥ ಮುಂದೆ ಬೆಸಸುವುದೆಂದು ಭೂವರ ।
ನಂದು ಬಿನ್ನವಿಸಲೊಡನಾ ಮುನಿ । ಯಿಂದು ಪೇಳಿದ ನೆಲೆಜನಕ ನಿನ್ನ
ಬಳಿಯೊಳಿರುತಿಹ ॥ ಇಂದು ಶೇಖರ ಧನುವನೀಕ್ಷಿಸ । ಲೆಂದು ನನ್ನೊಡ
ನೀ ಮಿಥಿಲೆ ಗೈ । ತಂದಿಹನು ರಾಮನೆನೆಜನಕಾವನಿಪನಿಂತೆಂದ
॥ ೪೪ ॥ ಮುನಿಪ ನೀನಾಲಿಸು ಶಿವಶರಾ । ಸನವ ನಾ ಭೂತೇಶನಿತ್ತ
ನು । ಮನುಜಪಾಲಕ ದೇವರಾತನಿಗಂದು ಕರುಣಿಸುತ ॥ ಧನುವಿದಾ
ತನ ಮೂಲಕದೆ ತಾ । ನೆಸಗೆ ಬಂದುದು ಶೋಧಿಸುತಿರೆ ಸ । ವ ಕೆ
ನುತ ನೆಲವನ್ನು ಬಳಿಕಲಿ ದೊರೆತಳೀ ಸೀತೆ ॥ ೪೫ ॥ ಇವಳು
ನಿನ್ನಾತ್ಮಜೆಯು ನೀನೊಲಿ । ದಿವಳ ರಕ್ಷಿಸು ಹರನ ಕೋದಂ । ಡವನು
ಭಂಗಿಸುವ ಮನುಜನಿಗೀ ವೀರ್ಯ ಶುಲ್ಕಳಹ ॥ ಅವನಿಸುತೆ ಸೀತೆಯನು
ಕೊಟ್ಟು ಮ । ದುವೆಯನಾಗಿಸು ನೀನೆನುತ ಭುಜ । ಭವತನಯನಾರ
ದನುಪೇಳಿದನೆನಗೆ ಕೇಳೆಂದ ॥ ೪೬ ॥ ಸುರಮುನಿಯು ಮತದಂತೆ ಗಂ
ಗಾ । ಧರನ ಚಾಪವ ಮುರಿದವಂಗೀ । ಧರಣಿಸುತೆಯನು ಕೊಡುವೆ
ನೆಂದೆನುತಾನು ಸಾರಿಸಲು ॥ ಸುರನರೋರಗ ಯಕ್ಷರಾಕ್ಷಸ । ಗರುಡ
ಗಂಧರ್ವಾದ್ಯರೆಲ್ಲರು । ಬರುತ ಚಾಪವ ಭಂಗಿಸದೆ ಪಿಂದಿರುಗುತೋಡಿ
ದರು ॥ ೪೭ ॥ ಭೂಮಿಪಾಲಕ ರೊಂದುಗೂಡುತ । ಭೂಮಿಸುತೆಯನು
ಪಡೆಯಬೇಕೆಂ । ದೀ ಮಿಥಿಲೆ ಗೈತಂದು ಸಮರದೊಳೆನ್ನ ಸೋಲಿಸಲು ॥
ನೇಮದಿಂದಾ ನೆಸಗಿ ತಪವನು । ಸೋಮಧರನಿತ್ತಧಿಕ ಬಲದಿಂ । ದಾ
ಮನುಜಪಾಲಕರ ನೋಡಿಸಿದೆನುರಣಾಂಗಣದೆ ॥ ೪೮ ॥ ಕೇಳು ಮುನಿ
ಪೋತ್ತಮ ಹರಧನುವ । ನಾಳುತನದಿಂ ಮುರಿವ ಧರಣೀ । ಪಾಲನನು
ಕಾಣೆ ನವನಿಜೆಗೆಂತೆಸಗುವೆ ಮದುವೆ ನು ॥ ಪೇಳಲಾರೆನು ಮನವ
ನೋವನು । ಹೇಳನೀವಿದಕೆ ಪರಿಹಾರವ । ಪಾಲಿಸುವುದೆನ್ನನೆನುತಂದಾ
ಮನುಜಪತಿ ನುಡಿಯೆ ॥ ೪೯ ॥ ಜನಕ ನೀನಾಲಿಸು ಹರಶರಾ । ಸನವ
ನೋಡಲು ರಾಮ ಲಕ್ಷ್ಮಣ । ರು ನಡೆತಂದಿಹರಿಲ್ಲಿಗೆನ್ನೊಡ ನುಳದು
ಸಂಶಯವ ॥ ಧನುವತೋರಿಸಿವರಿಗೆನೆ ಬಳಿಕ । ಮುನಿಪನಾಜ್ಞಾತಿಯಂತೆ

ಕಾರ್ಮ್ಕ । ವನು ತರಿಸಿದನು ಜನಕ ನೈನೂರಾಳ್ಗಳಿಂದೊಲಿದು ॥ ೫೦ ॥
ಮುನಿಕುಲೋತ್ತಮ ಕೇಳು ತಮ್ಮ್ಕವೆ । ಚನವ ತಾಳ್ದು ಶಿರದೊಳು
ಪುರಹರ । ಧನುವ ತರಿಸಿಹೆನೆನುತ ಪೇಳ್ದನು ಜನಕ ಕೈಮುಗಿದು ॥
ಮುನಿವಿಲೋಕಿಸಿ ಗಂಧ ಪುಷ್ಪಗ । ಳನು ತಳೆದಕೋದಂಡವನು ರಾ ।
ಮನಿಗೆ ನುಡಿವನು ಹರನಚಾಪವ ನೋಡು ನೀನೆನುತ ॥ ೫೧ ॥ ರಾಮ
ನಾತನ ನುಡಿಯ ನಾಲಿಸಿ । ಕೈಮುಗಿದು ಮುನಿಪೋತ್ತಮನೊಡನೆ ।
ಸೋಮಧರ ಕೋದಂಡವನು ಕೈಯಿಂಪಿಡಿವೆನೆನುತ ॥ ಪ್ರೇಮದಿಂದಲೆ
ನುಡಿದು ಭಕ್ತಿಯೊ । ಳಾ ಮುನಿವರನನುಜ್ಞೆಯನು ತಳೆ । ದಾ ಮಹೇ
ಶನ ಚಾಪದೆಡೆಗೈತಂದ ನತಿಜವದೆ ॥ ೫೨ ॥ ಬಂದು ಚಾಪವ ನೊಂದು
ಕರದಿಂ । ದಂದು ಪಿಡಿದೆತ್ತಿದನು ಸುರರಾ । ನಂದದಿಂದಲೆ ನೋಡಿರಾಘವ
ಭಾಪುಭಾಪೆನಲು ॥ ಚಂದದೊಳದಕೆ ತಿರುವ ನೇರಿಸ । ಲಂದು ಬಾಗಿಸೆ
ಛಟಛಟ ಧ್ವನಿ । ಯಿಂದೆ ಮುರಿದುದು ಧನುವದೇನೆಂಬೆನು ಮಹಾದ್ಭು
ತವ ॥ ೫೩ ॥ ಜನಕ ನಧಿಕಾನಂದವನು ಪಡೆ । ದನು ವೊಳಗಿದವು
ದುಂದುಭಿಗಳು ಸು । ಮನಸರಾಗಳೆಸುರಿಸಿದ ರಿಳೆಗೆ ಪುಷ್ಪವೃಷ್ಟಿ
ಯನು ॥ ಮನವೊಲಿದುಪಾಡಿದರು ಖೇಚರ । ರು ನಡೆತಂದಪ್ಸರರು
ನಾಟ್ಯಗ । ಳ ನೆಸಗಿಪರಾ ಜನಕ ಗಾಧಿಸುತನೊಡನಿಂತೆಂದ ॥ ೫೪ ॥
ರಾಮನಿಗೆ ಸೀತೆಯನು ಲಕ್ಷ್ಮಣ । ಗಾಮಹಿಳೆಯುರ್ಮಿಳೆಯನಿತ್ತು
ಮ । ಹಾಮುದದೊಳಾಚರಿಸುವೆನು ವೈವಾಹಿಕೋತ್ಸವವ ॥ ಭೂಮಿ
ಪಾಲಕ ದಶರಥನ ನೊಲಿ । ದೀ ಮಿಥಿಲೆಗೆ ಕರಿಸುವೆನೆಂದೆನು । ತಾ ಮುನಿ
ಗೆ ಪೇಳದನು ಮಿಥಿಳೇಂದ್ರ ನತಿವಿನಯದಲಿ ॥ ೫೫ ॥ ಬಳಿಕ ಗಾಧೇ
ಯನ ಪದಕೆರಗಿ । ತಳೆದು ಗೌತಮಸುತನನುಜ್ಞೆಯ । ಬಳೆದಸಂತಸ
ದಿಂದೆ ಸೇವಕರನ್ನು ಕರೆಯಿಸುತ । ಉಳದುತಾಮುಸವ ನತಿಸಂಭ್ರಮ ॥
ದೊಳು ಮೆರೆವಯೋಧ್ಯಾಪುರಿಗೆ ಪೋ । ಗಿಳೆಯೊಡೆಯ ದಶರಥನಿಗೀ
ವುದುಪತ್ರಿಕೆಯನೆಂದ ॥ ೫೬ ॥ ಭೂಮಿಪತಿ ಚಿತ್ತೈಸು ದಶರಥ । ರಾ
ಮ ನಾಹರಧನುವ ಭಂಗಿಸಿ । ಕೋಮಲೆ ಯವನಿಜಾತ್ಮಜೆಯ ನೊಲಿ
ಸಿದನು ಲೀಲೆಯಲಿ ॥ ಪ್ರೇಮದಿಂದೀಪುರಕೆ ಬಂಧು । ಸ್ತೋಮಸಹಿತೈ
ತಂದು ರಚಿಸುವು । ದೀ ಮದುವೆಯನೆನುತ್ತ ಬರೆದೋಲೆಯನು
ತಾನಿತ್ತ ॥ ೫೭ ॥ ನಮಿಸಿ ಚರರಾಜನಕ ಭೂಪತಿ । ಗೆ ಮಿಥಿಲಾಪುರವ
ನುಳದತಿ ಸಂ । ಭ್ರಮದೊಳು ನಡೆದರಂದಯೋಧ್ಯಾನಗರಕತಿಜವದೆ ॥
ತಮತಮಗೆ ಸಂತಸವ ನೈದಿದ । ರು ಮಿಥಿಲೆಯೊಳೆಲ್ಲ ಮನುಜರಾತ ।

ನ್ನ ಮನದೊಳು ತಾಂ ಧನ್ಯನೆನುತಲೆ ತಿಳಿದನಾ ಜನಕ ॥ ೫೮ ॥ ಧರಣಿ ತನುಜೆಯ ಮದುವೆಗೆ ಯಲಂ । ಕರಿಸಬೇಕೀ ಮಿಥಿಲೆಯನೆನುತ । ಕರೆಯಿಸಿದನಾ ಜನಕಭೂಪತಿ ಶಿಲ್ಪಿಗಳನವರು ॥ ನರಪತಿಗೆ ವಂದಿಸಿ ನೆರೆಯಲಂ । ಕರಿಸುವೆವು ನಿಮ್ಮಾಜ್ಞೆಯೊಳೆನುತ । ಭರದೊಳಾರಂಭಿಸಿದ ರಂದವರ ವರಕೃತ್ಯಗಳ ॥ ೫೯ ॥ ಬಡನೆ ಮಂತ್ರಿಯನೊಲಿದು ಕರೆಯಿಸಿ । ಪೊಡವಿಪಾಲಕ ಜನಕವನ್ನಿಸಿ । ನುಡಿದ ನೀವೀಮೇದಿನಿಯೊಳುತ್ತಮವೆನಿಪ ವಸ್ತುಗಳ ॥ ಪೊಡವಿಸುತೆ ಸೀತೆಯ ವಿವಾಹಕೆ । ಕಡುಜವದೆ ಹುಡುಹುಡುಕಿಸುತ್ತಲೆ । ಬಿಡದೆ ಕೂಡಿಸಿ ನನ್ನೊಡನೆ ಪೇಳುವುದು ನೀನೆನುತ ॥ ೬೦ ॥

ಇಂತು ಐದನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೬೩.



## ಆರನೆಯ ಅಧ್ಯಾಯ.

ಸೂಚನೆ ॥ ಮಿಥಿಲೆಯ ನಲಂಕರಿಸುತಾ ದಶ ।
ರಥನ ಬರಿಸಿಯೆ ರಾಮನಿಗೊಲಿದು ।
ಪೃಥಿವಿಜೆಯನಿತ್ತು ಮದುವೆಯ ನಾಗಿಸಿದನಾಜನಕ ॥

ಬಿಗಿವರುಪತಾಕೆಗಳ ನಾಸಾ । ಧಗಳ ಮೇಲುರೆ ಚಿತ್ರಿಸಿದರೊ । ಪ್ಪಗೆಯೊಳೆಲ್ಲಾ ಭವನಗಳ ಬಗೆಬಗೆಯ ಬಣ್ಣದಲಿ ॥ ಝಗಝಗಿಸು ವೆಂದದೊಳು ಲೋವೆಗ । ಳಗೆರಚಿಸಿದರು ಪಟ್ಟೆಗಳ ಬೀ । ದಿಗಳಲಿ ಮಕರ ತೋರಣಂಗಳ ಕಟ್ಟಿದರು ಬಳಿಕ ॥ ೧ ॥ ಅವನಿಪಾಲರಿ ಗವನಿಸುರರಿಗೆ । ವಿವಿಧ ವರ್ಣಾಶ್ರಮದ ಜನರಿಗೆ । ಭವನಗಳನಾಗಿಸಿದ ರೆಲ್ಲ ಪದಾರ್ಥಗಳ ನಿರಿಸಿ ॥ ತವಕದಿಂದಾ ಪಟ್ಟಣದ ಹೊರ । ಗೆ ವಿಮಲೋದಕದ ಸವಿಕೊಳಗಳ । ನು ವಿರಚಿಸಿದರು ಸಕಲ ಜೀವಿಗಳಿಗನುಕೂಲವೆನೆ ॥ ೨ ॥ ಆರುಯೋಜನದಗಲ ನೆಲದಲಿ ಸೇರಿದಾ ಚತುರಂಗ ಸೈನ್ಯಕೆ । ತೋರ ಮಂಟಪಗಳ ನೆಸಗಿದರು ಸೌಖ್ಯವೆನಿಪಂತೆ ॥ ಸಾರತರವೆಂಬ ವ್ರೊಲನಿತಕಾ । ಹಾರಗಳನಂದೊದಗಿಸಿದ ರಾ । ಧಾರುಣಿಯೊಳೆಲ್ಲರಿಗೆ ಸಂತಸವೊದಗುವಂದದಲಿ ॥ ೩ ॥ ಕೇರಿಕೇರಿಗಳನು ಬಳಿಕ ಪ । ನ್ನೀರಿನಿಂದುರೆ ಸಾರಿಸುತೆ ಕ । ರ್ಪೂರ ರಜದಿಂದಿರಿಸಿದರು ರಂಗವಲಿಗಳನಲ್ಲಿ ॥ ಸಾರತರ ಕೇಸರಿಯ ಸಲಿಲದೆ । ಕಾರಣೆಯನಾಗಿಸಿ

ದರಖಿಳಾ । ಗಾರಗಳ ಮೇಲಂದಿರಿಸಿದರು ಕನಕ ಕಲಶಗಳ ॥ ೪ ॥ ಕದಳಿಕಾಸ್ತಂಭಂಗಳನು ಕ। ಟ್ಟಿದರು ಪಟ್ಟಣದ ಭವನಗಳಿಗೆ । ಚಮುರತನದಿಂದಾಗಿಸಿದ ರಂದ ಖಿಳಚಿತ್ರಗಳ ॥ ಸದನಗಳ ಮುಂದೆ ಬಗೆಬಗೆ ಬ। ಣ್ಣದ ಪುಡಿಗಳಿಂದೆಲ್ಲರು ವಿರಚಿ । ಸಿದರು ಶೃಂಗಾರಗಳ ನಂದು ನವೀನವೆನಿಪಂತೆ ॥ ೫ ॥ ಕಳಸ ಕನ್ನಡಿ ಮಕರ ತೋರಣ । ತಳಿರತೋರಣ ಸಿಂಧಸೀಗುರಿ । ಬಿಳುಗೊಡೆಗುಡಿ ಪತಾಕೆ ಚಾಮರ ಝಲ್ಲರಿಗಳಿಂದೆ ॥ ಹೊಳೆಹೊಳೆದು ಸಂತತವ ಖಿಳಜನ । ಗಳಿಗೆ ಸಂತಸ ವನು ಕೊಡುತ್ತಮಿ । ಥಿಳೆಯು ಬೀದಿಗಳೆಲ್ಲ ನೆರೆರಂಜಿಸಿತ ಪೂರ್ವದ ಮೆನೆ । ೬ ॥ ಮೆರೆವ ಚಾಮರೊಲೆಗಳ ಕ್ರಮದಿಂ । ದುರೆಚಮತ್ಕಾರಂಗ ಳನು ಸಮೆ । ದು ರಚಿಸಿದರು ವಿವಾಹ ಮಂಟಪವ ನೆರಡುದಿನದಲಿ ॥ ಗಿರಿಸುತೆಯು ವೈವಾಹ ಮಂಟಪ । ಕೆರಡರಷ್ಟ್ಯನ ಲಂದದೆಸೆದುದು । ಪುರದೊಳು ಸಕಲ ಮಾನವರಿಗಚ್ಚರಿಯನಾಗಿಸುತ ॥ ೭ ॥ ಹೊಳೆವ ಚಿನ್ನದ ಕಂಭಗಳ ಥಳ । ಥಳಿಪ ವಜ್ರದ ಜಗಲಿಗಳ ಮಣಿ । ಬಳಗ ದಿಂದುರೆ ಮೆರೆವ ಸೋಪಾನಗಳ ಮರಕತದ ॥ ಶಿಲೆಗಳಿಂದೊಪ್ಪುತಿಪ ಗೋಡೆಗ। ಳೊಳು ಚಲಿಸುತಿಹ ತಳಿರದೋರಣ । ಗಳ ಚಮತ್ಕೃತಿ ಯಿಂದೆ ಮದುವೆಯ ಮಂಟಪವೆಸೆದುದು ॥ ೮ ॥ ವಿರಚಿಸಿದ ವೈವಾಹ ಮಂಟಪ । ದೆರಡುಪಾರ್ಶ್ವದ ಭಿತ್ತಿಗಳೊಳಂ । ದಿರಿಸಿದ ವಿವಿಧ ಸಾಲ ಭಂಜಿಕೆಗಳು ಕರವೆಸೆದವು ॥ ಭರದೊಳವು ಬೇಡಿದುವನಿತ್ತವು । ನೆರೆದ ಮನುಜರಿ ಗಡಿಗಡಿಗೆ ತಾ । ವಿರದೆ ಬಣ್ಣಿಪನಾವನಿಹನು ರಚಿಸಿದ ವೈಖ ರಿಯ ॥ ೯ ॥ ಒಡನೆ ಮಂಟಪದ ಹೊರಗಿರಿಸಿದ । ರಿಡಿದ ಕಸ್ತೂರಿಯ ಭರಣಿಗಳ । ನಡುನಡುವೆ ಪನ್ನೀರ ಕೊಪ್ಪರಿಗೆಗಳ ನಿರಿಸಿದರು ॥ ಅಡಕಿ ತುಂಬಿದ ಸಾದುಪುಣುಗಿನ । ಕೊಡಗಳನು ಸೇರಿಸುತದರ ಸಂ। ಗಡಲಿ ರಿಸಿದರು ವರಸುಗಂಧದ ಘನಕರಂಡಗಳ ॥ ೧೦ ॥ ಬಿಗಿದ ಬಿಂಗಾರಿ ಗಳ ಮುತ್ತಿನ । ಝುಗಝುಗಿಪ ಕುಚ್ಚುಗಳ ಕಟ್ಟಿದ। ಸೊಗಸ ನಾಂತಿಹ ಚಿತ್ರಪಠಗಳ ಮೆರೆವಗಿಂಡಿಗಳ ॥ ಬಗೆಬಗೆಯು ಮಣಿದೀಪಗಳ ಚಮ । ರಗಳ ಬೀಸುವ ಬೊಂಬೆಗಳ ಸಾ । ಲುಗಳ ಲೆಸೆದುದು ಜಾನ ಕಿಯು ವೈವಾಹಮಂಟಪವು ॥ ೧೧ ॥ ಸಾರಶಶಿಕಾಂತ ಶಿಲೆಗಳನು ರೆ। ಸೇರಿಸುತ್ತ ರಚಿಸಿದರು ಚಮ । ತ್ಕಾರದಿಂದಾ ಪುರದ ಮಧ್ಯದೆ ಸೋಮ ವೀಥಿಯನು ॥ ಚಾರುತರದಿನ ಕಾಂತಶಿಲೆಗಳ । ನೇರಿಸುತ ಕೌಶಲವನಾಗಿಸಿ । ವಿಾರಿದ ವಿಭವದಿಂದೆಸಗಿದರು ಸೂರ್ಯವೀಥಿಯನು

ಚರರು ಮಾರ್ಗವ ನಡೆದುದಿನವೂ । ರರಲಿ ಸೇರ್ದರು ನಿರ್ಜರೇಂ
ದ್ರನ । ಪುರವನು ಪಳಿವವಯೋಧ್ಯೆಯನು ಸಂಪ್ರೀತಿಯಿಂದೊಡನೆ ॥
ಸುರಸನುತಸೇವಾ ದಶರಥನ । ಚರಣಕಮಲಕ್ಕೆರಗಿ ಕೊಟ್ಟರು । ನರ
ಪತಿಜನಕ ನಿತ್ತು ಕಳುಹಿದ ಲಗ್ನಪತ್ರಿಕೆಯ ॥ ೧೩ ॥ ಮನುಜಪಾಲ
ಕ ಕುಶಲವೇ ನಿಮ । ಗೆ ನಿಜಮಂತ್ರಿ ಪುರೋಹಿತರಿಗೆಯವೆ । ನಿಯೊಳು
ಕುಶಲವೇ ಕುಶಲದಿಂದಿಹರೆ ಸತಿಸುತರು ॥ ಜನರು ಪಟ್ಟಣ ದೇಶಕೋ
ಶಗ । ಳು ನಲಿವಾಶುತ್ತಿಹವೆ ಕುಶಲದೊ । ಳೆನುತ ನುಡಿವಾಚರರು ಪೇ
ಳ್ದರು ಬಂದಸಂಗತಿಯ ॥ ೧೪ ॥ ದೇವ ದಶರಥ ರಾಯ ಕೇಳ್ಳೈ । ಸಾವಧಾ
ನದ ಮನದೆರಾಜಿಪ । ಶೈವಚಾಪವ ಕಡಿದು ರಾಮನೊಲಿಸಿದನವನಿಜೆಯ ॥
ಸಾವಕಾಶವನುಳಿದು ಮಿಥಿಳೆಗೆ । ತಾವು ಬಂಧುಗಳೊಡನೆ ಸೀತಾ । ದೇವಿ
ಯ ಮದುವೆಗೀಗಳೈತಹುದೆಂದು ಪೇಳಿದರು ॥ ೧೫ ॥ ಏನಿದಚ್ಚರಿ ಯಿಂ
ದೆನಿಪುದು ತ । ಪೋನಿಧಿಯೊಡನೆ ರಾಮ ಲಕ್ಷ್ಮಣ । ರೀ ನಗರದಿಂದೆ ಗಮಿಸಿ
ದರಾ ಯಜ್ಞರಕ್ಷಣೆಗೆ ॥ ಜಾನಕಿಯನೆಂ ತೊಲಿಸಿದನು ಸುತ । ನೇನುಮಾ
ಡಿವನೆಲ್ಲಿಪನುಮುನಿ । ಗೇನವಮಾಡಿವನೆಲ್ಲವನು ಪೇಳೆನುತ ಬೆಸಗೊಂಡ
॥ ೧೬ ॥ ಕೇಳು ಜೀಯರಘುವರ ನಾಮುನಿ । ಪಾಲನ ಮಖವ ರಕ್ಷಿಸುತ
ಘನ । ಲೀಲೆಯಿಂದಾ ಗೌತಮಸತಿಯ ಶಾಪವನುಹರಿಸಿ ॥ ಮೇಲೆನಿಸಿವಿ
ಖ್ಯಾತಿವಡೆದಾ । ಫಾಲನೇತ್ರನ ಘೋರಚಾಪವ । ಬೀಳುವಾಡಿ ಮುರಿ
ದೊಲಿಸಿದನಾ ಸೀತೆಯನು ಬಳಿಕ ॥ ೧೭ ॥ ಜನಕ ಭೂಪತಿರಾಮನಿಗೆ
ಮೋ । ದಿನಿಯಣುಗಿಯನು ಲಕ್ಷ್ಮಣಗೆ ನಿಜ । ತನುಜೆ ಯೂರ್ಮಿಳೆಯ
ನೊಲಿದಿತ್ತು ವಿವಾಹಗಳೆರಡನು ॥ ಘನವಿಭವದಿಂದೆಸಗುವನು ರಾ । ಮ
ನನುಜನೊಡನೆ ಕೌಶಿಕನ ಮನ । ವನೊಲಿಸುತ್ತಿಹನು ಮಿಥಿಲೆಯೊಳಾ
ಜನರ ಮಧ್ಯದಲಿ ॥ ೧೮ ॥ ಅರಸ ಚಿತ್ತೈಸು ಜನಕ ಮಹೀ । ವರನು
ಬರೆಯಿಸಿ ದೋಲೆಯನ್ನನು । ಸರಿಸಸತಿಸುತ ಮಂತ್ರಿ ಬಂಧು
ಪುರೋಹಿತರ ಸಹಿತ ॥ ವರಮಿಥಿಲೆಗೈತಹುದು ರಾಮನ । ವರವಿವಾಹ
ಮಹೋತ್ಸವಕೆನುತ । ಚರರು ಪಾದಗಳಿಗೆ ನಮಿಸಿ ಬಿನ್ನವಿಸಿದರುಕೂಡೆ
॥ ೧೯ ॥ ಚರರ ನುಡಿಗೇಳಿ ದಶರಥ ಭೂ । ವರನವರಿಗಿತ್ತು ಬಹುಮಾನ
ವ । ನುರೆಪಡೆದು ಮನ್ನಿಸಿ ವಸಿಷ್ಠಮುನೀಂದ್ರನಿಗೆ ನಮಿಸಿ । ಹರನ
ಚಾಪವ ಮುರಿದು ರಾಮನು । ವರಿಸಿ ಸೀತೆಯುಗಾಧಿಸುತ ನೊಡ । ನಿ
ರುವ ನಾಮಿಥಿಲೆಯೊಳೆನುತ ಬಿನ್ನವಿಸಿದನು ಬಳಿಕ ॥ ೨೦ ॥ ಜನಕ
ಭೂವರ ಲಗ್ನಪತ್ರಿಕೆ । ಯನು ಬರಿಸಿಹನು ರಾಮನಿಗೆ ಮೋ । ದಿನಿ

ಯೊಣುಗಿಯನು ಲಕ್ಷ್ಮಣಂಗೂರ್ಮಿಳೆಯನಿತ್ತೊಲಿದು ॥ ಘನವಿವಾಹವೆ
ಗಳೆರಡನಾಗಿಸು । ವೆ ನಿದಕ್ಕೈತಹುದೆನ್ನಪಟ್ಟಣ । ಕೆ ನಿಜಬಂಧು
ಬಳಗ ಸಹಿತವ್ವೈಭವದೆ ನೀವೆನುತ ॥ ೨೧ ॥ ಅವಧರಿಸು ಮುನಿವರ್ಯ
ಘನವ್ವೈ । ಭವದೊಳಾ ಮಿಥಿಳೆಗೆ ಸಕಲ ಬಾಂ । ಧವರೊಡನೆ ನಾಳೆ
ಪಯಣವನಾಗಿಸುವುದೆಂದೆನುತ ॥ ಅವನಿಪಾಲಕ ದಶರಥನು ಬಿ । ನ್ನವಿ
ಸಿ ಬಳಿಕಾ ಪುರದಖಿಳವಾ । ನವರಿಗೈತಹುದೆಲ್ಲರೊಡನೆಂದಾಜ್ಞೆಯ
ನೆಸಗಿದ ॥ ೨೨ ॥ ಪುರದ ರಕ್ಷಣೆಗಾ ಸುಮಂತ್ರನ । ನಿರಿಸಿ ರಥವೇರಿ
ದನು ಬಳಿಕಾ । ಪುರದ ಮಾನವರೆಲ್ಲ ಹೊರಟರು ವಾಹನಂಗಳಲಿ ॥
ಬರುತ ನಾಲ್ಕುದಿನ ಪಥದೊಳು ತದು । ಪರಿಯೊಳೈದಿದರಾ ಮಿಥಿಳೆಯ
ನು । ನೆರೆವಿಭವದಿಂದಿದಿರುಗೊಂಡನು ಜನಕದಶರಥನ ॥ ೨೩ ॥ ಮೊಳಗು
ತಿರೆ ನಿಸ್ಸಾಳತತಿನೆರೆ । ಬೆಳಗುತಿರೆ ಕೈದೀವಿಗೆ ಬೆಳಕು । ಹೊಳೆವ
ಹಗಲಂತೆಸೆಯೆ ಬಣ್ಣದ ಬತ್ತಿಗಳಸೊಬಗು ॥ ನಲಿದು ನೃತ್ಯವನಾಡು
ತಿರೆ ಕೋ । ಮಲೆಯರೆಲ್ಲೆಡೆಯೊಳಡಿದಿರೆ ಮಂ । ಗಳರವಂ ಕರೆತಂ
ದನು ಜನಕದಶರಥನೃಪನನು ॥ ೨೪ ॥ ರಾಜಮಂದಿರದೊಳಗೆ ದಶರಥ ।
ರಾಜನ ನಿರಿಸಿದನಖಿಳ ಜನಸ । ಮಾಜವನು ಭವನಂಗಳೊಳಗಿರಿಸಿದನು
ಮನ್ನಿಸುತ ॥ ರಾಜವಂಶದವನಿಪತಿ ಜನಕ । ನಾಜನರಲಾದೇಶ ಕೋ
ಶದ । ಲಾಜನಪತಿಯನೊಲಿದು ಕೇಳದ ನೆಲ್ಲರೊಸಗೆಯನು ॥ ೨೫ ॥
ನಾನು ಧನ್ಯನು ಪುಣ್ಯಫಲದಿಂ । ದೀ ನೆಲದೆ ಭಾಸ್ಕರನಕುಲದೊಳು ।
ನಾನುಮಾಡುವೆ ನೀಗ ಘನಸಂಬಂಧವನು ಪಡೆದು ॥ ಜಾನಕಿಯ
ವೈವಾಹವನು ಸಂ । ಮಾನದಿಂದಾಗಿಸುವೆ ವೇದವಿ ॥ ಧಾನದೊಳು
ಯಜ್ಞದಕಡೆಯೊಳೆಂದನು ಮಹೀಪತಿಗೆ ॥ ೨೬ ॥ ಮುನಿವಸಿಷ್ಠ
ಸುಯಜ್ಞಗೌತಮ । ವಿನುತ ಕಶ್ಯಪ ಮುನಿಶತಾನಂ । ದನ ಭರದ್ವಾಜ
ಚ್ಯವನ ವಾಲ್ಮೀಕಿ ಕೌಶಿಕರ ॥ ಅನುಮತಿಯೊಳಾ ಜನಕ ನಧ್ವರ ।
ವನು ರಚಿಸುತಾ ದೇವಸಂಚಯ । ವ ನೊಲಿಸಿದ ನೀಮಹಿಯೊಳು
ನವೀನವೆನೆ ಜನನಿಕರ ॥ ೨೭ ॥ ಕ್ರತುವನಾಗಿಸಿ ಜನಕ ಗೌತಮ । ಸು
ತಕುಶಿಕಸುತರಿಂದೆ ನಡೆತಂ । ದತಿ ವಿನಯದಿಂದಾ ದಶರಥಂಗೆ ನುಡಿದನು
ನಿಮ್ಮ ॥ ಸುತರಿಗಿಂದೆಸಗಿ ವರಪೂಜೆಯ । ನು ತಳುವದೆನಾಳೆ ಘನ
ನಾಂದಿಯ । ನತಿ ಮುದದೊಳಾಗಿಸಿ ಬಳಿಕ ಮಾಡುವೆನು ಲಗ್ನಗಳ
॥ ೨೮ ॥ ಕುಲದಲಿ ಬಲದಲಿ ಘನಸಂಗರ । ದಲಿ ಸಿರಿಯಲಿ ಪರಾಕ್ರಮದಲಿ
ಬ । ಹಳ ವಿನುತಿವೆತ್ತಿಹರಿನ ಶಶಿಕುಲಗಳೊಳುದಿಸಿಹರು ॥ ಕಲಿತಿಹುದು

ಸಂಬಂಧವು ನಿಮಗೆ । ನೆಲದೊಳು ಪರಸ್ಪರ ಸಮರು ನೀ । ವೆಲೆಜನಕ
ಕೇಳೆನುತ ಕೌಶಿಕನುಡಿದನಂದೊಲಿದು ॥ ೨೯ ॥ ಅರಸ ನಿನ್ನನುಜನ ಸು
ತೆಯರನು । ಭರತ ಶತ್ರುಘ್ನರಿಗೆ ಕೊಡು ತ್ತೀ । ಪುರದೆ ನಾಲ್ಕು ಮದು
ವೆಗಳನು ಮಾಡುವುದು ನೀನೆಂದು ॥ ಅರುಹಲಾ ಕೌಶಿಕನು ಬಳಿಕೆ ।
ಲ್ಲರು ಸರಿಯೆನುತಲಂದು ಪೇಳಲು । ಕರವ ಮುಗಿದಾಗ ಬಹುದೆಂದಾ
ಜನಕ ಪೇಳಿದನು ॥ ೩೦ ॥ ಧರಣಿಪಾಲಕ ದಶರಥ ಮನದೊಳರಿವುದೀ ಮಿ
ಥಿಳೆಯುನಯೋಧ್ಯಾ । ಪುರದೊಳೀಭವನವನು ನಿನ್ನಯ ರಾಜ ಗೃಹದಂ
ತೆ ॥ ನೆರೆವಿಚಾರವನಾಗಿಸದೆ ತನು । ಜರ ವಿವಾಹಗಳ ನಡಿಸುವುದೆಂ ।
ದೊರೆಯೆ ಹೊಂದುವನು ಕೊಡುವೆಗಧೀನನೆನಿಸುವನೆಂದ ॥ ೩೧ ॥ ಜ
ನಕನಾದಿನ ರಾತ್ರಿಯೊಳವನಿ । ಪನ ತನಯರೆಲ್ಲರಿಗೆ ಗೌತಮ । ತನಯ
ನನುಮತಿಯಿಂದೆಸಗಿ ವರಪೂಜೆಗಳನೊಲಿದು ॥ ಘನಮತಂಗಜಗಳೊ
ಳು ಕೂಡಿಸು । ತ ನಿಬರನು ವೈಭವದೊಳಾಗಿಸಿ । ದನು ಗಣಿಕೆಯರ
ನೃತ್ಯದಲಿ ಪೊಸತೆನೆ ಮೆರವಣಿಗೆಯ ॥ ೩೨ ॥ ಮರುದಿನದೊಳಾ ದಶರ
ಥನು ಮುನಿ । ವರವಸಿಷ್ಠನನುಜ್ಞೆಯಂತಾ । ಚರಿಸಿದನು ನಾಂದಿಯ
ನು ವೇದವಿಹಿತ ವಿಧಾನದಲಿ ॥ ಕರಿಸಿ ಕೊಟ್ಟನು ಮಂಗಳಗಳು ಸು ।
ತರಿಗೆ ಪೆರ್ಚಲೆನುತ್ತ ಧರಣೀ । ಸುರರಿಗಾದಿನ ದಕ್ಷಿಣೆಸಹಿತ ಲಕ್ಷ ಗೋ
ವುಗಳ ॥ ೩೩ ॥ ಜನಕತನ್ನಯ ಮಂದಿರದೊಳಾ । ಮುನಿಶತಾನಂದನನ
ನೇಮದ । ಲಿ ನಡಿಸಿದನಂದೊಲಿದು ನಾಂದಿಯ ನತಿವಿನೋದದಲಿ ॥ ತನು
ಜೆಯರಿಗಾಗಲಿ ಶುಭಗಳೆಂ । ದೆನುತ ಮಾಡಿದ ನಖಿಳದಾನಗ । ಳ
ರವನೀಸುರರಿಗೆ ಮನದಣಿಯೆ ದಕ್ಷಿಣೆಯಸಹಿತ ॥ ೩೪ ॥ ತದುಪರಿಯ
ವಾಸರ ದುದಯಕಾ । ಲದೊಳು ನಿಜಮಂದಿರಕೆ ಜನಕ ನೊ । ಲಿದು
ಕರಿಸಿದನು ವೈಭವಗಳಿಂದೆ ದಶರಥನೃಪನ ॥ ತ್ರಿದಿವದೊಳು ದಿಕ್ಪಾಲ
ರೊಡವೆರ । ಸಿದ ವಿರಂಚಿಯವೊಲು ಸುತರನು ಪ । ದೆದೊಡಗೊಂ
ಡೈತಂದನು ದಶರಥ ಜನಕನಮನೆಗೆ ॥ ೩೫ ॥ ಉಚಿತದಿಂದೆಲ್ಲರನು ಮನ್ನಿ
ಸಿ । ಸಚಿವಸಾಮಂತ ರೊಡನಾಮಣಿ । ಖಚಿತ ಕಾಂತಿವಿಸರದೊಳೆಸೆವ
ವಿವಾಹಮಂಟಪಕೆ ॥ ಅಚಲವೋದವನಾಂತು ಬಂದು ಸ । ಮುಚಿತ
ಗೀತದೆ ಕುಳ್ಳಿರಿಸಿ ಹಿತ । ವಚನದಿಂದೆ ವಸಿಷ್ಠನನುಪಚರಿಸಿದನಾ
ಜನಕ ॥ ೩೬ ॥ ನೆರೆದರಾ ಮಿಥಿಲೆಯಲಿ ವಿಪ್ರರು । ವರಕವೀಂದ್ರರು
ವಾಗ್ಮಿಗಳು ಜನ । ಪರು ಕಲಾವಿದರು ಗಣಿತಜ್ಞರು ಸೋಮಯಾಜಿ
ಗಳು ॥ ಪರಿಹರಾರ್ಚನರತರು ಯೋಗೀ । ಶ್ವರರು ಶೂದ್ರೋತ್ಕರರು

ಮಂತ್ರ | ಜ್ಞರು ವಿವಾಹೋತ್ಸವ ವಿಲೋಕನ ಕೌತುಕಿಗಳೊಲಿದು
|| ೩೭ || ವರಮುಹೂರ್ತದೊಳಾ ವಸಿಷ್ಠನು | ನೆರೆದ ಮುನಿಪ್ರೋತ್ತ
ಮರ ಮಧ್ಯದೊ | ಳಿರುತ ಗೌತಮಗಾಧಿಸುತರಿಂದೆ ಘನಸಂತಸದಿ ||
ವರವಿವಾಹದ ವೇದಿಕೆಗಳನು | ವಿರಚಿಸಿ ಬಳಿಕ ತಾನವನಲಂ | ಕರಿಸಿ
ದನು ಗಂಧಾಕ್ಷತಸುಪುಷ್ಪಗಳ ನರ್ಪಿಸುತ || ೩೮ || ಬಳಿಕ ತಾನಿರಿಸಿ
ದನು ವೇದಿಕೆ | ಗಳ ನುಡುವೆ ಕುಂಕುಮದರಸಿನಗ | ಹೊಳೆವಗಂಧಾ
ಕ್ಷತೆ ಕುಸುಮತಾಂಬೂಲ ತಟ್ಟೆಗಳ || ಥಳಥಳಿಸುತಿಹ ಕಲಸ ಕನ್ನಡಿ |
ಗಳ ನೆಸೆವ ಸ್ರುಕ್ಸ್ರುವಸಮಿತ್ಕುಶ | ಗಳನು ದರ್ಭೆಗಳ ನರಳಿನ
ಗೋಘೃತದ ಪಾತ್ರೆಗಳ || ೩೯ || ಬರಿಸಿ ಕೂಡಿಸಿ ವೇದಿಕೆಯೊಳಾ |
ನರಪತಿಗಳನು ಮುದದಿಪುಣ್ಯಾ | ಹರಚನೆಯ ನಂದಾಗಿಸಿದನು ಸಕಲ
ಸುರಾರ್ಚನೆಯ || ಏರಡುವಂಶಗಳಲಿ ಮಹೀಪಾ | ಲರನು ಹೊಗಳುತ
ವೇದವಿಧಿಯೊಳು | ವಿರಚಿಸಿದನವರಿಂದೆ ಹೋಮವನಾವಸಿಷ್ಠಮುನಿ
|| ೪೦ || ನೆರೆವ ಶುಭಲಗ್ನದೊಳು ಮುನಿವರ | ಕರಿಸಿ ಗಿರಿಜಾರ್ಚನೆಯ
ನೆಸಗಿವ | ತರಳೆಯರನಾವರರ ಮುಂಗಡೆ ತೆರೆಯಹೊರಗಿನಲಿ || ಮೆರೆವ
ವೇದಿಕೆಗಳೊಳು ನಿಲಿಸು | ತ್ತಿರಿಸಿದನು ಜೀರಿಗೆಗುಳವನಾ | ವರವಧುಗ
ಳಿಂದೆ ಘನಮಂಗಳಗಳನು ಪೇಳುತ್ತ || ೪೧ || ಹೊಳೆವವೇದಿಕೆ ಮಧ್ಯ
ದಲಿನೃಪ | ನಿಳೆಯ ಮಗಳನು ತಾಂ ಪಿಡಿದು ನೆರೆ | ಬಳಸಿದ ಮನುಜ
ರಾಲಿಸುತ್ತಿರೆ ಕರೆದು ರಾಮನನು || ತಳೆದ ಸಂತಸದಿಂದೆ ನುಡಿದನು |
ಗಳದೊಳುಬ್ಬುವಗದ್ಗದ ಸ್ವರ | ಗಳ ಗಡಣದಿಂದೆ ಸುರಿಸುತ್ತಾನಂದ
ಬಾಷ್ಪಗಳ || ೪೨ || ನನ್ನ ಮಗಳೀ ಸೀತೆನಡೆವಳು | ನಿನ್ನ ಸಹಧರ್ಮಿ
ಣಿಯುತಾನೆನೆ | ಮನ್ನಣೆಯೊಳೀಕ್ಷಿಸು ಪತಿವ್ರತೆಭಾಗ್ಯಶಾಲಿನಿಯು ||
ನಿನ್ನ ನನುಸರಿಸುವಳು ನರಳಂ | ತಿನ್ನು ಪಿಡಿನೀನಿವಳ ಪಾಣಿಯ |
ನೆನ್ನುತಾತನ ಕರದೆ ಧಾರೆಯ ನೆರೆದನಾಜನಕ || ೪೩ || ಒಡನೆ ಲಕ್ಷ್ಮಣ
ನಂ ಕರೆದು ನೆಲ | ದೊಡೆಯನಾಜನಕ ಪ್ರಮೋದದೆ | ನುಡಿದನು
ನಿನಗೆ ಭದ್ರಮಾಗಲಿತನುಜೆ ಯೂರ್ಮಿಳೆಯಂ || ಕಡುಹರುಷದಿಂದೀಕ್ಷಿಸಿ
ಕರವ | ಪಿಡಿವುದೀಗಳೆನುತ್ತ ಸಭೆಯೊಳು | ನುಡಿದು ಧಾರೆಯನೆರೆದನು
ಚ್ಚರಿಸುತ್ತ ಮಂತ್ರವನು || ೪೪ || ಭರತಬಾರ್ಯೆ ಮಾಂಡವಿಯ ನೀಂ |
ನೆರೆವಿಲೋಕಿಸು ಕರವಪಿಡಿ ನಿಜ | ಕರದೊಳೆನುತಾ ಜನಕ ಭೂವರ
ನುಡಿದು ಸಂತಸದಿ || ವರಮುನೀಂದ್ರನು ನುಡಿವಮಂತ್ರವ | ನೊರೆದು
ಧಾರೆಯ ನೆರೆದನಾತನ | ಕರದೊಳೆಲ್ಲರು ನೋಡುತಿರಲಾ ಮದುವೆಯ

ಮನೆಯಲಿ ॥ ೪೫ ॥ ಮತ್ತೆ ಶತ್ರುಘ್ನನ ಕರೆದು ನೀ । ನಿತ್ತಲೀಶ್ರುತ
ಕೀರ್ತಿಯನು ನೋ । ಡುತ್ತ ವರಾಂಗನೆಯು ಕರವನು ಪಿಡಿ ಕೈಯೊಳೆಂ
ದೆನುತ । ಬಿತ್ತರಿಸಿ ನುಡಿದಾಜನಕ ತಾ । ನುತ್ತಮದ ಸಾತ್ವಿಕಭಾವ
ದೊ । ಳಿತ್ತನವನಿಗೆ ಧಾರೆಯನೆರೆದು ಕನ್ಯಕೆಯನೊಲಿದು ॥ ೪೬ ॥ ಬಳಿಕ
ರಾಜತನಯರು ನಾಲ್ವರು । ಥಳಥಳಿಪ ಸಕಲಾಭರಣಗಳ । ಬಳಗದಿಂ
ದೆಸೆವ ವಧುಗಳ ಕೈಗಳನು ತಾವ್ಪಿಡಿದು ॥ ಹೊಳೆವಹೋಮಾನಲನ
ಸುತ್ತಲು । ಸುಳಿದರಂದು ವಿರಚಿಸಿ ಹೋಮವ । ನಿಳೆಯೊಳದು ಪೊಸ
ತೆನಲು ಶ್ರುತಿಮಂತ್ರಗಳ ನಾಲಿಸುತ ॥ ೪೭ ॥ ಮುನಿವಸಿಷ್ಠನೆಸೆವ
ವಧೂವರ । ರನು ನಿಲಿಸುತಾ ವೇದಿಕೆಯೊಳದ । ರಿನಲಿ ರಚಿಸಿದನಕ್ಷ
ತಾರೋಪಣೆಗಳನವರಿಗೆ ॥ ಮುನಿಗಳೆಲ್ಲರು ಮೆಚ್ಚುವಂದದೆ । ಜನಸ
ಮೂಹದ ಮಧ್ಯದೊಳವನಿ । ತನುಜೆಯ ವಿವಾಹನಡೆದುದಧಿಕ ವೈಭ
ವಂಗಳಲಿ ॥ ೪೮ ॥ ಬಂದುದು ಕುಸುಮವೃಷ್ಟಿ ಗಗನದೊ । ಳಂದು
ದುಂದುಭಿ ಘೋಷವಿಡಿದುದು । ನಿಂದು ನಾಟ್ಯವನಪ್ಸರಾಂಗನೆಯ
ರ್ಗಳಾಡಿದರು ॥ ಸಂದಣಿಸಿ ಗಂಧರ್ವರಿಂದ್ರನ । ಮುಂದೆ ಪಾಡಿದರು
ಮಧುರಧ್ವನಿ । ಯಿಂದೆ ದಶರಥನಂದನರ ವೈವಾಹಲಗ್ನದಲಿ ॥ ೪೯ ॥
ವೇದಮಂತ್ರಗಳೊಂದೆಡೆಬುಧಪಿ । ವಾದ ಮತ್ತೊಂದೆಡೆ ಸುಗಾನನಿ ।
ನಾದ ಮಿನ್ನೊಂದುಕಡೆ ನಾಟ್ಯದ ಬೆಡಗದೊಂದುಕಡೆ ॥ ಮೋದಿಸೀಶರ
ಗಡಣವೊಂದೆಡೆ । ವಾದಿಗಳ ಸಂವಾದವೊಂದೆಡೆ । ವೇದಮೂರ್ತಿಗಳಾ
ಶಿಷಂಗಳ ದೊಂದೆಡೆನೆರೆದುದು ॥ ೫೦ ॥ ಮೊಳಗುತ್ತಿರೆ ನಿಸ್ಸಾಳ ತತ್ತಿಕೆ
ಎ । ಗಳಗೆ ಬೀರುತ್ತಿರೆ ಘನವಾದ್ಯಂ । ಗಳ ನಿನದಮತಿಸಂತಸದೊಳಾ
ಜನಕಭೂವರನು ॥ ತಿಳಿದು ಕೊಡಿಸುತ ಗಂಧ ಪುಷ್ಪಂ । ಗಳನು
ಫಲತಾಂಬೂಲ ದಕ್ಷಿಣೆ । ಗಳನಧಿಕ ಮರ್ಯಾದೆಯಿಂದೆಲ್ಲರನು ಮನ್ನಿಸಿ
ದ ॥ ೫೧ ॥ ನೆರೆದಮಾನವರಿಗೆ ಜನಕ ಭೂ । ವರನು ಹದಿನೈದು ದಿವ
ಸಂಗಳೂ । ಳೆರಡು ವೇಳೆಯೊಳು ವಿರಚಿಸಿದನು ಸಂತರ್ಪಣೆಗಳನು ॥
ಭರದೊಳೆಲ್ಲರ ತಾರತಮ್ಯವ । ನರಿತು ಮನ್ನಿಸಿ ಭೋಜನಗಳಂ ।
ದುರೆದಣಿಸಿದನು ಬೇರೆಬೇರವರವರರೀತಿಯಲಿ ॥ ೫೨ ॥ ಮೆರೆವಶಾಲ್ಯ
ನ್ನ ಹುಳಿಯನ್ನ ಸ । ಲೆರುಚಿವೆತ್ತಘೃತ ದಧಿಸೂಪ ಹು । ಳಿರಸ ಶಾಕ
ಪಳದವು ಪಚ್ಚಡಿ ಪರಡಿಪರಮಾನ್ನ ॥ ಕರೆದ ಹಪ್ಪಳ ಸಂಡಿಗೆ ಕಡಬು ।
ಪಿರಿಯುಲಾಡು ಚಿರೋಟಿ ಯಾಂಬೊಡೆ । ತರತರದ ಹೋಳಿಗೆಗಳಿಂದಾ
ಗಿಸಿದ ನೂಟಗಳ ॥ ೫೩ ॥ ವರವಧೂವರರೆಲ್ಲರಿಂದಾ । ಗುರುವಸಿಷ್ಠ

ನು ಸೌಖ್ಯದಿನಗಳೊ | ಳೆರಡುವೇಳೆಯಲಿ ರಚಿಸಿದ ನೌಪಾಸನಾದಿಗ ಳ || ಎರಡುವೇಳೆಗಳಲಿ ದಿನದಿನದೊ | ಳುರಟಣೆಗಳನು ಮಾಡಿಸಿದ ರು ವಿ | ತರಣೆಯಿಂದೆಸಗಿದನು ನಾಕಬಲಿಯು ಮಹೋತ್ಸವವ || ೫೪ || ಬೇರೆ ಕೈದೀವಿಗೆಗಳ ಬೆಳಕು | ಮಿಾರೆಬಣ್ಣದ ಬತ್ತಿಗಳ ಛವಿ | ತೋ ರೆ ಬಾಣಬಿರಸುಗಳ ಬಗೆಬಗೆಯು ಚಮತ್ಕೃತಿಯು || ಸೇರೆ ಮಂಗಳ ವಾದ್ಯನಿಸ್ವನ | ಸಾರೆವೇಶ್ಯಾಂಗನೆಯರ ನಟನ | ವಾರಣಂಗಳೊಳೇರಿ ಸಿದ ನಂದಾವಧೂವರರ || ೫೫ || ಮೇದಿನೀಪತಿ ಜನಕನಾಬಳಿ | ಕೈದ ನೆಯದಿನ ರಾತ್ರಿಯೊಳು ತಾ | ನಾದಶರಥ ಮಹೀವರನೊಡನೆ ರಾಜತೇಜ ದಲಿ || ಬೀದಿಬೀದಿಗಳಲಿ ಬರಿಸುತ ವಿ | ನೋದದಿಂದಾಗಿಸಿದನು ಪು ರದೊ | ಳಾದರದೆ ಮೆರವಣಿಗೆಯನು ಸಂಸ್ತುತಿಸೆಕವಿನಿಕರ || ೫೬ || ತದುಪರಿಯುವಾಸರದೊಳಾಚರಿ | ಸಿದರು ಬಂಧುಸಮೂಹದ ಸಹಿತ | ಮುದವನಾಂತಾನೃಪತನುಜರೋ ಕುಳಯುಸಡಗರವ || ಪದೆದು ನೋಡಿ ದರೆಲ್ಲರಾನಂ | ದದೊಳು ನೆರೆರಾಜಿಸಿದರು ಬಹುವಿ | ಧದುಡಿಗೆ ತೊಡಿ ಗೆಗಳಗಡಣದಿಂದಾ ವಧೂವರರು || ೫೭ || ಈತೆರದೆ ಮಿಥಿಲಾಪುರ ದೊಳಾ | ಸೀತೆಯು ಮದುವೆ ನಡೆಯಲಾ ಸಾ | ಕೇತ ಪತಿಜನಕರೆಸ ಗಿದಖಿಳ ದಾನಧರ್ಮಗಳಲಿ || ಪ್ರೀತಿವಡೆದುದು ಭೂಸುರರ ಸಂ | ಘಾತ ಮನ್ನಿಸಿದರೊಲಿದೊಲಿದಾ | ಭೂತಲಾಧೀಶರನುಡಿಗೆ ಯುಚಿತವಚನಂ ಗಳಲಿ || ೫೮ || ಇತ್ತನಾಜನಕ ನಳಿಯಂದಿರಿ | ಗುತ್ತಮದಧೇನು ಗಳನತಿ ಬೆಲೆ | ವೆತ್ತರನ್ನದೊಡವೆಗಳನು ಪೀತಾಂಬರಂಗಳನು || ಚಿತ್ತರದ ಕನ್ಯಾಧನವಿದೆನೆ | ಮತ್ತಗಜ ಹಯ ರಥಗಳನು ಕಳೆ | ವೆತ್ತಕಂಬಳಿಗಳನು ಸೇವಕಸೇವಕೀಜನರ || ೫೯ || ಪದೆದುಮನ್ನಿಸಿ ಯುಡುಗರೆಗಳಂ | ದೆ ದಶರಥ ಭೂಪಾಲಕನನು ಸ | ಲೆದಣಿಸುತ್ತ ಳಿಯಂದಿರೊಡನಾಸುತೆಯರೆಲ್ಲರನು || ಬದಗಿದನು ರಾಗದೊಳು ತಾಕ ಳು | ಹಿದ ನಯೋಧ್ಯೆಗೆ ಮೊರೆಯೆ ವಾದ್ಯಗ | ಳದುಬುತಮಿದೆನೆ ವೈಭವಂಗಳೊಳಾ ಜನಕನೊಲಿದು || ೬೦ || ಅತ್ತೆ ಮಾವಂದಿರ ಸಹಿತಹೊ ರ | ಡುತ್ತ ಗಂಡನ ಕೈಪಿಡಿದು ಪೋ | ಗುತ್ತಿಹಾಧರಣೀಸುತೆಗೊಲಿದು ಜನಕ ಭೂಮಿಪನು || ಮತ್ತೆ ಮತ್ತುಪದೇಶಿಸಿದ ನ | ತ್ಯುತ್ತಮದ ನೀತಿಗಳನೆಲ್ಲವ | ನುತ್ತಮಾಂಗವನು ಸವರುತ ಲೋಕದಿತರ ಜನರೊ ಲು || ೬೧ || ಸೀತೆ ಜನಕ ಸುಮೇಧೆಯರ ಬಳಿ | ಗಾತುರದೊಳೈದಿ ಚರಣಕೆರಗಿ | ಮಾತೆ ನೀನಾಲಿಪುದು ನನ್ನಖಿಳಾಪರಾಧಗಳ || ಪ್ರೀತಿ

ಯಿಂ ಮನ್ನಿಸೆನುತ ನುಡಿದು | ತಾತನಿಗೆ ಪೋಗಿಬರುವೆನೆನು | ತ್ತಾ ತರುಣಿ ಯೊರೆದೊಲಿಸಿದಳು ತನ್ನಯ ಸಖೀಜನರ || ೬೨ || ಪಿತನ ಪುರದಿಂದೆ ಪೊರಮಟ್ಟು | ಕ್ಷಿತಿಸುತೆ ರಥವನೇರಿ ಪತಿಯೊಡ | ನತಿ ವಿಭವದೊಳ್ಕಳತ ಯೆೋಧ್ಯಾಪುರಿಗೆ ಪೊರಮಡಲು || ಕ್ಷಿತಿಪತಿ ದಶರ ಥನನು ಗೌರವಿ | ಸುತ ನಡೆದು ಪೋಗಿ ಬಳಿಕಾಜನ | ಕ ತಿರುಗಿದನಾ ತನನುಮತಿಯಿಂದಾ ಮಿಥಿಲೆಗಾಗಿ || ೬೩ || ಬರುತ ಮಾರ್ಗದೊಳಿದಿರು ವಂದಾ | ಪರಶುರಾಮನ ಬಿಂಕವನು ಸಲೆ | ಮುರಿದ ಪತಿಯೊಡನೈದಿದ ಳಯೋಧ್ಯಾಮಹಾಪುರವ || ಪುರದ ಹೊರವಳಯದಲಿ ಕಂಡಳು | ಪರಿವನದಿಗಳ ಪುಷ್ಪವನಗಳ | ಪಿರಿದೆನಿಪ ತಾವರೆ ಕೊಳಂಗಳನಾ ಮಹೀತನುಜೆ || ೬೪ || ಸೀತೆಯ ವಿವಾಹ ಕಥೆಯಿದು ವಿ | ಖ್ಯಾತಿಯಿಂ ಗೆಸೆವುದನವರತವು | ಭೂತಲದೊಳೀ ಚರಿತೆಯನು ನಿತ್ಯವು ಭಕುತಿ ಯಿಂದೆ || ಪ್ರೀತಿವಡೆದೋದುವಮನುಜರಿಂ | ಗಾತುರದೊಳತ್ತ ಖಿಳ ಸಾಭಾ | ಗ್ಯಾತಿಶಯಗಳನು ಸಲೆಪಾಲಿಸುವನುರಮಾಧವನು || ೬೫ ||

ಇಂತು ಆರನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೨೮೮.



## ಏಳನೆಯ ಅಧ್ಯಾಯ.

ಸೂಚನೆ || ಪತಿಯೊಡನೆ ಹನ್ನೆರಡು ವರುಸವು |
ವಿತತ ಸೌಖ್ಯಂಗಳನು ತಾನೈ |
ದುತ ಲಯೋಧ್ಯಾಪುರದೊಳಿದ್ದಳು ಸೀತೆ ಸಂತಸದಿ ||

ಹಲಸು ನೇರಿಳೆ ನಿಂಬೆ ಕಿತ್ತಲೆ | ಫಲಿತದಾಡಿಮ ಮಾವು ತೆಂಗು ಹೆ | ರಿಳೆ ಚಕೋತ ಕಪಿತ್ಥಮಾದಳ ಕದಳಿ ಬಹುಬೀಜ || ಬೆಳೆದ ತಿಂತ್ರಿಣಿ ಕಾಂ ಗುಬದರಿಸು | ಲಲಿತ ಖರ್ಜೂರಾಮಲಕವೆ ಮೊ | ದಲಹ ಫಲತರುವನಗಳನು ನೋಡಿದಳು ಭೂಮಿಸುತೆ || ೧ || ಸುರಗಿಮಲ್ಲಿಗೆ ಜಾಜಿಸಂಪಿಗೆ | ಕುರುವಕಶಿರೀಷ ಕಣಗಲೆ ಪಾ | ದರಿತಿಲಕ ಸೇವಂತಿಗೆ ಕಮಲ ಚೂತಸುರಹೊನ್ನೆ || ಮೆರೆವನಂದ್ಯಾವರ್ತ ಕೇತಕಿ | ವರೆಸು ಮಂದಾರ ಕುಸುಮಗಳಿಂ | ದುರೆಪೊಳೆವ ಪೂದೋಟಗಳ ನಾಸೀತೆ ನೋಡಿದಳು || ೨ || ಬೆಳೆದಭತ್ತದ ಗದ್ದೆಗಳ ಥಳ | ಥಳಿಪ ಕಬ್ಬಿನ ತೋಟಗಳ ಕಂ | ಗಳಿಗೆ ತೋರ್ಪಾ ಸಕಲ ವಿಧಧಾನ್ಯದ ಹೊಲಂಗಳ

ನು ॥ ಇಳಿಯುಣುಗಿ ನೋಡುತ್ತ ಹೊಕ್ಕಳು । ಹೊಳೆವ ದೇವನಗರಿಯು
ವೊಲುಕಂ । ಗೊಳಪ ಯೋಧ್ಯಾಪುರವ ನಂದಾಪತಿಸಹಿತ ಬರುತ ॥ ೩ ॥
ಎಡಬಲವ ಸೌಧಂಗಳಿಂ ದಡಿ । ಗಡಿಗೆಸೆವ ದೇವಾಲಯುಂಗಳಿಂ । ದುಡಿಗೆ
ತೊಡಿಗೆಗಳಂಗಡಿಗಳಿಂದೆಸೆವ ಬೀದಿಗಳಿಂ ॥ ಇಡಿದ ನವರತ್ನದೊಡ
ವೆಗಳಂ ಗಡಿಗಳಿಂದುರೆ ರಂಜಿಸುತ ಕಡು । ಬೆಡಗನ್ನೈದಿದೆ ಡೆಗಳನೋ
ಡುತ ಬಂದಳಾಸೀತೆ ॥ ೪ ॥ ಸುರನಗರಿಯುಂತಾವಕಾಲದೊ । ಳುರೆ
ವಿಭವದಿಂದೆಸೆವ ಯೋಧ್ಯಾ । ಪುರವನಾ ಭೂಮಿಸುತೆ ಸೀತೆ ವಿಲೋಕಿ
ಸುತೊಡನೆ ॥ ನೆರೆಹೊಳೆವರ ಮನೆಯುಸನಿಹಕ್ಕೈ । ತರುತ್ತೀದು
ರಥದಿಂದೆ ಹೊಕ್ಕಳು । ಪರವು ಸಂತಸದಿಂದೆ ಮೆರೆವಾರಾಣಿವಾಸವನು
॥ ೫ ॥ ಅತ್ತೆ ಮೂವಂದಿರೆಡೆಯೊಳಗಾ । ಯುತ್ತಮಾಂಗನೆ ಸೀತೆಯುನು
ಭವಿ । ಸುತ್ತ ರಾಜಸುತಂಗಳೆಲ್ಲವೆ ನಿರುತ್ತಿರಲು ಬಳಿಕ ॥ ಮತ್ತೆ ಜನ
ಕನ ಯೋಧ್ಯೆಗೆ ಬೆಸಸಿ । ತೆತ್ತಿಗರ ನಟ್ಟಿದನು ಬಿನ್ನವಿ । ಸುತ್ತ ದೀವ
ಳಿಗೆಗೆ ಕರೆತಹುದೆಂದು ದಶರಥನ ॥ ೬ ॥ ಜನಕ ನಪ್ಪಣೆಯುನು ಶಿರದೊ
ಳಾಂ । ತು ನಡೆತಂದಾ ಚರರ ಯೋಧ್ಯೆಗೆ । ಮನುಜನಾಥನಿಗೆರಗಿ ಕೈ
ಮುಗಿದಿತ್ತು ಪತ್ರಿಕೆಯ । ವಿನಯುದಿಂದಲೆ ಪೇಳ್ದರೀಪುರ । ಜನಸಹಿತ
ದೀವಳಿಗೆ ಹಬ್ಬಕೆ । ತನಯುರೊಡನೈತಹುದು ಮಿಥಿಲಾಪುರಕೆ ನೀವೆನುತ
॥ ೭ ॥ ಪೊಡವಿಪಾಲಕ ದಶರಥನು ತಿಳಿ । ತೊಡನೆ ಲಿಖಿತಾರ್ಥವನು
ಬಳಿಕಲೆ । ರಡನೆಯುದಿನದಿ ನೆಂಟರಿಷ್ಟರನೊಲಿದು ಬರಿಸುತ್ತ ॥ ಸಡಗರ
ದೊಳಾತ್ಮಜರನವರಾ । ಮಡದಿಯುರನೊಡಗೊಂಡು ರಥವ । ನ್ನಡರಿ
ಮಿಥಿಲಾಪುರಕೆ ಪಯಣವನಂದುಮಾಡಿದನು ॥ ೮ ॥ ಬಂದಭೂಪನ
ತಿಳಿದು ತಾನೈ । ತಂದು ಮನ್ನಿಸಿ ಸಕಲ ವಸ್ತುಗ । ಳಿಂದೆಸೆವ ಸೌಧ
ದೊಳಗಂದಿರಿಸಿದನು ಕರೆತರುತ ॥ ಅಂದು ಚರಣಂಗಳಗೆರಗಿ ದಳಿ ।
ಯುಂದಿರನು ತನುಜೆಯರ ಮನ್ನಿಸಿ । ಚಂದದಿಂದಾಶೀರ್ವದಿಸಿದನು
ಜನಕ ನೈದಡವಿ ॥ ೯ ॥ ಕಂಗಳಗೆಕಡು ಸಂತಸಮೆನಲು । ಸಿಂಗರಿ
ಸುತಾ ಮಿಥಿಲೆಯುನು ಘನ । ಮಂಗಳನಿನದ ಮೊದವೆಭೂವರ ಸತಿ
ವಿಭವದಿಂದೆ ॥ ಕಂಗೊಳಿಪ ದೀಪಾವಳಿ ಮೊದಲೊ । ಳಂಗನೆಯುರಿಂದಾ
ಗಿಸಿದ ನ । ಭ್ಯಂಗನ ಸ್ನಾನಗಳನಾ ದಂಪತಿಗಳೆಲ್ಲರಿಗೆ ॥ ೧೦ ॥ ಕ್ಷಿತಿಪತಿ
ಜನಕನಾ ದಶರಥನ । ಸುತರು ನಾಲ್ವರ ನವರವರ್ಗಳ । ಸತಿಯುರಸಹಿತ
ರತ್ನಪೀಠಂಗಳೊಳು ಕುಳ್ಳಿರಿಸಿ ॥ ಪ್ರತಿದಿನಂಗಳೊಳೆರಡುವೇಳೆಯೊ ।
ಳತಿ ವಿಭವದಿಂದಾಗಿಸಿದನು ವ । ನಿತೆಯುರಿಂದುರಟಣೆಗಳನು ಬಹು

ವಿಧವಿನೋದದಲಿ ‖ ೧೧ ‖ ನೆರೆದ ಬಾಂಧವರೊಡನೆ ಮನ್ನಿಸಿ । ಧರಣಿಪಾಲಕ ದಶರಥನನಾ । ದರಿಸುತ ಸಕಲ ರಾಜಮರ್ಯಾದೆಗಳಲಾ ಜನಕ ‖ ಎರಡುವೇಳೆಗಳೊಳು ಬಗೆಬಗೆಯ । ತರತರದ ವಸ್ತುಚಯದಿಂದುಪ । ಚರಿಸಿ ಭೋಜನಗಳನು ತಾಂ ಮಾಡಿಸಿದ ನೆಂಟುದಿನ ‖ ೧೨ ‖ ಕೂಡಿಸಿ ಹಸೆಯೊಳಾರತಿಗಳನು । ಮಾಡಿಸುತ್ತಳಿ ಯಂದಿರುಗಳಿಗೆ । ನಡೆಸದೆದಿತ್ತ ನಗಣಿತರತ್ನಾಭರಣಗಳನು ‖ ಜೋಡಿ ಶಾಲುಗಳನ್ನು ಮೋಹನ್ನ । ಮಾಡಿಸಿದ ಪೀತಾಂಬರಂಗಳನು । ಮೂಡಿದಾನಂದದೊಳಗಾ ಬಲಿಪಾಡ್ಯನಿಯದಿನದ ‖ ೧೩ ‖ ಪ್ರೌಢವಿಪಾಲಕ ಜನಕನಿತ್ತನು । ಪ್ರೌಢವಿಯಾತ್ಮಜೆ ಯೂರ್ಮಿಳೆಯರಿಗೆ । ಕಡುವಿಭವದೊಳು ಮಾಂಡವಿ ಶ್ರುತಕೀರ್ತಿಯರಿಗೆ ಲಿದು ‖ ಇಡಿದರನ್ನಗಳಿಂದೆ ಕಂಗೊಳಿ । ಪ್ರೌಢವೆಗಳ ನಾಸರಿಗೆಯಿಂದುರೆ । ಬೆಡಗನೈದಿದ ವಿಮಲ ಚೀನಾಂಬರ ವಿತಾನವನು ‖ ೧೪ ‖ ಸಕಲ ಮಾನವರಿಗವರ ವರವ । ಸಕತಿಸಂತಸಮಸ್ತವಂಪವೊ । ಳು ಕಡುವೈಭವದಿಂದೆ ಕೊಟ್ಟನುಡಿಗೆತೊಡಿಗೆಗಳನು । ಸಕಲ ರಾಜ್ಞಿಯರಿಗುಡುಗರೆಗಳನು ಕಲಿಪಿತ್ತ ರತುನದೊಡವೆಗಳ । ನು ಕೊಡಿಸಿದನಾ ಸತಿಸುಮೇಧೆಯು ಕೈಯೊಳಾಜನಕ ‖ ೧೫ ‖ ಮತ್ತೆ ದಶರಥಭೂಪತಿಯು ನ । ತ್ಯುತ್ತಮದ ರಾಜೋಪಚಾರವೊ । ಳಿತ್ತಲುಂ ಸಂತವಿಸಿದ ಸಾತಂಗಳಲಿ ‖ ಇತ್ತಖಿಳ ರತ್ನಾಭರಣಗಳ । ನುತ್ತಮೋತ್ತಮದ ವಸನಂಗಳ । ನಿತ್ತ ಯೋಧ್ಯೆಗೆ ಪಯಣವನು ಮಾಡಿಸಿದನಾ ಜನಕ ‖ ೧೬ ‖ ಜನಕನಿಂದೈದೆ ಪಡೆದ ಪ್ಪಣೆ । ಯನು ದಶರಥಮಹೀವರನು ತ । ನ್ನ ನಗರಮೆನಿಪಯೋಧ್ಯೆಗೆ ಪಯಣವಮಾಡಿದನುಕೂಡೆ ‖ ಜನಸಮೂಹದೊಳೈತರುತ ರಥ । ವನಡರಿದನಾ ರಾಜತೇಜದೊ । ಳು ನಿಜಶಿಬಿಕೆಗಳ ನಡರಿದರಾನೃಪನ ರಾಣಿಯರು ‖ ೧೭ ‖ ಜನಕ ನಳಿಯಂದಿರುಗಳೆಲ್ಲರೊ । ಡನೆ ಮಹೀಸುತ ಸೀತೆ ಮೊದಲಹ । ತನುಜೆಯರು ನಾಲ್ವರ ನಯೋಧ್ಯೆಗೆ ಕಳುಹುತ ಪಥದೊಳು ‖ ವಿನುತ ನೀತಿಗಳ ನುಪದೇಶಿಸಿ । ಘನರಥಂಗಳ ನೇರಿಸುತ್ತವ । ರನು ಕಳುಹಿದನು ರಾಜತೇಜದೊಳಾ ಮಿಥಿಲೆಯಿಂದ ‖ ೧೮ ‖ ಎಲ್ಲಜನರಿಂ ನಡೆತರುತ್ತ । ಲ್ಲಲ್ಲಿನಿಲ್ಲುತ ನಾಲ್ಕನೆಯದಿನ । ದಲ್ಲಿ ಸೇರಿದನಾ ದಶರಥನ ಯೋಧ್ಯೆಯನು ಬಳಿಕ ‖ ಸಲ್ಲಲಿತ ನುಡಿಯಿಂದೆ ಮನ್ನಿಸು । ತೆಲ್ಲರನು ಕಳುಹುತ್ತ ಮನೆಗಳಿ । ಗುಲ್ಲಸದೊಳೈದಿದನು ನಿಜಸುತರಿಂದೆ ಮಂದಿರವ ‖ ೧೯ ‖ ಭೂತಳಾಧಿಪ ದಶರಥನನಾ । ಸೀತೆ ಸೇವಿಸಳು

ಪಿತನಂದದೆ । ಮಾತೆಯಂತುಪಚರಿಪಳತ್ತೆಯರನತಿ ಭಕ್ತಿಯಲಿ ॥
ಪ್ರೀತಿಸುವಳೆಲ್ಲಜನರನು ತಾ । ನಾತುರದೆ ಪೇಳುವಳು ಶಾಸ್ತ್ರದ ।
ನೀತಿಗಳ ನಾಸಖಿಯರಿಗೆ ಸಂತಸದೊಳುಪಚರಿಸಿ ॥ ೨೦ ॥ ಇರುತಿರಲು
ಮೇದಿನಿಯುಣುಗಿ ಸಖಿ । ಯರಸಹಿತಲೀತೆರದೆ ಮಂಗಳ । ಕರವೆನಿಸಿಪ
ಶುಭದಿನ ದುದಯಕಾಲದಸುಲಗ್ನದೊಳು ॥ ಅರಸಿಯರಿಗಾನಂದ ವೊದ
ಗು । ತ್ತಿರೆ ಮೊದಲು ಪುಷ್ಪವತಿಯಾದಳು । ಮೆರೆವ ದಶರಥಸಾರ್ವ
ಭೌಮನ ರಾಜಭವನದಲಿ ॥ ೨೧ ॥ ವಿತತವೈಭವದಿಂದೆ ಧರಣೀ । ಸು
ತೆಗೆಮಾಡಿಸುತಾರತಿಗಳನು । ಸತಿಯರಿಂ ಹದಿನಾರುದಿನಗಳವರೆಗೆ ಸಂ
ತಸದಿ ॥ ಕ್ಷಿತಿಪತಿ ವಿದೇಹನನು ಕರೆಯಿಸಿ । ಸತಿಸುಮೇಧೆಯು ಸಹಿತ
ಲಾ ದಶ । ರಥನಯೋಧ್ಯೆಗೆ ಮುನಿಪನಿಂದಿರಿಸಿದನು ಲಗ್ನವನು ॥ ೨೨ ॥
ಮುನಿವಸಿಷ್ಠನು ಬಳಿಕ ಶುಭಕರ । ಮೆನಿಸಿಪ ದಿನದೊಳು ಕೂಡಿಸುತ್ತ
ರಾ । ಮನನು ಮಣಿಮಯಭದ್ರಪೀಠದೊಳವನಿಸುತೆ ಸಹಿತ ॥ ಜನ
ಸಮೂಹದೊಳಾಗಮವಿಧಿಯೊ । ಳುನಡಿಸಿದನಾ ಶಾಂತಿಕೃತ್ಯಗ । ಳನು
ಕೊಡಿಸುತವನೀಸುರರಿಗೆ ಸಮಸ್ತ ದಾನಗಳ ॥ ೨೩ ॥ ಆದಿನದ
ಶುಭಲಗ್ನದಿರುಳೊಳ । ಗೈದೆ ಶೃಂಗಾರಗಳ ತಳೆದಾ । ಮೇದಿನೀಸುತೆ
ರಾಮರನು ಕೂಡಿಸುತ ಪೀಠದಲಿ ॥ ವೇದವಿಧಿಯೊಳು ಮುನಿಪ ಫಲ
ಪೂ । ಜಾದಿಗಳನಾದಂಪತಿಗಳಿಂ । ದಾದರದೆಮಾಡಿಸುತ ಗರ್ಭಾಧಾನ
ವಾಗಿಸಿದ ॥ ೨೪ ॥ ಪಲತೆರದ ವೈಭವಗಳನು ತಾ । ನೊಲಿದು ನೋಡುತ
ನಿಜಸತಿಸಹಿತ । ಕೆಲವುದಿನಗಳಿರುತ್ತ ಯೋಧ್ಯಾಪುರದೊಳಾಜನಕ ॥
ಇಳೆಯಮಗಳನು ಸಂತವಿಸುತ ಮಿ । ಥಿಳೆಗೆ ಬಂದನು ಬಂಧುಗಳೊ
ಡನೆ । ತಳೆದು ದಶರಥನಿಂದಖಿಳ ಮರ್ಯಾದೆಗಳನಿರದೆ ॥ ೨೫ ॥ ಪತಿಸಹಿತ
ಬೇರರಮನೆಯೊಳತಿ । ಹಿತದೊಳಾಸೀತೆ ಪದೆದನುಭವಿ । ಸುತ ಸಕಲ
ಸುಖಗಳನು ಸಂತಸದಿಂದಲನುದಿನವು ॥ ಪತಿಗೆ ಸಂತಸಗಳನು ತಾ
ನೆಸ । ಗುತ ಕನಕ ಪುತ್ಥಳಿಯತೆರದೆ ಪೊ । ಸತಪ ಯವ್ವನದಿಂದೆ
ಮೆರೆದಳು ಜನರಕಂಗಳಿಗೆ ॥ ೨೬ ॥ ರಾಜಹಂಸ ಗಮನೆವರದ್ವಿಜ ।
ರಾಜಮುಖಿವಿದ್ಯುಲ್ಲತಾಂಗಿ ಸ । ರೋಜದಳಘನ ನೇತ್ರೆ ಸೌಮ್ಯವಿಲಾಸ
ಸೌಂದರ್ಯೆ ॥ ರಾಜಿತ ಕಠೋರತರಘನ ವ । ಕ್ಷೋಜಯುಗಳೆ ಮೃಗೇಂ
ದ್ರಮಧ್ಯೆ ವಿ । ರಾಜಿತ ಸುಬಿಂಬಾಧರೆ ವಿರಾಜಿಸಿದಳಾ ಸೀತೆ ॥ ೨೭ ॥
ನಡಿಗೆಯಿಂ ದಂಚೆಯನು ಮಂಜುಳ । ನುಡಿಗಳಿಂದರ ಗಿಳಿಯನಾಬಡ ।
ನಡುವಿನಿಂ ಕೇಸರಿಯ ಲೋಚನದಿಂದೆ ಕಮಲವನು ॥ ಕಡುಮೆರೆವ

ದಶನಾಳಿಯಿಂ ದಡಿ | ಗಡಿಗೆ ಪಳಿಯುತ ಕುಂದಕುಟ್ಮಲ | ಗಡಣವನು ಸಲೆರಂಜಿಸಿದಳಾ ಸೀತೆಸಂತತವು || ೧೮ || ಹೊಳೆವ ಚಂದ್ರಿಕೆಯಂತೆಸೆವ ಥಳ | ಥಳಿಪ ಕಿರುನಗೆ ಪಲ್ಲವದತೆರ | ದೊಳುರೆ ಶೋಭಿಸೆ ಚರಣಯುಗಳವು ತಿಲಕುಸುಮದಂತೆ || ಕಳೆಯನಾಂತಿರೆ ನಾಸಕ್ಯೆಪಿಡಿ | ಪೊಲು ಮೆರೆಯೆ ಕೆನ್ನೆಗಳು ಕರಿಕರ | ದೊಲುವಿರಾಜಿಸೆ ತೊಡೆಗಳಾಭರಣೀಸುತ ಮೆರೆದಳು || ೧೯ || ಕೊರಳಹಾರದ ಕರ್ಣಪೂರದ | ಕರಗಳೊಳೆಸೆವ ಕಂಕಣಂಗಳ | ಚರಣದಂದುಗೆ ಗಳಕಟಿಯೊಳೊಪ್ಪುತಿಹ ಮೇಖಲೆಯ || ಕಿರಿದ ರತ್ನಾಭರಣಗಳ ಘನ | ತರದಲಂಕೃತಿಬಡಗಿನಿಂದುರೆ | ಮೆರೆದಳು ಸಕಲ ಲೋಕಮಾತೆ ವಿನೀತೆಯಾಸೀತೆ || ೨೦ || ಕುರುಳುಕಾರ್ಮುಗಿಲಂತೆಸೆಯುತಿರೆ | ತುರುಬಿನೊಳುತಾಂಮುಡಿದ ಮಲ್ಲಿಗೆ | ಯರಳುಗಳು ತಾರಗೆಯ ಪೋಲ್ಮೆರೆಯೆ ಕಡೆಗಣ್ಣಾಗಳ || ಮೆರೆವ ಕಾಂತಿತ ಟಲ್ಲತೆಯ ಪೋ | ಲಿರೆಸುರಿವ ಬೆಮರಾಮಳೆಹನಿಯ | ತೆರದೊಳಾಗಲು ವರ್ಷಋತುವಿನೊಲೆಸೆದಳಾ ಸೀತೆ || ೨೧ || ಮಳೆಯನೀರಿಂ ತಣಿದಚಾತಕ | ಬಳಗದಂತಾ ಪುಷ್ಪರಸವನು | ನಲಿದು ಪೀರ್ವಳಿಗಡಣ ದಂದದೊಳಾ ಘನರಸವನು || ನೆಲದೆ ಕುಡಿದೆಸೆವಾ ಮಹೀರುಹ | ಗಳನಿಕರದಂತವನಿಜೆಯ ಕೋ | ಮಲತರಾಧರ ಪಾನದಿಂದುರೆನಲಿದನಾರಾಮ || ೨೨ || ಕಮಲಲೋಚನೆ ಕಮಲಸಮಮುಖಿ | ಕಮಲಪಾಣಿಯು ಕಮಲಪದಯುಗೆ | ಕಮಲಗಂಧಿನಿ ಕಮಲಮುಂದಿರೆ ಕಮಲೆತಾನೆನಲು || ಕಮಲವಾಸಿನಿ ಸೀತೆ ಸತತವು | ಕಮಲನೇತ್ರನ ಕಣ್ಗೆ ಮೆರೆದಳು | ಕಮಲಮಯಪುತ್ಥಳಿಯು ತಾನೆಂಬಂತೆ ಕಳಕಳಿಸಿ | ೨೩ || ಪತಿಯಚಿತ್ತಕೆ ಮುದವನೀಯುತ್ತ ತಿಶಯಾಲಂಕಾರದಿಂದುರೆ | ರತಿಸುಖವನಾಗಿಸುತ ರಾಮನನೊಲಿಸಿದಳು ಸೀತೆ || ಕತಿಪಯಪತಿವ್ರತೆಯರಾ ಸುಚ | ರಿತೆಗಳನು ಪೇಳುತ ಸಖೀಜನ | ಕತಿಶಯಮೆನಿಪ ಕುತುಕವನು ನೀಡುತ್ತೆಸೆದಳಲ್ಲಿ || ೨೪ || ತಳೆದಮುತ್ತಿನ ಹಾರಮದುನೆರೆ | ಬಳೆದ ಕುಚಮಂಡಲದೊಳುರೆಕಂ | ಗೊಳಿಸೆ ಕಲಶಂಗಳಗಿರಿಸಿದಾ ಕುಸುಮಮಾಲೆಯೊಲು || ಹೊಳೆವ ಕಸ್ತೂರಿ ತಿಲಕ ಮಾಮುಖ | ದೊಳೆಸೆಯುತ್ತಿರೆ ಚಂದ್ರಮಂಡಲ | ದೊಳಿಹ ಹರಿಣದ ರೀತಿಯೊಲು ಕಣ್ಗೆಸೆದಳಾಸೀತೆ | ೨೫ || ರದನಪಙ್ಕ್ತಿಯು ಕುಂದಕುಸುಮ ಸ | ಮುದಯವಂತುರೆಮೆರೆಯೆ ನಾಸಿಕ | ಮದೆಸೆವಾ ಚಂಪಕದೊಲಿರೆನಯನಂಗಳೊಪ್ಪುತಿಪ ||

ಸದಮಲಕುಶೇಶಯುಗಳಂತಿರೆ । ವದನವೊಪಂಕಜದವೊಲೆಸೆಯೆ ।
ಸುದತಿ ಕುಸುಮಾಕರನ ಬನದಂತೆಸೆವಳಾಸೀತೆ ॥ ೩೬ ॥ ಚಾರುಹಾಸದ
ಚಾರುನಯನದ । ಚಾರುವದನದ ಚಾರುಗಮನದ । ಚಾರುತರಪೀನಘ
ನ ವಕ್ಷೋಜಯುಗ ಪೈಟದಿಯು ॥ ಚಾರುವೇಣಿಯು ಚಾರುವಾಣಿಯು ।
ಚಾರುಪಾಣಿಯು ಚಾರುದೃಷ್ಟಿಯು । ಚಾರುಬಿಂಬಾಧರದ ಜಾನಕಿ
ಮೆರೆದಳಾಪುರದಿ ॥ ೩೭ ॥ ಸುಂದರೀಮಣಿ ಸೀತೆ ಪತಿಯನು । ಬಂಧು
ರತರದಲಂಕೃತಿಯೊಳಾ । ನಂದವಡಿಸುತ ಹೊಂದಿವಳುದಿನದಿನದೆಂತಿಸು
ಖವ ॥ ಇಂದಿರನೊಡನೆ ಶಚಿಯುಸೌಖ್ಯವ । ನೊಂದುವಂದದೆ ಪತಿಸಹಿತ
ಸುಖ । ದಿಂದೆ ಕಳೆದಳು ಹನ್ನೆರಡು ಯುಬುದಗಳಸೀತೆರದೆ ॥ ೩೮ ॥
ಅತಿಥಿಯಭ್ಯಾಗತರನುರೆದಣಿ । ಸುತ ಬಡವರನು ಸಂತಸಂಗೊಳಿ ।
ಸುತನುದಿನದೊಳಗಾ ಕುರುಡ ಕುಂಟರನುದಣಿಸುತ್ತ ॥ ಪತಿಪರಾಯ
ಣರೆಂದೆನಿಸಿದ ವ । ನಿತೆಯರ ಕಥಾವಳಿಗಳೆಲ್ಲವ । ನು ತಿಳಿಸುತ ಬಿಳಿ
ಮಾನಿನಿಯರಿಗೆ ಮರೆದಳಾಸೀತೆ ॥ ೩೯ ॥ ಪುರದ ನಾರಿಯರೆಲ್ಲರನು
ತಾ । ಬರಿಸಿ ತೃಪ್ತಿಯ ನೈದಿಸುವಳಾ । ಪರಿಮಳದ ವಸ್ತು ಚಯದಿಂ
ದಡಿಗಡಿಗೆ ತಾನೊಲಿದು ॥ ತರತರದ ಸೀರೆ ಕುಬಸಂಗಳ । ನಿರದೆ
ಕೊಟ್ಟು ಸುಭೋಜನಗಳಿಂ । ದುರೆದಣಿಸುತಾನಂದವನು ಮಾಡಿದಳು
ಭೂಮಿಸುತೆ ॥ ೪೦ ॥ ಬಳಿಕ ರಾಮನಿಗೀ ಮಹೀಮಂ । ಡಲದೊಡೆತನವ
ನೀಯಬೇಕೆಂ । ದಿಳೆಯೊಡೆಯನಾದಶರಥನು ಚಿತ್ತದೊಳು ತಾ
ನೆಣಿಸಿ ॥ ಹೊಳಹೊಳೆವತೆರದಿಂದೆ ನಿಜಪುರ । ದೊಳತಿ ಶೃಂಗಾರವನು
ಮಾಡಿಸು । ತೊಲಿದು ಲಗ್ನವನಿರಿಸಿದನು ಪಟ್ಟಾಭಿಷೇಕಕ್ಕೆ ॥ ೪೧ ॥
ನಾಳೆ ಪಟ್ಟವ ನಿನಗೆಕಟ್ಟುವೆ । ಕೇಳು ರಾಘವ ಸತಿಸಹಿತ ಮುನಿ ।
ಪಾಲ ನಪ್ಪಣೆಯಂತೆ ನೀನುಪವಾಸವನುಮಾಡಿ ॥ ಮೇಲೆನಿಸುವೀದಿನ
ದೊಳಾವನ । ಮಾಲಿಯನು ಪೂಜಿಸುತ ಭೂಸುರ । ಜಾಲವನು ಸಂತು
ಷ್ಟಿವಡಿಸೆಂದೊರೆವನವನಿಪತಿ ॥ ೪೨ ॥

ಇಂತು ಏಳನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೩೨೦.

## ಎಂಟನೆಯ ಅಧ್ಯಾಯ.

ಸೂಚನೆ ॥ ಅಡವಿಗೈತಹೆನೆಂದು ಬೇಡುವ ।
ಪೊಡವಿಯೊಡೆಯಗಿಯು ನಾರಘುವರನು ।
ತಡೆಯುತೊಪ್ಪಿಸಿದಳವನೀಸುತೆ ಪಲತೆರದೆಪಕ್ತಿಯು ॥

ದಶರಥನು ಪಟ್ಟಾಭಿಷೇಕದ । ಪ್ರಸ್ತಾಪಿಸುದ್ದಿಯನು ಕೈಕೆ
ಗ । ತಿ ಸಡಗರದಿಂದರುಹಬೇಕೆಂದೆನುತ ಲೈತರಲು ॥ ಬಸವಳಿದು ರೋ
ಷಾತಿಶಯದಿಂ । ದುಸುರದಿಹ ಸತಿಯನ್ನು ಕಾಣುತ । ವಸುಮತೀಶನು
ಬೆರಳ ಮೂಗಿನೊಳಿಂದು ಬೆರಗಾದ ॥ ೧ ॥ ಏನಿದೀ ಮನದಾಯಾಸಮೆನು
ತ । ಮಾನಿನಿಯನಾ ನೃಪತಿ ಕೇಳಲು । ಮಾನವಾಧಿಪ ಕೇಳು ಮನದಣಿ
ಕೆಯನು ತಪ್ಪಿಸದೆ ॥ ನೀನು ನೆರವೇರಿಸುವೆನೆನುತನು । ಮಾನವಿಲ್ಲದೆ
ನುಡಿವೊಡೆ ಬಳಿಕ । ನಾನು ಪೇಳುವೆ ನನ್ನಭೀಷ್ಟವನೆಂದಳಾ ಕೈಕೆ
॥ ೨ ॥ ಏನ ಕೇಳಿದೊಡೀವೆ ನಿನಗಾ । ನೇನ ಪೇಳ್ದೊಡವುಗಳ ಮಾಳ್ಪೆ
ನು । ಮಾನಿನೀಮಣಿ ರಾಮನಾಣೆಯು ನಿಜವೆನುತ ನಂಬು ॥ ನೀನು
ಸಂತೋಷವನು ತಾಳ್ದನು । ಮಾನಿಸದೆ ಪೇಳೆಂದು ಕೈಕೆಗ । ಧೀನನಾ
ಗುತ ಬೇಡಿದನು ದಶರಥನು ತಲೆದೂಗಿ ॥ ೩ ॥ ದೇವಚೈತ್ರ್ಯಸಂಪೆ
ನಗೆನೀಂ । ದೇವದಾನವ ಕದನದೊಳಗಿ । ತ್ತಾ ವರಂಗಳ ಬೇಡುವೆನು
ಪದಕೆರಗಿ ವಿನಯದಲಿ ॥ ನೀವು ಭರತಂಗಿಂದೊಡೆತನವ । ನೀವು
ದೊಂದರ ಲೊಂದರಲಿ ರಘು । ಭೂವರನ ಕಳುಹುವುದು ಹದಿನಾಲ್ಕ
ಬುದವನಕೆನುತ ॥ ೪ ॥ ಆ ನುಡಿಯನಾಲಿಸುತ ಬಿದ್ದನು । ಭಾನುಕುಲ
ಮಣಿ ದಶರಥನು ತಾ । ನಾಸಿಲಕೆ ಛೇದಿಸಿದ ಮರವಿಳೆಗುರುಳುವಂದ
ದಲಿ ॥ ಪ್ರಾಣವಿಲ್ಲದ ಮೂರ್ಛೆಯಿಂದಿರೆ । ಮಾನವಾಧಿಪನಾ ಸುಮಂತ್ರ
ನು । ತಾನು ಬಂದನು ಕಾಣಬೇಕೆನುತಾ ದಶರಥನನು ॥ ೫ ॥ ರಾಜರ್ಕೈ
ತಂದಿಹರು ಶಿಷ್ಯರ ಸ । ಮಾಜಸಹಿತ ವಸಿಷ್ಠಮುನಿನಿಜ । ರಾಜ ಮಂದಿ
ರದ ಬಳಿಗೈತಂದಿಹನು ಹರ್ಷದಲಿ । ರಾಜರಾಜನೆ ದಶರಥೇಂದ್ರನೆ ।
ರಾಜನಾಗಲು ರಾಮನನು ನೀ । ವೀ ಜಗಕೆ ಪಟ್ಟಾಭಿಷೇಕವ ಮಾಡಿ
ಸುತ ನುಡಿದ ॥ ೬ ॥ ಉತ್ತರವ ದಶರಥನು ಕೊಡದತಿ । ಚಿತ್ತರದ
ದುಃಖವನು ತಾಂ ತಳೆ । ದತ್ತ ಮೂರ್ಛೆಯೊಳಿರೆ ಸುಮಂತ್ರಗೆ ನುಡಿ
ದಳಾ ಕೈಕೆ ॥ ಇತ್ತ ನಿದ್ದೆಯೊಳಿರ್ದನವನಿಪ । ಹೊತ್ತು ಮಾಡದೆ ಬರಿಸು
ರಾಮನ । ನುತ್ತಮದ ಕಾರ್ಯವಿಹುದೆಂದೆನುತವನ ಕಳುಹಿದಳು
॥ ೭ ॥ ರಾಮನರಮನೆಗಾ ಸುಮಂತ್ರನು । ತಾಮಸವ ನುಳಿದೈದಿ ತಿಳಿ

ಸುತ । ನೇಮವೇನು ಕರೆತಂದನಾ ಕೈಕೆಯರಮನೆಗಾಗಿ ॥ ಪ್ರೇಮದಿಂದಾ ದಶರಥನ ಪದ । ತಾಮರಸ ಯುಗಕಂದು ನಮಿಸುತ । ರಾಮನೆಂದನು ಪಿತನೆನೇಮವದೇನು ನನಗೆನುತ ॥ ೮ ॥ ಮನುಜಪಾಲಕ ನುಡಿಯಲಾ ರದೆ । ಮನದ ದುಃಖಾತಿಶಯದಿಂದಾ । ತನಯನನು ನಯನೋದಕದಲೀ ಕ್ಷಿಸದೆ ತಾನಿರಲು ॥ ಅನುನಯದೊಳಾ ಕೈಕೆ ನುಡಿದಳು । ತನಯ ನೆ ಪಿತನಭೀಷ್ಟವೊಂದಿಹು । ದು ನಿನಗದನೀ ಭೂವರನರುಹಲಂಜುತಿ ಹನೆನುತ ॥ ೯ ॥ ಮಾತೆನೀಂನುಡಿ ಪಿತನಭೀಷ್ಟವ । ನೀತ ನಪ್ಪಣೆ ಯಂತೆ ನಡೆವೆನು । ವೀತಿಹೋತ್ರನೊಳಂದು ಬೀಳುವೆ ಕುಡಿವೆ ಗರಳ ವನು ॥ ನಾ ತಳುವದಬ್ಧಿಯೊಳುರುಳುವೆನು । ತಾತನಿಷ್ಟವ ನುಡಿಯ ದನು ಸಂ । ಪ್ರೀತಿಯಿಂದಲೆ ಪಾಳ್ವೆನೆನ್ನುತ ನುಡಿದನಾರಾಮ ॥ ೧೦ । ಅವನಿಪತಿ ತನಗೆರಡು ವರಗಳ । ದಿವಿಷದಾಸುರಯುದ್ಧದಲಿ ತಾಂ । ತವಕದಲಿ ಕೊಟ್ಟಿಹನು ನಾನವನರ್ಥಿಸಿದೆನೀಗ ॥ ಅವನಿಯೊಡೆ ತನ ಭರತಗೀವುದು । ಜವದೆ ಬನಕಟ್ಟುವುದು ಹದಿನಾ । ಲ್ಕುವರುಸಂ ರಾಮನನೆನುತ್ತಲೆ ಬೇಡಿದೆನು ಕೇಳ್ಳೈ ॥ ೧೧ ॥ ನಿನಗೆ ತಾನೀ ಸಂಗತಿ ಯನಿಂ । ದು ನುಡಿಯಲು ಭೂವರನು ಚಿಂತಿಸು । ವನು ಪಿತನನೇ ಮವನು ಸಲಿಪ್ಪುದೆಸುತನಕರ್ತವ್ಯ ॥ ಎನುತ ಕೈಕೆಯುಪೇಳಲು ದಶರ । ಥನು ತಳೆದು ಮೂರ್ಛೆಯನು ಬಿದ್ದನ । ವನಿಯೊಳು ಬಳಿಕ ರಾಮನುಪಚರಿಸುತ್ತಲಿಂತೆಂದ ॥ ೧೨ ॥ ದಶರಥನು ಚೇತರಿಸಿಕೊಳ್ಳು ತ । ಬಸವಳಿದು ದುಃಖಾತಿರೇಕದೊ । ಳುಸುರದೀಕ್ಷಿಸಿಸುತನ ಬಿಸುಸು ಯ್ದಳುತ ತಪಿಸುತಿರೆ ॥ ಬಸಗೆಯೊಳು ಪಟ್ಟಾಭಿಷೇಕನ । ನೆಸಗುವುದು ಭರತಂಗೆನಾಂ ಚಿಂ । ತಿಸದೆ ಪೋಪೆನು ವಿಪಿನಕೆನ್ನುತ ನುಡಿದನಾರಾಮ ॥ ೧೩ ॥ ವನಕೆ ಪೋಗುವೆನೆಂದೆನುತ್ತ ಪಿ । ತನನೊಡಂಬಡಿಸುತ್ತ ಬಂ ದು ಜ । ननಿಯ ಮಂದಿರಕೆರಗಿ ಪಿತನಾಜ್ಞೆಯೊಳು ನಾನಿಂದು ॥ ಮುನಿ ಗಳಂದದೆ ವಲ್ಕಲಜಟೆಗ । ಳನು ಧರಿಸಿ ... । ತನಕ ಪೋ ಗುವೆವಿಪನಕೆನ್ನುತ ನುಡಿದನಾರಾಮ ॥ ೧೪ ॥ ಸುತನ ಮಾತನುಕೇಳ್ದು ಬಿದ್ದಳು । ವಿತತದುಃಖೋದ್ರೇಕದಿಂದವೆ । ನಿತಲದೊಳು ಕೌಸಲ್ಯೆರಾಮ ನುಪಚರಿಸುತ ಕೂಡೆ ॥ ಶ್ರುತಿವಚನದಿಂದಾಕೆಯನು ಸಂ । ಮತಿಸಿ ತಳೆ ದಾಶೀರ್ವಚನಗಳ । ನತಿಭರದೊಳ್ಕೈತಂದನಾತನ ಮನೆಗೆ ತಲೆವಾಗಿ ॥ ೧೫ ॥ ಪತಿಪರಾಯಣೆ ಸೀತೆನೋಡಿಕ । ಡುತವಕದೊಳಿದ್ದಿದಿದರು ಬಂ ದಾ । ಪತಿಗೆ ನಮಿಸುತ ಕಾಂತಿಯಿಲ್ಲದ ಮುಖವನೀಕ್ಷಿಸುತ ॥ ಪತಿಯೆಕೇ

ಳ್ಳಿದಿನವು ಬಾರ್ದ । ಸ್ವತದ ಪುಷ್ಯಮಿತಾರೆಯಿಂದೆ ಬೆ । ರೆತ್ತಿಹುದೆನ್ನುವ
ರೇಕೆ ಚಿತ್ತವು ಕೆಟ್ಟಿಹುದುನಿನಗೆ॥ ೧೬ ॥ ಶತ ಸಲಾಕೆಗಳಿಂದೆ ಕಂಗೊಳಿ।
ಸುತಿಹ ಬಿಳು ಗೊಡೆಯಿಂದೆಸೆವುದಿ । ಲ್ಲ ತವವುಖಪಂಕೇರುಹವು ತಾ
ನೇಕೆಕಳೆಗುಂದಿ॥ ಸತತನಾಶಿಹಂಸಗಳ ವ್ರೋ । ಲತಿ ಬಿಳುಪನಾಂತ ಚ
ಮರಗಳ । ನುತನೆದೇತಕೆ ಬೀಸದಿರುವರು ವುಖಸರೋಜದೊಳು
॥೧೭॥ ಸೂತಮಾಗಧವಂದಿವಾಗ್ಮಿಗ । ಳೇತಕೀದಿನಪಡೆದು ಸಂತೋ । ಷಾ
ತಿಶಯುವನು ಮಂಗಳಸ್ತೋತ್ರಗಳನಾಗಿಸುತ ॥ ಪ್ರೀತಿಯಿಂದೈತಂದು
ಕಾಣಿಸ । ರೇತಕೀಪರಿ ಮನದೆಚಿಂತಿಸಿ । ಕಾ ತರಿಸುತೆಲ್ಲರಿಗೆ ದುಃಖವನಾ
ಗಿಸುವೆನೀನು॥ ೧೮ ॥ ವೇದಪಾರಂಗತರೆನಿಸಿದಾ । ಭೂದಿವಿಜರೊಡಗೂಡಿ
ಭರದಿಂ । ದೀದಿನದೊಳಭಿಷೇಕವ ನೆಸಗಿ ನಿನ್ನ ಪೂರ್ಧದೊಳು ॥
ವೇದವಂತ್ರವ ನುಚ್ಚರಿಸುತ । ತ್ಯಾದರದೊಳು ಕ್ಷೌದ್ರದಧಿಗಳ ।
ನೈದೆ ಸಿಂಗರಿಸದಿಹರೇತಕೆ ಪೇಳುನನಗೀಗ ॥ ೧೯ ॥ ಅರರೆ ಚಿತ್ರವಿದಿ
ತರದೇಶದ । ನರರಯೋಧ್ಯಾಪಟ್ಟಣದ ಮನು । ಜರಿತರಮಹೀಪಾಲ
ಕರು ಘನಸಂತಸವನಾಂತು ॥ ತರತರದಲಂಕಾರಗಳನಾ । ದರದೊಳಾ
ಗಿಸಿ ಶ್ರೇಣಿಮುಖ್ಯರ । ನೆರಪಿಯಿಂದೇ ಕೈತ್ರದಿಹರು ನಿನ್ನ ಬಳಸು
ತ್ತ ॥ ೨೦ ॥ ಇಂದು ಕನಕಾಭರಣಸಂಚಯ । ದಿಂದಲಂಕೃತಿವೆತ್ತು
ಕಡುಜವ । ದಿಂದೆ ಪೋಗುವ ನಾಲ್ಕು ಕುದುರೆಗಳನ್ನು ತಾತಳೆದು ॥
ಸುಂದರ ಪತಾಕೆಗಳ ಸಮುದಯ । ದಿಂದೆಸೆವ ರಥಮೇಕೆನಿನ್ನಯ ।
ಮುಂದೆ ಬಾರದಿರುವುದು ಪೇಳೆಂದೆನುತ ಕೇಳದಳು ॥ ೨೧ ॥ ಪಡೆದು
ಪೂಜೆಯ ನಿಂದುನಿನ್ನಯ । ಬೆಡಗಿನಿಂದುರಾಜಿಸುತ್ತಿಹ । ಕಡುಪಿರಿದೆ
ನಿಪ ಮುಗಿಲುಬೆಟ್ಟಗಳ ಪ್ರಭೆಯುನಾಂತು ॥ ಉಡಿಗೆತೊಡಿಗೆಗಳಿಂದೆ
ರಂಜಿಸು । ತಡಿಗಡಿಗೆ ಮುಂಗಡೆಯೊಳೇತಕೆ । ನಡೆತರದಿಹುದು ಪಟ್ಟ
ದಾನೆಯೆನುತ್ತ ಕೇಳದಳು ॥ ೨೨ ॥ ಕನಕ ಚಿತ್ರಗಳಿಂದೆರಂಜಿಪ ।
ವಿನುತವೀರಪುರಸ್ಸರವೆನಿಪ । ಘನಸುಭದ್ರಾಸನವದೇತಕೆ ಬಾರದಿಹು
ದೀಗ ॥ ಮನುಜಪತಿ ಪಟ್ಟಾಭಿಷೇಕವ । ನಿನಗೆ ಮಾಡಿಸುತಿರಲು
ನಿನ್ನವ । ದನವು ಕಳೆಗುಂದಿಹುದು ಪೇಳೇತಕೆನುತನುಡಿದಳು ॥ ೨೩ ॥
ಕೇಳುನೀನೆಲೆ ಸೀತೆಶಿರದೊಳು । ತಾಳುತ ಪಿತನನೇಮವನು ನಾಂ । ಪಾ
ಲಿಸದೆ ಭೂಮಿಯನು ಹದಿನಾಲ್ಕುಬುದಪರಿಯಂತ ॥ ಮೇಲಹ ಸುಖಂ
ಗಳನುಳಿದು ಮುನಿ । ಪಾಲರಂದದೆ ವನಕೆ ಪೋಗುವೆ । ನಾಲಿಸುವುದೆಂದೆ
ನುತ ಪೇಳ್ದನು ಸೀತೆಗಾರಾಮ ॥ ೨೪ ॥ ಪಿತನು ಕೊಟ್ಟಿಹನೆರಡು

ವರಗಳ | ನತಿಹಿತವೊಳು ಕೈಕೆಗೊಂದರ | ಲಿ ತನಯುಂಗರಸುತನ
ವನು ಮತ್ತೊಂದರಲಿ ನನಗೆ || ಕೃತಕಮತಿಯಿಂ ವನದವಾಸವ |
ನು ತರುಣೀಮಣಿಕೇಳ್ದಳವನಿ | ಪತಿಯ ನದರಿಂ ವನಕೆ ಪೋಪ್ರದೆನುತ್ತ
ಪಿತನೆಂದ || ೨೫ || ವನಿತೆಪೇಳ್ವೆಂ ಪೋಗಿಬರುವೆನು | ವನಕೆ ಪದಿ
ನಾಲ್ಕುಬುದ ಮುಂದಿನ | ತನಕ ನೀನಿಹುದಿಲ್ಲಿ ದಶರಥನತಿಳಿ ಪಿತನಂತೆ ||
ಜನನಿಯುಂದವೆ ಸೇವಿಸತ್ತೆಯು | ರನಿಬರನು ಭರತಂಗೆನೀನಿದಿ | ರುನು
ಡಿಯದಿರಾತನಿಚ್ಛೆರಿನೊಳಗೆ ನನ್ನ ಪೊಗಳದಿರು || ೨೬ || ಭರತಶತ್ರುಘ್ನ
ರನು ತ್ರಿಳಿ ತನು | ಜರ ವೊಲಾವಗವಿಂದದ ಮನು | ಜರನು ತೋಷಿಸು
ರಚಿಸು ದೇವಾರ್ಚನೆಗಳನನುದಿನ || ಭರತನಧಿರಾಜನೆನಿಸುವ ನೀ |
ಧರಾತಿಗದರಿಂದಾತನಿಂಸಗ | ದಿರ ಸವಾಧಾನವನು ನೀನೆಲೆಕಾಂತೆ
ಕೇಳೆಂದ || ೨೭ || ಕಾನನಕೆನಾಂ ಪೋಗಿಬರುವೆನು | ಮಾನಿನೀಮಣಿ
ಸೀತೆತ್ರಿಳಿನಾ | ನೀನಗರಿನ್ನೊಳಿರುವ ಪರಿಗೀಗ್ತರದ ವಾಸಿಪ್ರದು || ನೀನೆ
ನುತ ನುಡಿಯುಲ್ಕೆ ರಾಮನನು | ಜಾನಕಿಯು ಪತಿಪದವ ಪಿಡಿಯುತ |
ತಾನು ಪೇಳ್ದಳು ಪ್ರಣಯಕೋಪದೊಳುತ್ತರವನಿರದೆ || ೨೮ ||
ಪತಿಯೆ ಶಸ್ತ್ರಾಸ್ತ್ರಂಗಳನು ತಳೆ | ದತಿ ಪರಾಕ್ರಮಿಗಳಹ ಪೊಂದಿನಿ |
ಪತಿಸುತರಿಗೀ ನುಡಿಗಳಪಕೀರ್ತಿಕರವಹಗಿಮವು || ಪಿತನು ಮಾತೆಯು
ಸೊಸೆಯು ತಮ್ಮನು | ಸುತನು ಮೊದಲಾದವರು ತಾವ್ವಡೆ | ಯುತ
ಲಿಹರು ಪೂರ್ವದೊಳು ಮಾಡಿದ ತಮ್ಮ ಭಾಗ್ಯವನು || ೨೯ || ಪತಿಯು
ಭಾಗ್ಯವ ಮಡದಿಪೊಂದುವ | ಳಿತರ ಮಾರ್ಗವಿರುವುದೆ ಸತಿಗೀ |
ಕ್ಷಿತಿಯೊಳದರಿಂಬರುವೆನಾಂ ಕಾನನಕೆ ನಿನ್ನೊಡನೆ || ಗತಿಯುನೀವನು
ಮಡಿದ ಮಡದಿಗೆ | ಪತಿಯುಪರದೊಳಗಲ್ಲದೆ ಪೊರೆದ | ಪಿತನು ಮೊದ
ಲಾದವರು ತಾವು ಕೊಡುವರೆ ಮುಕ್ತಿಯನು || ೩೦ || ನಿನ್ನ ಸಂಗಡ ವನಕೆ
ಬರುತಲೆ | ಸನ್ನುತಿವಡೆದತಾಪಸಗಣದ | ನುನ್ನತ ಭಕುತಿಯಿಂದೆ
ಸೇವಿಪೆನವರ ಸತಿಯರನು || ಮನ್ನಿಸುತ ಚಿಂತಿಸವೆ ಸಾಧ್ಯವ | ನೆನ್ನ
ತಂದೆಯ ಮನೆಯೊಳಿದ್ದಂ | ತಿನ್ನು ವಾಸುವೆನಾನಡವಿಯೊಳು ನಿನ್ನ
ನೊಲಿಸುತ್ತ || ೩೧ || ನಿನ್ನ ಬಳಿಯೊಳಗಿರ್ಪನನಗೆ ಬನ | ಮಿನ್ನು
ನಾಕಸಮಾನಮೆನಿಪುದು | ನಿನ್ನನು ತೊರೆದ ರಾಜಭವನಮರಣ್ಯಸಮ
ವಹುದು || ನಿನ್ನ ನುಳಿದಿಲ್ಲಿರೆನುವನದೊಳು | ನಿನ್ನೊಡನೆ ಪೂಜಿಸುತ
ಗುಣಸಂ | ಪನ್ನರಹ ಮುನಿಪೋತ್ತಮರ ನಾನಂದದಿಂದಿಹೆನು || ೩೨ ||
ಫಲವೊಗಡ್ಡೆಯೊಗೆಣಸೊತಿಂಡಪೆ | ಜಲಜಸಂಚಯದಿಂದೆ ರಂಜಪ |

ಕೊಳಗಳೊಳು ಮಜ್ಜನವನಾಗಿಸೆ ನವನದೀಜಲವ ॥ ನಲಿದು ಪಾನವ ಮಾಡುವೆನು ಕಂ । ದಳರಹಾಸಿಗೆಯಲ್ಲಿ ಮಲಗುವೆ । ಪಲತೆರದ ಮೃಗ ಪಕ್ಕಿಗಳ ನೋಡುತ್ತ ಹರುಷಿಪೆನು ॥ ೩೩ ॥ ಶರಭಸೈರಿಭಸಿಂಹವಾರಣ । ಹರಿಣ ಋಕ್ಷವರಾಹವೃಕವಾ । ನರತರಕ್ಷುಗಳಂದತಿ ಕಠಿನವಾಗಿಕಾಣಿಸುತ ॥ ಹಂಡಿಕೊಂಡಿಪ್ಪ ಕಲ್ಲು ಮುಳ್ಳುಗ । ಳುರುಬೆಯಿಂದೊಪ್ಪುತಿಹ ವಿಪಿನಕೆ । ಬರುವೆನೆನುತಾ ಜಾನಕಿಯು ಪೇಳ್ದಳು ಪತಿಗಿರದೆ ॥ ೩೪ ॥ ಲಲನೆ ಕೇಳಾವನದ ದೋಷಂ । ಗಳತಿಶಯವಾಗಿಹವು ಮೇದಿನಿ । ಯೊಳದರಿಂದಲೆ ವನವೆನುತ ಪೆಸರಾಗಿರುವುದದಕೆ ॥ ತಿಳಿಸುವೆನು ಸಾನವುಗಳೆಲ್ಲವ । ನೊಲಿದು ಕೇಳುತ ನೀನು ಪಟ್ಟಣ । ದೊಳಹುದುತ್ತಮವೆಂದು ನುಡಿದನು ವನದಕಷ್ಟಗಳ ॥ ೩೫ ॥ ಆಡವಿಯೊಳಗಿಹ ಮರಗಳನು ಕಂ । ಡೊಡನೆ ಬಹುಭಯವಹುದು ನೀಂಕೇ । ಳಡಿಗಡಿಗೆ ಕೂಗುವುವು ಹೆಬ್ಬುಲಿ ಸಿಂಗಕರಡಿಗಳು ॥ ಅಡಿಗಳಗೆ ತಗಲುವುವು ಕಲ್ಲುಗ । ಳಡಿಗಡಿಗೆ ಮುಳ್ಳುಗಳು ಚುಚ್ಚುವು । ವೆಡೆಯೊಳದರಿಂವನವೆ ದುಃಖಾಸ್ಪದವೆನಿಪ್ಪುದಲ್ತೆ ॥ ೩೬ ॥ ದಿನದಿನಂಗಳೊಳುಗುಪವಾಸಗ । ಳ ನೆಸಗುತ್ತಿರಬೇಕು ವಲ್ಕಲ । ವ ನುಡಬೇಕೈ ತಂದತಿಥಿಯಭ್ಯಾಗತರುಗಳನು ॥ ಮನದಣಿಯೆ ಸಂತಸವಡಿಸಬೇ । ಕನುದಿನವು ದೇವಾರ್ಚನೆಗಳನು । ಘನಭಕುತಿಯಿಂದೆಸಗಬೇಕಾ ವಿಪಿನಕುಸುಮದಲಿ ॥ ೩೭ ॥ ಮರಗಳಿಂದಲೆ ಬಿದ್ದ ಫಲದೊಳು । ದರದ ಪೋಷಣೆಯಾಗಬೇಕು ತ । ಳಿರುಗಳಿಂದಾಗಿಸಿದ ಹಾಸಿಗೆಯೊಳು ಮಲಗಬೇಕು ॥ ಇರುಳು ನಿದ್ದೆಯನುಳಿದು ನಾವಾ । ಕರಡಿಸಿಂಗಹುಲಿಗಳ ಶಬ್ದವ । ನರಿಯಬೇಕವರಿಂದೆ ಕಷ್ಟವೆನಿಪುದು ವನವಾಸ ॥ ೩೮ ॥ ನದಿಗಳೊಳು ವಸಿಸುತ್ತ ತಪ್ಪದೆ । ನದಿಗಳಂದದೆ ಕುಟಿಲವಾಗಿ ನ । ಡೆವುಬರುತಲಿಹ ಪನ್ನಗಂಗಳು ಮಲಗಿಕೊಂಡಿಪವು ॥ ವಿಧವಿಧದ ವನಪಕ್ಷಿಗಳ ಕರಿ । ನ ದನಿಯಿಂದಾಗುವುದು ಭೀತಿಗ । ಳದರ ದೆಸೆಯಿಂ ಕಷ್ಟವಾಗಿರುತಿಹುದು ವನವಾಸ ॥ ೩೯ ॥ ಇರುವೆ ನೊಣಸೊಳ್ಳೆಗಳು ಕಡಿವುವು । ತರತರದ ನೋವುಗಳನಾಗಿಸು । ತ ರಣಹದ್ದುಗಳಾಗಿಪವು ಕೂಗುತ್ತ ಭೀತಿಯನು ॥ ಪರಿಪರಿಯ ಚೇಳುಗಳು ಹುಳುಗಳು । ನೆರೆದುಕೊಂಡಿಹ ವೆತ್ತ ನೋಡಿದೊ । ಡರಸಿತಿಯೆ ವನವಾಸಮತಿಭೀಕರವೆನಿಸುತಿಹುದು ॥ ೪೦ ॥ ಬಿಸಿಲು ಚಳಿಮಳೆಗಾಳಿಗಳು ಬಾ । ಧಿಸುತಿಹವು ರಾಕ್ಷಸರು ತಾವಾ । ಗಿಸುವ ರೈತಂದವಿಳ ಹಿಂಸೆಗಳನ್ನು

ತಳತೆರದೆ ॥ ಹಸಿದ ಹುಲಿಗಳು ಬಂದ ಜನಗಳ । ನೊಸೆದು ಭಕ್ಷಿಸುತಿಹ
ಗ್ರ ವಾನರ । ವಿಸರಕಾಡಿಸುವುದದರಿಂದತಿದುಃಖ ವನವಾಸ ॥ ೪೧ ॥
ತೆಗಳಧ್ವದೊಳಾಕ್ರಮಿಸಿಹರ । ಡುತಡಿಯಿಡಲಂಜಕೆಯುನಾಗಿಪ್ಪು ।
ತಿಶಯದ ಕತ್ತಲೆಗಳೆಸಗುತ್ತಿಹವು ಭೀತಿಯನು ॥ ಸತತ ಧೈರ್ಯವ
ಡಿಸುತಿಹವಾ । ಪಥದೆ ಗಿರಿಗಳು ಶಿಲೆಗಳದರಿಂ । ದತಿಭಯಂಕರವೆಂದೆ
ಪುದೀ ನೆಲದೆವನವಾಸ ॥ ೪೨ ॥ ರಾಜಭವನದೆ ಬೆಳೆದು ಮಿಥಿಲೆಯ ।
ಾಜನಿಗೆ ಸುತೆಯಾಗಿ ದಶರಥ । ರಾಜನಿಗೆ ಸೊಸೆಯಾಗಿ ಬಹುವಿಧ
ಖ್ಯವೆನುಪಡೆದ । ರಾಜಮಹಿಷಿಯೆ ಕೇಳು ವನದ । ವ್ಯಾಜವನು
ವು ಚಿಂತಿಸದೆ ನೀ । ನೀ ಜನನಿ ಕೌಸಲ್ಯೆಯೊಡನಿಹುದೆಂದ ನಾರಾವು
೪೩ ॥ ಕಷ್ಟಗಳ ಸಂಗತಿಯನಾಲಿಸ । ದಿಷ್ಟ ಪತ್ನಿಯೆ ಕೇಳು
ನಗು । ತ್ಕಷ್ಟವಲ್ಲವು ವಿಪಿನಕೆನ್ನೊಡನೈತಹುದೆನುತ್ತ ॥ ಎಷ್ಟು
ಗೆಯೊಳು ತಿಳುಹುತಿರ್ದೊಡ । ಮಷ್ಟು ಕೊಪ್ಪದೆ ಭೂಮಿಸುತೆ ತ ।
ಷ್ಟವನು ಪೇಳದಳು ರಾಮನ ಚರಣಗಳಪಿಡಿದು ॥ ೪೪ ॥ ಪತಿಯೆ
ಳವನದ ಕಷ್ಟಗ । ಳತಿ ಸುಖಾಸ್ಪದ ವೆಂದೆನಿಸುವುವು । ಪತಿಯ
ಖ್ಯವೆ ಮುಖ್ಯವೆನ್ನುತ ತಿಳಿದಿರುವೆನನಗೆ ॥ ಜತನದಿಂದೋಡುವುದು
ಗವ್ಯಗ । ತತಿಯು ನಮ್ಮನು ಕಂಡು ಹೊಸಬರೆ । ನುತದು ಕಾರಣ
ಂದೆ ಬರುವೆನು ನಿನ್ನೊಡನೆ ವನಕೆ ॥ ೪೫ ॥ ಗುರುಗಳೆಡೆಯೊಳುಬಾಲ್ಯ
ೊಳು ನಾ । ನರಿತಿಹೆನು ಪತಿಯೊಡನೆ ಸಂತತ । ಮಿರುತಿಹುದು ಪ್ರೋ
ವುದು ನೀಸಾತನೆಡೆವಿಡಿದೆನುತ ॥ ಗುರುಗಳಾಜ್ಞಾಪಿಸಿಹರದರಿಂ ।
ರದೆ ನಾನೈತಹೆನು ನಿನ್ನನು । ತೊರೆದಯೋಧ್ಯೆಯೊಳೆಂತು ಒದುಕು
ಸೆಂದಳಾಸೀತೆ ॥ ೪೬ ॥ ನಿನ್ನ ಜತೆಯೊಳು ನಾನಿರುತ್ತಿರೆ । ನನ್ನ
ವರಿಸಲಮರ ನಾಥನಿ । ಗಿನ್ನಸಾಧ್ಯವೆನಿಪುದು ತಿಳಿ ನೀನದನು
ೋಚಿಸುತ ॥ ನಿನ್ನನುಳಿದಾಂ ಬದುಕಲಾರೆನು । ನನ್ನ ಚಿತ್ತದಭೀಷ್ಟ
ನರಿತು । ನನ್ನನೊಡಗೊಂಡಾ ಬನಕೆ ಪೋಗೆನುತಬೇಡಿದಳು ॥ ೪೭ ॥
ತಿಯೆ ನೀನವಧರಿಸು ಬಾಲ್ಯದಿ । ಪಿತನ ಮಂದಿರದೊಳಿರೆ ಭೂಸುರ ।
ತಿಮುದದ ಪೇಳಿಹರು ಕಾಡಿಗೆಪೋಗುವೆಯೆನುತ್ತ ॥ ಪತಿಯೊಡನೆ
ಂ ಪೋಪೆ ಬನಕೆ । ನ್ನುತ ತಿಳುಹಿದಳು ಭಿಕ್ಷುಕೆಯು ಕೇ । ಳ್ಕ್ಷಿತಿಸು
ರನುಡಿ ಸತ್ಯವಾಗಲಿ ಬರುವೆವನಕೆಂದು ॥ ೪೮ ॥ ವಿಹಿತವಾಗಿಹುದಾ
ತ್ರಿಸಹಿತ । ಸಹಗಮನವಾಚರಿಪುದಬಲೆಗೆ । ಮಹಿಯೊಳೆನ್ನುತ ನುಡಿ
ಹರು ಭೂಸುರರು ಮುನಿವರರು ॥ ವಿಹಿತವೃತ್ತಿಯೊಳೆಡೆಬಿಡದೆ

ನಾಂ । ಬಹೆನು ನೆರಳಂತೆ ವನಕೆಂದಾ । ಮಹಿಳೆಪೇಳ್ದಳು ಪಲವು ತೆರದಿಂ ಪೊಳಿವು ಗಂಡನಿಗೆ ॥ ೪೯ ॥ ಆವಮನುಜಗೆ ಪಿತನುತನುಜೆ ಯು । ನೀವನೋ ಮೇದಿನಿಯೊಳಾತನ । ಸಾವನಿತೆ ಸೇವಿಸುತ ಸಂತತ ವಧಿಕಭಕ್ತಿಯುಲಿ । ಸಾವನೈದಿದ ಪತಿಯು ಚಿತಿಯೊಳ । ಗಾವನೋವ ನು ತಾಳದೆ ಮನದೊ । ಳಾವಿಹಿತ ಸಹಗಮನವೊಳ್ಪುದು ವೇದವಿಧಿ ಯುಲ್ತ್ ॥ ೫೦ ॥ ನಿನ್ನ ಕಷ್ಟ ಸುಖಂಗಳೆಲ್ಲವು । ನನ್ನ ಹೊಂದಿಹು ದೆಂದು ತಿಳಿನೀಂ । ನಿನ್ನ ಸುಖದುಃಖಂಗಳಗೆನಾಂ ಬಾಧ್ಯಳಾಗಿಹೆನು ॥ ನನ್ನನಾವನಿಮಿತ್ತದಿಂದುಳಿ । ದಿನ್ನು ಪೋಗುವೆ ಬನಕೆ ನೀಂ ಪೇ । ಳೆನ್ನುತಾ ಧರಣಿಸುತೆ ನುಡಿದಳು ರಾಮನಿಗೆ ಮುಳಿದು ॥ ೫೧ ॥ ಬಿಟ್ಟು ನನ್ನನು ಬನಕೆ ಪೋದೊಡೆ । ನೆಟ್ಟನಗ್ನಿಯೊಳುರುಳುವೆನು ನಾಂ । ಬೆ ಟ್ಟದಿಂ ಧುಮುಕುವೆನು ಭೂಮಿಗೆ ಕುಡಿಯುವೆನು ವಿಷವ ॥ ಪಟ್ಟಣದೊ ಳಾನಿರದೆ ಕೊಳದೊಳು । ಥಟ್ಟನುರುಳುತಲಸುವನೀಗುವೆ । ಕೆಟ್ಟ ಹೆಸರನು ಹೊಂದುತಿಹೆ ನೀನೀ ಧರಣಿತಲದೆ ॥ ೫೨ ॥ ಈತೆರದೊಳಾ ಪತಿಗೆ ಬಹುವಿಧ । ನೀತಿಗಳ ಸಾರವನು ಪೇಳುವ । ಸೀತೆಯನು ಕಾನನಕೆ ಕರೆದೊಯ್ಯಲ್ಕೆ ಮನದೊಳಗೆ ॥ ಆತನೊಪ್ಪದೆ ಪೋಗಲತಿ ರೋ । ಷಾತಿಶಯದಿಂದಾಮಹೀಸುತೆ । ಕಾತರಿಸಿಯುಳುತಿರಲು ಸಂತೈ ಸಿದನು ತರಿದಡವಿ ॥ ೫೩ ॥ ತಿಳಿದು ರಾಮನವಚನಗಳ ನಾ । ಬಳಿಕ ವನವಾಸದನಿಮಿತ್ತದೆ । ನೆಲದಣುಗಿ ಪೇಳಿದಳು ಪುರುಷನ ವೇಷವನು ತಳೆದ ॥ ಲಲನೆ ನೀನೆಂದರಿಯದಿತ್ತನು । ಅಳಿಯನೆನ್ನುತ ಜನಕನೀಪುರ । ದೊಳುತೊರೆದು ಪೋಗಲ್ಕೆ ಭಯವೇಂತಿಳುಹು ಸೀನೆನಗೆ ॥ ೫೪ ॥ ಪತಿಭಕುತಿಯಿಂದೈದೆ ಭೂಮಿಯೊ । ಳತಿ ಜಸವನಾನುತ್ತ ಗಂಡನ । ನತಿ ಹಿತದೊಳನುಸರಿಸಿದಾ ಸಾವಿತ್ರಿಯುಂವದೊಳು ॥ ಕ್ಷಿತಿಯೊಳು ನಿನಗಧೀನವೆನ್ನುತ । ಸತತನೀಂತಿಳಿ ನಿನ್ನನುಳಿದಾ । ನಿತರ ಮಾನವ ರನ್ನು ಮನದೊಳು ಚಿಂತಿಸುವೆಳಲ್ಲ ॥ ೫೫ ॥ ನಿನ್ನೊಡನೆ ಬೆಂಬಿಡಿದೆ ಕೂಡಿ । ರ್ದನ್ನ ಬಹುದಿನದಿಂದ ಸಲಹಿದೆ । ನಿನ್ನ ನಿಜಸತಿಪತಿಪರಾಯ ಣೆಯೆಂದೆನಿಸಿರುತಿಹ ॥ ನನ್ನ ನಿತರರಿಗಿಂದು ಕೊಡಬೇ । ಕೆನ್ನುತಲಪೇ ಕ್ಷಿಸುವುದುಚಿತವೆ । ನಿನ್ನೊಡನಿರುವೆ ಸಗ್ಗದೊಳಗಂತೆ ವನಮಧ್ಯ ದೊಳು ॥ ೫೬ ॥ ನಿನ್ನೊಡನೆ ನಾನಿರುವೆ ತೊರೆದಾಂ । ನಿನ್ನನಿರುವ ವೆಳಲ್ಲರಣ್ಯಕೆ । ನಿನ್ನಹಿಂದೈದುತಿರಲಾಗದು ನನಗೆ ಬಳಲಿಕೆಯು ॥ ನಿನ್ನಸಂಗಡ ವನಕೆ ಬರ್ಪೀ । ನನ್ನ ಕಾಲ್ಗಳಗೊತ್ತುವು ಶಿಲೆಗ ।

ಳನ್ನಿ ಹವು ಮುಳ್ಳುಗಳು ಹಂಸದ ಗರಿಗಳಂದದಲಿ ॥ ೫೭ ॥ ಇರುತಿಹಾ ಮುಳ್ಳುಗಳು ಕಲ್ಲುಗ । ಳು ರಚಿಸದೆ ಬಾಧೆಯನು ಸನ್ನಯ । ಚರಣ ಯುಗಳಕೆ ಹಂಸತೂಲಿಕೆಯಂದದೊಳಗಿಹವು ॥ ಧರಣಿಯಿಂದೇಳುವ ಪರಾಗವು । ವರಸುಗಂಧದ ಪೋಲಿಸುದು ಹು । ಲ್ಲಿರುವುದನಗುತ್ತಮ ಶಯನಕಿಂತಧಿಕವೆಂದೆನಿಸಿ ॥ ೫೮ ॥ ಅಧಿಕವಾಗಲಿ ಕೊಂಚವಾಗಲಿ । ಯುದರಪೋಷಣೆಯಾಗಿಸುವೆನು ವ । ನದೊಳಗಾ ಫಲಕಂದಮೂಲಾಶ ನಗಳಂದೊಲಿದು ॥ ಪದೆದು ನೀನಿತ್ತಪುದೆ ಸಮವೆ । ನಿಪುದು ಸುಧೆಗೆಜನ ನೀಜನಕರನು । ಸನನವನು ಚಿಂತಿಸದೆ ಸಂತಸದೊಳಿಹೆ ನಡವಿಯುಲಿ ॥೫೯॥ ನಿನಗೆ ನಂನ್ನಿಂದಾವ ತೊಂದರೆ । ವನದೊಳಿಂದಿಗುಮಾಗಲಾರದು । ನನಗೆಸಗ್ಗಕೆ ಸಮಮೆನಿಪ್ಪುದು ನಿನ್ನೊಡನಿರುವೆಡೆ ॥ ನನಗೆ ನಿನ್ನನು ಬಿಟ್ಟೆಡೆ ನರಕ । ಮೆನಿಪುದದರಿಂದೆನ್ನ ಚಿತ್ತವ । ನು ನೆರೆನೋಡುತಲಿಂದು ನಡೆಪುದು ವನಕನನ್ನೊಡನೆ ॥ ೬೦ ॥ ನನ್ನನೀಂ ತೊರೆದೆಯ್ದಲಿಲ್ಲಿಯೆ । ನಿನ್ನ ದುಃಖದೆಸಾಯುವೆನು ನಾ । ನಿನ್ನರಿಪುವಶದಲ್ಲಿರೆನುನಾಂ । ಕುಡಿ ವೆಗರಳವೆನು ॥ ನಿನ್ನೊಡನೆ ಸಾಯುವುದೆ ಘನವೆಂ । ದೆನ್ನುತ ಮನ ದಿನಂಬಿಹೆನುನಾಂ । ನಿನ್ನನುಳಿದು ಮುಹೂರ್ತಮಾತ್ರವು ನಿಲ್ಲುವುದೆ ಜೀವ ॥ ೬೧ ॥ ನಿನ್ನನುಳಿದು ಮುಹೂರ್ತಕಾಲವು । ನನ್ನ ಜೀವವಿ ರದು ಪುರದೊಳಂ । ತಿನ್ನಿರಲಿ ಹದಿನಾಲ್ಕಬುದಗಳಕಾಲಪರಿಯಂತ ॥ ಎ ನ್ನುತ ಪತಿಯನಪ್ಪಿಕೊಳ್ಳುತ । ತನ್ನ ಕಣ್ಣೊಳು ಸುರಿಸುತಿದ್ದಳು । ಸ ನ್ನುತಾಂಗಿಯು ಜಲವನಗ್ನಿಯು ನರಣಿಬಿಡುವಂತೆ ॥೬೨॥ ಚಾರುನಯನ ಗಳಂದೆ ರಂಜಿಪ । ನಾರಿಯುಮುಖಸರೋಜವಿದುರ್ದು । ನೀರಿನಿಂದಲೆ ತೆಗೆದು ಬಿಸಲಿನೊಳಿಟ್ಟ ಕಮಲದೊಲು ॥ ಸಾರಸಾಕ್ಷಿಯ ಬಾಡಿದ ಮೊಗವ । ನಾರಘುವರನು ಪರಿಕಿಸುತ್ತಾ । ನೀರೆಯನುತಾನಪ್ಪಿಕೊಳ್ಳು ತ ನುಡಿದನೊಲಿಸುತ್ತ ॥ ೬೩ ॥ ನೀನು ದುಃಖವನ್ನೆದಿ ಚಿಂತಿಸೆ । ನಾನು ಮೆಚ್ಚೆನು ಸಗ್ಗಸುಖವನು । ಕಾನನದೊಳಂತಿರಲಿ ನಿನ್ನನು ಬಿಟ್ಟ ಯೋಧ್ಯೆಯುಲಿ ॥ ಮಾನವನನೆಂತವನ ಕೀರ್ತಿಯ । ದೀನೆಲದೆ ಬಿಡದಿ ರ್ಪುದದರಂ । ತಾನುಪೋಗೆನು ಬಿಟ್ಟನಿನ್ನನು ಸೀತೆಕೇಳೆಂದ ॥ ೬೪ ॥ ಪೊಡವಿಯಾತ್ಮಜೆ ಕೇಳುನೀನೆ । ನ್ನೊಡನೆ ಕಾನನವಾಸಕಾಗಿಯೆ । ಪಡೆದೆಜನ್ಮವ ತಂದೆತಾಯ್ಗಳ ನುಡಿಗಳನು ಕೇಳ್ದು ॥ ನಡೆವ ಮಕ್ಕ ಳಹದೊಳು ಕೀರ್ತಿಯ । ಪಡೆದು ಮರಣಾನಂತರದೆ ತಾ । ವ್ವಡೆವರಾ ಗಂಧರ್ವವಿಧಿಗೋ ದೇವಲೋಕಗಳ ॥ ೬೫ ॥ ಇಂದುಮುಖಿನೀಂ

ತ್ರಿಳಿವುದೆಮ್ಮಯ । ತಂದೆತಾಯ್ಗಳು ನುಡಿದ ವಚನಗ । ಳಂತೆ ನಿನ್ನಯ
ಕೂಡೆ ವಿಪಿನದ ವಾಸವೆಸಗುವೆನು ॥ ಸುಂದರಿಯೆ ನೀನೆನ್ನ ಜತೆಯಲಿ ।
ಬಂದು ವನವಾಸವನೆಸಗಬೇ । ಕೆಂದುದಿಸಿರುವೆ ನನ್ನೊಡನೆ ಬಹುದೆನ್ನು
ತೊಪ್ಪಿಸಿದ ॥ ೬೬ ॥ ನನಗೆನೀಂ ಸಹಧರ್ಮಚಾರಿಣಿ । ಯೆನಿಸಿಕೊಂಡಿಹೆ
ನಿನ್ನತೊರೆವೊಡೆ । ನನಗೆ ರುಚಿಸವು ಸಗ್ಗಸೊಗನೀಂ ಬಂದುನನ್ನೊ
ಡನೆ ॥ ವನದೆವಸನ್ನವಸಗುಕೊಡುವೆ । ದಿವಿಸುರರಿಗೆರತುನಗಳನು
ಭೋ । ಜನವನಾಗಿಸು ಬಿಕ್ಷುಕರಿಗೆಂದುಸುರಿದನು ಸತಿಗೆ ॥ ೬೭ ॥
ಧರಣಿ ದೇವತೆಗಳಿಗೆ ಭೃತ್ಯನಿ । ಕರಕಸೀಂ ಕೊಡುಕಾಂತೆ ಸಕಲಾ ।
ಭರಣಗಳನುತ್ತಮದ ವಸನಗಳನು ಮೇಳೆನಿಪ ॥ ಮೆರೆವಹಾಸಿಗೆಗ
ಳನು ಸುಂದರ । ತರ ಪದಾರ್ಥಗಳನೆನುತ ನುಡಿದ । ನು ರಘುನಂದನನಾ
ಸತಿಗೆ ಸಂತಸದೊಳಂದಿಂತು ॥ ೬೮ ॥ ಇಂತು ನುಡಿದಾಪತಿಯ ಮಾತನು ।
ಸಂತಸದೊಳಾಲಿಸುತ ಪಡೆದ । ತ್ಯಂತಹರುಷವ ನಾಮಹೀಸುತೆ ಕೀರ್ತಿ
ಯುತೆಸೀತೆ ॥ ಅಂತಮಿಲ್ಲದೆ ಕೊಟ್ಟಳು ಮನದೆ । ಚಿಂತಿಸದೆ ಧನಕನ
ಕಮಣಿಗಳ । ಸಂತತಿಯ ನಾಪೂರ್ಣಮನದಿಂದಖಿಳ ಮನುಜರಿಗೆ
॥ ೬೯ ॥ ವನಕೆನಾಂ ಬಹೆನೆನುತ ಲೊಪ್ಪಿಸಿ । ದನುಜ ಲಕ್ಷ್ಮಣ ಸಹಿತ
ತಂದೆಯ । ಮನೆಗೆ ಪೋಗುವ ರಾಘವನಹಿಂದಾ ಮಹೀಸುತೆಯು ॥
ಮನವಸಂತಸದಿಂದೆ ಪೋದಳು । ವನಿತೆಯರೊಳೆಣೆಯಾರು ಜಾನಕಿ ।
ಗೆನಲು ಮಾವನಮನೆಗೆ ವನವಾಸದ ಕುತೂಹಲದಿ ॥ ೭೦ ॥ ನಮಿಸಿ
ತಂದೆಯುಪದಕೆಪೋಗುವೆ । ನು ಮಡದಿವೆರಸಿ ಕಾನನಕೆನಾಂ । ನಮಗ
ನುಜ್ಞೆಯನುಕೊಡು ಲಕ್ಷ್ಮಣ ಬರುವನೆಮ್ಮೊಡನೆ ॥ ತಮಗೆ ಚಿಂತೆ
ಯು ಬೇಡವಿಪಿನದೊ । ಳು ಮುನಿವೇಷವನಾಂತಿರುವೆನೆ । ನ್ನ ಮನಕಿ
ಲ್ಲವು ದುಃಖವೆನ್ನುತ ನುಡಿದನಾರಾಮ ॥ ೭೧ ॥

ಇಂತು ಎಂಟನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೪೦೧.



## ಒಂಭತ್ತನೆಯ ಅಧ್ಯಾಯ.

ಸೂಚನೆ ॥ ಚಿತ್ರಕೂಟಾಚಲದೊಳಿದ್ದ ಧ ।
ರಿತ್ರಿಯಾತ್ಮಜೆ ರಘುವರನೊಡನೆ ।
ಯತ್ರಿಮುನಿಯಾಶ್ರಮಕೆ ಬಂದಳು ಖೇದವನುತೊರೆದು ॥

ನೆರೆದುಸೇರಿದ ಜನರಮಧ್ಯದೊ । ಳರದೆ ಕೊಟ್ಟಳು ನಾಕು

ಮಡಿಗಳ । ನು ರಘುಪತಿಗಾಕ್ಷೈಕೆ ಲಜ್ಜೆಯನುಳಿದು ಚಿತ್ತದೊಳು ॥ ಧರಿಸಿ ರಾಮನು ಧರಣಿಜಾತೆಯು । ಕರದೊಳಿತ್ತನು ನಾರುಸೀರೆಯ । ಪರಿಪರಿಬಗೆಯೊಳಂದು ಬೈದರು ಜನರು ಕೈಕೆಯನು । ೧ ॥ ತಡೆಯ ಲಾರದೆ ಮನದದುಃಖವ । ನೊಡನೆಬಿದ್ದನು ಮೂರ್ಛೆಯಿಂದಾ । ಪೊಡವಿ ಪಾಲಕ ದಶರಥನು ನೋಡುತಿರೆ ಸಕಲಜನ ॥ ಕಡುಭರದೊಳಾರಾಮ ನೈತಂ ದೊಡಲಿಗೀಯುತ ಹಿಮಜಲವ ತಾ । ನಡಿಗಡಿಗೆ ಬೀಸುತ್ತಿರೆ ತಿಳಿದನು ಕೂಡೆಮೂರ್ಛೆಯನು ॥ ೨ ॥ ಕುಲವಿಘಾತಕಿ ಕೈಕೆನೀಂರ ವಿ । ಕುಲಕೆ ಮೃತ್ಯುವಿನಂತೆ ಬಂದೆ ಹೆ । ಕೆಲಕೆ ಸಾರಿಳಿಸುತೆ ಸಮ್ಮತ ವಲ್ಲ ನಾರುಮಡಿ । ಛಲಮಿದೇಕೆನುತಾ ವಸಿಷ್ಠನು । ಮುಳಿದು ಬೈಯ್ದು ಕೊಡಿಸಿದನಿಳಿಸುತೆ । ಗೊಲಿದು ದಶರಥನಿಂದೆ ಮೇಲೆನಿಪುಡಿಗೆ ತೊಡಿ ಗೆಗಳ ॥ ೩ ॥ ಪೇಳಿದನುಭೂಪತಿ ಸುಮಂತ್ರಿಗೆ । ತಾಳಲಾರದೆ ಮನದ ದುಃಖವ । ಕೇಳುತಿರೆ ರೋದಿಸುತ ತನ್ನಯ ರಾಣಿಯರ ನಿಬರು ॥ ಮೇಲೆನಿಪ ರಥದಲ್ಲಿ ಕೂಡಿಸಿ । ಹೇಳುವೆಡೆಬಿಟ್ಟೈತಹುದು ಗಿರಿ । ಜಾಲ ದಿಂದೆಸೆವಡವಿಯೊಳು ರಾಮನನು ನೀನೆನುತ ॥ ೪ ॥ ಪತಿಯೊಡನೆ ವನ ಕೈದುತಿಹ ಭೂ । ಸುತೆಗೆ ಕೊಟ್ಟನು ಪದೆದು ಧರಣೀ । ಪತಿ ದಶರಥ ನು ಮೇಲೆನಿಪರತ್ನಾಭರಣಗಳನು ॥ ಅತಿಮನೋಹರ ಮೆನಿಪುಡಿಗೆ ಗಳ । ನು ತರಿಸಿತ್ತನು ಮತ್ತೆ ಮನದೊಳು । ವಿತತದುಃಖವನಾಂತು ರೋದಿಸುತಧಿಕ ಚಿಂತೆಯಲಿ ॥ ೫ ॥ ಜವದೊಳೋಡುವ ಕುದುರೆಗಳ ನಾಂ । ತವರ ರಥವನು ತಂದುನಿಲಿಸೆ ಸ । ಚಿವನು ಮಂದಿರದಿದಿರೊಳಾ ಸೌಮಿತ್ರಿಸತಿಸಹಿತ ॥ ರವಿಕುಲೋತ್ತಮ ರಾಘವನದಕೆ । ತವಕದಿಂದೆರ ಗುತ್ತಲೇರಿದ । ನವನಿಪನೊಡನೆ ರೋದಿಸಿದರಾ ಪುರದಮಾನವರು ॥ ೬ ॥ ಮೇದಿನೀಸುತೆ ಸೀತೆರಥದೊಳು । ಮೈದುನನೊಡನೆ ಪತಿಯು ಬಳಿಯೊಳು । ಗೈದೆ ಕುಳ್ಳಿರಲಾಸುಮಂತ್ರನು ರಾಮನಭಿಮತವ ॥ ಸಾದರದೊಳಾಲಿಸುತ ಕಾನನ । ಕಾದಿನವೆ ನಡಿಸಿದನು ರಥವನು । ಮೋ ದದಿಂದೈದಿದರು ತಮಸಾನದಿಯ ತೀರವನು ॥ ೭ ॥ ಮಡದಿತಮ್ಮಂದಿರ ವೆರಸಿಕಾ । ರಡವಿಗೈದಿದ ರಾಮನನರಿದು । ಜಿಡದೆ ರೋದಿಸುತಿದ್ದರೆಲ್ಲರು ಕೆಲಸಗಳನುಳಿದು ॥ ಮಡದಿಗಂಡನ ನೊಲಿಸದಿರ್ದಳು । ಕೊಡದೆ ಪೋದಳು ಹಾಲನೆಳೆಯನಿ । ಗೊಡಲೊಳಡಿದತಿದುಃಖದಿಂದಾ ವನಿತೆ ಭವನದೊಳು ॥ ೮ ॥ ಇರುತ ತಮಸಾನದಿಯ ತೀರದೊ । ಳೆರಡನೆಯ ದಿನ ಶೃಂಗಿಬೇರನ । ಗರಕೆ ಬರಲಾಗುಹನು ನಡೆತಂದೆರಗಿರಾಘವನ ॥

ಚರಣಪಂಕಜಕಂದುಕೊಟ್ಟನ । ವರಿಗೆ ರಾಜಾರ್ಷ್ಯವೆನಿಪುತ್ತವು ।
ತರವ ಸಘೆಸ್ಸೀಜನವ ಕೇಳುತ ಕುಶಲವಾರ್ತೆಯನು ॥ ೯ ॥ ಸಲೀದಿ
ದಾಹಾರವನೆಸಗಿ । ತಳೆದು ರಾಘವನಲ್ಲಿ ಜಡೆಗಳ । ನೊಲಿದು ಗುಹನಿಂತ
ರಿಸಿನಾವೆಯನಾಗಸಂತಸದಿ ॥ ಕುಳಿತು ಲಕ್ಷ್ಮಣ ಸೀತೆಯರೊಡನೆ ।
ಬಳಿಕ ಪುರಕ್ಕೈದಲು ಸುಮಂತ್ರನಿ । ಗೊಲಿದುಸುರಿ ತಾನಾಗಿಸಿದ ಗಂಗೆ
ಯೊಳು ಪಯಣವನು ॥ ೧೦ ॥ ದೇವಗಂಗಾನದಿಯೊಳೈದುತ । ಭೂವ
ನಿತೆ ಬೇಡಿದಳು ಜಾಹ್ನವಿ । ದೇವಿನೀಂಪತಿ ಲಕ್ಷ್ಮಣರ ಸಹಿತೆನ್ನನಿಂ
ದೊಲಿದು ॥ ನಾವೆಯಿಂದಾ ದಡವನೈದಿಸ । ಲೀ ವಿಪಿನವಾಸವನು ತೀರಿಸಿ ।
ನಾವು ಪುರವನು ಸೇರ್ದಬಳಿಕೊಲಿದರ್ಚಿಸುವೆನೆನುತ ॥ ೧೧ ॥ ಒಂದು
ಸಾವಿರ ಹೆಂಡಗಡಿಗೆಗ । ಳಿಂದೆ ನಿನ್ನನು ತೃಪ್ತಿಪಡಿಸುವೆ । ನೊಂದು
ಲಕ್ಷದ ದನಗಳನು ನಾನೀವೆವಿಪ್ರರಿಗೆ ॥ ವಂದಿರದೆ ಪ್ರ್ಯಷ್ಟಾನ್ನ
ಪಾನಗ । ಳಿಂದವರ ನಾದರಿಪೆ ಮಾಂಸಗ । ಳಿಂದೆ ಭೂತಬಲಿಯನು
ಮಾಡುತ ನಿನ್ನ ಪೂಜಿಸುವೆ ॥ ೧೨ ॥ ಎನುತ ಗಂಗೆಗೆ ಕೈಮುಗಿದು
ಮೇ । ದಿನಿಯಣುಗಿ ಭಕ್ತಿಯಲಿ ಜಾನಿಸಿ । ಮನದೆ ಭಾಗೀರಥಿಯ ಸಂ
ಸ್ತುತಿಸುತ್ತಿರೆ ಪಲತೆರದಿ ॥ ಅನಿತರೊಳು ದಕ್ಷಿಣದ ತೀರಕೆ । ಜನಕ
ಸುತೆ ಸೌಮಿತ್ರಿ ರಘುನಂ । ದನರ ನೈದಿಸಿ ತೀಕ್ಷ್ಣರಿಯನಾಗಿಸುತ
ಲಾಗಾವೆ ॥ ೧೩ ॥ ನಾವೆ ಯಿಂದಿಳಿದೈದಿವರೊಲಿದು । ಮೂವರಾಲದ
ವೃಕ್ಷವನು ಸಂ । ಭಾವಿಸುತಲಿದ್ದರು ವಿಲೋಕಿಸಿ ವನವಿನೋದಗಳ ॥
ತಾವು ತಳೆದಾರಾತ್ರಿಯನಿರದೆ । ಸಾವಕಾಶವನುಳಿದು ಪೋದರು । ಠೀವಿ
ಯಿಂದಾ ಮುನಿವರ ಭರದ್ವಾಜನಾಶ್ರಮಕೆ ॥ ೧೪ ॥ ನಡೆತರುತ ಸೌಮಿ
ತ್ರಿಸತಿಸಹ । ತಡವಿಯೊಳು ರಾಘವನು ಮುನಿವರ । ನಡಿಗಳಿಗೆರಗಿ
ಬಿನ್ನವಿಸಿವನು ಪರಮಭಕ್ತಿಯಲಿ ॥ ಪೊಡವಿಯಾತ್ಮಜೆ ಈಕೆನನ್ನಯ ।
ಮಡದಿ ಲಕ್ಷ್ಮಣನೆನ್ನ ತಮ್ಮನು । ಅಡವಿಯೊಳು ವಾಸಿಪೆವು ತಂದೆಯ
ನೇಮದಿಂದೆನುತ ॥ ೧೫ ॥ ಮುನಿಪತಿಭರದ್ವಾಜ ನಾರಾ । ಮನನು
ಕೂಡಿಸಿ ಯುಚಿತ ಪೀಠದೊ । ಳು ನಲವಿಂದಾ ಸೀತೆ ಲಕ್ಷ್ಮಣರೊಡನೆ
ಹರ್ಷದಲಿ ॥ ವನದೊಳುತ್ತಮಮುನಿಪ ವಸ್ತುಗ । ಳನು ತರಿಸಿ ಭೋಜ
ನವನಾಗಿಸಿ । ದನು ಕಳೆವರವರಲ್ಲಿ ಸಂತಸದಿಂದೆ ರಾತ್ರಿಯನು ॥ ೧೬ ॥
ಉದಯಕಾಲದೊಳೆದ್ದು ರಾಮನು । ಸುದತಿ ಲಕ್ಷ್ಮಣರಿಂದೆ ಮುನಿಪನ ।
ಪದಕೆರಗುತಲ್ಲಿಂದೆ ಪೋದನು ಮುನಿಪನಾಜ್ಞೆಯಲಿ ॥ ಪದುಳದಿಂದಾ ಬ
ನದೊಳೈತರು । ತಧಿಕ ಸಂತಸದಿಂದೆ ಯಮುನಾ । ನದಿಯ ತೀರವ

ನೈದಿದರು ನೋಡುತ್ತವನ ಸಿರಿಯ ॥ ೧೭ ॥ ಕಟ್ಟಿ ತೆಪ್ಪವನೆಂದು
ಮೂವರು । ನೆಟ್ಟನದರೊಳು ಕುಳಿತು ಪೋದರು । ಕಟ್ಟಿಗೆಗಳಿಂ
ನಡಿಸುತಲಿ ತೆಪ್ಪವನು ನೀರಿನೊಳು ॥ ಥಟ್ಟನೆಮ್ಮನು ತೆಂಕಣಾದ
ಡವ । ಮುಟ್ಟೆ ಸೌಯುಮುನಾಂಬೆ ನಿನಗಾಂ । ಕೊಟ್ಟೆ ಪೂಜೆಯ
ಮಾಳ್ಪೆ ಘನಶತ ಮದ್ಯಕುಂಭಗಳ ॥ ೧೮ ॥ ಎಂದು ಜಾನಕಿ ಮಣಿದೆ
ರಗಿ ಕಾ । ಳಿಂದಿಯನು ಬೇಡುತ್ತಿರೆ ಚಿತ್ತದೊ । ಳೆಂದು ತೆಂಕಣ
ದಡವನೈದಿದರೊಂದು ನಿಮಿಷದಲಿ ॥ ಮುಂದೆ ವಿಪಿನದೊಳೈತರುತ
ರಘು । ನಂದನನು ಸತಿಸೋದರರ ಸಹ ಬಂದು ಹೊಕ್ಕನು ಭರದೊ
ಳಾನ್ಯಗ್ರೋಧ ವೃಕ್ಷವನು ॥ ೧೯ ॥ ಕಳೆದುರಾತ್ರಿಯನಲ್ಲಿ ಪೋದರು । ಬೆ
ಳಗಿನಾಜಾವದೊಳಗಾ ಮುನಿ । ತಿಳುಹಿದಂತಾವನದೆ ನೋಡುತ ಮುಂ
ದೆ ಕೌತುಕವ ॥ ಹಲವುವಿಧ ಮೃಗಪಕ್ಷಿ ವರ್ಗವ । ತಳೆದು ರಂಜಿಪ
ಚಿತ್ರಕೂಟವ । ಬಳಿಯೊಳಿಹ ವಾಲ್ಮೀಕಿ ಮುನಿಯಾಶ್ರಮವ ನೈದಿದ
ರು ॥ ೨೦ ॥ ನಮಿಸಿ ವಾಲ್ಮೀಕಿಮುನಿಪದ ಯುಗ । ಕಮಿತಮೋದವ
ನಾಂತವರು ನೆರೆ । ಸಮುಚಿತಾಸನಗಳೊಳು ಮಂಡಿಸಿದರು ತದಾಜ್ಞೆ
ಯಲಿ ॥ ತಮಗೊದವಿದಾ ವಿಪಿನವಾಸ । ಕ್ರಮವ ಮೊದಲಿಂದರುಹಿ
ಯುಚಿತದ । ಸಮಯದೊಳು ಕೈಕೊಂಡರಾ ಮುನಿಯಿಂದೆ ಭೋಜನ
ವ ॥ ೨೧ ॥ ಬಳಿಕ ವಾಲ್ಮೀಕಿ ಮುನಿಪಾಲನ । ಬಳಿಯೊಳಾ ಸೌಮಿತ್ರಿ
ಯಿಂದಂ । ದೆಳೆ ಮನೆಯನಾಗಿಸಿದನಾ ರಘುವರನು ಶೀಘ್ರದಲಿ ॥ ಹೊಳೆವ
ಮಂದಾಕಿನಿಯ ದಡದೊಳು । ಸಲೆಮನೋಹರವಾಗಿ ಸೀತಾ । ಲಲನೆ
ಗರಿಯೆ ವಿಹಾರಯೋಗ್ಯವದೆನಿಸಿ ರಾಜಿಸಿತು ॥ ೨೨ ॥ ಕೊಂದು
ಮೃಗವನು ಶಾಸ್ತ್ರಸಮ್ಮತಿ । ಯಿಂದೆ ಶಾಲೆಗೆ ಶಾಂತಿಗೈಯುತ । ಚಂದ
ದಿಂದಲೆ ಭೂತಬಲಿಯನು ಕೊಟ್ಟರಾಘವನು ॥ ಬಂದು ಹೊಕ್ಕನು ಸತಿ
ಸಹೋದರ । ರಿಂದೆ ಪರ್ಣಶಾಲೆಯನವರುಳದ । ರಂದು ಪಟ್ಟಣದಿಂದೆ
ಬನಕೈತಂದ ಖೇದವನು ॥ ೨೩ ॥ ಸೀತೆಪತಿ ಲಕ್ಷ್ಮಣರಸಹಿತ ಮು ।
ಹಾತಪೋಧನನಾಶ್ರಮಬಳಿಯೊ । ಳೀತೆರದೊಳಿರುತಿದ್ದಳೀಕ್ಷಿಸುತ ವನವಿ
ಭವಗಳ । ಪ್ರೀತಿಯಿಂದಾ ಪತಿಯಸಂಗಡ । ಮಾತನಾಡುತ ಬಂದಳಾ
ನಂ । ದಾತಿಶಯದೊಳು ಚಿತ್ರಕೂಟಗಿರೀಂದ್ರಕೊಂದುದಿನ ॥ ೨೪ ॥
ನೋಡು ಜಾನಕಿ ಚಿತ್ರಕೂಟವು । ನಾಡೆ ಕಂಗೊಳಿಸುವುದು ಬಗೆಬಗೆ ।
ಕೋಡುಗಲ್ಲುಗಳಾ ಗಗನಮಂಡಲವ ಮುಟ್ಟುಹವು ॥ ಬೀಡುಗೊಂಡಿಹ
ವಖಿಳ ಮೃಗಗಳು । ಕೋಡಗಗಳೆಲ್ಲೆಡೆಯೊಳೆಸೆವುವು । ನೋಡಲೀಗಿರಿ

ಗಂಧಮಾದನಕೆಣೆಯೆನಿಪುದಲ್ತೆ ॥ ೨೫ ॥ ಧರಿಸಿ ದಂಬರದಂತೆಸೆವುದಂ । ಬರವುಹಾರಗಳಂದದಿಂದುರೆ । ಮೆರೆವುವು ಝರಿಗಳೆಲ್ಲ ಮೇಖಲೆಯಂತೆ ಕೋಟೆಯಿದು ॥ ನೆರೆವಿರಾಜಿಸುತಿಹುದು ಕಲಶದ । ತೆರದೊಳೀ ಶಿಖರಂಗಳೊಪ್ಪುವು । ವು ರಮಣೀಯಕಮೆನಿಸಿಕೊಂಡಿಹುದಿದರ ಸೌಂದರ‍್ಯ ॥ ೨೬ ॥ ಮುಸಿಗಳೈತಂದಾಚರಿಸುವರು । ಘನತಪಂಗಳನಿಲ್ಲಿ ಮಂದಾ । ಕಿನಿಯು ಕಂಗೊಳಿಸುವುದು ಸಿಂಹವ್ಯಾಘ್ರ ಋಕ್ಷಗಳು ॥ ಜನಗಳಿಗೆ ಭೀತಿಯನು ಮಾಡುವು । ವು ನೆಲಸಿರ್ಪುದು ಪನ್ನಗನಿವಹ । ಮೆನುತ ರಾಘವ ನಾವುಹೀಸುತ್ತೆಗಂದು ಪೇಳಿದನು ॥ ೨೭ ॥ ಸಮಗೆಯೋಧ್ಯಾನಗರದಂತಿಹು । ದು ಮನಕೀಪರ ಚಿತ್ರಕೂಟವು । ವಿಮಲಮಂದಾಕಿನಿಯು ಸರಯುವಿನಂತೆ ರಂಜಿಪುದು ಸಮನಿಸಿದರಾಜ್ಯಾರ್ಹವೆಂದೆನಿ । ಪ ಮಳಭೋಜನದಂತೆ ತೋರ್ಪುವು । ವಿಮಲಫಲಗಳು ಕಂದಮೂಲಂಗಳೆ ಮಗದ್ರಿಯೊಳು ॥ ೨೮ ॥ ಮಡದಿ ಲಕ್ಷ್ಮಣರಿಂದೆ ರಾಘವ । ನಡವಿಯೊಳು ತಾನಿಂತಿರುತ್ತಿರೆ । ಪೊಡವಿಪಾಲಕ ದಶರಥನು ರಘುನಂದನನಗಲಿದ ॥ ಬಡಲಮುಖವತಿ ಮರಣವೈದಿದ । ನೊಡನೆ ಭರತನು ಬಂದಯೋಧ್ಯೆಗೆ । ಕಡುಭಕುತಿಯಿಂದಪರಕರ್ಮಂಗಳನು ಮಾಡಿದನು ॥ ೨೯ ॥ ಅರಸನಾಗಲು ತಾನೊಡಂಬಡ । ದೆ ರಘುನಂದನನಡವಿಯಿಂ ದೀ । ಪುರಕೆ ಕರೆತಂದೀವೆ ನಾತನಿಗೀ ಧರೆತ್ತನವನು ॥ ಭರದೊಳನುತಾ ಭರತನೊಪ್ಪಿಸಿ । ಗುರುವಸಿಷ್ಠಾದಿಗಳನಂದಾ । ಪುರದ ಮಾನವರೆಲ್ಲರವೆರಸಿ ಬಂದನಾಗಿರಿಗೆ ॥ ೩೦ ॥ ಬರುತ ಗುಹನಿಂದರಿತು ರಾಮನ । ಪರಿಯನತಿದುಃಖಾತಿಶಯದಿಂ । ದಿರದೆ ಜಡೆಗಳ ತಾಳುತಲ್ಲಿಂದೈತರುತ ವನದಿ ॥ ವರಭರದ್ವಾಜಮುನಿಗೆ ನಮಿಸಿ । ಭರತನಾವರ ಚಿತ್ರಕೂಟಕೆ । ಭರದೊಳೈತಂದೆರಗಿದನು ರಾಘವನ ಪದಯುಗಕ ॥ ೩೧ ॥ ಪರಸಿರಾಘವನಾ ಭರತನಂ । ಕರುಣದಿಂ ದೀಕ್ಷಿಸುತ ಸಲೆಕು । ಳ್ಳಿರಿಸಿ ತನ್ನ ತೊಡೆಯೊಳು ಮನ್ನಣೆಗೈದು ಲಾಲಿಸುತ ॥ ಪುರದೊಳೆಲ್ಲರು ಕುಶಲದಿಂದಿರು । ವರೆ ಕುಶಲದಿಂದಿಹನೆ ತಂದೆಯು । ಮೆರೆವುವೇ ಪುರದೇಶಕೋಶವೆನುತ್ತ ಕೇಳಿದನು ॥ ೩೨ ॥ ನಮಿಸಿ ರಾಮನಚರಣಕೆ ಭರತ । ನ ಮಲಮತಿಯಿಂದಂದು ಪೇಳಿದ । ನು ಮರುಗದೆ ಸತಿ ಸೋದರರೊಡನೆ ವನಕೆ ನೀಂಬರಲು ॥ ಸಮನಿಸಿದ ದುಃಖಾತಿಶಯದಿಂ । ದೆ ಮನುಜಾಧಿಪನೈದಿದನು ತಾ । ನಮರ ಲೋಕವ ನೆಸಗುನೀನವಗ ಪರಕರ್ಮವನು ॥ ೩೩ ॥ ನಿನ್ನನೆಕುರಿತು ಮನದೆಶೋಚಿಸಿ । ನಿನ್ನ ನೋಡುವ ಬಯಕೆಯಿಂದಲೆ । ನಿನ್ನೊಳಗೆ ಮನವಿಟ್ಟು ನೆನೆಯುತ

ನಿನ್ನನನುದಿನವು ॥ ನಿನ್ನನಗಲುತ ನಿನ್ನ ದುಃಖದೊಳನ್ನೆಗಂ ಮುಳು
ಗುತ್ತ ಸಂತತ । ನಿನ್ನನೆನೆಯುತ ಸತ್ತನಿನ್ನಯ ತಂದೆ ದಶರಥನು
॥ ೩೪ ॥ ಕಡಿವಗಿಡದಂತಿಳೆಗೆತಾಂಬಿ । ದ್ದೊಡನೆ ಮೂರ್ಛೆಯನೈದಿ
ರಾಘವ । ನೊಡಲದುಃಖಾತಿಶಯದಿಂ ದಡಿಗಡಿಗೆ ಬಿಸುಸುಯ್ದು ॥ ಕಡೆಗೆ
ಪ್ರಜ್ಞೆಯನೈದಿ ಬಂದನು । ಮಡದಿ ಲಕ್ಷ್ಮಣರಿಂದೆ ತಂದೆಗೆ । ನಡಿಸಲುತ್ತ
ರಕ್ರಿಯೆಗಳನು ಮಂದಾಕಿನೀತಟಕೆ ॥ ೩೫ ॥ ಮಿಂದುಮಂದಾಕಿನಿಯೊಳಾ
ರಘು । ನಂದನನು ರೋದಿಸುತ ಕೊಟ್ಟನು । ತಂದೆಗೆ ತಿಲೋದಕವ
ನಾವೇದೋಕ್ತವಿಧಿಯೊಳಗೆ ॥ ತಂದಗಾರೆಯ ಹಿಟ್ಟನೊಳು ತಾ । ನಂದು
ಪಿಂಡಂಗಳನೆಸಗಿ ಕರ । ದಿಂದೆ ಹಾಸಿದ ದರ್ಭೆಯೊಳಿರಿಸಿದನಧಿಕ
ಭಕ್ತಿಯಲಿ ॥ ೩೬ ॥ ಹರಿವ ಮಂದಾಕಿನಿಯ ತೀರದೊ । ಳು ರಘುನಂ
ದನನಿರದೆ ತಂದೆಗ । ಪರದ ಕರ್ಮಂಗಳನು ಮಾಡಿ ಕುಟೀರಕೈತಂದು ॥
ಭರತನಂ ತೊಡೆಯಲ್ಲಿತಾಂ ಕು । ಳ್ಳಿರಿಸಿ ಕೇಳಿದ ನೇತಕೀಮನು ।
ಜರ ನೆರವಿಯಿಂದೀ ಗಿರೀಂದ್ರಕೆ ಬಂದೆ ನೀನೆನುತ ॥ ೩೭ ॥ ಪಿಡಿದು
ರಾಮನ ಪಾದಕಮಲವ । ನೊಡನೆ ಬಿನ್ನೈಸಿದನು ಧಾರುಣಿ । ಯೊಡೆ
ತನವು ಬೇಡೆನಗೆ ನೀನಂಗೀಕರಿಪುದಿಂದು ॥ ಮಡದಿಮಾತನು ಕೇಳ್ದು
ತಂದೆಯು । ನುಡಿದನೀಪರಿ ಭಾನುವಂಶದೊ । ಳೊಡೆಯನಾಗುವನ
ಣ್ಣನೆನ್ನುತ ನುಡಿದನಾಭರತ ॥ ೩೮ ॥ ನನಗರಸುತನ ಬೇಡವೆನದಿಂ ।
ದ ನಗರಿಗೆ ನಡೆತಂದು ಪಾಲಿಸ । ವನಿಯನೀಂ ವಿಪರೀತ ನಡೆದುದು
ಕೈಕೆಯುಕ್ತಿಯಲಿ ॥ ವನಕೆ ನೀನೈತಂದೆ ಮಡಿದನು । ಮನುಜಪಾಲಕ
ನಾಯ್ತುನಿನಗೀ । ಘನಮನೋವ್ಯಥೆಯೆನುತ ಪೇಳ್ದನು ಭರತಗೋ
ಳಡುತ ॥ ೩೯ । ಅಡವಿಯಿಂದೈತಂದಯೋಧ್ಯೆಗೆ । ಪೊಡವಿಯನು ಪಾಲಿ
ಪುದು ನಿನ್ನನು । ಬಿಡೆನು ನೀನೆನಗೊಲಿವವರೆಗೀ ವಿಪಿನದೊಳು ನಾನು ॥
ಕಡುಭಯಂಕರ ತಪವನಾಗಿಸು । ತಡವಿಯೊಳಗಾಂ ವಸಿಪೆ ನೆಂದೆನು ।
ತೊಡನೆ ರಾಮನಿಗೆಂದು ಬಿನ್ನಹಮಾಡಿದನು ಭರತ ॥ ೪೦ ॥ ಎನಲು
ರಾಘವನಾಭರತನನು । ಜನಸಮೂಹದೊಳಂದೊಡಂಬಡಿ । ಸಿ ನಿಜಪಾ
ದುಕೆಗಳನು ಕೊಟ್ಟು ಕರುಣಿಸಿ ಮನ್ನಿಸುತ ॥ ಜನಕ ನಪ್ಪಣೆಯಂತೆ
ನಾನೀ । ವನದೊಳಗೆ ಹದಿನಾಲ್ಕುವರುಸದ । ತನಕ ವಾಸಿಸಿ ಬರುವೆನೀಂ
ಪೋಗೆನುತ ಪೇಳಿದನು ॥ ೪೧ ॥ ನೀನು ಹದಿನಾಲ್ಕಬುದದನ್ನಂ । ಕಾನನ
ದೊಳಿದ್ದಾಬಳಿಕ ಯೋ । ಧ್ಯಾನಗರಕೈತರದಿರಲು ಕಂಡವಧಿಪರ್ಯಂತ ।
ನಾನುಬೀಳುವೆ ನಗ್ನಿಯೊಳಗೆಂ । ದಾ ನೆರೆದ ಜನಮಧ್ಯದೊಳುಸುರಿ ।

ಮೌನವರನೊಡಗೊಂಡು ಪುರಕೈತಂದನಾಭರತ ‖ ೪೨ ‖ ಬಂದಯೋಧ್ಯಾಪುರಿಗೆತಾಂ ಮನ | ನೊಂದು ಕಾಂತಿವಿಹೀನವಾಗುತ | ತಂದೆರಾಘವೆರಿಲ್ಲದಾ ಪುರಪನು ವಿಲೋಕಿಸುತ ‖ ಅಂದು ದುಃಖವ ತಾಳಲಾರದೆ | ನಂದಿಗ್ರಾಮಕೆ ಬಂದು ವರರಘು | ನಂದನನ ಬರುವಿಕೆಯ ನೀಕ್ಷಿಸುತಿದ್ದ ನಾಭರತ ‖ ೪೪ ‖ ಪಾದುಕೆಗಳನು ಪೂಜಿಸುತ ಪರ | ಮಾದರಗೊಳು ಭರತನನುಜನ | ವೈದೆತಾಂ ನಡಿಸಿದನು ರಾಜ್ಯವಿಚಾರವೆಲ್ಲವನು | ಆವಿಯಿಂದವ ಕೊಪ್ಪಿಸುತರಾ | ಮಾದಿಗಳ ಬರುವಿಕೆಯ ನೀಕ್ಷಿಸು | ತಾದರಣೆಯಿಂ ಸಲಹುತ್ತಿದ್ದನು ಸಕಲ ಮಾನವರ ‖ ೪೩ ‖ ನಗರದ ಸಮೀಪದೊಳಗಿಹುದೀ | ನಗವು ಬಂದನು ಭರತನಿಲ್ಲಿಗೆ | ಪಗಲಿರುಳೊಳೈತರುವರಾ ಪುರದಖಿಳಮಾನವರು ‖ ಸೊಗಸದಿಲ್ಲಿಹುದೆನುತ ಮನದೊಳು | ಬಗೆದು ಜಾನಕಿ ಲಕ್ಷ್ಮಣರೊಡನೆ | ನಗುತರಾಘವನಂದು ಪೇಳ್ದನು ಮನದ ಯೋಚನೆಯ ‖ ೪೫ ‖ ಬಳಕ ತಾಪಸರೈದಿ ರಾಮನ | ಬಳಿಗೆ ಪೇಳ್ದರೊಟ್ಟುಗೂಡುತ | ತಿಳಿವುದೆಲೆರಾಘವನೆ ನಡೆತಂದಖಿಳರಾಕ್ಷಸರು ‖ ತಿಳಿವು ನಾನಾಚರಿಸುವ ತಪಂ | ಗಳನು ಕೆಡಿಸುತ ಹಿಂಸೆಗೈವರು | ತಳುವದೈತಂದವರ ಬಾಧೆಯ ಹರಿಸು ನೀನೆನುತ ‖ ೪೬ ‖ ಬರುತ ಮುನಿಗಳಸಹಿತ ಮಾರ್ಗದೊ | ಳರಸಿ ಲಕ್ಷ್ಮಣ ವೆರಸುತಾ ರಘು | ವರನು ಕಂಡನು ಕಂಗೊಳಿಸುವತ್ರಿಮುನಿಯಾಶ್ರಮವ ‖ ಪರಮಭಕ್ತಿಯೊಳಾ ಮುನೀಂದ್ರನ | ಚರಣಕಮಲಂಗಳಿಗೆರಗಿ ಸಾ | ದರದೊಳಂದರುಹಿದನು ವನಕೈತಂದ ಸಂಗತಿಯ ‖ ೪೭ ‖ ತನಯನಂತೀಕ್ಷಿಸುತ ರಾಘವ | ನನು ಪದುಮನ್ನಿಸುತ ಅತ್ರಿಮು | ನಿನೆರೆಸಮುಚಿತ ಪೀಠದೊಳು ಕೂಡಿಸುತವರುಗಳನು ‖ ಮನವೊಲಿಯೆ ಭೋಜನವನಾಗಿಸಿ | ಜನಕಜಾತೆಯನಾಗಲೆ ಕಳುಹಿ | ದ ನನಸೂಯಾದೇವಿಯಬಳಿಗೆ ತಾನುಸತ್ಕರಿಸಿ ‖ ೪೮ ‖ ಬಂದೆರಗಿದಾ ಸೀತೆಯನು ಕರೆ | ತಂದು ತಾನಾಶೀರ್ವದಿಸುತಾ | ನಂದದಿಂದನಸೂಯೆ ನುಡಿದಳು ಕೂಡಿಸಿವಣೆಯೊಳು ‖ ಇಂದು ಮುಖಿಕೇಳಖಿಳ ಸುಖಗಳ | ನಂದುಳಿದು ಕಾನನಕೆ ನೀಂ ನಡೆ | ತಂದೆ ಗಂಡನಹಿಂದೆಹದಿಬಿವೆ ಧರ್ಮದಿಂದೆನುತ ‖ ೪೯ ‖

ಒಂಭತ್ತನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೪೯೦



# ಹತ್ತನೆಯ ಅಧ್ಯಾಯ.

ಸೂಚನೆ ॥ ಪಂಚವಟಿಯೊಳಗಿರಲವನಿಸುತೆ ।
ಹೊಂಚುಹಾಕುತಲಿರದೆ ರಾವಣ ।
ವಂಚನೆಯೊಳ್ಯತಂದ ಭಿಕ್ಷುಕರೂಪವನುತಳೆದು ॥

ಬಳಿಕ ಜಾನಕಿಯತ್ರಿಪತ್ನಿಯು । ಬಳಿಯೊಳುತ್ತಮ ಪೀಠದೋಳ್ಸಲೆ । ಕುಳಿತು ಬಿನ್ನವಿಸಿದಳು ಕೇಳಲೆತಾಯೆ ಸತಿಯರಿಗೆ ಇಳೆಯೊಳಗೆ ಪತಿದೈವವೆನುತ । ತಿಳಿದವರು ಪೇಳುವರು ಗಂಡನ । ನುಳಿದನಾರಿಗೆ ಸದ್ಗತಿಯುದೆಲ್ಲಿಯದು ಪೇಳೆನುತ ॥ ೧ ॥ ಪೊಡವಿಯಾತ್ಮಜೆ ನಿನ್ನನುಡಿಯಿಂ । ಪಡಿಗಡಿಗೆ ಸಂತಸವಹುದು ಪತಿ । ಬಡವನಾಗಲಿ ಭಾಗ್ಯಯುತನಾಗಲಿ ಪುರದೊಳಿರಲಿ ॥ ಅಡವಿಯೊಳಿರಲಿ ಪಾಪಿಯಾಗಲಿ । ಕಡುಸುಕೃತಿಯಾಗಿರಲಿ ಧರೆಯೊಳು । ಮಡದಿಯರು ದೇವರೆನುತಾತನ ತ್ರಿಯುಬೇಕಮ್ಮ ॥ ೨ ॥ ಕುರುಡನಾಗಲಿ ಕುಂಟನಾಗಲಿ । ದುರುಳನಾಗಲಿ ಪತಿತನಾಗಲಿ । ಪರಸುಖೌತುಕನಾಗಲಂಗವಿಹೀನನಾಗಿರಲಿ ॥ ತರುಣಿಯರಿಗಾ ಪತಿಯೆದೈವವು । ನಿರುತವಾತನ ಚರಣಪಂಕಜ । ಕೆರಗಿ ಸೇವಿಸಬೇಕೆನುತ್ತ ತಿಳುಹಿದಳನಸೂಯೆ ॥ ೩ ॥ ಆಲಿಸುತ್ತನಸೂಯೆ ಕರುಣದಿ । ಪೇಳಿದಾ ನುಡಿಗಳನು ಜಾನಕಿ । ತಾಳಿ ಸಂತೋಷವನು ಪೇಳಿದಳಾಕೆಗೆ ನಮಿಸುತ ॥ ಕೇಳು ತಾಯೆ ಸತಿಯನು ಗಂಡನು । ಪಾಲಿಸುವನೀ ಮೇದಿನಿಯೊಳತಿ । ಮೇಳೆಸಿಪ ಸೌಖ್ಯಗಳನಿತ್ತತಿ ಸಂತಸದೊಳಿಂದುಂ ॥ ೪ ॥ ಪತಿಯೆಬಿಸಿದಾ ಸತ್ಯವಂತನ । ನತಿ ಭಕುತಿಯಿಂದೈದೆ ಸೇವಿಸಿ । ನುತಿವಡೆದಳೀ ಭೂಮಿಯೊಳು ಸಾವಿತ್ರಿಪೂರ್ವದಲಿ ॥ ಪತಿಯ ನಗಲದೆ ರೋಹಿಣಿಯು ಸಂ । ತತವು ಗಂಡನಸೇವಿಸಿದಳಾ । ಪತಿಪರಾಯಣೆಯರ ಕಥಾವಳಿಗಳನು ಕೇಳ್ದಹೆನು ॥ ೫ ॥ ಪತಿಯುಪದವೆ ಮುಖ್ಯಗತಿಯೆ । ನ್ನುತ ತಿಳಿದುನಡೆತಂದಿರುವೆನಾಂ । ಪತಿಯೊಡನೆನುತ ಸೀತೆ ಬಿನ್ನವಿಸುತಿರಲನಸೂಯೆ ॥ ಅತಿ ಹರುಷದಿಂದೊಲಿದು ಕೊಟ್ಟಳು । ವಿತತಮಂಗಳ ವಸ್ತುಗಳನಿರಿ । ಸುತ ಮಹೀಸುತೆಗಖಿಳವರ ವಸ್ತ್ರಾಭರಣಗಳನು ॥ ೬ ॥ ಇತ್ತು ಜಾನಕಿ ಗಂಗಲಾಗವ । ನುತ್ತಮಾಂಗನೆ ಯತ್ರಿಮುನಿಸತಿ । ಮತ್ತೆ ನುಡಿದಳು ಸೀತೆ ನಿನ್ನ ವಿವಾಹ ಚರಿತೆಯನು ॥ ಚಿತ್ತಕೊಪ್ಪುವ ರೀತಿಯಿಂದಲೆ । ಬಿತ್ತರಿಸಿ ಪೇಳೆನಗೆ ಹಿತದೊಳೆ । ನುತ್ತ ಕೈವಿಡಿದೊಲಿದು ಮನ್ನಿಸಿ ಸಂತಸವಡಿಸುತ ॥ ೭ ॥

ನೀನರಿಯದಿಹುದಿದೆಯೆ ಲೋಕದೊ । ಳಾನರಿಯೆನೇ ನಿನ್ನ ಚರಿತವ ।
ಮೌನಿನಾರದನರಿಯನೇ ಭವದೀಯಮಹಿಮೆಯನು ॥ ಏನಪೇಳುವು
ದಂಬಿಕೆತಿಳಿಯದ । ಮಾನಿನಿಯರಂತೆನ್ನ ಕೇಳ್ವನಿ । ದಾನವಾವುದೊ
ಪೇಳ್ವೆನಾದೊಡವೆಂದಳವನಿಸುತೆ ॥ ೮ ॥ ಕೇಳು ಜನನಿಯೆ ಜನಕ
ಭೂಪತಿ । ಪಾಲಿಸುತತಾಂ ಮೇದಿನಿಯನು ಏ । ಕಾಲಕೀರ್ತಿಯನಾಂತು
ನಡೆದನು ಬಹಳ ಧರ್ಮದಲಿ ॥ ಆಲಿಸುತ ಶಾಸ್ತ್ರಗಳನು ಮುಂಸಿ । ಪಾಲರ
ಪ್ರಣಿಯಿಂದೆಸಗಿದನು । ಮೇಲೆನಿಪ ಯಾಗವನು ಸಂತಸದಿಂದ ಲೊಂ
ದುದಿನ ॥ ೯ ॥ ಜನಕಭೂವರ ನಧ್ವರಕೆನುತ । ವಸಿಯನಂದುಳಿಸುತಿರೆ
ನೇಗಿಲ । ಕೊನೆಗೆನಾಂ ಸಿಲುಕಿದನು ಬಹು ಸಂತೋಷವನುತಾಳ್ದು ॥
ಮನುಜಪಾಲಕ ತನ್ನ ತೊಡೆಯೊಳ । ಗೆನಲಿಕೆನ್ನ ಸಿರಿಸುತ ಸನ್ನಯ ।
ತನುಜೆಸೀನೆಂದೊರೆದು ಸೀತೆಯೆನುತ್ತ ಪೆಸರಿಟ್ಟ ॥ ೧೦ ॥ ನುಡಿವು
ದಶರೀರದ ನುಡಿಯು ಕೇ । ಳ್ಪೊಡವಿಪಾಲಕ ನಿನ್ನಸುತೆಯಿಾ । ಹುಡು
ಗಿರಕ್ಷಿಸು ನೀನಿವಳ ನಿಜಸುತೆಯವೊಲೆನುತ್ತ ॥ ಒಡನೆಬಂದರಮನೆಗೆ
ಕೊಟ್ಟನು । ಮಡದಿ ಕೈಯೊಳು ನನ್ನನುಪ್ಪೊರೆದ । ಳಡಿಪಸಂತಸದಿಂದೆ
ನಲಿಸಿಸುವೋಧೆ ದಿನದಿನದಿ ॥ ೧೧ ॥ ಪಡೆದುನನಗಾಹಾರವನು ಕೂ ।
ಟ್ಟು ದಿನದಿನದೊಳು ಮೇಲುಮೇಲೆನಿ । ಸಿದ ಮಕಾಲಂಗಳನುಡಿಸುತಾ
ನಂದವೆ ತಳೆದು ॥ ಸುದತಿನನ್ನನು ನಗಿಸಿಲಾಲಿಸಿ । ಸದಯದಿಂದೀಕ್ಷಿ
ಸುತ ನೆರೆಸಲ । ಹಿದಳು ಮುದ್ದಿಸಿ ಸುಡಿಸಿ ಕೂಡಿಸಿ ತನ್ನ ತೊಡೆಯೊಳ
ಗೆ ॥ ೧೨ ॥ ಭೂತಳಾಧಿಪ ಜನಕ ನೆನ್ನನು । ಪ್ರೀತಿಯಿಂದುರೆ ಪೋಷಿ
ಸುತ್ತಿರ । ಲೀ ತೆರದೊಳಾದವೆನಗೇಳು ವರುಷಗಳಾಬಳಿಕ ॥ ಈ ತರಳೆ
ಗೆ ವಿವಾಹವನು ತಾ । ನಾತುರದೊಳಾಗಿಸುವೆ ನೆಂದೆನು । ತಾತಯೋಚಿ
ಸಿ ಹುಡುಕಿಸಿದ ನೀಭೂಮಿಯೊಳುವರನ ॥ ೧೩ ॥ ವರನಕಾಣದೆ
ಜನಕ ಭೂಪತಿ । ವರುಣನಿತ್ತ ಮಹೇಶಚಾಪವ । ಮುರಿವ ಬಾಹು
ಜವೀರರೀ ಮಿಥಿಲಾಪುರಕೆಬಂದು ॥ ಹರನ ಕೋದಂಡವನು ಭಂಗಿಸಿ ।
ವರಿಸುವುವು ಭೂಸುತೆಯನೆನ್ನುತ । ಬರೆಯಿಸಿದ ನವನೀಪತಿಗಳಿಗೆ
ಭವ್ಯಲಿಖಿತಗಳ ॥ ೧೪ ॥ ಧರಣಿಮಂಡಲದೊಳಿಹ ರಾಜಸು । ತರು
ಧರಣಿಪಾಲಕರು ರಾತ್ರಿಂ । ಚರರು ಮೊದಲಹ ಸಕಲ ಶೂರರು ಕೇಳಿ
ಸಂಗತಿಯ ॥ ವರಿಸಬೇಕೆಂದೆನುತ ಬಂದು ನ । ಗರಕೆ ಮುರಿಯದೆ ಶೈ
ವಚಾಪವ । ಭರದೊಳವರಂ ದೈದಿದರು ನಿಜನಗರಗಳಗಿರದೆ ॥ ೧೫ ॥
ಜನಕ ನೀಮಹಿಯಲ್ಲಿ ಕಾಣದೆ । ನನಗೆ ಗಂಡನ ನಂದು ಚಿಂತಿಸಿ ।

ಮನದೆ ಪೊಂದಿದ ನವನಿಪಾಲಕರೊಳವಮಾನವನು ॥ ತನುಜೆಯುರವಣೆ
ದಾಮನುಜ ನಿಂ । ದ್ಯನಿಗೆ ಸಿರಿಯೊಳ್ಪನೆನಿಸಿದೊಡ । ಮಣಿಸಲ್ಕೈದು
ವನಲ್ತೆ ತಾನಪಯಶವಧರಣಿಯೊಳು ॥ ೧೬ ॥ ಕಲವುಕಾಲಕಯೋಧ್ಯೆ
ಯಿಂದೆ ವಿ । ಥಿಳೆಗೆ ಬಂದರು ರಾಮಲಕ್ಷ್ಮಣ । ರೊಲಿಸುತಾ ಕೌಶಿಕನ
ಸಧ್ವರಶಾಲೆಗೊಂದುದಿನ ॥ ನಲಿದುಪೂಜಿಸಿ ಮನ್ನಿಸುತ್ತಾ । ಬಳಿಕ
ಮುನಿಪೇಳ್ದಂತೆ ರಾಮನಿ । ಗೊಲಿದು ಶಿವಧನುವನ್ನು ತೋರಿದನಾ
ಜನಕನಂದು ॥ ೧೭ ॥ ಮುನಿಪ ನಾಣತಿಯಿಂದೆ ಶಿವಧನು । ವನು ತೆಗೆ
ದುಕೊಂಡಾಗ ರಾಮನು । ಜನರಮಧ್ಯದೊಳಂದು ಟಂಕೃತಿಯನೆಸ
ಗುತಕೊಡೆ ॥ ಧನುವೆ ನಿಕ್ಕಡಿಗೈದನತಿಭರ । ದೆ ನಲಿದಾಗಳ್ ಸೀತೆಯು
ನು ಕೊಡು । ವೆನು ರಘುವರಂಗೆನುತ ಪೇಳ್ದನು ಜನಕನಾಮುನಿಗೆ
॥ ೧೮ ॥ ತಂದೆಯುಪ್ಪಣೆಯಿಲ್ಲದಾ ರಘು । ನಂದನ ಮದುವೆಯಾಗದಿರೆ
ತಾ । ನಂದು ಕರೆಸುತ ಭೂಮಿಪಾಲಕ ಜನಕದಶರಥನ ॥ ಸಂದ ಶುಭ
ಲಗ್ನದೊಳು ಸಂತಸ । ದಿಂದೆ ರಾಮನಿಗಿತ್ತು ಸನ್ನನು । ಮಂದಿರದೊ
ಳಾಗಿಸಿದ ಭಾವನೆ ಮದುವೆಯನುಕೂಡೆ ॥ ೧೯ ॥ ಆದಿನದೊಳೀ ಲಕ್ಷ್ಮ
ಣನಿಗಾ । ಮೇದಿನೀಪತಿ ಯುರ್ಮಿಳೆಯನು ವಿ । ನೋದದಿಂದಲೆ ಕೊಟ್ಟು
ಮದುವೆಯನಾಗಿಸಿದನೊಲಿದು ॥ ಆದರಿಸಿ ಮಾಂಡವಿಯು ನಿತ್ತನು ।
ಸಾಧಿಸುತ ಲಗ್ನವನು ಭರತಂ । ಗಾದಿನದೆ ಶತ್ರುಘ್ನಗಾಶ್ರುತ ಕೀರ್ತಿ
ಯನುಕೊಟ್ಟ ॥ ೨೦ ॥ ಇಂತು ನಾಲ್ಕು ಮದುವೆಗಳನು ಬಹು । ಸಂತ
ಸದೊಳಾಗಿಸುತ ಯೋಧ್ಯೆಗೆ । ಚಿಂತಿಸದೆ ಕಳುಹಿದನು ಪತಿಹಿತನ್ನ
ನಾಜನಕ ॥ ಪಿಂತೆನಡೆದಾ ಮದುವೆಸುದ್ದಿಯು । ನಿಂತು ನಿಮ್ಮಯು
ಬಳಿಯೊಳಾಂತಿಳ । ದಂತೆ ಬಿನ್ನವಿಸಿದೆನೆನುತ್ತವನೀಸುತೆ ನುಡಿದಳು
॥ ೨೧ ॥ ಕೇಳಿ ಸಂತಸವಡೆದು ಮನ್ನಿಸಿ । ಲಾಲಿಸುತ್ತವನೀಸುತೆಯನು
ವಿ । ಶಾಲಲೋಚನೆಕಳುಹಿಸಿದಳನಸೂಯೆ ಪತಿಯೆಡೆಗೆ ॥ ಬಾಲೆ ಜಾನ
ಕಿ ತಾನುಪಡೆದತಿ । ಮೇಲೆನಿಪ ಘನಮಂಗಳಂಗಳ । ನಾಲಿಯಿಂದೀಕ್ಷಿ
ಸುತ ಕಳೆದನು ರಾತ್ರಿಯನುರಾಮ ॥ ೨೨ ॥ ಬಳಿಕ ಮಾರನೆದಿನ
ದುದಯದೊಳು । ತಳೆದುಮುನಿಪಾಲಕನ ನೇಮವ । ಬಳೆದಸಂತಸದಿಂ
ದೆರಗಿ ಸತಿ ಸೋದರರಸಹಿತ ॥ ಬಳಸಿದಾಮುನಿವರರ ವಚನಂ । ಗಳನು
ಕೇಳುತ ಬಂದು ಹೊಕ್ಕನು । ತಳುವದಂದಾದಂಡಕಾರಣ್ಯವನು । ರಾಘ
ವನು ॥ ೨೩ ॥ ಮುನಿಗಳಾಶ್ರಮಗಳೊಳು ರಘುವೀ । ರನು ಸತೀ ಸೋ

ಮನುಜರಿಲ್ಲದ ಘೋರತರಕಾ । ನನದೊಳೈತರುತಂದು ಕಂಡನು । ಘನಭ
ಯಂಕರನಹವಿರಾಧನನಾವನವನಡುವೆ ॥ ೨೪ ॥ ಇವರ ನೀಕ್ಷಿಸುತಾ
ವಿರಾಧನು । ತವಕದಿಂದೈತಂದು ಸೀತೆಯ । ನವಸರದೆ ಪಿಡಿದೆತ್ತಿಕೊಂ
ಡಿರಿಸುತ್ತ ಕಾಂಕುಳೊಳು ॥ ಇವಳೆನಗೆ ಭಾರ್ಯೆಯಹಳೀಗಳೆ । ಬವ
ರದೊಳು ಸಂಹರಿಸಿನಿಮ್ಮನು । ಸವಿದು ತಿನ್ನುವೆ ನಾರುನೀವೆನುತಂದು
ಗರ್ಜಿಸಿದ ॥ ೨೫ ॥ ಕೊಂವುತಿನ್ನುವೆ ನಿಮ್ಮನೆಂದೆನು । ತಂದು ಹುಂಕ
ರಿಸುತ ವಿರಾಧನು । ಬಂದು ಮೇಲ್ಬೀಳುತಿರಲಾ ರಘುನಂದನನನು ಮು
ಳಿದು ॥ ಕೊಂದು ಗುಳಿಯೊಳುರುಳ್ಚಿದನವನ । ಮುಂದೆ ಲಕ್ಷ್ಮಣನಡುವೆ
ಜಾನಕಿ । ಹಿಂದೆ ರಾಘವ ನೀಕ್ರಮದೊಳೈತಂದ ರಡವಿಯಲಿ ॥ ೨೬ ॥
ಬರುತ ಶರಭಂಗಾಶ್ರಮವ ಪೊ । ಕ್ಕರು ಭಕುತಿಯಿಂದಾ ಮುನೀಂ
ದ್ರನ । ಚರಣಪಂಕಜಕೆರಗಿ ತಳೆದಾಶೀರ್ವಚನಗಳನು ॥ ಕರುಣ
ದಿಂದಾ ಮುನಿಪನಂದಾ । ದರಿಸಿ ಕೊಟ್ಟಾಹಾರವನು ಪಡೆ । ದರವನೀ
ಸುತೆ ರಾಮಲಕ್ಷ್ಮಣ ರಾಕುಟೀರದೊಳು ॥ ೨೭ ॥ ಬಳಿಕ ರಾಘವನ
ಪ್ಪಣೆಯ ನಾ । ಗಳೆ ಪಡೆದು ಶರಭಂಗಮುನಿಯು । ಜ್ವಲಿಸು ವಗ್ನಿಗೆ
ತನ್ನ ದೇಹವ ನಾಹುತಿಯನೆಸಗಿ ॥ ಬಳಗೆಬಂದ ವಿಮಾನದೊಳು ತಾಂ ।
ಕುಳಿತು ಪೋದನು ಬ್ರಹ್ಮಲೋಕಕೆ ॥ ಜಲಜಸಂಭವನಲ್ಲಿ ಶರಭಂಗ
ನನು ಮನ್ನಿಸಿದ ॥ ೨೮ ॥ ಹರಿಕೇಸರಿ ದಂತಿವನ ಸೂ । ಕರವಲೀ
ಮುಖ ಖುಕ್ಷಗಂಡಕ । ಶರಭಶಾರ್ದೂಲಗಳ ನೋಡುತ ದಕ್ಷಿಣದಿಶೆ
ಯೊಳು ॥ ಚರಣದಿಂವಲೆ ನಡೆದು ವನದೊಳು । ಬರುತನಾನಾ ಪಕ್ಷಿನಿ
ನದವ । ನರಿಯುತ ಸುತೀಕ್ಷ್ಣಮುನಿಯಾಶ್ರಮವ ನವರೈದಿದರು
॥ ೨೯ ॥ ಮುನಿಸುತೀಕ್ಷ್ಣರ ಚರಣಪಂಕಜ । ಕೆ ನಮಿಸಿ ಪಡೆದು
ಭೋಜನವನಾ ॥ ಮುನಿಪನಿಂದರಿತಾ ವನದ ವಿವರಂಗಳೆಲ್ಲವನು ॥
ಮನಗೆ ಸಂತಸತಾಳುತಲ್ಲಿಂ । ದೆ ನಡೆತಂದರು ರಾಮ ಲಕ್ಷ್ಮಣ । ರು
ನೆಲದಣುಗಿಯುಸಹಿತ ಮುನಿಪಾಲಕರು ಟಜಗಳಿಗೆ ॥ ೩೦ ॥ ಕೆಲವು
ಕಡೆಬೊಳು ಮೂರುತಿಂಗಳು । ಕೆಲವುಕಡೆಯೊಳು ನಾಲ್ಕುತಿಂಗಳು ।
ಕೆಲವುಕಡೆಯೊಳಗಾರು ತಿಂಗಳು ವಾಸಿಸುತ ಮುಂದೆ ॥ ಕೆಲವುಕಡೆ
ಯೊಳಗೆಂಟು ತಿಂಗಳು । ಕೆಲವುಕಡೆಯೊಳು ಹತ್ತು ತಿಂಗಳು । ಕೆಲವು
ಕಡೆಗಳೊಳೊಂದುವರುಸವು ಮಿದ್ದರವರಂದು ॥ ೩೧ ॥ ಮುನಿಗಳಾಶ್ರ
ಮಗಳೊಳು ವಾಸಿಸು । ತ ನಿಜಸತಿ ಸೋದರರೊಡನೆ ರಾ । ಮನಿರು
ತಿರೆ ಹದಿಮೂರುವರುಸಗಳಾದವಾಬಳಿಕ ॥ ವನದೊಳಾ ನದಿಸರಸಿ

ಗಿರಿಗಳ | ನು ನೆರೆನೋಡುತ ಬಂದು ಹೊಕ್ಕರು | ಮುನಿಸುದರ್ಶನನೆ
ನಿಪ ಗಸ್ತ್ಯನ ತಮ್ಮನಾಶ್ರಮವ || ೩೨ || ಪರಮ ಭಕ್ತಿಯೊಳಾ
ಸುದರ್ಶನ | ಚರಣಪಂಕಜಕೆರಗಿ ಸತಿಸೋ | ದರರ ಸಹಿತಾ ಮುನಿ
ಪನಿಂದಾಶೀರ್ವಚನತಳೆದು || ಕರುಣಿಸಿತ್ತಾ ಹಾರವನು ಪಡೆ | ದಿರುತ
ರಾತ್ರಿಯನಲ್ಲಿ ಕಳೆದಾ | ತುರದೊಳೈದಿದರವರಗಸ್ತ್ಯಮುನೀಂದ್ರ
ರಾಶ್ರಮವ || ೩೩ || ಬಂದಗಸ್ತ್ಯಮುನೀಂದ್ರನಾಶ್ರಮ | ಕಂಡು
ಸತಿಸೋದರರಸಹಿತೊಲ | ವಿಂದೆ ಮುನಿಪಾಲಕನ ಪದಪಂಕಜಗಳಿಗೆ
ವಣಿಯೆ || ಚಂದದಿಂದಾಶೀರ್ವದಿಪ ಸುತ | ನಂದದೊಳು ರಾಘವನನಧಿ
ಕಾ | ನಂದದಿಂ ಬಿಗಿಯಪ್ಪಿಯುಚಿತಾಸನದೆ ಕೂಡಿಸಿದ || ೩೪ || ವನಜ
ಸಂಭವನೆಡೆಯನಗ್ನಿಯ | ಮನೆಯನಾವಿಷ್ಣುವಿನ ಮಂದಿರ | ವನು
ದಿವಾಕರನಿಕ್ಕೆಯ ನೆಸೆವ ಚಂದ್ರನನೆಲೆಯನು || ಧನದನಾವಾಸವನು
ವಿಬುಧೇಂ | ದ್ರಿರುವೆಡೆಯನು ಗಂಧವಹನನಸ | ದನವನು ವರವಿಧಾ
ತಧಾತರೆಡೆಗಳ ನೀಕ್ಷಿಸುತ || ೩೫ || ವಿನುತ ಧರ್ಮಸ್ಥಾನವನು
ವಸು | ವಿನೆಡೆಯನು ಷಣ್ಮುಖನ ಮಂದಿರ | ವನು ಭಗನಸೀಮೆಯನು
ಗಾಯತ್ರೀನಿಶಾಂತವನು || ಘನವರುಣ ನಾವಾಸವನನಂ | ತನಪ ನೆ
ಯನಾನಾಗ ರಾಜಭ | ವನವ ನೆಸೆವಾಪಾಶಹಸ್ತನ ನೆಲೆಯನೋಡಿದ
ರು || ೩೬ | ಮುನಿಯಗಸ್ತ್ಯನವರನು ಮನ್ನಿಸಿ | ಘನದಯಾರಸದಿಂ
ದುಪಚರಿಸಿ | ಮನವೊಲಿದು ಭೋಜನವನಾಗಿಸಿ ರಾಘವೇಂದ್ರನಿಗೆ ||
ವಿನುತ ಶಸ್ತ್ರಾಸ್ತ್ರಂಗಳನು ಮೋ | ಲೆನಿಪ ವರತೂಣೀರಖಡ್ಗಗ | ಳ
ನೊಲಿದಿತ್ತನು ನಮಿಸಿಪೋದರು ಮುನಿಗರಣ್ಯದಲಿ || ೩೭ || ಮುಂದೆ
ರಾಘವ ನಡುವೆ ಜಾನಕಿ | ಹಿಂದೆ ಲಕ್ಷ್ಮಣ ರಿಂತವರು ನಡೆ | ತಂದು
ಪೊಕ್ಕರು ಪಂಚವಟಿಯನು ವಿಸ್ಮಯವನಾಂತು || ಬಂದು ನಮಿಸಿ
ಜಟಾಯುದಶರಥ | ನಂದನಂಗರುಹಿದನು ನಿಮ್ಮಯ | ತಂದೆಗಾಂ ಸಖ
ನೆನುತ ಲೋಕದ ವಿವರವೆಲ್ಲವನು || ೩೮ || ಹರಿವ ಗೋದಾವರಿಯ
ತೀರದೊ | ಳಿರುವ ಪಂಚವಟಿಯೊಳು ಪಕ್ಷಿಗ | ಳ ರಸನೆನಿಪ ಜಟಾ
ಯುಸಂತಸವಡಿಸುತವರುಗಳ || ಇರುಳು ಹಗಲುಂ ರಾಮ ಲಕ್ಷ್ಮಣ |
ರಿರದ ವೇಳೆಯೊಳಾ ಕುಟೀರದೆ | ಪೊರೆವುತಿರ್ದನು ಸೀತೆಯನು ಜಾಗ್ರತೆ
ಯೊಳೆಡೆವಿಡದೆ || ೩೯ || ಇಂತಿರಲು ಶೂರ್ಪನಖಿತಾಂ ಸಮ | ನಂತರ
ದೊಳೊಂದುದಿನ ಬಂದ | ತ್ಯಂತ ಕಾಮಾತುರದೆ ರಾಮನ ವರಿಸಬೇಕೆ
ನುತ || ಸಂತಸದೆ ಪೀಡಿಸಲು ತಾನವೆ | ಳಂತರಂಗಕೆ ಸಿಲುಕದಟ್ಟಿದ |

ನಂತು ಲಕ್ಷ್ಮಣನೆಡೆಗೆ ವರಿಸೂತನನು ನೀನೆನುತ ॥ ೪೦ ॥ ಬಂದು ಲಕ್ಷ್ಮಣನೆಡೆಗೆ ನೀನೊಲಿ । ಸೆಂದು ಪೀಡಿಸಲೊಪ್ಪದಾಕೆಯು । ನಂದು ಕಳುಹಿದನ್ನಾನಂ ವರಿಸೆನುತ ಸಂತವಿಸಿ ॥ ಕೊಂದು ಸೀತೆಯು ನಿಂದು ವರಿಸುವೆ । ನೆಂದೆನುತ ಶೂರ್ಪನಖಿ ನಡೆತರ । ಲಂದು ಲಕ್ಷ್ಮಣ ಕಡಿದ ನವಳಾ ಮೂಗು ಕಿವಿಗಳನು ॥ ೪೧ ॥ ಅಳುತ ದಶಕಂಧರನಸೋದರಿ । ಬಳಿಕ ಬಂದಳು ಖರನಸನ್ನಿಧಿ । ಗಳುಕದಬ್ಬರಿಸುತ್ತ ಕಾನನದಲ್ಲಿ ನಡೆತರುತ ॥ ತಿಳುಹುತಜನ ಸ್ಥಾನದಿಂದಾ । ಗಳೆ ಖರಾಸುರನನ್ನು ಬವರಕೆ । ಕಳುಹಿಕೊಟ್ಟಳು ರಾಘವನಮೇಲಧಿಕ ರೋಷದಲಿ ೪೨ ॥ ಖರನು ಕೇಳ್ದತಿ ರೋಷವನು ತಾ । ಳ್ದು ರಣಕೋವಿದರೆಂದೆನಿಪ ಘನ । ಬಿರುದನೈದಿದ ದೂಷಣತ್ರಿಶಿರಾದಿಗಳ ಸಹಿತ ॥ ತ್ವರಿತದೊಳು ಹದಿನಾಲ್ಕು ಸಾಸಿರ । ದ ರಜನೀಚರರಿಂದೆ ಬಂದನು । ಧುರದೆ ರಾಮನಕೊಲುವೆನೆನ್ನುತ ಪಂಚವಟಿಗಾಗಿ ॥ ೪೩ ॥ ಬಹನೆ ಸೀತಾಲಕ್ಷ್ಮಣರ ನಾ । ಯು ಡವಿಯೊಳಗಿಪ ಗುಹೆಗೆಕಳುಹಿಸಿ । ಕಡಿದನಾ ಹದಿನಾಲ್ಕುಸಾಸಿರ ಸೈನ್ಯದಾಭಟರ । ಬಿಡದೆ ದೂಷಣ ತ್ರಿಶಿರಖರರನು । ಬಡಿದು ತಾಂ ಕಳುಹಿಸಿದನಂತಕ । ನೆಡೆಗೆ ಕಾಳಗದಲ್ಲಿ ರಾಘವನತಿ ವಿನೋದದಲಿ ॥ ೪೪ ॥ ತಿಳಿಯುತ ಜನಸ್ಥಾನದೊಳು ಕಡು । ಗಲಿಗಳೆಂದೆನಿಪಾ ಖರಾದಿಗ । ಳಳಿದುದನು ಹದಿನಾಲ್ಕುಸಾಸಿರ ಸೈನ್ಯವಡಿದುದನು ॥ ಇಳೆಯಣುಗಿಯಾ ರೂಪುರೇಖಾ । ವಳಿಯು ಕಿವಿಮೂಗುಗಳ ಕಳೆದುರೆ । ಯುಳುವ ಸೋದರಿ ಯಿಂದೆ ದಶಕಂಧರನು ಪತ್ತಿಗೊಂಡ ॥ ೪೫ ॥ ಬಂದು ಮಾರೀಚನೆಡೆಗಾ ದಶ । ಕಂಧರನೊಡಂಬಡಿಸು ತಾತನ । ನಂದು ರಥದೊಳು ಕೂಡಿಸಿಕೊಳುತ ರಾಮನಾಶ್ರಮಕೆ ॥ ಬಂದು ದೂರದೊಳಿಳಿದು ನಿಜರಥ । ದಿಂದೆ ನೀಂ ಮಾಯಾಮೃಗದರೂ । ಪಿಂದೆ ಸೀತೆಯಮುಂದೆ ಸಂಚರಿಸೆನುತ ಪೇಳಿದನು ॥ ೪೬ ॥ ಅತಿಮನೋಹರ ಕಾಂಚನಮೃಗದ । ಸುತನುವನು ತಾಂ ಪಡೆದು ಧರಣೀ । ಸುತೆಯಮುಂಗಡೆ ತಿರುಗುತಿರೆ ಮಾರೀಚನಡಿಗಡಿಗೆ ॥ ಪತಿಗೆಪೇಳ್ದಳು ಕಂಡು ವೈದೇ । ಹಿ ತಳುವದೆ ನೀನೀ ಮೃಗವ ನೀಂ । ಗ ತರಬೇಕಿಹುದೆನಗಿದರಮೇಲಾಶೆ ಕೇಳೆನುತ ॥ ೪೭ ॥ ತೆಗೆದುಕೊಂಡಾ ಧನುವಬೇಗನೆ । ಮೃಗದಹಿಂಗಡೆ ನಡೆದು ನಡೆದಾ । ಶುಗದೆ ಕಡೆಗಿಕ್ಕಿದನು ದಶರಥರಾಮನಾ ಮೃಗವನು ॥ ಮೃಗದವೇಷವನುಳಿದು ಬಿದ್ದನು । ಗಗನಕೆ ನೆಗೆದು ವನದೊಳಾ ಧರ । ಣಿಗೆ ಖಳನು ಹಾ ಸೀತೆ ಹಾ ಲಕ್ಷ್ಮಣ ಯೆನುತನುಡಿದು ॥ ೪೮ ॥ ಆನುಡಿಯು ಕೇಳ್ದೊಡನೆ

ಜಾನಕಿ । ದೀನಳಾಗುತ ಪ್ರೋಗುಲಕ್ಷ್ಮಣ । ನೀನು ರಾಮನನೆರವಿಗೆ ನ್ನುತ ನುಡಿಯುಲೊಪ್ಪದಿರೆ ॥ ಮಾನಿನೀಮಣಿ ಕೇಳಲಾರದ। ಹೀನವಚ ನಗಳಿಂದೆ ಪಳಿದಳು । ಕಾನನದೊಳಂದಳುತ ಮನಬಂದಂತೆ ಲಕ್ಷ್ಮಣ ನ ॥ ೪೯ ॥ ನಿನ್ನಸಂಗತಿ ನನಗೆ ಗೊತ್ತಿಹುದು । ದೆನ್ನುವರಿಸಲು ಬೇಕೆನುತ ನೀಂ । ನೆನ್ನ ಹಿಂದೆಯೆ ಬಂದಿರುವೆ ಕಾನನಕೆ ಪುರದಿಂದೆ ॥ ನಿನ್ನನು ಭರ ತ ಕಳುಹಿಕೊಟ್ಟಿಹ । ನುನ್ನತದ ಸಂಕೇತದೊಳಗೆಂ । ದೆನ್ನುತ ನುಡಿ ದಳಾಮಹೀಸುತೆ ಮುಳಿದು ನಿಂದಿಸುತ ॥ ೫೦ ॥ ನೀನು ಬಗೆದಂತಾಗ ಲಾರದು । ನಾನು ಸಾಯುವೆನೆಂದು ಜಾನಕಿ । ಹೀನವಚನಗಳಿಂದೆ ನಿಂದಿ ಸಲಂದು ಮೈದುನನ ॥ ಆ ನುಡಿಗಳನು ಕೇಳಲಾರದೆ । ಮಾನಿನಿಯನುಳಿ ದಾಗ ನಡೆದನು । ಕಾನನದೊಳಣ್ಣನಬಳಿಗೆ ಸೌಮಿತ್ರಿದುಃಖಿಸುತ ॥ ೫೧ ॥ ಧರಿಸಿ ಕಾಷಾಯಾಂಬರಂಗಳ । ಸುರುತರದ ರುದ್ರಾಕ್ಷಸರಗಳ । ನಿರಿಸಿ ಕೊರಳೊಳು ವಿನುತ ದಂಡ ಕಮಂಡಲಂಗಳನು ॥ ಕರದೊಳಾಂತತಿ ಮೇಲೆನಿಪ ಜಪ । ಸರವ ಪಿಡಿದೈತಂದನಾ ದಶ । ಶಿರನು ಸೀತೆಯಬಳಿಗೆ ಮಾಯಾಭಿಕ್ಷು ರೂಪದಲಿ ॥ ೫೨ ॥ ಹರಹರ ಮಹಾದೇವ ಯೆನ್ನುತ। ಭ ರದೊಳಾಗಳೆ ಭಿಕ್ಷುವೇಷವ । ಧರಿಸಿದಾ ದಶಶಿರನು ಬಂದಾಪರ್ಣವಂದಿ ರಕೆ ॥ ಕರುಣೆಯಿಂದಲೆ ಕೇಳ್ದನಲೆ ಸುಂ । ದರಿಯೆ ನೀನಾರಿಲ್ಲಿನೀನೇ । ಕಿರುವೆಯೊಬ್ಬಳೆ ನಿನ್ನಪೆಸರೇನೆನಗೆ ತಿಳುಹೆನುತ ॥ ೫೩ ॥ ರಾಜಹಂಸ ಗಮನೆ ವರದ್ವಿಜ । ರಾಜಮುಖಿ ರಾಜೀವನಯನೆ ಸ । ರೋಜಕರಯು ಗೆ ಪನ್ನಗಾಭ ಸುವೇಣಿ ಪಿಕವಾಣಿ ॥ ರಾಜಿತ ಕನಕಕುಂಭ ಕುಚೆ ಪಂ । ಕೇಜಗಂಧಿಯೆ ಕೇಳು ನೀನು ವಿ । ರಾಜಿಸುವೆ ರತಿಯಂತೆ ಕಾಮೋದ್ರೇ ಕವನುನೀಡಿ ॥ ೫೪ ॥ ಮಾರಸತಿಯೋ ವಾಣಿಯೋ ದನು । ಜಾರಿಯ ಮ ಡದಿಯೋ ಮಹೇಂದ್ರನ । ನಾರಿಯೊ ಅಂತಲ್ಲದಿರೆ ಶಿವನರಸಿಯೋ ನೀನು ॥ ನಾರಿಯರೊಳುತ್ತಮಳೆನಿಸುವೆ ವಿ । ಚಾರಿಸಲು ನಿನ್ನಂದದೊಳೆಸೆವ । ನಾ ರಿಯನುನಾಂ ಕಾಣೆನು ಚತುರ್ದಶ ಭುವನಗಳಲಿ ॥ ೫೫ ॥ ಸುರನರೋರ ಗ ಯಕ್ಷರಾಕ್ಷಸ । ಗರುಡ ಗುಹ್ಯಕ ಗಂಧರುವ ಕಿ । ನ್ನರವಿನುತ ವಿದ್ಯಾಧ ರಾಪ್ಸರ ಸಿದ್ಧಸಾಧ್ಯರಲಿ ॥ ಮೆರೆವಕೋಮಲೆಯರನು ನಾಂ ನೋ । ಡಿರು ವೆನವರೊಳು ನಿನ್ನಪೋಲ್ದಸೆ । ವ ರಮಣೀಮಣಿಯಿಲ್ಲ ನೀನಾರೆನಗೆ ತಿ ಳುಹೆಂದ ॥ ೫೬ ॥ ಜೊನ್ನವುಂ ಕರೆವುದೆಲೆ ಕಾಮಿನಿ । ನಿನ್ನನಗೆ ಮಿಂಚನು ರೆಪಳವುದು । ನಿನ್ನನೋಟವುಕಣ್ಣುತಾವರೆಯೆಸಳ ನಿಂದಿಪ್ಪುದು ॥ ನಿನ್ನ ಮುಖವನು ಕಂಡುಚಂದಿರ । ನಿನ್ನೆಗಂ ಕ್ಷಯದಿಂದೆನರಳುವ । ನಿನ್ನ

ಚಂದವನಾರು ಬಣ್ಣಿಪರೀ ಮಹೀತಲದಿ ॥ ೫೩ । ನಿನ್ನ ಕುಚಗಳು ತಾಲಫಲದಂ । ತುನ್ನತಿವಡೆ ದಿಹುವೆಲೆ ಭಾಮಿನಿ । ನಿನ್ನತೊಡೆಗಳು ಗಜದಶುಂಡವ ಪೋಲುತಿರ್ಪವು ॥ ನಿನ್ನಪಲ್ಗಳು ಕುಂದಕುಟ್ಮಲ । ವ ನ್ನು ಹೋಲುತಿಹುವೆಲೆ ಕಾಮಿನಿ । ನಿನ್ನ ನೋಡಿದನನಗೆ ಕಾಮೋ ದ್ರೇಕ ಹೆಚ್ಚುಹುದು ॥ ೫೪ ॥ ಆರುನೀನೆಲೆ ರಮಣಿ ಬರಿದೇ । ಕಾರು ಮಿಲ್ಲದರಣ್ಯದಲ್ಲಿಹೆ । ಯಾರು ನಿನ್ನಯುಗಂಡ ನಾವುದುನಿನ್ನಯ ನಿವಾಸ ॥ ಆರು ನಿನ್ನಯ ತಂದೆ ಬಂಧುಗ । ಳಾರು ನೀನೇಕಿಲ್ಲಿರುತಿಹೆ ಕು । ಟೀರ ದೊಳೆನಗೆ ವಿವರಿಸೆಂದಾ ಯತ್ರಿಯುಕೇಳದನು ॥ ೫೫ ॥ ಕಪಟಯತಿಯೆಂ ದೆನ್ನುತ ತಿಳಿಯ । ದೆ ಪ್ರೌಢವಿಯಾಗಿ ರಾವಣನನಂ । ದುಪಚರಿಸಿ ಬಂ ದಿರ್ಪನಥಿತಿಯೆನುತ್ತ ಭಕ್ತಿಯಲಿ ॥ ಕೃಪೆಯೊಳಾತನಕರೆದು ಕುಳ್ಳಿರಿ । ಸಿ ಪರಮಾನಂದದೊಳು ಕೊಟ್ಟಳು । ಚಪಲಮಿಲ್ಲದೆ ಯರ್ಘ್ಯಪಾದ್ಯಾ ಚಮನಗಳನಂದು ॥ ೬೦ ॥ ಇನಯ ಮೈದುನ ರಿಲ್ಲದಾಗಳೆ । ಮನೆಗೆಬಂ ದಾ ಕಪಟವೇಷದ । ದನುಜನನು ವಿಪ್ರೋತ್ತಮನೆನುತ ಬಗೆದುಭಕ್ತಿ ಯಲಿ ॥ ವನಫಲಂಗಳ ಭುಜಿಸುವಿಮಲಾ । ಸನವನಂಗೀಕರಿಸು ಪತಿ ತರು । ವನುಮಿಗದ ಮಾಂಸವನೆನುತ್ತಲೆ ನುಡಿದಳಾ ಸೀತೆ ॥ ೬೧ ॥

ಇಂತು ಹತ್ತನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೫೦೧.



## ಹನ್ನೊಂದನೆಯ ಅಧ್ಯಾಯ.

ಸೂಚನೆ ॥ ಜನಕಜಾತೆಯನೆತ್ತಿಕೊಂಡು ಗ ।
ಗನದೆ ರಾವಣ ಬರುತಿರಲ್ಕೆ ಕ ।
ದನಕೆಬಂದ ಜಟಾಯುವನಿರಿದು ಲಂಕೆಗೈದಿದನು ॥

ಬಂದಿಹನು ವಿಪ್ರೋತ್ತಮನು ನಿಜ । ಮಂದಿರಕೆ ನಾನೀ ಯತಿಥಿ ಗೊಲಿ । ದಿಂದುಪೇಳದೊಡೆನ್ನ ಸ ಗತಿಯನ್ನು ಭಿಕ್ಷುಕನು ॥ ಸಂದಕೋ ಪದೇಶಾಪವಿತ್ತಪ । ನೆಂದು ಚಿಂತಿಸುತಿನಿಯನನು ತಾ । ನಂದುತಿಳುಹಿ ದ ಳಸುರಪತಿಗಾ ಸೀತೆ ವಿವರಿಸುತ ॥ ೧ ॥ ಅವಧರಿಸುನೀಂ ಬ್ರಾಹ್ಮ ಣೋತ್ತಮ । ಅವನಿಪಾಲಕ ಜನಕಸುತೆ ನಾಂ । ರವಿಕುಲಾಧಿಪ ದಶರ ಥನಸೊಸೆ ಮಡದಿರಾಮನಿಗೆ ॥ ಭುವಿಯೊಳೆನ್ನನು ಸೀತೆಯೆಂದು ಕ । ರೆ ವರಯೋಧ್ಯಾಪುರದೆ ಪತಿಯೊಡ । ನೆ ವಿಧವಿಧ ಸುಖಗಳನುಹೊಂದಿದೆ ಹನ್ನೆರಡುವರುಷ ॥ ೨ ॥ ಬಳಿಕ ಹದಿಮೂರನೆಯ ವರುಷದೊ । ಳೂ

ಲಿದು ವೈಭವದಿಂದೆ ರಾಮನಿ| ಗಿಳೆಯೊಳತನವ ನೀಯಬೇಕೆಂದೆಣಿಸಿ ದಶ
ರಥನು || ಬೆಳೆಯಿಸಲು ಸನ್ನಾಹಗಳನಾ | ಗಳತಿಳಿದು ಕೈಕೇಯಿ ಕರು
ಬುತ | ಛಲದಿಕೇಳ್ವಳು ಮುನ್ನ ತನಗಿತ್ತೆರಡು ವರಗಳನು || ೩ ||
ರಾಮನಿಗೆ ಪಟ್ಟಾಭಿಷೇಕವ | ನೀ ಮುಹೂರ್ತದೊಳೆಸೆಗದಟ್ಟುವುದು | ದಾ
ಮಹಾಟವಿಗೆ ಹದಿನಾಲ್ಕು ವರುಷವಪರಿಯಂತ || ತಾಮಸವನುಳಿದೆನ್ನ ಭ
ರತಂ | ಗೀಮಹಿಯ ದೊರೆತನವ ಕೊಡೆನು | ತ್ತಾಮಹಿಳೆ ಪೀಡಿಸಿದಳಂ
ದಾ ದಶರಥೇಶ್ವರನ || ೪ || ಪಿತನಭೀಷ್ಟವ ತಿಳಿದು ರಾಘವ | ನತಿ ಭರ
ದೊಳೈತಂದ ವನಕಾ | ಪತಿಯೆದಿಕ್ಕೆನುತರಿದು ಬಂದೆನು ಬನಕಚಿಂತಿ
ಸದೆ || ಹಿತದೊಳೆಮ್ಮನು ಸೇವಿಸುವೆ ನೆ | ನ್ನುತಡವಿಗೆ ಲಕ್ಷ್ಮಣನು
ಬಂದಿಹ | ನು ತಿಳಿವುದೆನುನೀನೆನುತ ಪೇಳ್ದಳು ಸೀತವಿಪ್ರನಿಗೆ || ೫ ||
ಆರುನೀನೆಲೆ ವಿಪ್ರ ನಿನ್ನನು | ಧಾರುಣಿಯೊಳೇನೆಂದು ಕರೆವರು | ಘೋ
ರಕಾನನಕೇತಕೈತಂದೆ ನೆಲೆಯೆಲ್ಲಿಹುದು || ಕ್ರೂರಜಂತುಗಳಡಿ ದರಣ್ಯ
ದೊ | ಳಾರಬಳಿಗೈದುತಿಹೆ ತಿಳಿಸೆಂ | ದಾ ರಮಣಿಕೇಳಿದಳು ರಾವಣನೆಂ
ದರಿಯದವನ || ೬ || ಲಲನೆಕೇಳೆನರಿ ನಾನು ರಾವಣ | ನು ಲವಣೋದಧಿ
ಮಧ್ಯದೊಳ ಕಂ | ಗೊಳಿಪ ಲಂಕಾದ್ವೀಪವೆನ್ನಯ ನಿಜನಿವಾಸದೆಡೆ ||
ಕಲಿತನದೊಳೆನಗಿಲ್ಲ ಸಮರು ಹ | ಗಲಿರುಳೋಲೈಸುತ್ತಿಹರು ಕೋ |
ಮಲೆಯ ರೈದುಸಹಸ್ರಜನ ಸಂತಸವನಿತ್ತೆನಗೆ | ೭ || ಸುರನರೋರಗ
ಯಕ್ಷ ವಿದ್ಯಾ ಧರದನುಜ ಗರುಡಾಪ್ಸರರು ಕಿಂ | ನರರು ನನ್ನನು
ಸಂಹರಿಸದಂತೆ ರಣರಂಗದಲಿ || ಸರಸಿಜೋದ್ಭವನನುರೆ ಮೆಚ್ಚಿಸಿ |
ವರಗಳನು ನಾಂಪಡೆದಿಹೆನು ಭಾ | ಸ್ಕರನು ಮೊದಲಾದಮರ ರಂಜುವರೆ
ನ್ನ ವಿಕ್ರಮಕೆ || ೮ || ಪರಸಖಕುಬೇರನನು ಸೋಲಿಸು | ತ ರಣ
ದೊಳುತಂದಿಹೆನು ಪುಷ್ಪಕ | ವರವಿಮಾನವನಾತ ನಗ್ರಜನೆಂದೆನಿಪನೆ
ನಗೆ || ಧುರದೊಳಡಿಗಡಿ ಗಷ್ಟದಿಕ್ಪಾ | ಲರನು ಸೋಲಿಸಿರುವೆನು ತ
ಪದೊಳು | ಹರನಮೆಚ್ಚಿಸಿಪಡೆದೆ ನುತ್ತಮವರಗಳನು ನಾನು || ೯ ||
ನನ್ನನಾಮವಕೇಳ್ದೊಡನೆ ನೆರೆ | ಖಿನ್ನರಾಗುತ ಮೂರ್ಛೆಪೋಗುವ |
ರೆನ್ನ ವೈರಿಗಳಿದಿರಿಸುವರಿಲ್ಲನ್ನೆ ತ್ರಿಭುವನದಲಿ || ನಿನ್ನನೋಡಿದ ನನಗೆ
ರುಚಿಪುದೆ | ನನ್ನಧೀನದೊಳಿರು ಪಬಲೆಯರೊ | ಳನ್ನು ಕೇಳ್ರತಿಕೇ
ಳಿ ನಿನಗೆ ವಿಧೇಯನಾಗಿಹೆನು || ೧೦ || ಅರಸಿಯಾದೊಡೆ ನೀನೆನಗೆ ತರ |
ತರದ ಸೌಖ್ಯಂಗಳನು ಪೊಂದುವೆ | ಮೆರೆವಪುಷ್ಪಕಯಾನದೊಳು ಸಂ
ಚಾರವನುಮಾಳ್ಪೆ || ಪರಿಚರಿಸುತಿಹ ರೈದುಸಾಸಿರ | ವರವನಿತೆಯರು

ನಿನ್ನನಪನಿಯೊ । ಆರದೆಲಂಕೆಗೆ ಬಂದೊಡ್ಡೈದುವೆ ಭೋಗಭಾಗ್ಯಗಳ
॥ ೧೧ ॥ ವನಿತೆಕ್ಕೈಕೆಯ ಮಾತನಾಲಿಸಿ । ವನಕೆಬಂದತಿ ಹೇಡಿಯೊಡ
ನೀ । ವನದೆದುಃಖಿಸಿ ಕಂದಮೂಲ ಫಲಂಗಳನು ಭುಜಿಸಿ ॥ ಘನದುಕೂ
ಲಂಗಳನುಳಿದು ನಾ । ರಿನ ಮಡಿಗಳನುಡುತ್ತ ಭೀಕರ । ಮನಿಪರಣ್ಯ
ದೊಳೀತಕಿಹೆ ನೀನೆನ್ನವರಿಸೆಂದ ॥ ೧೨ ॥ ತಿರುಕನಂದದೆ ವಿಪಿನದೊ
ಳು ಸಂ । ಚರಿಸುವಾ ರಘುನಂದನನೊಡನೆ । ತೊರೆದು ನಿದ್ರಾಹಾರಗಳ
ನೀಂ ಬಳಲುತೀಕಿರುವೆ ॥ ವರಿಸಿನನ್ನನು ರಾಜಸಾಧದೊ । ಳಿರುತ ಪ
ಟ್ಟದಮಹಿಷಿಯೆನಿಸುವೆ । ಸರಿಸಿಜಾನನೆ ಭರದೊಳ್ಳೈತಹುದೆನುತ ಪೇಳದ
ನು ॥ ೧೩ ॥ ಮಾನಿನೀಮಣಿ ವನದೊಳೀಕತಿ । ದೀನತೆಯನಾಂ ತಂಜಿ
ಕೊರಗುವೆ । ನೀನು ಲಂಕೆಯೊಳೆನ್ನೊಡನೆ ಸಲೆಸುಖಿಸು ರಮಿಸುತ್ತ ॥
ದಾನವಾಗ್ರಣಿ ಯೆನಿಪ ನನ್ನ ಸ । ಮಾನನೆನಿಪನೆ ರಾಮನೀಗ ನಿ । ದಾ
ನಿಸದೆನೀಂ ಬರುವುದೆನ್ನುತ ನುಡಿದ ರಾವಣನು ॥ ೧೪ ॥ ವನಗಳಲಿ ಗಿರಿ
ಗಳಲಿ ಮೇಣ್ಪುಳಿ । ನನಿವಹಂಗಳ ಲುತ್ತಮಾರಾ । ಮನಿಚಯಗಳಲಿ
ವಿನುತಸಾಧಾಗ್ರಂಗಳಲಿ ನೀನು ॥ ವಿನುತಪುಷ್ಪಕ ವರವಿಮಾನದೊ ।
ಳು ನಲಿದೆನ್ನಯಮನಕೆ ಸಂತಸ । ವನುಕೊಡುತ ಸಂಚರಿಪೆಕೇಳೆನ್ನ
ತೊಡೆಯೊಳು ಕುಳಿತು ॥ ೧೫ ॥ ಇಳೆಯನಂದನೆ ರಾವಣನ ನುಡಿ । ಗ
ಳನುಕೇಳ್ದನು ಮೋದಿಸದೆ ತಾ । ನಳುಕುತಿನಿಯನ ಬರವನೀಕ್ಷಿಸುತ
ಡಿಗಡಿಗೆ ಭಯದಿ ॥ ಪಲತೆರದೊಳಾ ರಕ್ಕಸನಿಗಾ । ಗಳೆ ತೃಣವಪಿಡಿದಂ
ದು ನುಡಿದಳು । ಮುಳಿದು ನೀಚನೆನುತ್ತ ಬಗೆದಾಪರ್ಣಶಾಲೆಯಲಿ ॥
॥ ೧೬ ॥ ಗಿರಿಗಳಂದದೆ ಚಲಿಸನಬ್ಧಿಯ । ಪರಿಯೊಲು ಕ್ಷೋಭಿಸನು ಸುಂ
ದರ । ತರ ಸಕಲಲಕ್ಷಣಗಳನು ತಾಳ್ದಹನು ಸತ್ಯದೊಳು ॥ ನಿರತನು
ಮಹಾ ಭಾಗ್ಯಶಾಲಿಯು । ಧರಣಿತಲದೊಳು ರಾಘವೇಂದ್ರನು । ನಿರುತ
ವ್ರತನನೊಲಿಪೆ ನಿತರರನೋಡುವೆನೆ ನಾನು ॥ ೧೭ ॥ ಅಮಿತಬಾಹು ಬ
ಲಾಢ್ಯನು ವಿಶಾ । ಲವೆನಿಪ ಸುವಕ್ಷಸ್ಥಳವನಾಂ । ತು ಮೆರೆವನು ಕೇ
ಸರಿಯುಗತಿಯಂತೆ ನಡೆಯುತ್ತಿಹನು ॥ ಸಮನೆನಿಪನಾ ಸಿಂಹದತಿ ವಿ ।
ಕ್ರಮಕೆ ರಾಮನು ಸಂತತವು ನಾ । ನು ಮನದೊಳು ಚಿಂತಿಸೆನು ರಾ
ಘವನಲ್ಲದನ್ಯರನು ॥ ೧೮ ॥ ಹೊಳೆಹೊಳೆವ ರಾಕಾಸುಧಾಕರ । ನೊಲು
ರೆರಂಜಿಪ ವಕ್ತ್ರವನುತಾಂ । ತಳೆದಿಹನುರಾಘವನು ರಾಜಸುತನು ಜಿತೇಂ
ದ್ರಿಯನು ಇಳೆಯೊಳು ನ್ಯಗ್ರೋಧಪರಿ ಮಂ । ಡಲನೆನಿಸುವನು
ಮೇಲೆನಿಪ ಯಶ । ವನು ಪಡೆದಿರುವ ನಾತನಲ್ಲದಿತರರ ಚಿಂತಿಸೆನು ॥

। ೯ ನರಿ ಗೆಸವನೆಂದೆನಿಸ ರಜನೀ । ಚರನೆ ನೀನಾ ಹೆಣ್ಣು ಸಿಂಗದ । ಪರಿಯೊಳುಪ್ಪವ ನನ್ನನಿಚ್ಛೈಸುತಿಹೆ ವಿಪಿನದಲಿ । ತರಣಿಕಿರಣಾಂಗಳ ಪೊಳೆನ್ನನು । ಕರಗಳಿಂ ನೀಂ ಪಿಡಿಯಲೆಳಸುವೆ । ಹೊರಡು ಶೀಘ್ರದೊಳಿಲ್ಲಿ ನಿಲ್ಲದೆನುತ್ತ ಪೇಳ್ದಳು ॥ ೧೦ ॥ ಎಲೆನಿಶಾಚರಕೇಳು ರಾಮನ । ಲಲನೆ ನನ್ನನು ಮಂದಬುದ್ಧಿಯೊ । ಳೊಲಿಸುವೆ ನೆನುತಪೇಕ್ಷಿಸುವೆ ಯೋಚನೆಯನುಳಿದಿಂದು ॥ ತಳುವದೀಕ್ಷಿಪೆ ಚಿನ್ನದಮರಂ । ಗಳಪ್ರೊಲು ಮರಂಗಳನು ಕೋಪವ । ತಳೆದಸಿಂಹದ ಪಲ್ಗಳನು ಕೀಳಲ್ಕೆಯತ್ನಿಸುವೆ ॥ ೧೧ ॥ ಧರೆಯೊಳುನ್ನತಿವೆತ್ತ ವರವಂ । ದರಗಿರೀಂದ್ರವ ಪಿಡಿವು ನಿನ್ನಯ । ಕರಗಳಿಂದೋಡಲ್ಕೆ ಬಯಸುವೆ ಕಾಲಕೂಟವನು ॥ ತರಿಸಿ ಕುಡಿದಾನಂದದಿಂದಿ । ಧರಣಿಯೊಳಿರಲಪೇಕ್ಷಿಸುವೆ ಕೇ । ಳುರಜನೀಚರನೀನು ರಾಮನ ಪತ್ನಿಯನುಬಯಸಿ ॥ ೧೨ ॥ ನಯನವನು ಚುಚ್ಚಲೆಳಸುವೆ ಸೂ । ಜಿಯಮೊನೆಗಳಿಂ ದಡಿಗಡಿಗೆ ಕ । ತ್ತಿಯ ಹರಿತವನು ನೆಕ್ಕಲಿಚ್ಛೈಸುತಿರುವೆ ಜಿಹ್ವೆಯಲಿ ॥ ಭಯವನಾನದೆ ಕಟ್ಟಿಕೊಳುತಶಿ । ಲೆಯನು ದಾಟಲೆಳಸುವೆ ವಾರಿನಿ । ಧಿಯನು ರಾಮನಪತ್ನಿಯನು ಕೊಂಡೊಯ್ಯಲೆಳಸುತ್ತ ॥ ೧೩ ॥ ಕರಗಳಿಂ ರವಿಶಶಿಗಳನು ನೀಂ । ಭರದೆಪಿಡಿಯಲ್ಕಿಚ್ಛಿಸುವೆ ಸಲೆ । ಯುರಿವಬೆಂಕಿಯ ಕಟ್ಟಲೆಳಸುವೆ ವಸ್ತ್ರದಿಂದಿರದೆ । ಪಿರಿದೆನಿಪ ಕಬ್ಬಿಣವಶೂಲೆ ಗಿ । ದಿರೊಳುಪ್ರೋಗ ಲಪೇಕ್ಷಿಸುವೆ ಕ । ರ್ಬುರನೆ ರಾಮನಪತ್ನಿಯನು ಕೊಂಡೊಯ್ಯಬೇಕೆನುತ ॥ ೧೪ ॥ ಅರರೆಜಂಬುಕ ಸಿಂಹಗಳಿಗಂ । ತಿರುವುದಂತರ ತೋರ್ಪುದೆಂತಂ । ತರವುಕಾಲ್ವೆ ಕಡಲುಗಳಿಗೆ ಸೀಸಕನಕಂಗಳಿಗೆ ॥ ಇರುವುದೆಂತಂತರವು ಗಂಧ ಕೆ । ಸರುಗಳಿಗೆ ಕಾಣಿಸುವುದೆಂ ತಂ । ತರವು ತಾನಂತಿರುವುದಂತರ ನಿನಗೆ ರಾಮನಿಗೆ ॥ ೧೫ ॥ ಕರಿಬಿಡಾಲಗಳಿಗೆನಿತಂತರ । ಮಿರುವುದೀ ಧಾರುಣಿಯೊಳೊಪ್ಪುವ । ಗರುಡವಾಯಸಗಳಿಗದಂತರವೆಂತಿಹುದು ನೋಡೆ ॥ ಪಿರಿನವಿಲು ನೀರ್ಕಾಗೆಗಳಿಗಂ । ತರವು ತಾನೆನಿತಿರುವುದಂತಂ । ತಿರುವುದಾರಘುವೀರನಿಗೆ ನಿನಗಂತರವಿಳೆಯೊಳು ॥ ೧೬ ॥ ಧರಣಿಯೊಳ್ಕಂಗೊಳಿಪ ಹಂಸಕೆ । ಸರಿಯೆನಿಪ್ಪುದೆ ಗೃಧ್ರವದರಂ । ತೆ ರಘುನಂದನಿಗೇಂ ಸಮನೆನೀಂ ಯೋಚನೆಯನುಳಿದು ॥ ಮರಣವನು ಕೋರುತ್ತ ನನ್ನನು । ವರಿಸಬೇಕೆಂದಿಂದು ಬೇಡುವೆ । ಭರದೆ ಬಂದಂದದಲಿನೀಂ ಪೋಗೆಂದಳಾಸೀತೆ ॥ ೧೭ ॥ ಜಾನಕಿಯ ನುಡಿಗಳನುಕೇಳುತ । ದಾನವಾಧಿಪ ರಾವಣನು ಸ । ನ್ಮಾನಿಸದೆ ಪೇಳ್ದನು

ಳಿಲೆನೀತೆ ನೀನಿಂತು ‖ ಜ್ಞಾನವಿಲ್ಲದೆ ನುಡಿವೆ ನನ್ನ ಸ । ಮಾನರುಂ
ವಿಚಾರಿಸಲು ಕೇ । ಳ್ಳೀನೆನುತ ತಿಳಿಸಿದನು ಕುಲಬಲಸಾಮಗಳ
ರದೆ ‖ ೨೮ ‖ ನನಗೆಸೂರ್ಯನಳುಕುತ ಮಡವಿ । ಹಸುಸೆಗಳಕೆಯ
ವನನಂಜುತ । ನನಗೆಶೀತವು ಸೋಕದಂದದೆ ಬೀಸುವನುತಾನು ‖
ನಲನುಷ್ಣವೆನಾಗಿಸನು ಮೇ । ದಿನಿಯೊಳೆಲ್ಲರು ಭೀತಿಪಡುವರು ।
ನಗ ಯೋಚನೆಯಿಲ್ಲದೆನ್ನನು ಬಿಡಬಹುದೆಪೇಳ್ ‖ ೨೯ ‖ ತರುಗಳೆ
ಲ್ಲವು ನನ್ನ ಭಯದಿಂ । ದುರೆ ಕದಲದೆಲೆಗಳನು ತಾವಾಂ । ತಿರುತಿಪವು
ನದಸದಿಗಳಾ ತೀವ್ರಗಮನವನುಳಿದು ‖ ಹರಿವುವೆನ್ನಯ ಭೀತಿಯಿಂದ
ಲೆ । ಗಿರಿಗಳೆಲ್ಲವು ಕಂಪಿಸುವು ವಿದ । ನರಿಯದೆನ್ನನು ನೀನು ಪೋಗೆಂ
ಬುದುಚಿತವೆನಿನಗೆ ‖ ೩೦ ‖ ನನ್ನ ಪಟ್ಟಣವೆನಿಸ ಲಂಕೆಯು । ಸನ್ನು
ತಿವಡೆದ ಜಲಧಿಮಧ್ಯದೊ । ಳನ್ನಗವಿರುತ ವೀರರಾಕ್ಷಸರಿಂದೆ ತುಂಬಿ
ಹುದು ‖ ಮನ್ನಣೆಯನಾಂ ತಮರ ಪುರಿಯಂ । ತುನ್ನತಿಯನಾಂತಿಪು
ದು ಬಳಸಿ । ಪ್ರಸನ್ನತ ಪ್ರಾಕಾರದಿಂದುರೆ ರಂಜಿಸುತ್ತಿಹುದು ‖ ೩೧ ‖
ಕನಕ ಕಕ್ಷ್ಯೆಗಳಿಂದೆಸೆವುವೆ । ನ್ನ ನಗರವು ವೈಡೂರ್ಯಮಯತೋ ।
ರಣಗಳಿಂ ಹೊಳೆಯುವುದು ಹಸ್ತ್ಯಶ್ವರಥತತಿಯಿಂದೆ ‖ ಅನವರತ
ತುಂಬಿಹುದು ತೂರ್ಯದ । ನಿನದಗಳ ಸೊಂಪಿಂದೆ ಮೆರೆಯುತ । ವಿನುತಿ
ವೆತ್ತಿಹುದಖಿಳ ವೈಭವಯುಕ್ತಮಾಗಿಹುದು ‖ ೩೨ ‖ ಸಕಲ ಕಾಲದೆ
ಪುಷ್ಪ ಫಲಗಳ । ನು ಕೊಡುವಮಹೀರುಹಗಳನು ತಾ । ಳ್ದಖಿಳ
ವನಸಂದೋಹದಿಂದಾ ಲಂಕೆ ಶೋಭಿಪುದು ‖ ಪ್ರಕಟತರ ಭೋಗಗಳ
ನಾನುತ । ಸುಖದೊಳೆನ್ನೊಡನೆ ರಮಿಸುತ್ತ ಮ । ನಕೆತರದೆ ರಾಘವ
ನ ಚಿಂತೆಯನಿರುವೆ ನೀನೆಂದ ‖ ೩೩ ‖ ತಂದೆ ದಶರಥನನುಡಿಯಿಂವಲೆ ।
ಬಂದಿಹನು ವನಕೆ ವಿಗತಾಯುಷ । ನೆಂದೆನಿಸುವನು ತಪಸಿಯಾಗುತ
ಭಿಕ್ಷೆಬೇಡುವನು ‖ ಇಂದುಮುಖಿನೀಂ ಕೇಳು ರಾಘವ । ನಿಂದಲೇಂಸು
ಖವಿಹುದು ನಿನಗೈ । ತಂದು ನೀಂ ನನ್ನೊಡನೆ ಸುಖಿಸದೆ ಬದಲು
ಪೇಳುತಿಹೆ ‖ ೩೪ ‖ ದನುಜರೆಲ್ಲರಿ ಗೊಡೆಯನೆಂದೆನಿ । ಪೆನು ಮದನ
ತಾಪದೊಳು ನಾನಾ । ಗಿನಡೆತಂದಿಹೆನೆಲೆ ಮಹೀಸುತೆ ಕೇಳು ನಿನ್ನೆಡೆ
ಗೆ ‖ ನನಗೆ ಸಮನಲ್ಲಾ ರಘೂದ್ವಹ । ಮನವೊಲಿಸದೇತಕ್ಕೆ ನೀಂನುಡಿ ।
ವೆ ನನಗೆ ಬದಲು ನಿನ್ನ ಭಾಗ್ಯೋದಯದೊಳೈತಂದೆ ‖ ೩೫ ‖ ವರಿಸ
ಬೇಕೆನುತ ನುಡಿದಾ ದಶ । ಶಿರನಿಗಾ ಭೂಮಿಸುತೆ ಪೇಳದ । ಳು ರಜ
ನೀಚರರಾಜರಾಜನ ತಮ್ಮನೆನಿಸುತ್ತ ‖ ದುರುಳತನದಿಂ ಕಠಿನನೆಂದೆನಿ ।

ಸಿರುವೆ ಬಹು ಪಾಪಿಷ್ಠನಾಗಿಹೆ । ಧರೆಯೊಳು ಮತಿವಿಹೀನನು ಜಿತೇಂ
ದ್ರಿಯ ರಹಿತನೆನಿಪೆ ॥ ೩೬ ॥ ದನುಜರೆಲ್ಲರು ಲಯವನೈದುವ । ರು ನಿ
ನಗೊದಗಿತು ಸಾವುವಿಬುಧೇಂ । ದ್ರನ ಸತಿ ಶಚೀದೇವಿಯಂತೆನ್ನನು
ಬಯಸಿ ನೀನು ॥ ಮನದೊಳಾನಂದಿಸುವೆ ನಿನ್ನಿಂ । ದೆನಿಜಬಂಧು
ಗಳೆಲ್ಲ ಮಡಿದಪ । ರುನಿನಗೆ ವಿನಾಶನವು ಬಂದಿಹುದೆಂದಳಾಸೀತೆ ॥ ೩೭ ॥
ದನುಜವಲ್ಲಭನಾಮಹೀಸುತೆ । ಯ ನುಡಿಗಳನಾಲಿಸುತಿರದೆ ಪೇ । ಳ್ದನೆ
ಲೆ ಜಾನಕಿ ಮತ್ತತೆಯೊಳಂದೆನ್ನ ವಿಕ್ರಮವ ॥ ಮನಕೆತಾರದೆ ನುಡಿ
ಯುತಿರುವೆ ಗ । ಗನದೊಳಗಿರುತ್ತವನಿಯ ಧರಿಸಿದ । ಪೆನು ನಿಜಭು
ಜಂಗಳಲಿ ಸಾಗರ ಜಲವ ಕುಡಿಯುವೆನು ॥ ೩೮ ॥ ಸಮರದೊಳು
ವಧಿಸುವೆನು ಮೃತ್ಯುವ । ನುಮಿಹಿರನಘಾತಿಸುವೆ ನಸ್ತ್ರದೊ । ಳು
ಮಹಿಯನು ನಾಂ ಸೀಳ್ವೆ ಪ್ರಡಿಮಾಡುವೆನು ಬೆಟ್ಟಗಳ ॥ ಕಮಲಲೋ
ಚನೆ ವರಿಸುನನ್ನನು । ವಿಮಲಮತಿಯಿಂದೆನ್ನುತಾಗಳ್ । ರಮಣಿ
ಸೀತೆಗೆ ತೋರಿಸಿದ ನಿಜರೂಪವನು ಬಗೆದು ॥ ೩೯ ॥ ತೊರೆದ
ಮಲಸನ್ಯಾಸಿವೇಷವ । ನು ರಮಣೀಮಣಿಸೀತೆಗಾ ದಶ । ಶಿರನು ತೋರ್ದ
ನು ನೈಜರಾಕ್ಷಸರೂಪವನು ಭರದೆ ॥ ಅರುಣನೇತ್ರದತಾಳ್ದ ಕನಕಾ ।
ಭರಣಭುಜಗಳ ಹತ್ತುತಲೆ ಗಳ । ದುರುಳ ರಾವಣನಾಗ ಸೀತೆಯ
ಕಣ್ಗೆ ಕಾಣಿಸಿದ ॥ ೪೦ ॥ ಅರುಣ ವಸ್ತ್ರಂಗಳನು ಹೊದೆದಾ । ಕರಿ
ಮುಗಿಲ್ಗಣೆಯೆನಿಪ ದಶಕಂ । ಧರನಧಿಕ ಕೋಪವನುತಾಳುತ ನುಡಿದ
ಜಾನಕಿಗೆ ॥ ಸರಸಿಜಾನನೆ ಮೂರುಲೋಕದೊ । ಳುರೆವಿನುತಿವೆತ್ತನ್ನ
ವರಿಪುದು । ಸರಿಯೆನಿಸಿಕೊಂಡಿಹೆನು ಪತಿರೂಪದೊಳು ನಿನಗೆನುತ
॥ ೪೧ ॥ ನಿನಗೆ ಯೆಳ್ಳನಿತ ಪ್ರಿಯವನೆಸ । ಗೆನೆಲೆ ಕೋಮಲೆ ಕೇಳು
ರಾಮನೊ । ಳು ನೆಲಸಿದವಿಶ್ವಾಸವನು ಬಿಡು ನನ್ನೊಳಿರಿಸದನು ॥
ವನಿತೆವಾಕ್ಯಕೆ ರಾಜ್ಯವನುಳಿದು । ವನಕೆ ಬಂದಾ ಮೂಢಮತಿಯಿಂ ।
ದ ನಿನಗೇಂ ಫಲಮೆನುತತಿಭರದೆ ಹತ್ತಿರಕೆಬಂದ ॥ ೪೨ ॥ ಬುಧನು
ರೋಹಿಣಿಯನ್ನು ವರಿಸಿ ಪಿ । ಡಿದತೆರದೊಳಾ ದನುಜವಲ್ಲಭ । ನುಧರಣೀ
ಸುತೆಯ ತಲೆಯನು ಪಿಡಿದೆಡವಕೈಯಿಂದೆ ॥ ಚೆದರಿಸುತ ತೊಡೆಗಳನು
ಕೂಡೆ ಪಿ । ಡಿವು ಬಲವಕೈಯಿಂದೆ ತನ್ನಂ । ಕದೊಳು ಕೂಡಿಸಿಕೊಂ
ಡ ನೆತ್ತಿಕೊಳುತ್ತ ಶೀಘ್ರದಲಿ ॥ ೪೩ ॥ ಮರಣ ದೇವತೆ ಗಿಮ್ಮಿಗಿಲೆನಿ
ಸು । ತುರುಭುಜಬಲ ಪರಾಕ್ರಮಿಯೆನಿಪ । ಸುರನ ರೂಪವ ಕಂಡು
ವನದೇವತೆಗಳಂಜಿದರು । ಖರಗಳನುತಾನಾಂತು ಬಹುಕಠಿ । ನರ

ವೇವನುಮಾಡುತಿಹ ರಾವಣ । ನರಥಕಾಣಿಸಿತಾಗ ಮಾಯಾಕಾರವೆನು
ತಾಳ್ದು ॥ ೪೪ ॥ ಭರದೊಳಾ ದಶಶಿರನು ಸೀತೆಯು । ನಿರದೆ ಕಾಂಕು
ಳೊಳಿರಿಸಿಕೊಳ್ಳುತ । ನೆರೆವಿರಾಜಿಪ ರಥಕಡರ್ದನು ಬಹಳ ಹರ್ಷದಲಿ ॥
ಧರಣಿಸುತೆ ರಾವಣನಧೀನದೊ । ಳಿರುತ ಕಾನನದೊಳತಿದೂರಕೆ ।
ತೆರಳಿದಾ ರಘುವರನ ಕೂಗುತ ರೋದಿಸಿದಳಿರದೆ ॥ ೪೫ ॥ ಕಾಮಪೀಡಿತ
ನಹ ದಶಶಿರನು । ಕಾಮವಿಲ್ಲದ ಸೀತೆಯನುತಾಂ । ತಾಮಸವನುಳಿದೆ
ತ್ತಿ ಕೊಂಡಂಬರಕೆ ಹಾರಿದನು ॥ ತಾಮರಸಲೋಚನೆ ದುಃಖಿಸುತ ಹಾ ।
ರಾಮ ಹಾ ಸೌಮಿತ್ರಿಯೆನುತಂ । ದಾಮರುತ್ಪಥದಲ್ಲಿ ರೋದಿಸುತಿದ್ದಳತಿ
ಭಯದೆ ॥ ೪೬ ॥ ತಂದೆಲಕ್ಷ್ಮಣ ಖೂಳರಾವಣ । ಬಂದು ನನ್ನನು ಕೊಂ
ಡು ಪೋಗುವ । ನಿಂದು ಲಂಕೆಗೆ ಸೀನರಿಯದಿಹೆಕೇಳು ನನ್ನಿರವ ॥
ಮುಂದೆ ಗತಿಯೇನೆನಗೆ ನಿನ್ನನು । ನಿಂದಿಸಿದೆನಾಂ ಮುಳಿದು ವಿಪಿನದೊ
ಳಂದು ನೀಂ ರಘುನಂದನಗೆ ತಿಳುಪೆಂದು ಹಲುಬಿದಳು ॥ ೪೭ ॥ ದನುಜ
ವಲ್ಲಭ ಖೂಳ ದಶಕಂ । ಠನು ತೆಗೆದುಕೊಂಡೊಯ್ವ ನೆನ್ನನು । ನಿನಗೆ
ಕಾಣದರೀತಿಯೊಳು ಲಂಕಗತಿವೇಗದಲಿ ॥ ಇನಯ ಸೀನೆಂತರಿವೆ ಹಾ
ಹಾ । ನನಗೊದಗಿದೀ ಕಷ್ಟವನು ಬಿಡಿ । ಸೆನುತ ರಾಮನಕೂಗಿ ಯ
ತ್ತಳು ಸೀತೆ ಗಗನದಲಿ ॥ ೪೮ ॥ ಎಲೆ ವನಗಳಿರ ವನದದೇವತೆ । ಗಳಿರ
ವೃಕ್ಷಂಗಳಿರ ಖೇಚರ । ಗಳಿರ ಮೃಗಗಳಿರ ನದಿಗಳಿರ ಮಹೀಧರಂಗಳಿ
ರ ॥ ನೆಲದಣುಗಿಯನು ಕೊಂಡುಪೋದನು । ಖಳದಶಾಸ್ಯನೆನುತ್ತ ಪೇ
ಳಿರಿ । ತಳುವದುರಘುಪತಿಗೆನುತ ಕೈಮುಗಿದು ಬೇಡಿದಳು ॥ ೪೯ ॥
ದಶಶಿರನೊಡನೆ ಪೋಗುತಾಗಳೆ । ಶಶಿವದನೆ ಗೋದಾವರಿಯು ನೀ । ಕ್ಷಿ
ಸುತ ತಳುವದೆ ಬೇಡಿದಳು ಕೈಗಳನುಜೋಡಿಸುತ ॥ ಅಸುರ ರಾವಣ
ಕೊಂಡುಪೋದನು । ವಸುಮತೀ ನಂದನೆಯ ನೆಂದೆನು । ತುಸುರುವು
ದು ರಾಘವನಿಗೆಂದಾ ಗಗನಮಾರ್ಗದಲಿ ॥ ೫೦ ॥ ಕೈಕೆನಿನ್ನಯ ಕೋರಿ
ಕೆ ಫಲಿಸಿ । ತೀ ಖಳದಶಗ್ರೀವನೆನ್ನನು । ತಾ ಕಡುಜವದೊಳೆತ್ತಿ ಕೊಂ
ಡ್ಯೆದುತಿಹ ನಿಂದೆನುತ ॥ ಭೀಕರದೊಳಾ ಸೀತೆಪೋಗುತ । ಶೋಕದಿಂದ
ಲೆ ನಮಿಸಿಪೇಳಿದ । ಳೀಕಡೆ ಪ್ರಸ್ರವಣಗಿರಿ ಗರುಹೆನುತ ರಾಮನಿಗೆ ॥
॥ ೫೧ ॥ ಅಳುತಜಾನಕಿ ರಾವಣನ ರಥ । ದೊಳತಿದುಃಖವ ನೈದುತಾಗ
ಳೆ । ತಳುವದೆ ಜಟಾಯುವನು ಕಾಣುತ ಮರದಕೊಂಬೆಯಲಿ ॥ ಖಳ
ದಶಾನನಕೊಂಡು ಪೋಗುವ । ನೆಲೆಜಟಾಯುವೆ ನನ್ನನೋಡೆಂ । ದಳು
ಕಿ ಕೂಗಿದಳೊಡನೆ ಹಾಯೆನುತ ಧಿಕಶೋಕದಲಿ ॥ ೫೨ ॥ ಅವನಿಜಾ

ತೆಯ ನುಡಿಯುಕೇಳು । ತ್ತವನಿರುಹದೊಳಿದ್ದ ಗೈಯುತ್ತಿ । ಹವಿಹ
ಗೇಂದ್ರ ಜಟಾಯುವು ಘನರೋಷವನುತಾಳುತ್ತ ॥ ತವಕದಿಂದಾ ರಕ್ಕಸ
ನೊಡನೆ । ಬವರಂಕುಜ್ಜುಗಿಸಿದನು ಗಗನದೊ । ಳವರಿಗಾಗಳೆ ನಡೆದುದ
ತಿ ಘೋರತರ ಸಂಗರವು ॥ ೫೩ ॥ ದನುಜವಲ್ಲಭ ವಿಹಗವಲ್ಲಭ । ರುನೆರೆ
ಕಾದಿದ ರಂತರಿಕ್ಷದ । ಲಿ ನಿಶಿಚರವರನಿರದೆ ಪಕ್ಷಿಯನೈದುಬಾಣದಲಿ ॥
ಕನಲಿಘಾತಿಸಿದನು ಜಟಾಯುವ । ದನೆಣಿಸದೆ ಗಾಯಗಳನಾಗಿಸಿ । ದನು
ದಶಗ್ರೀವನಿಗೆ ನಖಮುಖ ಚರಣಘಾತದಲಿ ॥ ೫೪ ॥ ಹತ್ತುಬಾಣಗಳಿಂದೆ
ಹೊಡೆದನು । ಮತ್ತೆ ರಾವಣನಾ ಜಟಾಯುವ । ನತ್ತ ರಾವಣನ ರಥಸಾ
ರಥಿ ರಥದಖುರಗಳನು ॥ ಸತ್ತಿಗೆಸಹಿತಲಾ ಜಟಾಯುವು । ಕತ್ತರಿಸಿದನು
ಕೊಕ್ಕುಗುರುಗಳ । ವೊತ್ತದಲಿ ದಶಕಂಠಕಡಿದನು ರೆಕ್ಕೆಗಳನವನ ॥
॥ ೫೫ ॥ ಕೊಂದು ರಾವಣನಾಜಟಾಯುವ । ನಂದುಸೀತೆಯನೆತ್ತಿಕೊಂ
ಡಾ । ನಂದದಿಂದಲೆ ಹಾರಿದನು ಬಹುಬೇಗನೆ ಗಗನಕೆ ॥ ನೊಂದು ನೆಲ
ದೊಳುಬಿದ್ದಪಕ್ಷಿಯು । ಮುಂದೆ ನೆರೆರೋದಿಸಿದಳವನೀ । ನಂದನೆಮಹಾ
ದುಃಖದೊಳು ಹಾ ರಾಮ ಹಾಯೆನುತ ॥ ೫೬ ॥ ಪವನಬೀಸದೆ ಪೋದ
ನಾಗಳೆ । ರವಿಗೆ ಕಾಂತಿವಿಹೀನವಾಯ್ತು ಜ । ಗವನು ಕಾವಳಮುಚ್ಚಿ
ತಸುರೇಂದ್ರ ನವನೀಸುತೆಯು ॥ ತವಕದಿಂದೊಯ್ಯುತಿರೆ ಚೀರಿದ । ಳವ
ನಿಜೆ ಜಟಾಯುವನು ವಧಿಸಿದೆ । ಜವದೊಳೆನ್ನನು ಕೊಂಡುಪೋಗುವೆ
ಕಳ್ಳನಂತೆನುತ ॥ ೫೭ ॥ ನನ್ನ ಗಂಡನು ನೋಡುವಂದದೆ । ನನ್ನ ಪಿಡಿದಿರೆ
ಖರನತೆರದೊಳು । ನಿನ್ನ ನಂತಕನೆಡೆಗೆ ಕಳುಹಿಸುತಿದ್ದ ನೆನ್ನಪತಿ ॥
ನಿನ್ನ ಶೌರ್ಯಸ್ಥೈರ್ಯ ಧೈರ್ಯಗ । ಳನ್ನು ಸುಡಬೇಕವನಿಯೊಳು ನೀ ।
ನಿನ್ನು ಜೀವಿಸಲಾರೆಯೆನ್ನುತ ಪೇಳ್ದಳಾಸೀತೆ ॥ ೫೮ ॥ ಜಾನಕಿಯನಂ
ಕದೊಳಿರಿಸಿಕೊಂ । ಡಾ ನಿಶಾಚರನೈದಿದನು ಪವ । ಮಾನನಂತ್ರತಿ ವೇಗ
ದಲಿ ದಕ್ಷಿಣದೆಶೆಯೊಳಂದು ॥ ದೀನತೆಯೊಳಾ ಸೀತೆ ಹಾ ಹಾ । ಪ್ರಾಣ
ನಾಥನೆ ಹಾ ರಘುವರನೆ । ನೀನೆಗತಿಯೆನುತಳುತ ಕಂಡಳು ಋಷ್ಯ
ಮೂಕವನು ॥ ೫೯ ॥ ಹರಿದು ಸೀರೆಯ ಸೆರಗನಾಗಲೆ । ಧರಣಿಯಾತ್ಮ
ಜೆ ತನ್ನಕನಕಾ । ಭರಣಗಳನದರೊಳಿರಿಸುತಕಟ್ಟಿ ಗಿರಿಶಿಖರದೊಳು ॥
ತರಣಿಸುತ ಸುಗ್ರೀವನನು ಬಳ । ಸಿರುವ ಕಪಿಗಳು ನಾಲ್ವರನಡುವೆ ।
ಭರದೊಳಂದು ಬಿಸುಟಳು ರಾಮನಿಗೀಯಬೇಕೆನುತ ॥ ೬೦ ॥ ಹಾ
ರಮಣ ಹಾರಾಮ ಹಾರಣ । ಧೀರಹಾಸೌಮಿತ್ರಿದೇವರ । ಹಾರಘುಕುಲೋ
ತ್ತಮ ಯೆನುತರಾವಣನ ತೊಡೆಯೊಳಗೆ ॥ ಧಾರುಣೀ ಸುತೆರೋದಿಸು

ತ್ತಿರೆ । ಕ್ರೂರರಾವಣ ಕಳೆದು ಪಂಪೆಯ । ನಾರವಮಣಿಸಹಿ ತಂದು ತೆಂಕಣಕಡಲ ದಾಟಿದನು ॥ ೬೧ ॥ ತೊಡೆಯೊಳಿಪ ಭೂಜಾತೆ ಸಹಿತಾ । ಕಡಲದಾಟುತ ಲಂಕೆಗೈತಂ । ದೊಡನೆ ರಾವಣನಿರಿಸಿದನು ಸೀತೆಯನರ ಮನೆಯಲಿ ॥ ಪೊಡವಿಸುತೆಗೆ ವರಮಣಿಮೌಕ್ತಿಕ । ದೊಡವೆಗಳ ಚೀ ನಾಂಬರಂಗಳ । ಕೊಡುವುದೆನ್ನುತ ಕೂಡೆರಕ್ಕಸಿಯರಿಗೆ ಪೇಳಿದನು ॥ ॥ ೬೨ ॥ ನೆನೆದೊಡೆಭಯವಸೀವ ಕರ್ಕಶ । ರೆನಿಪರಕ್ಕಸಿಯರಿಗೆ ಪೇಳ್ದ ನ । ವನಿಜೆಕೇಳ್ದುದ ನೀವುದೆಂದೆನುತಸುರವಲ್ಲಭನು ॥ ಮನದೊಳಾರಾ ದೊಡಹಿತವ ನಾ । ವನಿತೆಗಾಚರಿಸಿದೊಡೆ ಕೊಲ್ಲುವೆ । ನೆನುತಪೇಳ್ದು ಕೃತಾರ್ಥನೆನ್ನುತ ತತ್ನನಂದರಿದ ॥ ೬೩ ॥ ಲಲನೆಜಾನಕಿಯನ್ನಚಿತ್ತವ । ನೊಲಿಸಿರಾಘವ ನನುಳವಂತೆ ಹ । ಗಲಿರುಳಾಕೆಗೆನುಡಿದು ವಿಹಿತೋಕ್ತಿ ಗಳನೆಲ್ಲವನು ॥ ಹಲವುಬಗೆಯಿಂ ದೊಪ್ಪಿಸಿರೆನುತ । ತಿಳಿಸಿರಕ್ಕಸಿಯರಿಗೆ ರಾವಣ । ಕಳುಹಿಕೊಟ್ಟನು ಧರಣಿಜಾತೆಯಬಳಿಗೆ ಸಂತಸದಿ ॥ ೬೪ ॥

ಇಂತು ಹನ್ನೊಂದನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೫೭೩



## ಹನ್ನೆರಡನೆಯ ಅಧ್ಯಾಯ.

ಸೂಚನೆ ॥ ಮೇದಿನೀಸುತೆಯನ್ನು ವರಿಸೆನು ।
ತಾ ದಶಾಸ್ಯನು ಬೇಡಲೊಪ್ಪದೆ ।
ಪೋದಬಳಿ ಕಾಕೆಯನಶೋಕಾವನದೊಳಗಿರಿಸಿದ ॥

ಬಳಿಕರಾವಣನೊಂದುದಿನ ಮನ । ದೊಳು ನೆನೆದು ಜಾನಕಿಯ ನಾಗಳೆ । ಬಳೆದ ಕಾಮಾತುರದೊಳರಿಯದೆ ಯೊಂದನತಿಭರದೆ ॥ ಕಳೆ ದು ಲಜ್ಜಾಭಯಗಳನು ತಾಂ । ತಿಳಿಯದೆ ತನಗೆ ಮುಂದೆಸಂಭವಿ । ಪ ಲಯವನು ಜಾನಕಿಯಬಳಿಗೈತಂದ ನಂದಿರದೆ ॥ ೧ ॥ ನೆರೆದರಕ್ಕಸಿಯರ ನಡುವೆ ರಘು । ವರನಚಿಂತಿಸುತ ಬಹುಶೋಕದೊ । ಳುರೆಬಳಲಿ ಬೆಂ ಡಾಗಿ ಬಿಸುಸುಯ್ಯುತ್ತ ಕಂಬನಿಯ ॥ ಸುರಿಸಿರೋದಿಸುತಾ ಮಹೀಸುತೆ । ಶಿರವಬಾಗಿಸ್ಸಿ ಜಲಧಿಮಧ್ಯದೆ । ನೆರೆಮುಳುಗಿದಾ ಹಡಗಿನಂತಿರಲಸುರ ನೈತಂದ ॥ ೨ ॥ ವನದೊಳಾ ಮೃಗಯೂಥಗಳನುಳಿ । ದು ನಡುಗುತ್ತಿ ಹ ಹೆಣ್ಣುಮಿಗದವೊ । ಲು ನೆರೆದುಃಖಿಪ ಮೇದಿನೀಸುತೆಗಾ ನಿಶಾಚರ ಹು ॥ ಮನದೊಳಾನಂದವನು ತಾಳುತೊ । ಡನೆ ಸುರಭವನದಂತೆ ಕಂ

ಗೊಳಿ । ಪ ನಿಜರಾಜಭವನವೆತೋರಿದನಂದು ವಿವರಿಸುತ ॥ ೩ ॥ ಜನಕ
ಸುತೆ ನೋಡಿದಳು ದಳಕಂ । ಠನಮನೆಯೊಳೊಪ್ಪುತಿಹ ಬಹುಜನ ।
ವನಿತೆಯರನಾ ಮಂಜುಳತರದ ಪಕ್ಷಿನಿವಹವನು ॥ ವಿನುತಿವೆತ್ತಿರೆ ಮೆ
ರೆವ ವಿವಿಧ ರ । ತುನಸಮೂಹಂಗಳನು ಪ್ರಾಸಾ । ದ ನಿಕರಂಗಳ ಸಂ
ತೆಸೆವ ಹರ್ಮ್ಯಂಗಳೆಲ್ಲವನು ॥ ೪ ॥ ಕನಕ ರಜತ ಸ್ಫಟಿಕ ದಂತದ ।
ಘನತರ ಸ್ತಂಭಂಗಳೆಸೆದವು । ವಿನುತಗೋಮೇಧಿಕ ವಿಡೂರಜ ವಜ್ರ
ರಾಶಿಗಳು ॥ ಜನರ ಕಣ್ಮನಕೊಪ್ಪುತಿರ್ದುವು । ಮನೆಯೊಳುರೆ ತುಂಬಿ
ರ್ದುವಾಧನ । ಕನಕವಸನಾಭರಣಗಳಧಿಕ ಮಾಗುತೆಲ್ಲಕಡೆ ॥ ೫ ॥
ಬಳಕರಾವಣ ದೇವದುಂದುಭಿ । ಗಳನಿಕರದಿಂದಿಡಿದು ನೆರೆಹೊಳೆ । ಹೊ
ಳೆವ ಚಿನ್ನದ ತೋರಣಂಗಳನಾಂತು ರಂಜಿಸುತ ॥ ಥಳಥಳಿಪಸೋಪಾನ
ಗಳನಾ । ನೆಲದಣುಗಿಯೊಡನಂದು ಹತ್ತಿದ । ನೊಲಿಸಬೇಕೆಂದಾ ಮಹೀ
ಸುತೆಯು ಸತಿಸಂತಸದಿ ॥ ೬ ॥ ಅಲ್ಲಿಕಂಗೊಳಿಸುತ್ತ ತೋರ್ದುವು । ಬೆಳ್ಳಿ
ಜಂತದ ಘನಗವಾಕ್ಷಗ । ಳೆಲ್ಲಡೆಯೊಳೊಪ್ಪಿದವು ಕನಕಸಮೂಹದಿಂದೆ
ಸೆವೆ ॥ ಸಲ್ಲಲಿತ ಪ್ರಾಸಾದಪಙ್ಕ್ತಿಗ । ಳೆಲ್ಲರಿಗೆ ಸಂತಸವನಾಗಿಸು । ತಲ್ಲೆ
ಸೆದುವು ಸುಧಾಮಣಿಗಳಿಂದೊಪ್ಪಿದ ನೆಲಗಳು ॥ ೭ ॥ ಕಮಲಕಲ್ಹಾರಂ
ಗಳನುತಳೆ । ದಮಲಜಲದಿಂದೆಸೆವತಿ ವಿಶಾ । ಲಮೆನಿಪ ಸರೋವರಗಳ
ನು ನೋಡಿದಳು ಭೂಮಿಸುತೆ ॥ ಸುಮಸಮುದಯವನಾಂತು ಕಂ
ಗೊಳಿ । ಪ ಮರಗಳನಾನಂದಿಪ ವಿಹಂ । ಗಮನಿಕರವನು ತರತರದ ಬ
ಣ್ಣದಜಲಚರಗಳ ॥ ೮ ॥ ಇಂತು ರಾವಣನಾಮಹೀಸುತೆ । ಗಂತಮಿಲ್ಲ
ದ ವಸ್ತುಗಳನ । ತ್ಯಂತ ಸಂತಸದಿಂದೆ ತೋರುತಲೆಲ್ಲವನು ಬಿಡದೆ ॥
ಚಿಂತಿಸದೆ ಪತಿನಾಮವನು ನೀ । ನಂತರಂಗದೊಳೆನ್ನ ವರಿಸಿಯೆ । ಸಂ
ತತವು ಸೌಖ್ಯವನು ತಾಳುವುದೆಂದು ಪೇಳಿದನು ॥ ೯ ॥ ಲಲನೆಕೇಳ್ಳೀಂ
ವನಧಿಮಧ್ಯದೆ । ಹೊಳೆವಲಂಕೆಗೆ ರಾಜನಾಗಿಹೆ । ನೊಲಿದುಸೇವಿಸುತಿ
ಹರುಹತ್ತಿಪ್ಪತ್ತು ಕೋಟಿಯುಹ ॥ ಖಳನಿಶಾಚರ ರೆನ್ನನವರೀ । ನೆಲ
ದೊಳತಿ ಘೋರತರ ರೂಪಂ । ಗಳನು ಹೊಂದಿಹರೆಲ್ಲರಿಗೆ ಬಹು ಭಯ
ವನಾಗಿಸುತ ॥ ೧೦ ॥ ಧನಮನಃಪ್ರಾಣಂಗಳನು ನಾಂ । ನಿನಗೆ ಕೊಟ್ಟ
ಹೆನುಳಿಸು ಮಾನವ । ನಿನಗಧೀನವೆನಿಸುವು ವುತ್ತಮ ಭೋಗಭಾ
ಗ್ಯಗಳು ॥ ನನಗೆ ಪ್ರಾಣಾಧಿಕಳೆನಿಪೆ ನೀಂ । ನನಗರಸಿಯಾಗು ತೊತ್ತಿ
ಡೆಯುಳಿಂ । ದೆನಿಪೆ ಕೋಟಿ ಸಹಸ್ರ ನಾರಿಯರಿಗೆ ನಿರಂತರವು ॥ ೧೧ ॥
ಇತರ ಬುದ್ಧಿಯೊಳೇನು ಫಲವಹು । ದತಿಶಯಮೆನಿಪ ಕಾಮಬಾ

ಾ । ಳು ತಪಿಸುತ್ತಿಹ ನನ್ನ ಸಂತತವೊಲಿಸೆಲೆ ರಮಣಿಯೆ ||
ಕಾಲ ಸಮುದ್ರ ಮಧ್ಯದೆ । ಸತತ ಮೆಸೆವುದು ಲಂಕೆಕೇಳದ ।
ಡೆವಮಹಾ ಶೂರರಿಹರೇ ನಖಿಳಲೋಕದಲಿ || ೧೦ | ಸುರನ
ರಗ ಯಕ್ಷ ರಾಕ್ಷಸ | ಗರುಡ ಕಿನ್ನರ ಸಿದ್ಧಸಾಧ್ಯರೊ । ಳಿರುವ
ಳಿನ್ನ ಸಮನಹ ಘನಪರಾಕ್ರಮಿಯು || ಸರಸಿಜಾನನೆ ಕೇಳು
ಡ | ನೆ ರಣರಂಗದೊಳಿದಿರು ಸಿಲ್ಲದೆ । ತರಹರಿಸುವರು ಸಕಲ
ಕದ ವೀರರನವರತ || ೧೩ || ವನಿತೆಕೇಳಾ ರಾಘವನು ತಾಂ |
ಗಳಂತಿಹ ನಲ್ಪ ಕಾಂತಿಯು । ವನಿಸಿಪನು ದೀನತೆಯುಪಾಂತ
ರುವೆಸಿಸುವನು || ವಿನುತ ರಾಜ್ಯಭ್ರಷ್ಟನೆಂದೆನಿ । ಪನು ಮನು
ದೆನಿಪ ನಾರಾ | ಮನನುಳಿದು ನೀನೆನ್ನ ವರಿಸವೆನಿಂದೆ ಫಲವೇ
| ೧೪ || ನಿನಗೆ ನಾಂ ಸರಿಯೆಂದೆನಿಸುವೆ ನ । ವಸಿಜನನ್ನನು
ಗು ಯವ್ವನ । ವು ನಿನಗು ಮೆನಗು ಶಾಶ್ವತವೆನೀಂ ರಮಿಸು
ಡನೆ || ಅನಿಲವೈಶ್ವಾ ನರರಿಗಳವ । ಲ್ಲ ನಡೆತರಲೀ ಪಟ್ಟಣಕೆ
ನ್ನಿನಯನೆಂತೈತಹನು ಯೋಚಿಸು ನಿನ್ನ ಚಿತ್ತದಲಿ || ೧೫ ||
ಕ ಸೀನಾಲಿಪುದು ನನ್ನಯ । ಘನತರದ ಭುಜ ಶೌರ್ಯದಿಂದುರೆ | ಮ
ಲಿವರೀತಿಯೊಳು ನಿನ್ನನು ನಾನು ಸಲಹುತಿರೆ || ವನಧಿಯನು
ಸುತ ನಿನ್ನನು | ಘನಪರಾಕ್ರಮದಿಂದ ಬಿಡಿಸು । ತ್ತ ನಿಜ ನಗ
ಕೊಂಡುಪೋಗುವನೆಂತು ರಾಘವನು || ೧೬ || ಸಲಹು ಲಂಕಾ
ವನು ಕೋ | ಮಲೆ ನನಗೆ ಸಮರೆಂದೆನಿಪ ಕಡು । ಗಲಿಗಳು
ದಾಸರಾಗುತ ನಿನ್ನ ಸೇವಿಪರು || ಲಲನೆ ಬಿಡು ಲಜ್ಜೆಯನು
ಪಮ | ಬಲೆಯರಿಗೆ ಬಹುಕಾಲದಿಂದೆ ಮ । ಹಿಳೆಯರಿಗೆ ಬಂದಿ
ು ಕೇಳದರಿಂದ ಫಲವೇನು | ೧೭ || ಪ್ರಮದೆ ನಿನ್ನಯ ಪದವ
ಾಂ | ನಮಿಸುವೆನು ನೀಂಕರುಣಿಸೆನ್ನನು । ಕಮಲಲೋಚನೆ
ಧೀನದಿ ದಾಸನೆನಿಸುತ್ತ || ವಿಮಲಮತಿಯಿಂದೆಸಗುವೆನು ನಿ |
ಮನದಿಷ್ಟಾರ್ಥಂಗಳನು ನಿ | ನ್ನ ಮನವೊಪ್ಪುವ ರೀತಿಯಿಂದಲೆ
ಪೇಳದನು || ೧೮ || ಪರಿಮಳಾತಿಶಯವನು ಬೀರುತ। ಲುರೆಮೆಘ
ಿಸಿ ಸಲೆವಿರಾಜಿಪ | ತರತರದ ಚಂದನಕುಸುಮ ತಾಂಬೂಲಗಳನೊ
|| ಪರಮ ಸಂತಸದಿಂದೆ ಸೇವಿಸಿ | ವರವಿಮಾನದ ಮಧ್ಯದೊಳು
| ಸುರತ ಸೌಖ್ಯವನೈದುವುದೆನುತ ಪೇಳ್ದನವನಿಜೆಗೆ || ೧೯ ||
ಿವನಹ ಕುಬೇರನನು ಸಂ | ಗರದೊಳೋಡಿಸಿ ತಂದಿಹೆನು

ಸುಂ । ದರತರಮೆನಿಪ ವರವಿಮಾನವ ನತಿಪರಾಕ್ರಮದೆ ॥ ಮೆರೆವ ರವಿಗೆ ಸಮಾನಮಾಗಿಹು । ದುರುತರಮೆನಿಸಿಕೊಂಡತಿ ಮನೋ ಹರವನಾಗಿಪ್ಪುದೀ ವಿಮಾನವು ನೋಡೆ ಭೂತಳದಿ ॥ ೨೦ ॥ ಇಂದು ಮುಖಿ ಕೇಳತಿಮನೋಹರ । ಮೆಂದೆನಿಸ ನೋಟವನು ತಳೆದರ । ವಿಂದದಂತಿರೆ ಮೆರೆವ ನಿನ್ನಯ ಮುಖವು ಕಂದಿಹುದು ॥ ಹಿಂದೆನಾನಿಂ ತಾವವನಿತೆಗು । ವಂದಿಸಿಲ್ಲವರುಗಳ ನೀತೆರ । ದಿಂದೆ ಕೇಳಿದುದಿಲ್ಲ ನಿನ್ನನು ಬೇಡುವೆಂಪದಲಿ ॥ ೨೧ ॥ ಖಳನ ಮಾತುಗಳೆಲ್ಲವನು ಕೇ । ಳ್ದಳುತ ಮುಖವನು ಮುಚ್ಚಿಕೊಂಡಾ । ಲಲಿತೆ ವಸ್ತ್ರದೊಳಂದುನ ಯನಾಂಬುವನು ಸುರಿಸಿದಳು ॥ ಸಲೆ ವಿಷಾದಿಸಿ ಪಗಲಿರುಳು ಮಿನ । ಕುಲತಿಲಕರಾಘವನ ಜಾಪಿಸಿ । ಬಳಲುತತಿ ದೈನ್ಯವನುತಾಳ್ದ ಸ್ವಸ್ಥ ಳೆನಿಸಿದಳು ॥ ೨೨ ॥ ದನುಜವಲ್ಲಭ ನೀ ತೆರದೊಳಾ । ಪನಜಲೋ ಚನೆ ಜಾನಕಿಗೆ ಪೇ । ಳ್ದು ನಿಜಚಿತ್ತದೊಳಂದು ತಿಳಿದನು ಕಾಮವಶನೆ ನುತ । ಮನದೊಳಂಜುತ ಸೀತೆ ರಾಮನ । ನೆನೆದು ಕೋಪವನಾಂತು ಕೂಡೆ ರ । ಜನಿಚರೇಂದ್ರನಿಗೆಂದಳಾಗಲೆ ಪಿಡಿದು ಕಡ್ಡಿಯನು ॥ ೨೩ ॥ ಮನುಜಘಾತುಕಕೇಳು ರಘುನಂ । ದನನು ಭೂವರದಶರಥನಸುತ । ನೆ ನಿಪನು ವಿಶಾಲವಹ ನಯನಂಗಳನು ತಾಳ್ದಹನು ॥ ಘನಸುಬಾಹುಗಳಿಂ ದೆಸೆವನು ತ । ಪನಕುಲದೊಳುತ್ತಮನು ಜಗದೊಳು । ವಿನುತಿವೆತ್ತಿಹ ರಾಮನೆನಿಸುತ ಜನಸಮೂಹದಲಿ ॥ ೨೪ ॥ ವಿನುತಿಯಾಂತಿಹ ನಮಲ ಸತ್ಯದೊ । ಳೆನಗೆ ರಾಮನೆದೇವರಾಗಿಯು । ಮಿನಯನಾಗಿಯು ಮಿಹ ನು ಲಕ್ಷ್ಮಣಸಹಿತ ರಣದೊಳಗೆ ॥ ಘನಶರಗಳಿಂ ಕಡಿದಪನು ನಿ । ನ್ನನ ತಿ ಶೀಘ್ರದೊಳಾರಘುವರನೆ । ಲೆ ನಿಶಿಚರಕೇಳೆನುತ ಜಾನಕಿನುಡಿದಳಾ ಗ್ರಹಿಸಿ ॥ ೨೫ ॥ ದಾನವಾಧಮಕೇಳು ನನ್ನನು । ಕಾನನದೊಳಾ ರಾ ಮಲಕ್ಷ್ಮಣ । ರಾನಿಜಕುಟೀರದೊಳಿರುವ ವೇಳೆಯೊಳವರಿದಿರಲಿ ॥ ನೀ। ನು ವಂಚಿಸಿತಂದಿರೆ ಜನ । ಸ್ಥಾನದೊಳು ಖರನಳಿದತೆರದೊ । ಳ್ಪ್ರಾ ಣನಾಶವನೈದುತಿದ್ದೆ ರಘುವರನಂಜಿನಲಿ ॥ ೨೬ ॥ ಗರುಡನಲಿಹಾವುಗಳು ಸಾಯುವ । ತೆರದೊಳೀ ಘೋರಾಕ್ರಿತಿಗಳನು । ಧರಿಸಿ ದತಿಬಲಶಾಲಿಗಳೆ ನಿಪ ಖೂಳರಕ್ಕಸರು ॥ ಭರದೊಳು ವಿಷಾದವನು ತಾಳುತ । ಮರಣ ವನು ಹೊಂದುವರು ರಾಮನ । ಶರದೊಳಂದಾ ರಾವಣಗೆ ಪೇಳಿದಳು ಭೂಮಿಸುತೆ ॥ ೨೭ ॥ ಮನುಜಭಕ್ಷಕಕೇಳು ರಘುವೀ । ರನಶರಂಗಳು ನಿನ್ನ ದೇಹವ । ನು ನೆರೆಸೀಳ್ವುವು ನನ್ನ ಕೊಲ್ಲುವರಿಲ್ಲವೆಂದೆನುತ ॥

ಮನದೊಳಗೆ ತಿಳಿದಿರುವೆ ನೀನೆಲೆ । ದನುಜನಾಶಕನೆನಿಪ ರಘುನಂ ।
ದನನೆನಿನ್ನನು ಸಂಹರಿಸುವನು ಬೇಗಕದನದಲಿ ॥ ೭೮ ॥ ಸವನದೊ
ಳು ಕಂಗೊಳಿಪ ಯೂಪಕೆ । ಸವನಿಸಿಪ ಪಶುವಂತೆ ಪತಿಕೊ । ಲ್ಲುವೆ
ನು ನಿನ್ನನು ಖಂಡಿತವೆನುತ್ತ ತ್ರಿಳ ಚಿತ್ತದೊಳು ॥ ಅವನಿಗುರುಳಲಿ
ರವಿಶಶಿಗಳ । ರ್ಣವವು ಶೋಷಿಸಲಾ ರಘೂದ್ವಹ । ನು ವಹಿಲದೆ ಕೊಂ
ಡೊಯ್ಯದಿರನೆಂದೊರೆದಳವನಿಸುತೆ ॥ ೭೯ ॥ ಪಲಲ ಭಕ್ಷಕರ್ಕಳುನಿ
ನ್ನಯ । ಕುಲಬಲ ಶ್ರೀಚೇತನಂಗಳು । ವಿಲಯವಪ್ಪವುಸೇನೆ ಮೊರ್ಬ
ಲ ಸಹಿತ ಶೀಘ್ರದಲಿ ॥ ಲಲನೆಯರು ವೈಧವ್ಯವನು ತಾ । ವ್ತಾವರೀ
ಲಂಕೆಯೊಳು ನಿನ್ನಯ । ಕಲುಷದಿಂದೀ ಪುರದ ಶೂರರಿಗೊದಗುವುದು
ಮರಣ ॥ ೩೦ ॥ ಪತಿಯಬಳಿಯಿಂದೆನ್ನ ನೀಪುರ । ಕತಿ ಬಲಾತ್ಕಾರ
ದೊಳು ತಂದ ದು । ರಿತವು ಸೌಖ್ಯವೆನಾಗಿಪುದೆ ನಿನಗೆಂದಿಗಾದೊಡೆಯು ॥
ಕ್ಷಿತಿಯೊಳತಿ ಶೂರನಹನನ್ನಯ ಪತಿಯು ದೇವಸಮಾನನೆನಿಸಿ ನಿ । ರು
ತವು ಭೀತಿಯನುಳಿದು ಪಂಚವಟಿಯೊಳು ತಾನಿಹನು ॥ ೩೧ ॥ ನಿನ್ನ
ಹಂಕಾರ ಬಲದರ್ಪವ । ನೆನ್ನ ಪತಿ ಮುರಿವನೆಲೆ ರಾವಣ । ನಿನ್ನ
ಸಂತಸ ವೆನ್ನಪತಿಯಿಂ ಲಯವನೆಯ್ದುವುದು ॥ ನನ್ನ ತಂದುದರಿಂದೆ
ನೀನುಂ । ನಿನ್ನ ಯಂತಃಪುರವು ನಗರವು । ನಿನ್ನಖಿಳ ಸೈನಿಕರು ಸಾ
ಯುವರೆಂದಳಾಸೀತೆ ॥ ೩೨ ॥ ಖಳದಶಾನನ ಕೇಳು ಮೇದಿನಿ । ಯೊ
ಳು ಶಮನನಿಂದಖಿಳ ಜೀವಿಗ । ಳಲಿ ವಿಹಿತವಾಗಿರ್ಪ ಮರಣವದಾ
ವಸಮಯದಲಿ ॥ ಸಲೆತಲೆಯಿಡುವುದಾ ಸಮಯದೊಳ । ಖಿಳಜನರು
ಕಾಲವಶವೆನ್ನಿಸು । ತಲೆ ಮರಣ ಚಿಹ್ನೆಗಳ ನೆಸಗುತ್ತಿಹರು ನೈಜವಿ
ದು ॥ ೩೩ ॥ ಸವನಶಾಲೆಯ ನಡುವೆ ಬ್ರಾಹ್ಮಣ । ರವರ ಮಂತ್ರಗಳಿಂ
ದೆ ಪರಿಶು । ದ್ಧವೆನಿಸುತ ಸ್ರುಕ್ಸ್ರುವಗಳಿಂದುರೆ ಮೆರೆವ ವೇದಿಕೆಯು ॥
ಅವನಿಯೊಳು ಚಂಡಾಲಗೆಂತುತು । ಳವುದಕಳವಲ್ಲದಿಹುದದರಂ । ತೆ
ವಶವಾಗುವಳಲ್ಲ ನಿನಗೆಂದೊರೆದಳಾಸೀತೆ ॥ ೩೪ ॥ ಜಲರುಹಾಕರ
ದೊಳನಯನೊಡನೆ । ಸಲೆ ವಿಹರಿಪಾ ರಾಜಹಂಸಿಯು । ಬೆಳೆದಹುಲ್ಲಿನ
ಮಧ್ಯದೊಳಗಿಹ ನೀರು ಕಾಗೆಯನು ॥ ನಲಿದದೆಂತೀಕ್ಷಿಪುದು ಪೇಳ
ಲೆ । ಖಳದಶಾಸ್ಯನೆ ರಾಮಚಂದ್ರನ । ಲಲನೆ ನಿನ್ನನು ಕೊಲ್ಲದೀಕ್ಷಿಸು
ತಿಹಳೆ ಮನಸೋತು ॥ ೩೫ ॥ ಪಾಪಿ ರಾವಣ ಕೇಳು ದಶರಥ । ಭೂಪ
ನಾಸೊಸೆಯನ್ನು ಮುಟ್ಟಲು । ರೂಪು ತೋರದೆ ಜವದಿಯಮಸನ್ನಿಧಿ
ಯನೆಯ್ದುತಿಹೆ ॥ ಕೋಪವೆನುಳದು ರಾಮನ ಪದಸ । ಮೀಪಕೊಪ್ಪಿಸಿ

ನನ್ನ ನೀಗಳ್ । ನೀಂ ಪದುಳದಿಂದಿಹುದು ಲಂಕೆಯೊಳೆಲ್ಲರೊಡಗೂ
ಡಿ ॥ ೩೬ ॥ ಮುನಿವಿಘಾತುಕ ಕೇಳು ನನ್ನಯ । ತನುವನೀಗಳ್
ಬಂಧಿಸಿದೊಡಂ । ಕನಲಿ ಭಕ್ಷಿಸಿ ದೊಡಮಿದನು ರಕ್ಷಿಸೆನು ಪ್ರೀತಿಯ
ಲಿ ॥ ನನಗೆ ದುಃಖವನಾಗಿಸುತ ಬಂ । ಧುನಿವಹಂಗಳ ಸಹಿತ ಕಾಲನ ।
ಮನೆಯನೈದುವೆ ನೀನು ಶಿಘ್ರದೊಳೆಂದು ಪೇಳಿದಳು ॥ ೩೭ ॥ ಇಂತು
ಪೇಳ್ದಸುರೇಂದ್ರನಿಗೆ ಸಮ । ನಂತರದೊಳಾ ಸೀತೆ ನುಡಿಯದೆ ।
ಚಿಂತಿಸುತ ಕೊನೆಯಿಲ್ಲದತಿ ದುಃಖದೊಳು ತಾ ನಿರಲು ॥ ಅಂತಕನ
ತೆರದಿಂದೆ ಮುಳಿದ । ತ್ಯಂತ ಭೀತಿಯ ನುಂಟುಮಾಡುತ । ನಂತೆ ಯು
ಣುಗಿಗೆ ನುಡಿದರಾವಣ ನಂದು ಗರ್ಜಿಸುತ ॥ ೩೮ ॥ ನನ್ನ ಮಾತನು
ಕೇಳು ಜಾನಕಿ । ಹನ್ನೆರಡು ತಿಂಗಳುಗಳೊಳು ನೀಂ । ನನ್ನ ವಶವಾ
ಗುವುದುದಾಸೀನವನು ಮಾಡಿದೊಡೆ ॥ ನಿನ್ನ ಖಂಡಿಸಿ ಚೂರುಚೂ
ರುಗ । ಳನ್ನು ಮಾಡುವೆ ನೆಂದು ಹೆದರಿಸಿ । ತನ್ನ ರಕ್ಕಸಿಯರಿಗೆ ರಾವ
ಣ ಪೇಳ್ದನತಿಭರದೆ ॥ ೩೯ ॥ ಪಲಲ ರಕ್ತಗಳಿಂದೆ ದೇಹವ । ಬೆಳಸಿ
ಜನರನು ಹಿಂಸಿಸುವಿರೀ । ನೆಲದೊಳತಿ ಘೋರಾಕೃತಿಗಳನು ನೀವು
ಪಡೆದಿಹಿರಿ ॥ ಬಳಸಿ ಸೀತೆಯನು ಘನಗರ್ಜನೆ । ಗಳಲಿ ಭಯಪಡಿಸು
ತ್ತ ರಾತ್ರಿಹ । ಗಲು ಪರಿಹರಿಪುದಿವಳ ದರ್ಪವನೆಂದನಸುರಪತಿ ॥ ೪೦ ॥
ಒಡನೆ ಘೋರನಿಶಾಚರಿಯರಾ । ಪೊಡವಿಯಾತ್ಮಜೆ ಯೆಡೆಗೆನಡೆತಂ । ದೆ
ಡೆಗೊಡದ ಪೊಲ್ಬಳಸಿಕೊಂಡರು ಗುಂಪುಗುಂಪಾಗಿ ॥ ಕಡುಭಯಂಕರ
ರಕ್ಕಸಿಯರಿಗೆ । ನುಡಿದನಾ ದಶಕಂಧರನು ನೀಂ । ಬಿಡುವುದೀ ಸೀತೆಯನ
ಶೋಕವನದನಡುವೆಯನುತ ॥ ೪೧ ॥ ನೀವುಗೋಪ್ಯದೊಳೊಲಿಸಿಪಾಲಿಪು ।
ದೀ ವಸುಮತೀಬಾಲೆಯ ನಶೋ । ಕಾವನದ ಮಧ್ಯದೊಳು ಚತುರೋ
ಪಾಯಗಳನರುಹಿ ॥ ಆವವಿಧದಿಂದಾದೊಡಂ ಸರಿ । ನೀವಿವಳನೆನ್ನವಶವಮಾ
ಡುವು । ದಾ ವನಕರಿಣಿಯನ್ನು ವಶಪಡಿಸುವೊಲು ಯುಕ್ತಿಯಲಿ ॥ ೪೨ ॥
ದನುಜನಾಜ್ಞೆಯ ನಾಲಿಸುತ್ತಾ । ವನದಮಧ್ಯಕೆ ಕೊಂಡು ಪೋದರ ।
ವನಿಸುತೆಯನಾ ರಕ್ಕಸಿಯರತಿ ವೇಗದಿಂದಿರದೆ ॥ ಅನುದಿನದೊಳಾ ರಾಘ
ವನ ಸತಿ । ಯನುಭಯಪಡಿಸುತಿದ್ದರಿರಿಸುತ । ವನದ ಮಧ್ಯದೊಳಧಿಕ
ಕೋಪವನಾಂತುಗರ್ಜಿಸುತ ॥ ೪೩ ॥ ಸರ್ವರಾಕ್ಷಸಿ ಯರತಿಭರದಿಂ ।
ದುರ್ವರಾತ್ಮಜೆಯನ್ನು ಬಳಸಿಯ । ಖರ್ವಸಂಪದದಿಂದೆಸೆವ ಶೋಕವನ
ಕೈತಂದು ॥ ಸರ್ವಪಕ್ಷಿಗಳಗೆಡೆಯೆನಿಸು । ತುರ್ವರೆಯೊಳತಿ ಸುಂದರಮೆ
ನಿಪೆಸರ್ವಡೆದಬನ್ನಿಮರದಕೆಳಗೆ ಕೂಡಿಸಿದರೊಲಿದು ॥ ೪೪ ॥ ದುಷ್ಟ ಪ

ಶುಗಳ ಕೈಗೆಸಿಕ್ಕುತ | ಕಷ್ಟಪಡುವಾ ಪರಿಣಿಯಂತತಿ | ಕಷ್ಟವನು ತಾನೈದುತಾ ಧರಣೀಸುತೆವನದೊಳು || ಇಷ್ಟಬಂಧುಗಳನುಳಿದು ಸುಖ | ಭ್ರಷ್ಟಳಾಗುತ ಪಗ್ಗದಿಂದಲೆ | ಕಟ್ಟಿದಾಹರಿಣದೊಲು ನಡಗುತಭಯುವನೆಯ್ದಿದಳು ||೪೫|| ಸೀತೆ ರಾಘವನಚಿಂತಿಸುತ ಬಹು | ಭೀತಿಯನು ತಾನಾಂತು ಮನದೊಳು | ಕಾತರಿಸುತುರೆ ಕುಂದಿನಡನಡುಗುತ್ತ ಜೆಂಡಾಗಿ || ಚೇತರಿಸಿಕೊಳ್ಳದೆಯೆ ಸಾಧ್ವಿ | ವಾರ್ತವನುಳಿದು ರಕ್ಕಸಿಯರಿಗೆ | ಸೋತು ರೋದಿಸುತಿದ್ದಳಾವನದಲ್ಲಿ ಹಗಲಿರುಳು || ೪೬ || ಧರೆಯೊಳಾರಾಘವನ ಸತಿಯಾ | ಗಿರುವೆ ಧರಣೀದೇವಿಮಗಳಾ | ಗಿರುವೆಮೇಣ್ದಶರಥನ ಸೊಸೆಯಾಗಿರುವೆ ನಿಮಿಕುಲದ || ಅರಸನಾಗಿಹ ಜನಕಭೂವರ | ನರಮನೆಯೊಳಗೆ ಬೆಳೆದನನಗೀ | ಪರಿಯ ಕಷ್ಟವೊದಗಿದುದೇ ಹಾ ಯೆಂದುಕೊರಗಿದಳು || ೪೭ || ಬಂಧು ಬಳಗಂಗಳನುಳಿದು ಮನ | ನೊಂದಶೋಕಾವನವ ಮಧ್ಯದೊ | ಳಿಂದುಮುಖಿ ರಕ್ಕಸಿಯರೊಳಗೆ ಸಿಕ್ಕಿಚಿಂತಿಸುತ || ಸಂದಮುಖವ ತಾಳಲಾರದೆ | ಕುಂದಿಮನನೊಂದಡಿಗಡಿಗೆ ರಘು | ನಂದನನ ನಾಮವನು ಜಾನಿಸುತಿದ್ದಳನುದಿನವು || || ೪೮ ||

ಇಂತು ಹನ್ನೆರಡನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೬೦೩.



## ಹದಿಮೂರನೆಯ ಅಧ್ಯಾಯ.

ಸೂಚನೆ || ಜನರಿಗಾನಂದವನು ಕೊಡುತಿಂ |
ದ್ರನವನವ ಧಿಕ್ಕರಿಪಶೋಕಾ |
ವನದಲಂಕಾರವನು ಕಂಡಳು ಸೀತೆ ಶೋಕಿಸುತ ||

ವಿಮಲಜಲದಿಂದೆಸೆವವು ವಿಶಾ | ಲಮೆನಿಪ ಸರೋವರಗಳರಳಿದ | ಕಮಲಸಂಚಯದಿಂದೆ ನಿರುತವಶೋಕವನದೊಳಗೆ || ವಿಮಲವಾರಿಯೊಳೊಪ್ಪಿದವಖಿಳ | ಕಮಠಕಚ್ಛಪಮುಖ್ಯಜಲಚರ | ಸಮುದಯವುಪ್ರಸಂತೋಷವನು ಮಾಡುತ್ತ ಸೆರೆನೆರೆದು || ೧ || ಸಕಲಕಾಲದೊಳರಳಿದ ಕುಸುಮ | ನಿಕರದಿಂದೆಸೆದಿದ್ದವಾ ಕುರು | ವಕ ತಿಲಕಮಂದಾರ ಬಂಧೂಕ ಕರವೀರಗಳು || ವಕುಳಪಾಟಲಿ ಜಾಜಿ ಘನಕೇ | ತಕಿ ರಸಾಲ ಶಿರೀಷಮಧು ಚಂ | ಪಕವರಸುಪುನ್ನಾಗ ಮುಖ್ಯಮರಂಗಳಾವನದ || || ೨ || ಹಲಸು ಕಿತ್ತಿಳೆ ಬಾಳೆ ನೇರಿಳೆ | ಯಳಚಮಾದಳ ತಾಳೆತೆಂಗು

ಹೆ ರಿಳೆ ಚಕೋತವು ಮಾವುಬೇಲ ದ್ರಾಕ್ಷೆಖರ್ಜೂರ ॥ ಪಲತೆರದ ದಾ ಳಿಂಬೆ ಚೈತ್ರಾ । ಮಲಕ ಸೀತಾಳಬಹುಬೀಜವೊ । ವಲಹ ಫಲಪಾದಪ ಗಳೆಸೆದವು ಬಹುಫಲವನಾಂತು ॥ ೩ ॥ ಅಲ್ಲಿಗಲ್ಲಿಗೆ ಪುಷ್ಪವಲ್ಲಿ ಗ । ಳಲ್ಲಿ ಗಲ್ಲಿಗೆ ತಳಿರತಲ್ಪಗ । ಳಲ್ಲಿಗಲ್ಲಿಗೆ ಲತೆಯಮಂಟಪ ಗಳೆಸೆದೊಪ್ಪಿದವು ॥ ಅಲ್ಲಿಗಲ್ಲಿಗೆ ಮರಳದಿಬ್ಬೆಗ । ಳಲ್ಲಿಗಲ್ಲಿಗೆ ನೀರಕಾಲ್ವೆಗ । ಳಲ್ಲಿಗಲ್ಲಿಗೆ ತಳಿ ರ ತೋರಣಗಳುರೆ ರಂಜಿಪವು ॥ ೪ ॥ ತಳಿರಕೆಂಪಿಂ ವರಕುಸುಮಗಳ । ಹಳದಿಯಿಂವಿಡಿಗಳ ಹಸುರಿನಿಂ । ಬೆಳ್ದು ತನ್ನೊಳು ಹಬ್ಬಿದಾಮಲ್ಲಿಗೆ ಯ ಹೂವುಗಳ ॥ ಬಿಳುಪಿನಿಂದವೆ ಕೆರಗಿವಳಿಗಳ । ಸಲೆಹೊಳೆವ ಕ ಪ್ಪಿಂದೆ ಮಾಮರ । ಗಳುರೆಮೆರೆದವು ಪಂಚವರ್ಣದ ರಥಗಳಂದದಲಿ ॥ ॥ ೫ ॥ ಎಳೆಯತನದೊಳ್ತಮಗೆ ಪದೆದಿ । ತ್ತಲವಣೋದಕವನ್ನು ನೆನೆಯುತ । ತಲೆಯೊಳಗೆಧರಿಸುತ್ತ ಪಿಯೂಷಸಮಪಾರಿಯನು । ನಲಿಮುತಾವ್ಕೊಡುತ್ತಿದ್ದ ವುಜನಂ । ಗಳಿಗೆ ತೆಂಗಿನಮರಗಳಾವನ । ದೊ ಳಗೆ ತಮ್ಮಯ ಜೀವಮಾನದತನಕ ದಿನದಿನವು ॥ ೬ ॥ ನಲಿದು ನಮ್ಮ ನು ಪೋಷಿಸಿದುದೀ । ನೆಲಮೆನುತವನಿಯನ್ನುತಪ್ಪದೆ । ಸಲಿಲಮಂತ್ರಾ ಕ್ಷತೆಗಳಿಂದರ್ಚನೆ ಯೆಸಗಿದಂತೆ ॥ ಬೆಳೆದತೆಂಗಿನ ಮರಗಳಾವನ । ದೊ ಳಗೆ ಮಮರಿಸುತಿಪ್ಪವು ಕುಸುಮ । ಫಲಸಲಿಲಗಳನಂತೆಹೊಂಬಾಳೆಗ ಳನನುದಿನವು ॥ ೭ ॥ ಅನುದಿನವು ನಮ್ಮನ್ನು ಪೊರೆದುದು । ಮನದ ಮರುಕವೊಳವನಿಯೆಂದುರೆ । ವಿನಯದಿಂದೆರಗುವವೊ ಲಾವನದೊಂ ದುಕಡೆಯೊಳಗೆ ॥ ಘನಫಲಂಗಳನಾಂತು ರಂಜಿಪ । ಗೊನೆಗಳ ಬಹಳ ಭಾರದಿಂದಿಳೆ । ಗೆ ನೆರೆಬಾಗಿದ ಪಲವುತೆರದಾ ಬಾಳೆಗಳೆಸದವು ॥ ೮ ॥ ಸಲೆಬೆಳೆದದಾಡಿ ಮದ ವೃಕ್ಷಂ । ಗಳೊಳು ಕಿಕ್ಕಿರಿದೊಗೆದು ಬಿರಿದಾ । ಫಲಗಳೀನೆಸೆದುವು ನಿಶಾಚರನಾರಪೆಯೊಳಂದು ॥ ಥಳಥಳಿಪ ಚಿನ್ನ ದೊಳು ಕೆತ್ತಿದ । ಬೆಲೆವಡೆದರತುನಂಗಳಂದದ । ಸಲವಿರಾಜಿಸುತಿಪ್ಪ ವಾ ಹಣ್ಣುಗಳಬಿತ್ತುಗಳು ॥ ೯ ॥ ಹಲವುಫಲವೃಕ್ಷಂಗಳೀ ವನ । ದೊಳಗಿರುತಿದ್ದೀಂ ಫಲವು ಮೇದಿನಿ । ಯೊಳು ಹಸಿವನೆನ್ನಂತೆಕಳೆವವೆ ಮಾನವರಿಗೆನುತ ॥ ಹಲಸಿನಮರಂಗಳವುಗಳ ಬೇ । ರ್ಗಳವೊದಲಿನಿಂ ಕೊನೆಯುವರೆಗಂ । ಫಲಗಳನು ಬಿಟ್ಟಲ್ಲಿ ತೊಣಿಸುತಲಿರ್ದುವೆಲ್ಲರನು ॥ ೧೦ ॥ ಆವಕಾಲದೊಳಾವ ಠಾವಿನೊ । ಳಾವನಾಗಲಿ ಬಯಸುವನೊ ತಾ । ನಾವಫಲವನು ದೊರೆಯದಿರದಾ ಬನದೊಳವನಿಗದು ॥ ಭಾವಿ ಸಿ ಸ್ವರ್ಗದನಾಮವ । ಲಾಪದಸಕಿರುವಶೋಕನಾಮವು । ಶ್ರೀವಿಹಾರ

ಸ್ಥಳವೆನುದಾಗಿರ್ದೆಸೆವುವನುದಿನವು ।೧೧॥ ಗರುಡಸಾರಸ ಹಂಸಬ
ಕತಿ । ತ್ತಿರಿಮಯೂರ ಕಪೋತಟಿಟ್ಟಿಭ । ವರಚಕೋರರಥಾಂಗಪಿಕ
ಶುಕಶಾರಿಕಾದಿಗಳು ॥ ನೆರೆನೆರೆದು ಸಲೆಪಾಡುತ್ತಿರ್ಪ । ಪರಿಯ ನೋಡಿ
ದೊಡಾನಂದವಾಗಲಿ । ತೊರೆದುನಿಜಚಿಂತೆಗಳನಲ್ಲಿಯೆ ವಸಿಸಲೆಳಸುವೆನು
॥ ೧೨ ॥ ಧನಿಕನಂನೋಯಿಸದೆ ಪಡೆದಾ । ತನ ಪದಾರ್ಥವನುಂಡುನ
ಲಿದಾ । ಧನಿಕನಿಗೆ ಪುಣ್ಯವನು ನೀಡುವ ಸುಜನರಂದದೊಳು ॥ ವನದ
ವಿವಿಧಪುಷ್ಪಗಳ ಕಾಂತ್ರಿಗ । ಳನಿನಿಸುಂಕದಿ ಸದವುಗಳರಸ । ವನುಕುಡಿ
ದೆಸೆದವಾ ಭ್ರಮರಗಳಶೋಕವನದೊಳಗೆ ॥ ೧೩ ॥ ನವಿಲನಾಟವೆ
ನಾಟ್ಯವಳಿಗಳ । ರವವೆಗಾನವುಡಿಗಡಿಗಿರದೆ ಮೊ । ರೆವ ಪಿಕದನಿಯೆ
ಚಾರುತಂಫನವಾದ್ಯವೆಂದೆನಿಸೆ ॥ ಅವನಿಯೊಳು ಬೀಳ್ವಕುಸುಮಂಗ
ಳೆ । ಸೆವವಿನುತ ಪುಷ್ಪಾಂಜಲಿಗಳಾ । ಗೆ ವನವೆಸೆದುದು ಲಾಸ್ಯವೆಂದಿರ
ದಂತೆ ಕಾಣಿಸುತ ॥ ೧೪ ॥ ಜಲದೊಳೆಸೆವರ ಸಂಕೆಕೊಂಚೆಗ । ಳುಲಿ
ಗಳಂ ಫಲಕೆರಗುವಾಪ್ರೊ । ಕ್ಕುಳಗಿಳಗಳಂ ಪುಷ್ಪನಿನಹದಪೆಂಪುಕಂಪು
ಗಳ ॥ ಬಳಗದಿಂದುಲಿವಖಿಳವಿಹಗಂ । ಗಳೆಸಗುವ ಘನಕೇಳಿಗಳ
ಮಂ । ಗಳ ರಚನೆಯಿಂದಾ ಯಶೋಕಾವನವಿರಾಜಿಸಿತು ॥ ೧೫ ॥
ಸುರಸನವನಂತನಗೆ ಸಾಟಿಯೆ । ಹರಸಖನಚೈತ್ರರಥ ವೆನಗೇಂ ।
ಸರಿಯೆನಿಪುದೇಂತ್ರಿಜಗದೊಳೆಸೆವ ವನಗಳನ್ನಂತೆ ॥ ನೆರೆಯಶೋಕವೆ
ನಿಪ್ಪಪೆಸರಿಂ । ದೆರಚಿಸುವುದೆ ಯಶೋಕವನವೆನು । ಜರಿಗೆ ಪೇಳೆಂ
ದುಲಿವ ವೊಲ್ಮೆರೆದುದು ಪಿಕಧ್ವನಿಯು ॥ ೧೬ ॥ ಬಂದುಬಗೆಬಗೆ ಹಣ್ಣು
ಗಳನಾ । ನಂದದಿಂ ಸವಿದೀಕುಸುಮಗಳ । ಚಂದವನುಕಂಡವನು ಧರಿ
ಸುತಮಧುಪಪಜ್ತಿಗಳ ॥ ಸುಂದರತರದ ಗಾನವನು ಹಿತ । ದಿಂದಕೇ
ಳುತ ಸುಖವನೈದುವು । ದೆಂದು ಜನರನು ಕೂಗುವಂದದೆಸೆದುದು
ಪಿಕನಿನದ ॥ ೧೭ ॥ ಚರಿಪಮಂಬಿಯ ಬಳಗನೆಸೆವಾ । ಕರಿಯಮು
ಗಿಲಂ ತೊಪ್ಪೆಸಂಚರಿ । ಪ ರಮಣೀಮಣಿಗಣದ ಕಡೆಗಣ್ಮಿಂಚಿನಂತೆಸೆ
ಯೆ ॥ ಮರುತಹತಿಯಿಂದೊಗುವ ಪೂಗಳೆ । ಪಿರಿಯಹನಿಯಂತೊಪ್ಪೆ
ಭೃಂಗಗ । ಳರವವೇ ಸಿಡಿಲೆನಿಸೆ ಕಾರ್ಮುಗಿಲಂತೆಸೆದುದುವನ ॥ ೧೮ ॥
ದನುಜವಲ್ಲಭ ನಾಯಶೋಕಾ । ವನದೊಳಿರಿಸಿರ್ದನು ಮತಂಗಜ ।
ವನಮಹಿಷಕಪಿ ಸಿಂಹಸೂಕರ ಶರಭಭಲ್ಲೂಕ ॥ ಘನಹರಿಣಶಾರ್ದೂಲ
ಗಂಡಕ । ವನತುರಂಗಗಳಾದಿಯಾದ ಮಿ । ಗನಿವಹಂಗಳ ನೆಲ್ಲಜನರನು
ಸಂತಸವಡಿಸಲು ॥ ೧೯ ॥ ಬಂದುಕಡೆ ಕೋಗಿಲೆಯ ನಿಡುಸರ । ವೊಂ

ದುಕಡೆ ಪಾರಿವದಗುಡುಗುಡ । ದೊಂದುಕಡೆಯೊಳು ಸೋಗೆನವಿಲಿನ ಕೇಕೆಯುಸಿನವವು ॥ ಒಂದುಕಡೆ ಏಕಪಕ್ಷಿಯುತಪ ವು । ದೊಂದುಕಡೆ ಶುಕಶಾರಿಕಾವಿ ಗ । ಳಂದವೊಪ್ಪಿರೆ ಕಂಗೊಳಿಸುತಾ ದಶಶಿರನವನವು ॥ ೨೦ ॥ ಕುವಲಯಾನ್ವಿತ ವಾಪಿಘುವಿನಂ । ತವಸಿಪತಿಯಂತೆ ನವಚಕ್ರವಿ । ಭವಯುಂತಂ ರವಿಯಂತ್ರ ರಥದಂತೆ ಘನರಸಭರಿತಂ ॥ ಭುವನ ನಿಧಿಯಂತೆ ಸುಮಬಂತಾ । ವಿದ್ಧರಿತಪಾರಜಿತ ಗಿರಿಯಂ । ತೆ ವನವಂತೆ ನಲೊಪ್ಪಿದುದು ರಾವಣನ ಶೋಕವನ ॥ ೨೧ ॥ ಇರುಳಿನಂತಾ ಗಗನದಂತೆ ಜ । ಲರುಬದಂತಾ ವನಧಿಯುತನ । ವರತನಾಸೋವಾರ್ಕರಸವಿದ್ರುಮಮಹಿತಮಾಗಿ ॥ ಸುರಪನಂತೆ ಸುಮೇರುಗಿರಿಯಂ । ತೆ ರಥವಂತೆ ಮುರಾರಿಯುಂತಾ । ಸುರಭಿಕಾಂಚನ ಚಕ್ರಕಮಲಾನ್ವಿತಮಿದೆನಿಸಿದುದು ॥ ೨೨ ॥ ಗಿರಿಶನಂದನೆ ನಾನುಗಂಗೆಯು । ಧರಿಸಿಪೆನುನೇತ್ರಗಳು ಮೂರಾ । ಗಿರುವುವು ಜಡೆಗಳೆಲ್ಲಕಡೆ ತೋರುತ್ತಿರಾಜಿಪವು ॥ ಪರವಿಭೂತಿಯುವರ್ಣವನುಧರಿ । ಸಿರುವೆ ನೀವೆನುಬೇಡಿದುದನೀ । ಧರೆಯೊಳಾರೆಣೆ ನನಗೆನಲು ತೆಂಗಾಯಿಗಳೆಸೆದವು ॥ ೨೩ ॥ ತಳಿರಮಂಟಪಗಳುರೆಶೋಭಿಪ । ಶಿಲೆಗಳುಂ ಕೃತಕಾಚಲಂಗಳು । ಜೊಂವಪೊಂಗಳಸಂಗಳಂದೆಸೆ ದೊಪ್ಪವಗುಡಿಗಳು ॥ ಜಲದೊಳಾಡುವ ಹಕ್ಕಿಗಳುಥಳ । ಥಳಿಪ ಬಳ್ಳಿಗಳೆಲ್ಲ ಜನರಿಗೆ । ಪಲತೆರದೊಳಾನಂದವನುಮಾಡಿದವು ವನದೊಳಗೆ ॥ ೨೪ ॥ ತಿಲಕರಂಜಿತ ಮೊಸೆವಚಂದನ । ಕಲಿತಮುತ್ತಮವಂಶಮಹಿತಮ । ಮಲತರಾಲಂಕಾರಯುಕ್ತಮನಂತಮಣಿಸಹಿತಂ ॥ ಫಲಭರಿತಮೆಂದೆನಿಸಿ ಕಾಣಿಸು । ಶ್ರೀಯೊಡೆಯನಂತೆಸೆದುದೀ ನೆಲ । ದೊಳಗೆ ದಶಕಂಧರನಶೋಕವನ ವೆತ್ತಿವೈಭವದಿ ॥ ೨೫ ॥ ವನದ ದೇವತೆತಾಂ ಭಕುತಿಯಿಂ । ದನುದಿನದೊಳೀ ಧರಣಿದೇವತೆ । ಯುನು ನಲಿದುಸಲೆ ಪೂಜಿಸಿದಳೆನೆ ವನದಮಧ್ಯದೊಳು ॥ ಘನಫಲಕುಸುಮ ಮುಕುಳಗಳು ಮೇ । ದಿನಿಗೆ ಬಿದ್ದೆಳನೀರಕಾಲ್ವೆಗ । ಳನೆ ರವಿಯೊಳು ವಿರಾಜಿಸಿದ ವಳ್ಳರಿಯನಾಗಿಸುತ ॥ ೨೬ ॥ ಇಂತೆಸೆವ ವನದೊಳಗೆ ತಾಂ ಸಲೆ । ಚಿಂತಿಸುತ ರಾಘವನ ನಾಮವ । ನಂತಮಿಲ್ಲದ ದುಃಖದಿಂದಾ ಸೀತೆದಿನದಿನವು ॥ ಸಂತತವು ಶೋಭಿಸುವ ವನದ । ತ್ಯಂತ ವೈಭವಗಳನು ನೋಡುತ । ಸಂತಸವನುಳಿದೈದೆ ದುಃಖಿಸುತಿದ್ದಳು ಮನದಲಿ ॥ ೨೭ ॥ ಅಡಿಗಡಿಗೆ ದಶಕಂಧರನು ತ । ನ್ನೊಡತಿಯರೊಡನ ಶೋಕವನಕತಿ । ಸಡಗರದೊಳೈತಂದು ಸಂತಸದಿಂದೆ ವಿಹರಿಸುತ ।

ಬೆಡಗಿನಿಂ ವನವಿಭವವೆಲ್ಲವ । ನಡೆವಿಡದೆ ನೋಡುತ್ತ ವಸಿತೆಯ । ರೊ
ಡನೆ ಜಲಕೇಳಿಯ ನೆಸಗುತಿದ್ದನತಿವಿಭವದಲಿ ॥ ೨೮ ॥ ಸರಮೊಗೋ
ಮುಖಿ ಶೂರ್ಪನಖಿನು । ಭ್ಯರಹಘೋರ ನಿಶಾಚರಾಂಗನೆ । ಯರು
ಬಳಸಿಕೊಂಡಾ ಮಹೀಸುತೆಯನ್ನು ಪಲತೆರದೆ ॥ ಇರುಳು ಹಗಲೊಳು
ದನುಜನಾಥನ । ವರಿಸುವುದೆನುತ ಸಂತಸಂದಳೆ । ದರುಹಿದರು ರಾವಣ
ನನೇಮುವೆನಾಂತು ಶಿರದೊಳಗೆ ॥ ೨೯ ॥ ಪತ್ರಿವಿಯೋಗದೊಳಾವನಸ
ನಪು । ವೆ ತಪಿಸುತ್ತಿಹ ಭೂಸುತೆಗಮರ । ಪತಿಸುಧೆಗೆ ಸಮಮೆಂಬೆ
ನಿಪ ಪಾಯಸವನನುದಿನವು ॥ ಇತರರಿಗರಿಯದಂತೆ ಸಲೆಬೆಳ । ಗುತಿಪ
ಚಿನ್ನದ ಬಟ್ಟಲೊಳಗಿರಿ । ಸುತತಿ ಮುದದಿಂದೀಯುತಿದ್ದನಶೋಕವನ
ದೊಳಗೆ ॥ ೩೦ ॥ ಸೀತೆಯುವರೊಳ ಗರ್ಧವನುಸಂ । ಪ್ರೀತಿಯಿಂದಲೆ
ರಾಮನಿಗೆನು । ತ್ತಾತುರದೆ ಪುಂಡಾಗಪೆಯೊಳರಿಸಿ ಪತಿಯುಜೀವಿಸಿರೆ ॥
ಭೂತಳದೊಳದು ಮಾಯವಾಗು । ತ್ತಾತನಿಗೆ ಸಂತುಷ್ಟಿಕೊಡಲೆಂ ।
ದಾತುರದೆ ಪೇಳುತ್ತ ಭುಜಿಪಳು ಪಾಯಸಾರ್ಧವನು ॥ ೩೧ ॥ ಸುರನ
ರೋರಗ ಯಕ್ಷರಾಕ್ಷಸ । ಗರುಡಕಿನ್ನರ ಸಿದ್ಧವಿದ್ಯಾ । ಧರರೊಳುತ್ತ
ಮರೆನಿಪ ನಾರಿಯರ ಸುರನಾಥನನು ॥ ಸರಸಸಲ್ಲಾಪಂಗಳಿಂದನ । ವರತ
ವೊಲಿಸುತ ಶೋಕವನದೊಳು । ಪರಮಸಂತಸದಿಂದೆ ಪಡೆದರಖಿಳ
ವಿನೋದಗಳ ॥ ೩೨ ॥ ಸಕಲನಾರಿಯರಾಮಹೀಸುತೆ । ಯ ಕಡೆಗೈತಂ
ದವಳಿಗಿಹಪತಿ । ಭಕುತಿಯನುಕಾಣುತ್ತ ಬಾಗಿಸಿ ತಮ್ಮ ತಲೆಗಳನು ॥
ಚಕಿತರಾಗುತ ತಮ್ಮನಡತೆಯ । ನು ಕುರಿತನು ದಿನಚಿಂತಿಸುತ್ತಸ ।
ಲೆ ಕೊರಗಿ ವಿಷಾದವನುತಾಳುತಲಿದ್ದ ರೆದೆಯೊಳಗೆ ॥ ೩೩ ॥ ಉಡುಗೆ
ತೊಡುಗೆಗಳನ್ನಪೇಕ್ಷಿಸ । ದಡಿಗಡಿಗೆ ರಾಘವನನೆನೆದಾ । ಪ್ರೌಢವಿಸುತೆ
ರಾವಣನಶೋಕವನದೊಳು ರೋದಿಸುತ ॥ ಕಡುಗಿಗರ್ಜಿಪ ದನುಜೆ
ಯರ್ಕಳ । ನಡುವೆ ತಾನಿರುತಿದ್ದಳು ದುರುಳ । ರೊಡಲೊಳಪಪರವಾ
ತ್ಮನಂದದೆ ಕುಂದಿಕೊರಗುತ್ತ ॥ ೩೪ ॥ ಅಸುರರೆಲ್ಲರು ಕಂಡು ರಾವಣ ।
ನೆಸಗಿದಾಕೀಳ್ತನವ ನೀಸ್ಪುರ । ಕೆ ಸಮನಿಸಿತು ವಿನಾಶಕಾಲವೆನುತ್ತ
ತಾವರಿತು ॥ ಬಸವಳಿದು ದುಃಖವನುತಾಳಿದ । ರಸುರನನು ಜವಿಭೀಷ
ಣನು ಚಿಂ । ತಿಸಿ ಮನದೊಳ್ಕೈದಿದ ನತಿವಿಷಾದವನು ಪಲತೆರದೆ ॥ ೩೫ ॥
ರಾಮಮಂಗಳನಾಮ ರಾಕ್ಷಸ । ಭೀಮ ಭಾಸ್ಕರ ದೇವವಂಶಲ । ಲಾಮ
ಸುಗುಣಗುಣಾಭಿರಾಮ ನಮಿತಜನಪ್ರೇಮ ॥ ಭೂಮಕರುಣಾಧಾಮ
ತಾರಕ । ನಾಮ ಪಾಲಿಸುಪಾಲಿಸೆಂದೆನು । ತಾ ಮಹೀಸುತೆ ಜಪಿಸುತಿ

ಷ್ಟಳು ರಾಮನಾಮವನು ॥ ೩೬ ॥ ನನ್ನ ಕಷ್ಟವನಾರು ರಾಮನಿ ।
ಗೆನ್ನು ಪೇಳುವರೆಂದು ಜಾನಕಿ । ತನ್ನ ಚಿತ್ತದೊಳಂದುಕೊಂಡಾ ಶಿಂಶು
ಪಾತರುವ ॥ ಚೆನ್ನೆಳಲಿನೊಳು ಕುಳಿತುಕೊಳ್ಳುತ । ಪನ್ನಗಾರಿಧ್ವಜನ
ನಾಮವ । ನುನ್ನತಮತಿಯೊಳೈದೆ ಜಪಿಸುತಿದ್ದಳನುದಿನವು ॥ ೩೭ ॥

ಇಂತು ಹದಿಮೂರನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೬೬೦.



## ಹದಿನಾಲ್ಕನೆಯ ಅಧ್ಯಾಯ.

ಸೂಚನೆ ॥ ಅಸುರನಾಜ್ಞೆಯನಾಂತು ರಾಮನ ।
ರಸಿಯನು ಬಳಸಿಕೊಂಡು ವನದೊಳ ।
ಗೆಸಲೆಸಲಹುತಲಿದ್ದರಖಿಳ ಕುರೂಪಿನಬಲೆಯರು ॥

ದನುಜನಾಥನ ನೇಮದಿಂದಲೆ । ವನದೊಳಾಧರಣೀಸುತೆಯನನು ।
ದಿನವುತಪ್ಪದೆ ಸುತ್ತಿಕೊಂಡತಿ ಹರ್ಷವನುತಾಳ್ದು । ಮನುಜಭಕ್ಷಕ ರೆ
ನಿಸಿಭೀಕರ । ತನುಗಳನು ತಾನಾಂತರಾಕ್ಷಸ । ವನಿತೆಯರು ಕಾಯು
ತ್ತಲಿದ್ದರು ನಿಚ್ಚಮೆಡೆಬಿಡದೆ ॥೧॥ ಒಂದುಕಣ್ಣವೆ ಳೊಂದುಕಿವಿಯವೆ ।
ಳೊಂದುಕೈಯವ ಳೊಂದುಕಾಲವೆ । ಳೊಂದುಮೊಲೆಯವೆ ಳೊಂದು
ಬೆರಳವ ಳೊಂದುತುಟಿಯವಳು ॥ ಬಂದುಗಿಡಿಗಶೋಕವನ ದೊಳ ।
ಗಿಂದುಮುಖಿ ಸೀತೆಯನು ಸಂತಸ । ದಿಂದೆ ಹೆದರಿಸುತಿದ್ದರು ಬಳಸಿ
ಕೊಂಡು ಹಗಲಿರುಳು ॥ ೨ ॥ ಶಿರದೊಳುಘ್ರಾಸಿಸುವ ಮೂಗನು ।
ಧರಿಸಿಕೊಂಡಿರುತಿರ್ಪಳು ಲಂಬೋ । ದರಪಯೋಧರಳುತ್ತಮಾಂಗಿಯು
ಘೋರರೂಪಿಣಿಯು ॥ ಧರೆಯೊಳತಿ ದೇಹವನು ತಾನಾಂ । ತಿರುವಳು
ಮಹೋದರಿಯು ತಲೆಕೆಳ । ಗಿರುವಳಾವನ ಜೋರುತ್ತಿದ್ದರು ಬಳಸಿ
ಸೀತೆಯನು ॥ ೩ ॥ ಕೂದಲಿಲ್ಲದ ವೆಳತಿಯಾಗಿಹ । ಕೂದಲುಳ್ಳವಳು
ತ್ತಮವೆನಿಸಿಪ । ಕೂದಲಿನಕಂಬಳಿಯನಾನಂದದೊಳು ತಾಳ್ದಿಹಳು ॥
ಮೇದಿನೀಸುತೆಯನ್ನು ಬಳಸು । ತ್ತಾ ದನುಜವಲ್ಲಭನ ವನದೊಳ ।
ಗಾದ ಮಂಜೆಸುತಿರ್ದರೆಡೆಪಿಡದಿರ್ದು ದಿನದಿನವು ॥ ೪ ॥ ಊರ್ಧ್ವವಾಗಿಹ
ಮುಖಗಳುಳ್ಳವೆ । ರುದ್ಧವಾಗಿಹ ತುಟಿಗಳಾಂತಿಪ । ರುದ್ಧವಾಗಿಹ ಮೂ
ಗುಕಿವಿಗಳ ನಾಂತವನಿತೆಯರು ॥ ಊರ್ಧ್ವವಹ ಮೊಣಕಾಲನಾಂತವ ।
ರುದ್ಧವಾದೊಡಲು ಮೊಲೆಗಳನಾಂ । ತಿದ್ದವರು ರಕ್ಷಿಸುತಲಿದ್ದರು ವನದೆ

ಸೀತೆಯನು ॥ ೫ ॥ ಕರ್ಣಹೀನರು ಶಂಕುಕರ್ಣರು । ಕರ್ಣಪ್ರಾವರ
ಣಾಂತ ರಾಖರ । ಕರ್ಣರೆನಿಪರು ಸಿಂಹಕರ್ಣರು ಗೋವೃಕರ್ಣದೊ
ಲು ॥ ಕರ್ಣವನುತಾಳ್ದಿಪರು ಹಯಗಜ । ಕರ್ಣಗಳನಾಂತಿಹರು ಬಹು
ವಿಧ । ಕರ್ಣಗಳನೈದಿಪವರಿದ್ದರುಸುತ್ತಲವನಿಜೆಯ ॥ ೬ ॥ ಲಂಬಕರ್ಣರು
ಕಲಹಶೀಲರು । ಲಂಬಮುಖಿಗಳು ವಿಕೃತಾಂಗರು । ಲಂಬಜಾನರು ದೀ
ರ್ಘಕಾಯರು ಕುಬ್ಜರೂಪಿಗಳು ॥ ಲಂಬಹಸ್ತರುವಾಮನಾಂಗರು । ಲಂ
ಬನೇತ್ರರು ಹ್ರಸ್ವಗಾತ್ರರು । ಲಂಬರದನರು ವಿಕಟದೇಹಿಗಳಿದ್ದರಾವ
ನದೆ ॥ ೭ ॥ ತುರಗಮುಖಿಗಳು ಧೇನುಮುಖಿಗಳು । ಹರಿಣಮುಖಿಗಳು
ಛಾಗಮುಖಿಗಳು । ಖರಮುಖಿಗಳುವ್ಯಾಘ್ರಮುಖಿಗಳು ಜಂಬುಕಮು
ಖಿಗಳು ॥ ಕರಿಮುಖಿಗಳುಷ್ಟ್ರಮುಖಿಗಳು ಸೂ । ಕರಮುಖಿಗಳಾಮ
ಹಿಷಮುಖಿಗಳು । ಧರಣಿಜಾತೆಯಸುತ್ತಲಿದ್ದರುಭಯವನಾಗಿಸುತ ॥ ೮ ॥
ಮೂಗದಿಲ್ಲದವನಿತೆಯರು ಪಿರಿ । ಮೂಗಿನ ವರಡ್ಡಡ್ಡವಾಗಿಹ । ಮೂಗಿ
ನವರುವಿಕಾರವಾಗಿಹ ಮೂಗನುಳ್ಳವರು ॥ ನಾಗವಂದವ ಮೂಗಿನವರು
ಸ । ರಾಗದಿಂದ ಲಲಾಟದೊಳಗಿಹ । ಮೂಗಿನೊಳುಸಿರನಾಡಿಸುವ ರಿರುತಿ
ದ್ದರಾವನದೆ ॥ ೯ ॥ ತುರಗಪಾದಿಗಳುಷ್ಟ್ರಪಾದಿಗ । ಳುರೆ ವಿಷಾದವ
ನಾಗಿಸುತ್ತಿಹೆ । ದರಿಸುವ ಮಹಾಪಾದಿಗಳು ಘನಹಸ್ತಿಪಾದಿಗಳು ॥
ಮೊರೆವಖರಪಾದಿಗಳತಿ ಭಯಂ । ಕರರೆನಿಪ ಗೋಪಾದಿಗಳು ನೆರೆ ।
ನೆರೆವ ಗರ್ಜಿಪಪಾವಚೂಳಿಕೆ ಗಳಿರುತೊಪ್ಪಿಪರು ॥ ೧೦ ॥ ಪಿಂಗಳಾ
ಕ್ಷಿಗಳಧಿಕ ಕೋಪಿಗ । ಳಂಗಹೀನರು ಕಾಳಿಗಳು ಮಲಿ । ನಾಂಗಿಗಳು
ಕಾಳಾಯಸವಹಾಶೂಲಧಾರಿಗಳು ॥ ಪಿಂಗಳರುವಿಕೃತಮುಖಿಗಳು ।
ತುಂಗ ಮುದ್ಗರ ಕೂಟಧಾರಿಗ । ಳಂಗನಾಮಣಿ ಸೀತೆಗಾಗಿಸುತಿದ್ದರತಿ
ಭಯವ ॥ ೧೧ ॥ ದೀರ್ಘಶಿರಗಳ ನಾಂತಿರುತಿಪರು । ದೀರ್ಘಕಂಠಂಗ
ಳ ತಳೆದಿಹರು । ದೀರ್ಘನಖಮುಖ ಜಿಹ್ವಲೋಚನಗಳನುತಾಳ್ದಿಹರು ॥
ದೀರ್ಘಕುಚಗಳನೈದಿಪವರತಿ ॥ ದೀರ್ಘದೇಹಗಳನುಪಡೆದಿಹರು । ದೀ
ರ್ಘಕೇಶಿಗಳಿದ್ದರು ಪರ್ವಿಸುತ್ತಸೀತೆಯನು ॥ ೧೨ ॥ ಪಿರಿಯತುಟಿ
ಯಿಂದಿಹರು ಗಡ್ಡವ । ತೆರದೊಳಿಹ ತುಟಿಯವರು ಭೀಕರ । ತರಕರಾಳಿ
ಗಳು ಲಘುಮುಖಿಗಳು ನಿಮ್ನವಕ್ತ್ರಗಳು ॥ ಧರಣಿಜಾತೆಯ ಸುತ್ತಲಾ
ದಶ । ಶಿರನಶೋಕಾವನದಿ ಗರ್ಜಿಸಿ । ಬಿರುನುಡಿಗಳಿಂದೆ ಹೆದರಿಸುತಿದ್ದ
ರವನೀಸುತೆಯ ॥ ೧೩ ॥ ಶೂಲಮುದ್ಗರಗಳನು ಪಿಡಿದಾ । ಕಾಳರಕ್ಕ
ಸಿಯರು ಹೆದರಿಸ ಕ । ರಾಳಗಳು ಕಲಹಪ್ರಿಯರತಿವಿಕಾರಮುಖದ

ವರು । ಕಾಲಕಾಲವೆ ಭೀತಿವಡಿಸುತ । ಬಾಲೆಯನು ರಕ್ಷಿಸುತಲಿ
ದ್ದರು । ಲೀಲೆಯಿಂದಾ ಧೂಮ್ರಕೇಶಿಯ ಸಹಿತವನದೊಳಗೆ ॥ ೧೪ ॥
ರಕುತಮದ್ಯಂಗಳನು ಕುಡಿವರು । ರಕುತಮಾಂಸಂಗಳನು ತಿನ್ನುವ ।
ರು ಕಡುಬಿನವದೆ ಮಾಂಸರಕ್ತಂಗಳನು ಬಯಸುವರು ॥ ರಕುತಮಾಂ
ಸಂಗಳನು ತಮ್ಮಿಯ । ಸಕಲವಿಧದವಯವಗಳೊಳು ತೊಡೆ ।
ದುಕೊಳುತುರೆ ಗರ್ಜಿಸುವನೀರೆಯರಿದ್ದರಾವನದೆ ॥ ೧೫ ॥ ಕಡುಭ
ಯಂಕರರೆನಿಪಬಲಿಯರ । ನಡುವೆಜಾನಕಿ ದುಃಖದಿಂದಡಿ । ಗಡಿಗೆ
ರೋದಿಸಿ ಕಾಂತಿಯುಳಿದತಿ ಭೀತಿಯನುತಳೆದು ॥ ಪಡೆದಪುಣ್ಯವ ಕಳೆ
ದುನಭದಿಂ । ಪೊಡವಿಗುದುರಿದ ತಾರೆಯಂದದೆ । ನಡುಗುತಿದ್ದಳು ಮಾಸಿ
ದಕುರುಳ್ಗಳನು ತಾನಾಂತು ॥ ೧೬ ॥ ಪತಿಯ ದರ್ಶನವಿಲ್ಲದಾತನೊ ।
ಳು ತನಗಿಪ ಭಕ್ತಿಯನೆ ಭೂಷಣ । ದ ತೆರದಿಂದೆಲ್ಲರಿಗೆ ತೋರಿಸುತ
ಸುರವಲ್ಲಭನ ॥ ಅತಿಮನೋಹರ ವನದೊಳಾ ಕ್ಷಿತಿ । ಸುತೆ ಸಿಲುಕಿಬಂ
ಧನಕೆ ನಂಟರ । ನು ತೊರೆದಿದ್ದಳು ಕೇಸರಿಯವಶದೊಳಹ ಕರಿಣಿಯೊ
ಲು ॥ ೭ ॥ ದನುಜವಲ್ಲಭನಿಂದೆ ಬಹುಬಂ । ಧನಕೆ ಸಿಕ್ಕಿ ದುಗುಡವನಾಂ
ತಾ । ಜನಕಸುತೆ ಕಾರ್ಮುಗಿಲಮಧ್ಯದೊಳಡಗಿರಂಜಿಸದೆ ॥ ಜನರನಾನಂ
ದವಡಿಸದ ವಿಧು । ವಿನೊಲು ರಾಕ್ಷಸನಾಥ ನಾಘನ । ವನದೊಳಿದ್ದಳು
ದುಃಖದಿಂದುರೆಬಳಲಿ ತಪಿಸುತ್ತ ॥ ೮ ॥ ಅತಿಮಲಿನರೂಪಿಂದೆ ರಾವಣ ।
ನತಿಮನೋಹರ ವನದೊಳವನೀ । ಸುತೆ ಮನೋದುಃಖವನುತಾಳ್ದುರೆ
ಕುಂದಿಕೊರಗುತ್ತ ॥ ಕ್ಷಿತಿಯೊಳು ಸ್ಪುರುಶವನುಳಿದು ಸಂ । ತತವಯು
ಕ್ತಮೆನೆಸಿದ ವಲ್ಲಿಕೆ । ಯತೆರದಿಂದಲೆ ಕಾಣಿಸಿದಳಾತಂಕಕೊಳಗಾಗಿ
॥ ೧೯ ॥ ಪತಿಯಧೀನದೊಳಹುದೆ ತನಗೆ ವಿ । ಹಿತವೆನಿಸಿಕೊಂಡಿಪ
ಮಹೀಸುತೆ । ಪತಿಯನು ತೊರೆದಯುಕ್ತವಾಗಿಯೆ ನೀರೆಯರನಡುವೆ ॥
ಅತಿಶಯವದುಃಖಾಬ್ಧಿಯೊಳು ಮುಳು । ಗಿ ತಪಿಸುತ್ತ ಗ್ರಹಗಳ
ನಡುವಿ । ರುತಿಪ ರೋಹಿಣಿಯಂತೆ ತೋರಿದಳಾವನಾಂತರದೆ ॥ ೨೦ ॥
ಮಾಸಿಮೊಡಲನುತಾಳ್ದು ಸತ್ರತವ । ಹೀಸುತೆ ಕೇಸರಿನಿಂಪಕೂಡಿರು ।
ವಾ ಸರೋಜಲತೆಯವೊಲಾ ವನಮಧ್ಯದೊಳಿರುತ್ತ ॥ ಗಾಸಿವಡಿಸುವ
ಸುರೆಯರನಡುವೆ । ವಾಸವಾಡುತೆ ಸೆದುಮೆಸೆಯದಾ । ಯಾಸದಿಂದಿ
ರುತಿದ್ದಳಾರಾಘವನ ಜಾನಿಸುತ ॥ ೨೧ ॥ ಮಲಿನವಸ್ತ್ರವನುಟ್ಟ
ನುದಿನವೂ । ಳಳುತ ದೈನ್ಯವನಾಂತು ಸಂಕಟ । ಜಲಧಿಯೊಳು ಮು
ಳುಗಿದ್ದ ಪಂಕಜನೇತ್ರಿಜಾನಕಿಯು ॥ ಬಳೆದಗಂಡನ ತೇಜದಿಂದಲೆ ।

ಕಳೆದುದೈನ್ಯವ ನೆಂದುತನ್ನನು । ಸಲಹಿಕೊಂಡಿರುತ್ತಿದ್ದಳುನಿಜಾಚಾರಬ
ಲದಿಂದ ॥ ೨೨ ॥ ಬಡವೆಗಳ ನುಳಿದಾಮಹೀಸುತೆ । ನಡುನಡುಗುತಾ
ವನವಮಧ್ಯದೊ । ಳಡಿದ ಧೂಳಿಂದಂದಗೆಟ್ಟಿದೆಯಲ್ಲಿ ರಾಘವನ ॥
ಬಿಡದೆ ಜಾನಿಸುತ ಕುಸುಮಗಳನು । ಬಿಡದಬಳ್ಳಿಯು ತೆರದೆಚಲಿಸುತ ।
ಕಡುಬಳಲಿ ಬೆಂಡಾಗಿ ದುಃಖಿಸುತ್ತಿದ್ದಳನುದಿನವು ॥ ೨೩ ॥ ಕಾಮಭೋ
ಗ್ಯಗಳನು ತೊರೆದಾ । ಭೂಮಿಸುತೆ ಬಂಧುಗಳ ಕಾಣದೆ । ರಾಮನಾ
ಗಮ ನವನಪೇಕ್ಷಿಸುತಾ ಮರದಕೆಳಗೆ ॥ ಪ್ರೇಮದಿಂದಾ ರಾಘವನ
ಮಲ । ನಾಮವನು ಜಾನಿಸುತ ಮನನೊಂ । ದಾಮಹಿಗೆ ತಲೆವಾಗಿ
ರೋದಿಸುತ್ತಿದ್ದಳನುದಿನದೆ ॥ ೨೪ ॥ ಹೃದಯಮಧ್ಯದೊಳರ್ಪಿನಯನಬಿ ।
ಡವನುದಿನವೀಕ್ಷಿಸುತ ಶೋಕವ । ನದೊಳಗಿಹ ಫಲಪುಷ್ಪತರುಗಳ
ನಾವನುಜೆಯದನು ॥ ಪದೆದುನೋಡದೆ ಶಿಂಶುಪಾವೃ । ಕ್ಷದಕೆಳಗೆ
ತಾನಿದ್ದಳು ಪತಿಯ । ಪದಸರೋಜಂಗಳನು ಜಾನಿಸುತಧಿಕ ಭಕ್ತಿ
ಯಲಿ ॥ ೨೫ ॥ ಪತಿಯೆಮೇಲೆನಿಪಾಭರಣಮೆನಿ । ಸುತಿಹನೆಲ್ಲ ವನಿತೆಯ
ರಿಗೆ ಸಂ । ತತವಖಿಳ ಭೂಷಣನಿವಹ ಕಿಂತೆನುತ ತಾನರಿದು ॥ ಕ್ಷಿತಿ
ಸುತೆ ಸಕಲಭೂಷಣಾರ್ಜಳೆ । ನುತ ನೆಗಳ್ದಂ ರಾಮನಿಂದೆ ರ । ಹಿತಳೆ
ನಿಸಿ ಕಂಗೊಳಿಸದಿದ್ದಳಶೋಕವನದೊಳಗೆ ॥ ೨೬ ॥ ಕ್ಷಮೆಯೊಳಗೆ
ಭೂದೇವಿಗೆಣೆಯಹ । ಕಮಲಲೋಚನೆ ಸೀತೆವನದೊಳು । ರಮಣ
ವೈರಿಯನರಿಂದೆ ತಾಂ ರಕ್ಷಣೆಯನಾಂತಿದ್ದಂ ॥ ಅಮರವೈರಿಯಶೋಕವ
ನದೊಳು । ಸಮನಿಸಿದ ದುಃಖವೆನುತಾನಾಂ । ತು ಮರದಬುಡದೊ
ಳಿದ್ದಳಾವನಿತೆಮರಕಾಪಿನಲಿ ॥ ೨೭ ॥ ಹಿಮಹತನಳನಿಯಂತೆ ಕಳೆಗುಂ ।
ದಿಮೆರೆಯದೆ ಬಹುದೈನ್ಯವನು ತಾ । ಳ್ದಮನನೊಂದುರೆ ಚಿಂತಿಸುತ
ತನ್ನೊಡನೆ ತಿರುಗುತಿಹ ॥ ರಮಣನಂತೊರೆದಾ ಚಕೋರಕೆ । ಸಮಳೆ
ನಿಸುತಾ ಪತಿಯತೊರೆದುರೆ । ಸಮೆಯುತ್ತಿದ್ದಳು ಸೀತೆನಿದ್ರಾಹಾರಗಳ
ನುಳಿದು ॥ ೨೮ ॥ ಪ್ರಿಯಜನಂಗಳ ನೀಕ್ಷಿಸದೆ ಬಹು । ಭಯವನಾಂ
ತೀಕ್ಷಿಸುತ ರಾಕ್ಷಸ । ಚಯವನು ಮಹಾದುಃಖದಿಂದಲೆ ತಪಿಸಿರೋದಿ
ಸುತ ॥ ನಯನದೊಳ್ಸುರಿಸುತ್ತ ಜಲವ ಪ । ತಿಯನು ಜಾನಿಸುತಶನ
ಮುಳಿದತಿ । ಶಯದ ಖೇದವನಾಂತು ಶೋಕಿಸುತ್ತಿದ್ದಳಾಸೀತೆ ॥ ೨೯ ॥
ದಿನದಿನಂಗಳೊಳಾಮಹೀಸುತೆ । ಘನಮನೋವ್ಯಥೆಯಿಂದೆ ಕಂಪಿಸು ॥
ತ ನೆರೆನೊಂದುಪವಾಸವನೆಸಗಿ ಕೃಶತೆಯನುಪಡೆದು ॥ ಇನಯುನನಗಲು
ತ ಬಿಸುಸುಯ್ದು । ವನದೊಳಿದ್ದಳು ಶುಕ್ಲಪಕ್ಷದೊ । ಳು ನಭದೆ ವಿರಾ

ಚಿಸುವ ಪ್ರತಿಪಚ್ಚಂದ್ರನಂದದಲಿ ‖ ೩೦ ‖ ಕಾಗೆಗಳ ಗುಂಪಿನೊಳು ಸಿಕ್ಕಿದ | ಕೋಗಿಲೆಯುವರಿಯಂತೆ ಹುಲಿಗಳ | ಕೈಗೆಸಿಲುಕಿದ ಜಿಂಕೆ ಯಂತೆ ಯುಮಭಟರವಶದಲಿ ‖ ಕೂಗಿಕೊರಗುವ ಜೀವಿಯಂತನು | ರಾಗವಿಲ್ಲದೆ ತನಗೆಭೀತಿಯು | ನಾಗಿಸುವ ರಕ್ಕಸಿಯರವಶದೊಳಿದ್ದಳಾ ಸೀತೆ ‖ ೩೧ ‖

ಇಂತು ಹದಿನಾಲ್ಕನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೬೫೧.



## ಹದಿನೈದನೆಯ ಅಧ್ಯಾಯ.

ಸೂಚನೆ ‖ ಮೃಗವಕೊಂದೈತರುತ ಲುಟಜದಿ |
ಮೃಗನಯನೆಯಿಲ್ಲದಿರೆ ಚಿಂತಿಸಿ |
ರಘುಜನರಸುತ ಬಂದು ಕೇಳಿಗೊಂಡನು ಕಪೀಶ್ವರನ ‖

ಕೊಂದು ಮಾಯಾಮೃಗವ ನಾರಘು | ನಂದನನು ರಕ್ಕಸನ ಶಬ್ದವ | ನಂದುಕೇಳ್ದತಿ ಶಂಕೆಯನು ತಾಳ್ದೈತರುತಪಥದಿ ‖ ಕೊಂದು ಮೃಗ ಮತ್ತೊಂದನುರುಶರ | ದಿಂದದರಚರ್ಮವನು ಕೊಂಡೈ | ತಂದ ನತಿವೇಗದೊಳು ತನ್ನಾಶ್ರಮ ಕರಣ್ಯದಲಿ ‖ ೧ ‖ ಅದುರಿತೆಡಗಣ್ಣೂ ರಘುನಂದನ | ನಿದಿರಿನೊಳ್ನಡೆತಂದು ಜಂಬುಕ | ವೊದರುತಿರ್ದುದು ಏಕ್ಕತರವದಿಂದತಿ ಭಯಂಕರದೆ ‖ ಬೆದರಿಬರುತಿರೆ ಬೇಗದಾರಿಯೊ | ಳದಿರುವೆಂದಾ ಲಕ್ಷ್ಮಣನ ಕಂ | ಡು ದುಗುಡವನೈದುತ್ತ ಕಳವಳಗೊಂಡ ನಾರಾಮ ‖ ೨ ‖ ಬಂದುಮಣಿದಾ ರಾಘವನಡಿಗೆ | ನಿಂದತಮ್ಮನಕಂಡು ಧರಣೀ | ನಂದನೆಯನುಳಿದೇತಕಿಲ್ಲಿಗೆ ಬಂದೆ ನೀನೆನುತ ‖ ಅಂದು ರಾಮನು ನುಡಿಯಲಾತನ | ಮುಂದೆ ಕೈಮುಗಿದವನಿಸುತೆ ನುಡಿ | ದಂದ ವನು ಸೌಮಿತ್ರಿಬಿನ್ನವಿಸಿದನು ಮೊದಲಿಂದೆ ‖ ೩ ‖ ಆಲಿಸಣ್ಣಾದನುಜನ ಶಬ್ದವ | ಕೇಳಿ ನೀನಳಿದೆ ಯೆನುತಬಗೆದು | ತಾಳದೆನ್ನನು ಸೀತೆ ನಿನ್ನಯಬಳಿಗೆಪೋಗೆನುತ ‖ ಪೇಳಲಾಕೆಗೆ ನಾನರುಹಿದೆನು | ಕೇಳು ಜನನಿಯೆ ರಾಮಚಂದ್ರನ | ಸೋಲಿಸುವರಿಲ್ಲವು ಸುರಾಸುರನರಭುಜಂಗರಲಿ ‖ ೪ ‖ ಖರನಳಿದುದಾರಭ್ಯ ನಮಗಸು | ರರೊಳು ಹಗೆತನಬಂದಿಹುದು ದನು | ಜರಿರದೆಮ್ಮನು ವಂಚಿಸಲು ತರತರದೆಕೂಗುವರು ‖ ಹರಿಣವೇಷವನಾಂತ ರಕ್ಕಸ | ನಿರದೆತಾನೀತೆರದೆ ಕೂಗಿಹ | ನು ರಭಸದೆ

ಹಾಸೀತೆ ಹಾಸೌಮಿತ್ರಿ ಯೆಂದೆನುತ ‖ ೫ ‖ ಅಣ್ಣನಪ್ಪಣೆಯಿಲ್ಲದಿಲ್ಲಿ ಯೆ । ನಿನ್ನನೊಬ್ಬಳ ಬಿಟ್ಟುಪೋಗೆನು । ಸನ್ನುತಬಲಾಢ್ಯನಹರಾ ಮನಿಗಾವ ಭಯವಿಲ್ಲ ‖ ನಿನ್ನ ಬಿಡದೆಯೆ ಘಾತಿಸುತ್ತಿಹ । ರಿನ್ನು ರಕ್ಕಸ ರಿಲ್ಲದಿರೆನಾ । ನೆನ್ನುತನುಡಿಯೆ ಕೆರಳನನ್ನೊಡನೆಂದಳವನಿಜೆಯು ‖ ೬ ‖ ನೀನು ನನ್ನನು ವರಿಸಲೋಸುಗ । ಕಾನನಾಂತರದಲ್ಲಿ ತಿರುಗುವೆ । ನಾನು ನಿನ್ನ ವಶವಹಳಲ್ಲ ಭರತನನುಡಿಗೇಳ್ ‖ ನೀನು ಸಂಕೇತವನೆಸಗಿ ಕೊಂ । ಡೀನಡೆವಳಿಯ ತೋರಿಸುತ್ತಿಹೆ । ನಾನು ರಾಮನ ನುಳಿದಿತರ ಮಾನವರನೋಡುವಳೆ ‖ ೭ ‖ ದೀನನಾಗಿಹ ನನ್ನರಮಣಗೆ । ನೀನು ಸಂಗರದೊಳು ಸಹಾಯವ । ನೇನುಮಾಡದೆ ನನ್ನೊಳನುರಾಗವ ನೆಸ ಗಿಕೊಂಡು ‖ ಕ.ನನದೆಕಾದಿರ್ದ ನನ್ನಯ । ಪ್ರಾಣಬಿಡುವೆನು ಕುಡಿದು ನಂಜನು । ನಾನುಗೋದಾವರಿಯೊಳೀಗಲೆ ಪೋಗಿಬೀಳುವೆನು ‖ ೮ ‖ ತಮ್ಮನಲ್ಲವು ರಘುವರಗೆ ನೀಂ । ಸುಮ್ಮನೆಯೆ ನಟಿಸುತಿಹೆ ಖೂಳನೆ । ನಮ್ಮಕೇಡನುಕೋರುತಿಹೆ ದಾಯಾದಿಗಳಬಗೆಯು ‖ ತಮ್ಮನಂಟರ ಕೆ ಡುಕನೆಣಿಸುವ್ರು । ದೆಮ್ಮ ವಂಚಕನೀನು ಪೋಗೆಂ । ದುಮ್ಮಳಿಸಿ ಬಿರು ನುಡಿಯನಾಡಿದಳಾ ಮಹೀಸುತೆಯು ‖ ೯ ‖ ತಂದೆಕೇಳಾನುಡಿಗಳನು ಕಿವಿ । ಯಿಂದಕೇಳದೆ ನಿನ್ನಬಳಿಗಾಂ । ಬಂದೆನೆಂದಾ ಲಕ್ಷ್ಮಣನು ಬಿನ್ನೈಸೆ ರಾಘವನು ‖ ನೊಂದುಕೊಂಡತಿ ವೇಗದಿಂದಲೆ । ಬಂದುತನ್ನಾಶ್ರಮದೆ ಧರಣೀ । ನಂದನೆಯಕಾಣದೆಯೆ ಬಿದ್ದನು ಮೂರ್ಛೆಯನು ತಾಳ್ದು ‖ ೧೦ ‖ ಬಳಿಕಮೂರ್ಛೆಯ ಕಳೆದು ಕಾನನ । ದೊಳಹ ಗಿರಿನದಿ ವೃಕ್ಷ ಶಿಲೆಲತೆ । ಜಲರುಹಾಕರಗಳೊಳು ಹುಡುಕುತ ಸತಿಯನೀಕ್ಷಿಸದೆ ‖ ಅಳುತರಾಘವನಾಗ ಬಿಸುಸು । ಯ್ದಿಳೆಗೆಬಿದ್ದು ನುಡಿದನು ಲಕ್ಷ್ಮಣ । ನೊಳು ಮಹೀಸುತೆಯನ್ನು ತಿಂದಿಹರಸುರರೆಂದೆನುತ ‖ ೧೧ ‖ ಮನದೆಕುಂದಿ ಕೊರಗುತರಣ್ಯದೊ । ಳುನಡೆತಂದಾ ರಾಮನನುಜನೊ । ಡನೆ ಗಿರಿಗಳೊಳು ಪಾದಪಗಳೊಳು ಮರದತೊರೆಗಳೊಳು ‖ ಘನಶಿಲೆಗಳೊಳು ಕಂದರಂಗಳೊ । ಳು ನದನದಿಗಳೊಳರಸಿ ಕಾಣದೆ । ಜನಕಜಾತೆಯ ತೆರವಬಂದನು ದಕ್ಷಿಣಾಪಥದೆ ‖ ೧೨ ‖ ಒಡನೆಕಂಡನು ನೆಲದೆ ಬಿದ್ದಡಿ । ಗಡಿಗೆ ರಕ್ತವಕಾರುತಸುವೆನು । ಬಿಡದೆಮರಣಾವಸ್ಥೆಯನು ಹೊಂದಿದಜಟಾಯುವನು ‖ ಪೊಡವಿಜೆಯನೀ ಪಕ್ಷಿರೂಪವ । ಪಡೆದ ದನುಜನು ತಿಂದಿಹನಿವನ । ಕಡಿವೆ ನೆಂದೆನುತೆತ್ತಿಕೊಂಡನು ರಾಮನಾಧನುವ ‖ ೧೩ ‖ ಆನುಡಿಯಕೇಳುತ ಜಟಾಯು ನಿ । ದಾನಿಸದೆ ಪೇಳ್ದ

ನೆಲೆ ರಾಘವ । ದಾನವಾಧಿಪ ರಾವಣನು ಕೊಂದೆನ್ನನವನಿಜೆಯ ॥ ತಾನು ಲಂಕೆಗೆಕೊಂಡುಪೋದನು । ನೀನು ತಿಳಿಯೆನುತ ನುಡಿದಾಗಳ್ । ಪ್ರಾಣ ವನುಬಿಟ್ಟನು ರಘೋತ್ತಮನೆದೆಯು ಕರಗುತಿರೆ ॥ ೧೪ ॥ ಸುಟ್ಟುಬೆಂಕಿ ಯೊಳಾಜಟಾಯುವ । ನೆಟ್ಟನೆ ತಿಲೋದಕವ ಬಿಡುತಲೆ । ಕೊಟ್ಟುಸದ್ಗ ತಿಯನು ಖಗೇಂದ್ರಂಗಿರದೆ ರಾಘವನು ॥ ಕಟ್ಟಡವಿಯೊಳನುಜನೊಡನೆ ಪೊರ । ಮಟ್ಟು ಬರುತಿರಲಂದುಪಥದೊಳು । ಥಟ್ಟನೆಪಿಡಿದನಾಕಬಂಧ ನು ಕೈಯೊಳೀರ್ವರನು ॥ ೧೫ ॥ ಭರದೊಳು ಕಬಂಧನಭುಜಂಗಳ । ನಿರಿದುಪಾವಕನಿಂದೆ ದಹಿಸಲಿ । ವರಿದಿರೊಳಗಾ ದನುಜನುತ್ತಮವಪ ವಿಮಾನದಲಿ ॥ ಪರಮತೇಜದೆಮೆರೆದು ತೋರುತ । ಧರಿಸಿದಿವ್ಯಾಭರಣ ವಸನವಿ । ಸರವನಿಂತರುಹಿದನು ರಘುಕುಲಜರಿಗೆ ಸಂತಸದಿ ॥ ೧೬ ॥ ಆಲಿಸೈ ರಘುನಂದನನೆ ಸೀ । ತಾಲಲನೆಯನು ತೊಡೆಯೊಳಿರಿಸಿಯೆ । ಖೂ ಳರಾವಣ ನೆತ್ತಿಕೊಂಡಾ ಲಂಕೆಗೈದಿದನು ॥ ಆ ಲಲನೆಯಿಂದೊದಗಿಹು ದು ಕೊನೆ । ಗಾಲ ದನುಜರಿಗೆಲ್ಲ ನೆಲದೊಳು । ಕೇಳೆನುತರಾಘವನಿಗು ಸುರಿದನೊಂದು ಸಂಗತಿಯ ॥ ೧೭ ॥ ಪೋಗಿನೀವೀ ಕಾನನದೊಳು ಸ । ರಾಗದಿಂದೆ ಶಬರಿಗೆ ಮೋಕ್ಷವ । ನಾಗಿಸಿ ಮೆರೆವ ಪಂಪೆಯನು ಸಾರ್ದ ದರಸನಿಪದೊಳು ॥ ಆಗಸವನಾಕ್ರಮಿಸಿ ಪಿರಿದೆನಿ । ಪಾಗುಹೆಗಳಿಂದತಿ ಮನೋಹರ । ಮಾಗಿಕಾಣುವ ಋಶ್ಯಮೂಕಗಿರಿಯನು ಸಾರುವುದು ॥ ೧೮ ॥ ಮೃಗಖಗೋರಗ ಪಾದಪಗಳಿಂ । ದೆ ಗಹನಮೆನಿಪ ಋಶ್ಯ ಮೂಕದೊ । ಳಗಿಹ ನಾರವಿತನಯ ಸುಗ್ರೀವನತ್ರಿಸಂತಸದಿ । ಹಗೆಯೆ ನಿಪ ವಾಲಿಭಯದಿಂದೆ ಕ । ಪಿಗಳು ನಾಲ್ವರಸಹಿತ್ತಿನಿಯುಳ । ನಗ ಲಿ ವಸಿಸುವ ನಾತನೊಡನೆಸಗುವುದು ಸಖ್ಯವನು ॥ ೧೯ ॥ ರವಿಸುತನು ಸೀತೆಯನು ನೀಂ ಪೊಂ । ದುವತೆರದೊಳು ಸಹಾಯಮಾಡುವ । ನವ ನು ಕಂಡಿಹನೀಮಹೀತಲವೆಲ್ಲವನು ಹಿಂದೆ ॥ ಬವರದೊಳು ರಾವಣ ನಸಂಹರಿ । ಸಿ ವಸುಧಾಸುತೆಯನ್ನು ಪಡೆದಾ । ಳುವೆ ಮಹೀ ಮಂಡಲವನೆಂದು ಕಬಂಧನರುಹಿದನು ॥ ೨೦ ॥ ಇಂತು ಪೇಳ್ದತೆ ರಳುವುದೆಂದೆನು । ತಂತರಿಕ್ಷದೊಳಾ ಕಬಂಧನು । ಸಂತಸದೊಳಾ ರಾಘವನಿಗೆಂದಾತನಾಣತಿಯ ॥ ಅಂತುಶಿರದೊಳು ಮಾಯವಾದನ । ನಂತರದೊಳಾ ವನದೆ ಬಂದರು । ಚಿಂತಿಸುತ ಸುಗ್ರೀವಸಖ್ಯವ ಬ ಯಸಿಶೀಘ್ರದಲಿ ॥ ೨೧ ॥ ರಾಮ ಲಕ್ಷ್ಮಣ ರಡವಿಯೊಳ್ಬರು । ತಾ ಮತಂಗಾ ಶ್ರಮವಸೇರಲು । ರಾಮನಚರಣಕೆರಗುತಾ ಶಬರಿಬಹುಭಕ್ತಿ

ಯುಲಿ ‖ ರಾಮಣೀಯಕವೆನಿಸಿ ಮೆರೆವಾ | ರಾಮದೊಳ್ಬಳೆದ ಫಲಕುಸು
ಮ | ಸ್ತೋಮವನು ಕೊಟ್ಟೊಲಿಸಿ ಪೇಳ್ದಳು ಮುನಿಮಹಾತ್ಮೆಗಳ
‖ ೨೦ ‖ ತಿಳಿದುತಾಪಸರ ಪ್ರಭಾವವ | ಕಳುಹಿಸಗ್ನಿಕೆ ಶಬರಿಯುನು
ತಾ | ತಳೆದು ಲಕ್ಷ್ಮಣನೊಡನೆ ರಾಘವನಧಿಕ ವಿಸ್ಮಯುವ ‖ ಬಳಿಕ
ಹತ್ತಿರದೊಳತಿ ನಿರ್ಮಲ | ಸಲಿಲದಿಂದಾನಂದಪ ನೆಸಗು | ತಿಳೆಯೊಳುನ್ನ
ತಿಪೆತ್ತಪಂಪಾಸರಸಿಗೈತಂದ ‖ ೨೩ ‖ ಕಮಲಕೈರವ ಪುಂಡರೀಕ |
ಭ್ರಮರಸಂಕುಲದಿಂದೆ ರಂಜಿಸಿ | ಕಮಠ ಝುಷ ಮಂಡೂಕಮಕರ ಸ
ಮೂಹವನುತಾಳ್ದು ‖ ವಿಮಲಬರ್ಹಿಣ ಹಂಸಶುಕಪಿಕ | ಸಮುದಯು
ದೊಳಾನಂದವ ನೆಸಗು | ತ ಮೆರೆವಾ ಪಂಪಾಸರಸಿಗೈತಂದನಾರಾಮ
‖ ೨೪ ‖ ಅನುಜ ಲಕ್ಷ್ಮಣನೊಡನೆ ರಘುನಂ | ದನನೆಸೆವ ಪಂಪಾಸ
ರೋವರ | ವ ನಡಿಗಡಿಗೀಕ್ಷಿಸುತ ಮಹದಾಶ್ಚರ್ಯವನುತಾಳ್ದು ‖ ವನಜ
ಲೋಚನೆ ಜನಕನಂದನೆ | ಯುನಗಲಿದ ವಿರಹಾಗ್ನಿಯಿಂದುರೆ | ಮನ
ದೊಳಗೆ ತಪಿಸುತ್ತ ಸಂಕಟದೊಳು ವಿಲಾಪಿಸಿದ ‖ ೨೫ ‖ ವಿಂದುಪಂ
ಪಾಸರಸಿಯೊಳಗಾ | ನಂದದಿಂದಾ ಲಕ್ಷ್ಮಣನಸಹಿ | ತಂದು ಸಂಧ್ಯಾವಂ
ದನಾದಿಗಳೆಲ್ಲವನು ರಚಿಸಿ ‖ ಸುಂದರತರುಗಳಿಂದೆ ತೀರದೊ | ಳಂದ
ವಾಗಿಪ ವನವಕಂಡೈ | ತಂದು ಹೊಕ್ಕನು ವಿರಹತಾಪವನಾಂತು ರಾಘ
ವನು ‖ ೨೬ ‖ ಪರಿಮಳಾತಿಶಯುವನು ಬೀರುವ | ಪರಿಪರಿಯ ಪುಷ್ಪ
ಲತೆಗಳ ನಾ | ತರತರದ ಫಲಭಾರದಿಂದೆಸೆವಖಿಳ ತರುಗಳನು ‖ ಇರದೆ
ಕಿವಿಗಿಂಪಾಗಿ ಕೂಗುತ | ನೆರೆದ ಪಕ್ಷಿನಿಕರವನೀಕ್ಷಿಸಿ | ವಿರಹತಾಪವ
ತಾಳಲಾರದೆ ನೊಂದನಾರಾಮ ‖ ೨೭ ‖ ಚರಿಸುತಾರವಿಸುತನು ಕಂಡ
ನು | ಭರದೊಳಾರಘುನಂದನರ ನಂ | ದಿರದೆ ಪಂಪಾತೀರದೊಳು
ಭೀತಿಯುನು ತಾನಾಂತು ‖ ಸುರಪಸುತನ ಮತದೊಳವುಗೆತೊಂ |
ದರೆಯುನಾಗಿಪರಿವರು ಭರದಿಂ | ದರಿವುದಿವರಿಂಗಿತವನೆಂದಟ್ಟಿದನು ಮಾರು
ತಿಯ ‖ ೨೮ ‖ ಭರದೊಳೈತಂದೆರಗಿ ರಾಮನ | ಚರಣಪಂಕಜಕಿರದೆ
ಚಿತ್ತದೊ | ಳರಿತುಕೊಂಡವ ರಿಂಗಿತವನಾತರಣಿಸಂಭವನ ‖ ಚರಿತ
ವನು ತಾ ತಿಳುಹಿ ಬೆನ್ನಿನೊ | ಳಿರಿಸಿಕೊಂಡವ ರಿಬ್ಬರನು ಬಂ | ದುರ
ವಿತನಯುಂಗಾ ಹನುಮನರುಹಿದ ನವರಪರಿಯು ‖ ೨೯ ‖ ಅನಲಸಾಕ್ಷಿ
ಯೊಳಾ ರಘುವರನೊ | ಡನತಿ ಸಂತಸದಿಂದೆ ರವಿನಂ | ದನನೆಸಗಿದನು
ಸಖ್ಯವನುಬಳಿ ಕಿಬ್ಬರವರವರ ‖ ಮನದ ಸುಖದುಃಖಂಗಳನು ತಿಳು |
ಹಿ ನುಡಿದರು ರಣರಂಗದೊಳು ತಾ | ವು ನಡಿಸುವ ಸಂಗತಿಗಳನು

ಬಳಿಕೊಬ್ಬರೊಬ್ಬರೊಳು ॥ ೩೦ ॥ ಮುರಿದು ವಾಲಿಯನೊಂದುಶರದಿಂ । ದೆ ರಣದೊಳು ನಾ ನೀವೆಕಪಿಗಳ । ದೊರೆತನವನೆಂದೆನುತ ಲಭಯುವೆ ಕೊಟ್ಟು ರಾಘವನು ॥ ತರಣಿನಂದನ ನೊಲಿಸುತಾತನಿ । ದಿರೊಳು ಚಿವ್ಮಿ ದನಂದು ತನ್ನಯ । ಚರಣದುಂಗುಟದಿಂದೆ ದಶಯೋಜನಕೆ ದುಂದುಭಿಯ ॥ ೩೧ ॥ ಏಳು ತಾಳೆಯುಮರಗಳನು ನೆರೆ । ಸೀಳಿ ಧರೆಗಾರಾಮಭದ್ರನು । ಬೀಳಿಸಿದನೊಂದಂಬಿನಿಂದಾಗಿರಿ ಶಿಖರದಿಂದೆ ॥ ತಾಳದಾಕಿಷ್ಕಿಂಧೆಗೆಯ್ದಿಯೆ । ಕಾಳಗದೊಳಂದಿರದೆ ಕೊಂದನು । ವಾಲಿಯನು ತಾನೊಂದುಶರದಿಂದಚ್ಚರಿಗೊಳಿಸುತ ॥ ೩೨ ॥ ಬಳಿಕ ಲಕ್ಷ್ಮಣನೊಡನೆ ರಾಘವ । ನಳಿದವಾಲಿಯ ಕಂಡುದುಃಖಿಸು । ತಳುವೆ ಸುಗ್ರೀವನನು ತಾರಾಂಗದರುಗಳಸಹಿತ ॥ ತಳುವದೆಸಮಾಧಾನವಡಿಸುತ । ತಿಳುಹಿಲೋಕವಿಧಾನವನು ಕಪಿ । ಗಳೊಡೆಯುಂಗಾಗಿಸಿದನುತ್ತರಕರ್ಮಗಳನಲ್ಲಿ ॥ ೩೩ ॥ ಕರೆದುರಾಘವನಾರವಿಸುತಂ । ಗರುಹಿದನುಕೇಳ್ಸಖನೆನೀ । ನಿರದೆಕಿಷ್ಕಿಂಧಾನಗರಕೈದಿ ಕಪಿರಾಜ್ಯವನು ॥ ಪೊರೆವುದಭಿಷೇಕವನುಪಡೆದಾ । ದರಿಸುತೀವುದು ಯೌವರಾಜ್ಯದ । ಸಿರಿಯ ನಂಗದಗೆನುತ ಸಂತಸವಡಿಸು ತಡಿಗಡಿಗೆ ॥ ೩೪ ॥ ಈಗವರ್ಷಾಕಾಲವೆನಿಪ್ಪುದು । ಪೋಗಿನೀಂಕಿಷ್ಕಿಂಧೆಯೊಳಗಿರು । ರಾಗದಿಂನಿವಸಿಸುವೆ ನೀ ಪ್ರಸ್ರವಣಶೈಲದೊಳು ॥ ಬೇಗ ಸಜ್ಜುಗೊಳಿಸುವುದೆಲ್ಲವ । ನೀಗಳೆಂದೆನುತ ವನಕಳುಹಿಸು। ತಾಗಿರೀಂದ್ರಕೆಬಂದನಾರಘುವರನುಶೀಘ್ರದಲಿ ॥ ೩೫ ॥ ಹನುಮಜಾಂಬವ ತಾರಶತಬಲಿ । ಪನಸನೀಲಗವಾಕ್ಷಗಜಗವ । ಯನಳಶರಭಸುಷೇಣ ಕೇಸರಿಗಂಧಮಾದನರು ॥ ವಿನುತಶುಭಲಗ್ನದೊಳು ರವಿನಂ । ದನನಿಗಭಿಷೇಕವನು ಮಾಡಿದ । ರನಘಶಕ್ರಗೆ ವಸುಗಳಭಿಷೇಕವನು ಗೆಯ್ದಂತೆ ॥ ೩೬ ॥ ಅರಸನಾಗುತ ತರಣಿಸಂಭವ । ನಿರಿಸಿದನು ಯುವರಾಜ ಪದವಿಯೊ । ಳಿರದೆ ತಾರಾಸುತನ ನಾರಘುನಾಥನೊರೆದಂತೆ ॥ ಪರಮಸಂತಸದಿಂದೆ ತಾಂ ಪಡೆ । ದುರುಮೆಯನುತಾರೆಯನುಲೀಸೆನೆ । ಪೊರೆದನಾಕಪಿರಾಜ್ಯವನು ಸಚಿವರಸಹಾಯದಲಿ ॥ ೩೭ ॥ ಕೇಳುಲಕ್ಷ್ಮಣತನ್ನರಾಜ್ಯವ । ನಾಳುತಾ ಸುಗ್ರೀವನು ಮದನ । ಕೇಳಿಯೊಳಗಾಸಕ್ತನಾಗಿಯೆ ನಮ್ಮಕಾರ್ಯವನು ॥ ಕಾಲವರಿತೆಸಗದೆಮರೆತಿಹನು । ಖೂಳನಿಗೆನೀಂಪೋಗುತೀಗಳೆ । ಪೇಳು ಬುದ್ಧಿಯನೆಂದು ಕಳುಹಿದರಾಮನುರೆಮುಳಿದು ॥ ೩೮ ॥ ಬಂದುಲಕ್ಷ್ಮಣ ನಾರವಿಸುತನ । ಮುಂದೆನಿಲ್ಲುತ ತನ್ನ ಚಿತ್ತಕೆ । ಬಂದತೆರದೊಳು ನಿಂದಿಸಲು ಸುಗ್ರೀವನತಿಭರದೆ ॥ ವಂದಿಸುತ ಲಕ್ಷ್ಮಣನಿಗಾರಘು । ನಂದನನ

ಕಾರ್ಯವನು ವಿರಚಿಸು | ವಂದವನರುಹಿ ಸಂತವಿಸಿದನು ಕೂಡೆ ಮನ್ನಿಸುತ || ೩೯ || ಧರಣಿಮಂಡಲ ದನದಿಗಳೊಳಾ | ಗಿರಿಗಳೊಳು ಶಿಲೆಗಳೊಳು ಘನಕಂ | ದರಗಳೊಳು ಕೂಪಗಳೊಳಾ ವನಗಳೊಳು ತರುಗಳೊಳು || ತೊರೆಗಳೊಳು ಪೊದೆಗಳೊಳು ಗುಡಿಗೋ | ಪುರಗಳೊಳಗಿಹ ಕಪಿಗಳೆಲ್ಲರ | ಬರಿಸೆನುತ ನೇಮಿಸಿದ ನಾನೀಲಂಗೆ ರವಿಸುತನು || ೪೦ || ರವಿಸುತನ ನೇಮವನು ತಾಳ್ದತಿ | ಜವದೊಳಾ ವೈಶ್ವಾನರನ ಸುತ | ನವನಿಮಂಡಲದೊಳಿಹ ವಾನರವೀರರೆಲ್ಲರನು || ತವಕದೊಳ್ಕರೆತಂದು ನಿಲ್ಲಿಸು | ತವರವರ ಸೈನ್ಯಂಗಳೊಡನಂ | ದು ವಿವರಿಸಿ ಪೇಳದನು ಸುಗ್ರೀವಂಗೆ ಕೈಮುಗಿದು || ೪೧ || ಅಪರಿಮಿತ ಸೈನ್ಯಂಗಳ ಸಹಿತ | ಕಪಿವರನು ರಘುವೀರನೆಡೆಗೈ | ದಿ ಪದಪಂಕಜಕೆರಗಿ ತೋರಿದನು ಕಪಿಸೇನೆಯನು || ಕಪಿಬಲವನೀಕ್ಷಿಸುತ ರಾಘವ | ನುಪಚರಿಸಿ ಸುಗ್ರೀವನನು ತಳೆ | ದಪರಿಮಿತಸಂತೋಷದಿಂ ಬಿಗಿದಪ್ಪುತಿಂತೆಂದ || ೪೨ || ರಾವಣನು ತಾನೆಲ್ಲಿ ವಸಿಪನು | ಭೂವನಿತೆಯೆಲ್ಲಿಹಳು ಪಟ್ಟಣ | ವಾವುದಾ ರಜನೀಚರನ ನೀನಿವುಗಳೆಲ್ಲವನು || ಆವಬಗೆಯಿಂದಾದೊಡೆಯು ನೆರೆ | ದೀವರಕಪೀಂದ್ರರನೆ ರವಿಯಿಂ | ದಾವನಿತೆಯಿಂ ಪಡೆಯ ಕಾಣುವುದೆಂದ ನಾರಾಮ || ೪೩ || ವಿನತನಂ ಕರೆ ದಾದಿವಾಕರ | ತನಯ ಮನ್ನಿಸಿ ಲಕ್ಷವಾನರ | ರ ನೊಡಗೊಂಡಾ ಸೋಮಸೂರ್ಯಾತ್ಮಜರೊಡನೆ ನೀನು || ದನದಕಾಲಿನಗಲದ ಮೇದಿನಿ | ಯನು ಬಿಡದೆ ಮೂಡಲೊಳರಸುವುದು | ಜನಕಜಾತೆಯ ನೊಂದು ತಿಂಗಳೊಳೆಂದು ನೇಮಿಸಿದ || ೪೪ || ಪನಸವೃಂದ ಸುಷೇಣ ನೀಲಪ | ವನಸುತ ಗವಯ ಗಂಧಮಾದನ | ವನಜಸಂಭವ ತನಯ ಋಷಭ ಗವಾಕ್ಷಶರಗುಲ್ಮ | ಘನಬಲ ಸುಹೋತ್ರ ಗಜ ವಾಲಿಜ | ರನು ಕರೆದು ಭಾನುಸುತ ಮನ್ನಿಸು | ತ ನುಡಿದನು ರಾಘವನಿದಿರೊಳಾ ಗಿರಿಯ ಶಿಖರದಲಿ || ೪೫ || ದ್ವಿವಿದನುಲ್ಕಾಮುಖ ಶರಾರಿಗ | ಳ ವೆರಸುತ ನೀವಿಂದಿರದೆ ಪೋ | ಗಿ ವಸುಧಾನಂದನೆಯ ನಾತೆಂಕಣದೆಸೆಯೊಳೆಲ್ಲ || ರವಿಕಿರಣವೆಲ್ಲಲ್ಲಿ ಪಸರಿಪು | ದವನಿಯೊಳಗಾ ಸ್ಥಳಗಳನು ಬಿಡ | ದೆ ವಹಿಲದೊಳರಸಿ ಬಹುದಿಲ್ಲಿಗೆ ತಿಂಗಳೊಂದರಲಿ || ೪೬ || ಬಳಿಕ ತನ್ನೆಡೆಗಾ ಸುಷೇಣನ | ತಳುವದಾ ಸುಗ್ರೀವನು ಕರೆದು | ತಿಳುಹಿದನು ನೀನೀ ಮರೀಚಿತನಯರನೊಡಗೊಂಡು || ಇಳೆಯ ಪಶ್ಚಿಮಭಾಗದೊಳಿಹ | ಸ್ಥಳಗಳೆಲ್ಲವ ನರಸಿ ಸೀತಾ | ಲಲನೆಯನು ಕಂಡು ಬಹುದಿಲ್ಲಿಗೆ ತಿಂಗಳೊಳಗೆನುತ || ೪೭ || ಶತಬಲಿಯುನಾ

ತಪನ ಸಂಭವ । ನತಿಹಿತೋಕ್ತಿಗಳಿಂಗೆ ಮನ್ನಿಸು । ತ ತಳುಃ
ನೀನೊಂದು ಲಕ್ಷಕಪಿಗಳನೊಡಗೊಂಡು ॥ ಕ್ಷಿತಿ ಸುತೆಯನುತ್ತರಃ
ಯೊಳರ । ಸುತಖಿಳಸ್ಥಳಗಳನು ಶೋಧಿಸಿ । ಯುತಿಜವದೊಳೈತಹ
ತ್ರಿಂಗಳೊಳನುತ ಸೇವಿಸಿದ ॥ ೪೮ ॥ ಪವನಸಂಭವ ಕೇಳ್ಬತುರ್ದ
ಭುವನಗಳೊಳಗೆ ನೀನು ಕಾಣದಿ । ಹ ವಿಷಯಂಗಳ ನರಿಯೆ ನಿ
ಸಮಾನನಹಭಟನು ॥ ಭುವಿಯೊಳಲ್ಲಧರಣಿಯೊಳಾಗಲಿ । ದಿವದೊಳಾ
ನೀಂ ರಸಾತಳ । ಭುವನದೊಳಗಾಗಲಿ ಜನಕಜೆಯನರಿದುಬಹುದೆ
॥ ೪೯ ॥ ಇವನು ಕಾರ್ಯವ ಬಿಡದೆಮಾಡುವ । ನಿವನುಧೀವರ ನಿವ
ಬಲಯುತ । ನಿವನುಕಾಣುವ ನಾಧರಣಿಜೆಯನೆನುತ ರಾಘವನು ॥
ನತನಯಂಗೊಲಿದು ಕೊಟ್ಟನು । ತವೆಮೆರೆವತನ್ನಂಗುರವ ನಿಗ ।
ನಿಜೆಗೆಕೊಟ್ಟವೆಳಕುರುಹನು ತರುವುದೆಂದೆನುತ ॥ ೫೦ ॥ ಸಕಲ ವಾ
ರಾಕಪೀಂದ್ರಗೆ । ಭಕುತಿಯಿಂಮಣಿದೆರಗಿರಘುಜಗೆ । ಪ್ರಕಟಸುಗ್ರೀ
ಜ್ಞೆಯಿಂ ಪೊರಮಟ್ಟುಜವದಿಂದ ॥ ಸಕಲ ದಿಶೆಗಳ ನರಸತೊಡಗಿ
ರು ಕುಟಿಲದಮನದಿಂದೆ ತಮ್ಮಯ । ಶಕುತಿಯಂತೋರಿಸುತ ಸೀತೆ
ಕಂಡುಬಹೆವೆಂದು ॥ ೫೧ ॥ ಪ್ಲವಗವೀರರು ಪೋದಬಳಿಕಾ । ರವಿಕ
ತಿಲಕ ನಾ ತರಣಿಸಂ । ಭವನ ವಿಶ್ವಾಸವನು ಲಕ್ಷ್ಮಣನಿಗೆ ತಿಳ
ಸುತ್ತ ॥ ಅವನಿನಂದನೆ ಸೀತೆಯಿಹತಾ । ಣವನರಿಯಬೇಕೆಂದು ತಾ
ಪ । ಲವುತೆರದೆ ಚಿಂತಿಸುತಲಿದ್ದನು ತನ್ನ ಚಿತ್ತದಲಿ ॥ ೫೨ ॥

ಇಂತು ಹದಿನೈದನೆಯ ಅಧ್ಯಾಯಸಂಪೂರ್ಣವು. ಪದ್ಯಗಳು ೭೪೬



## ಹದಿನಾರನೆಯ ಅಧ್ಯಾಯ.

ಸೂಚನೆ ॥ ಹುಡುಕುತಾಪವನಸುತತೆಂಕಣ ।
ಕಡಲ ಲಂಘಿಸಿ ಸಾರ್ದುಲಂಕೆಯ ।
ಪೊಡವಿಸುತೆಯ ನಶೋಕವನದೊಳುಕಂಡು ಮುದಗೊಂ

ವಿನತ ನೆಲ್ಲಕಪಿಗಳೊಡನೆ ಮಾ । ಡಣದೆಸೆಯೊಳೆಲ್ಲೆಡೆಗಳ
ಗಾ । ಜನಕಜಾತೆಯ ನರಸಿಕಾಣದೆತಿಂಗಳೊಂದರಲಿ ॥ ಇನತನಯರ
[illegible]

ದೊಳು ಕಾಣೆವು ಜಾನಕಿಯನೆನುತ ॥ ೧ ॥ ಒಂದು ತಿಂಗಳೊ ಳಾಸುಷೇಣನು । ಸುಂದರಾಂಗಿಯ ನೆಲೆಯನರಸು । ತ್ತಂದು ಪಶ್ಚಿಮದಿ ಕ್ಕಿನೊಳುಕಾಣದೆ ವಿಷಾದಿಸುತ ॥ ನೊಂದುಖೇದವನಾಂತು ಭಾಸ್ಕರ । ನಂದನಂಗರುಹಿದ ನತಿವಿನಯ । ದಿಂದೆಕಾಣೆನು ಜಾನಕಿಯನಾದೆಸೆ ಯೊಳೆಂದೆನುತ ॥ ೨ ॥ ಉತ್ತರದಿಶೆಯೊಳಾ ಜನಕಜೆಯ । ನೆತ್ತಲುಂ ತಾನರಸಿ ಕಾಣದೆ । ಚಿತ್ತದಲಿ ದುಗುಡವನು ಹೊಂದುತಲಾಗ ಶತ ಬಲಿಯು ॥ ಇತ್ತತಿಂಗಳಗಡುವಿನೊಳು ಬಂ । ದೊತ್ತರಿಸಿ ಪೇಳಿ ದನು ಪದಕೆರ । ಗುತ್ತ ಸುಗ್ರೀವಂಗೆ ಕಾಣೆನು ಸೀತೆಯನೆನುತ್ತ ॥ ೩ ॥ ಹನುಮನಾ ಕಪಿರಾಜನಪ್ಪಣೆ । ಯನು ಪಡೆದು ದಕ್ಷಿಣದದಿಕ್ಕಿನೊ । ಳನು ದಿನವು ಜಾಂಬವಸುಷೇಣಾಂಗದರುಗಳಸಹಿತ ॥ ಜನಕನಂದನೆಯುನ ರಸಿದನಾ । ವಿನುತ ವಿಂಧ್ಯಾಚಲದೊಳೊಪ್ಪುವ । ಘನಗುಹಾನದಿ ವಿಟಪಿ ಸರಸಿಗಳಲ್ಲಿ ತಾಂ ಬಿಡದೆ ॥ ೪ ॥ ಶಿಲೆಗಳಲಿ ಪೊಟರೆಗಳಲಿ ಪೊದೆಗ । ಳಲಿ ಖಗಮಿಗಾವಾಸಗಳಲಿ ವಿ । ಮಲ ಜಲರುಹಾಕರಗಳಲಿ ಘನಕಂದ ರಂಗಳಲಿ ॥ ಉಳಿದು ನಿದ್ರಾಹಾರಗಳನು ಹ । ಗಲಿರುಳೊಳುತಾ ನರಸಿ ದನು ಕಪಿ । ಗಳ ನೆರವಿಯಿಂದೊಂದುತಿಂಗಳು ವಿಂಧ್ಯಶೈಲದೊಳು ॥೫॥ ಅರಸುತಿರಲೊಂದುದಿನ ವಾನರ । ವರರು ನೀರಡಿಕೆಯನು ಹೊಂದು । ತ್ತುರೆಬಳಲಿ ಬಿಲವೊಂದನೀಕ್ಷಿಸಿದರು ಸಮೀಪದಲಿ ॥ ಪರಮಹರ್ಷದೊ ಳೊಳಪುಗುತ ಸು । ಸ್ಥಿರಮನದೆ ತಪವಾಚರಿಪ ಸುಂ । ದರಿಯನೋ ರ್ವಳಕಂಡು ನಿಂತರು ಮಿಗಿಲುಬೆರಗಾಗಿ ॥ ೬ ॥ ಹನುಮನಾಕೆಗೆ ವಂದಿ ದುತಿಳಿದಾ । ವನದ ವಿವರಂಗಳನು ತಾ ನರು । ಹಿ ನಿಜವೃತ್ತಾಂತವನು ಕಳೆದು ಕ್ಷುತ್ಪಿಪಾಸೆಗಳ ॥ ಘನಬಿಲದೊಳಿರೆ ಕಳೆದುದವಧಿಯು । ಮನ ದೆ ಚಿಂತಿಸಿ ಮುಂದುಗಾಣದೆ । ಯೆ ನುಡಿದರು ಬಳಿಕಾಸ್ವಯಂಪ್ರಭೆ ಗೆಲ್ಲ ಸಂಗತಿಯ ॥ ೭ ॥ ತಿಳುಹಿ ಮಾರ್ಗವ ನಾಸ್ವಯಂಪ್ರಭೆ । ಬಿಲ ವನ್ನೈದಿದ ಬಳಿಕ ದಕ್ಷಿಣ । ಜಲಧಿಯನು ಕಂಡರತಿಶೀಘ್ರದೊಳೈದಿ ವಾನರರು ॥ ತಿಳಿದು ಸಾಗರದತಿವಿಶಾಲವ । ನಳುಕುತಂದವ ರಾಕಪಿಬಲದ ಡ । ದೊಳಿರಲಾ ಸಂಪಾತಿಬಳಿಕ್ಯೈತಂದನವರೆಡೆಗೆ ॥ ೮ ॥ ತಿಳಿದು ವಾನ ರರಿಂದೆ ದಕ್ಷಿಣ । ಜಲಧಿತೀರದೊಳಾಗರಿಗಳನು । ಕಳೆದ ಸಂಪಾತಿಜನಕ ಸುತೆ ಜಟಾಯುಗಳಪರಿಯ ॥ ಅಳುತ ಮಿಂದುತಿಲೋದಕವ ನಿ । ತ್ತುಳಿದತಮ್ಮನಿಗಂದು ಗರಿಗಳ । ತಳೆದು ಪೇಳ್ದನು ಸೀತೆ ಲಂಕೆಯೊಳಿ ಪಳು ತಾನೆನುತ ॥ ೯ ॥ ಕಡಲ ಲಂಘಿಸಿ ಕಂಡು ಸೀತೆಯ । ನೊಡನೆ

ಬರಲಾರೆವೆನುತೆಲ್ಲರು । ನುಡಿಯಲಾ ಜಾಂಬವನು ದೂರದೊಳೊಂದು ಬಂಡೆಯಲಿ । ಪ್ರೌಢವಿಸುತೆಯುಂ ಕಾಣಬೇಕೆನು । ತಡಿಗಡಿಗೆ ಚಿಂತಿಸುತ್ತಿಹ ಹನುಮ । ನೆಡೆಗೆ ಬಂದರುಹಿದನು ನೀಂ ಲಂಘಿಸುಕಡಲನೆನುತ ॥ ೧೦ ॥ ತನ್ನ ಶೌರ್ಯವ ನರುಹಿ ಕಪಿಗಳ । ಗುನ್ನತ ಪರಾಕ್ರಮಿಪವನಸುತ । ಮನ್ನಣೆಯನಾಂತಿರದೆ ತಾನು ಮಹೇಂದ್ರಶೈಲದೊಳು ॥ ಅನ್ನೆಗಂಜಲಧಿಯನು ನೋಡುತ । ಮುನ್ನರಾಮನಿಗೆರಗಿ ದಾಟುವೆ । ನೆನ್ನುತಲಿತಾಂ ನುಡಿದು ಹಾರಿದ ನತಿಜವದೆನಭಕೆ ॥ ೧೧ ॥ ಮರುತಸಂಭವನಂತರಿಕ್ಷದೊ । ಳಿರದೆ ಶೀಘ್ರದೊಳಂದು ಬರುತಾ । ಶರಧಿಮಧ್ಯದೆ ನಿಂದಮೈನಾಕವನು ಕಾಣುತ್ತ ॥ ಚರಣದಿಂದೊದೆಯಲ್ಕೆ ನುಡಿದುದ । ದಿರದೆ ನಿನ್ನ ಸಹಾಯಕೆಂದೀ । ಶರಧಿನನಗಾಜ್ಞಾಪಿಸಲು ನಾಂ ನಿಂದಿಹೆನೆನುತ್ತ ॥ ೧೨ ॥ ಹನುಮನಾಮೈನಾಕ ಭೂಧರ । ವನು ಪದೆದು ಮನ್ನಿಸುತ ಬರಲಾ । ವನಧಿ ಮಧ್ಯದೊಳಾಸುರಸೆಸಿಂಹಿಕೆಗಳನು ವಧಿಸಿ ॥ ಮನಕೆ ಭೀತಿಯನಾಗಿಸುತ ತ । ನ್ನನೆರಳಂ ಪಿಡಿದಂದು ಬರುತ್ತಿಹ । ವನಿತೆ ಛಾಯಾಗ್ರಾಹಿಯನು ಕೊಂದನತಿ ಶೀಘ್ರದಲಿ ॥ ೧೩ ॥ ನೂರುಗಾವುದ ಕಡಲಲಂಘಿಸಿ । ಮಾರುತಿಮಹಾಜಲಧಿ ದಕ್ಷಿಣ । ತೀರದೊಳುತಾ ನಿಃವದನಾಗಸದಿಂದೆ ರಭಸದಲಿ ॥ ಚಾರುತರ ಸೌಂದರ್ಯದಿಂದೀ ಧಾರುಣಿಯೊಳಮರಾವತಿಯ ಪೋಲು । ತೋರುವಾಲಂಕೆಯನು ನೋಡಿದ ನಧಿಕಹರ್ಷದಲಿ ॥ ೧೪ ॥ ಪುರದಬಾಗಿಲೊಳಡ್ಡಗಿಸಿ ನೀಂ । ಬರದಿರೀನಗರದೊಳಗೆಂದ । ಬ್ಬರಿಸಿ ತನ್ನನು ಹೊಡೆದ ಲಂಕಿಣಿಯನು ಧರೆಗುರುಳ್ಚ । ಮರುತ ಸಂಭವನಾರಜನಿಚರ । ರರಿಯದಂತೆ ಬಿಡಾಲರೂಪವ ॥ ಧರಿಸಿಹೊಕ್ಕನು ಲಂಕೆಯನು ತನ್ನೊಡಪಡಿಯನಿರಿಸಿ ॥ ೧೫ ॥ ರಕ್ಕಸರು ಕಾಣದೊಲು ರಾತ್ರಿಯೊ । ಳುಕ್ಕಿ ಬೆಳಗುತಿಹ ಬೆಳದಿಂಗಳೊ । ಳಕ್ಕರೆವಿಡಿದು ಜಾನಕಿಯ ನರಸಿದನು ಲಂಕೆಯಲಿ ॥ ಪೊಕ್ಕು ಬೀದಿಯ ಬಿಡದೆ ನೋಡುತ । ಸಿಕ್ಕದೊಬ್ಬರಿಗಾ ಪುರದೊಳಗೆ । ಠಕ್ಕುಮಾಡುತ ಹುಡುಕುತಿದ್ದನು ಬಿಡದೆ ಮನೆಮನೆಯ ॥ ೧೬ ॥ ಸುರಪಜಿತು ಧೂಮ್ರಾಕ್ಷರಾವಣ । ವರವಿಭೀಷಣ ಕುಂಭಕರ್ಣನು । ರರಿಪುಯೂಪಾಕ್ಷಮಕರಾಕ್ಷ ನರಾಂತಕ ನಿಕುಂಭ ॥ ಉರಗರೋಮನಾಕಂಪನ ಮಹೋ । ದರಮಹಾಪಾರ್ಶ್ವಾದಿರಾತ್ರಿಂ । ಚರರ ಭವನಂಗಳೊಳರಸಿದನು ಹನುಮನವನಿಜೆಯ ॥ ೧೭ ॥ ತ್ರಿಶಿರಶಾರ್ದೂಲ ಸುಮುಖಸುನೇ । ತ್ರ ಶುಕಸಾರಣ ನಗ್ನಿಕೇತು ಪ್ರ । ಘಸವಿರೂಪಾಕ್ಷಾತ್ರಿಕಾಯಸುಕೇತು

ರಕ್ಷಾಕ್ಷ || ಜಸವನಾಂತಕ್ಷಯ ಕುಮಾರ ನೆ । ನಿಸುವಖಿಳರಕ್ಕಸರ ಮನೆಗಳೊ । ಳಸವಸದಿನರಸಿದನು ಮಾರುತಿಜನಕಜಾತೆಯನು ||೧೮||
ಎಲ್ಲರಕ್ಕಸರ ಭವನಂಗಳೊ । ಳೆಲ್ಲಿಯುಂ ಕಾಣದೆಯೆ ಸೀತೆಯ । ನಲ್ಲಿ ನೊಂದು ಸವಿಾರಸುತನಾ ಪುರದಮಧ್ಯದೊಳು || ಮೆಲ್ಲನೈತಂದಾ ದಶ ಶಿರನ । ಸಲ್ಲಲಿತವೆಂದೆನಿಪ ಸೌಧವ । ನುಲ್ಲಸದೊಳೈದಿದನು ಧರಣೀಸುತೆ ಯನರಸಲ್ಕೆ || ೧೯ || ದನುಜವಲ್ಲಭ ನರಮನೆಯೊಳಾ । ಹನುಮನೆಲ್ಲ ಕಡೆಗಳೊಳೀಕ್ಷಿಸಿ । ಜನಕನಂದನೆ ಸೀತೆಯನು ತಾಂಕಾಣದಾಬಳಿಕ || ಘನವಿಭವದಿಂದೆಸೆವ ದಶಕಂ । ಠನ ವಿನುತ ಶಯ್ಯಾಗೃಹಕೆ ಬಂ । ದನು ಮಹೀಸುತೆಯನು ಹುಡುಕಬೇಕೆಂದು ಚಿಂತಿಸುತ || ೨೦ || ರತುನ ಮಂಚದಮೇಲೆ ತನ್ನಯ । ಪತಿದಶಾನನನಸಹಿತ ವೃದು । ಲತಮ ತಲ್ಪದೆ ನಿದ್ರಿಪಾಮಂಡೋದರಿಯನಲ್ಲಿ || ಅತಿಹರುಷದಿಂದೀಕ್ಷಿಸಿ ಮಹೀ । ಸುತೆಯೆನುತ ತಾಂಭ್ರಮಿಸಿ ತನಗೆವಿ । ಹಿತಮೆನಿಪ ಕಪಿಚೇಷ್ಟೆಗಳನಾಗಿ ಸಿದನಾ ಹನುಮ || ೨೧ || ಮನದೆಯೋಚಿಸಿ ಸೀತೆ ದಶಕಂ । ಠನೊ ಡನೆಯೆತಾಂ ಮಲಗಳೆಂದರಿ । ತು ನೆರೆನೋಡುತ್ತವಳ ಪದದೊಳು ಕಾ ಕರೇಖೆಯನು || ದನುಜನಾಥನ ಕೂಡೆಮಲಗಿದ । ವನಿತೆಯುರನೀಕ್ಷಿ ಸುತ ನಡೆತಂ । ದನು ನಿರಾಶೆಯೊಳಾ ವಿಮಾನದಬಳಿಗೆ ಭರದಿಂದ || ೨೨ ||
ಗಿರಿಶಸಖನಂಗೆಲಿದು ದಶಕಂ । ಧರನು ತಂದವಿಮಾನದೊಳೆಸೆವ । ತರ ತರದ ಚಿತ್ರಂಗಳನುಕಾಣುತ್ತ ಸೀತೆಯನು || ಅರಸಿನೋಡದೆ ನೊಂದು ರಾಮನ । ಚರಣವನುಜಾನಿಸುತ ಚಿತ್ತದೊ । ಳುರೆಬಳಲ್ದಾ ಪವನಸಂ ಭವನಂದು ದುಃಖಿಸಿದ || ೨೩ || ಆರುಪೇಳುವರೆನಗೆ ಲಂಕೆಯೊ । ಳಾ ರುತೋರುವರೀ ನಿಶೆಯೊಳಾ । ಧಾರುಣೀಸುತೆಯನೆನುತಾ ಹನುಮಂತ ಮನದೊಳಗೆ || ಬಾರಿಬಾರಿಗೆ ಚಿಂತಿಸುತ್ತ ವಿ । ಚಾರದಿಂದಾಲೋಚಿಸಿ ಪುರದ । ತೋರಣಸ್ತಂಬವನಡರಿ ನೋಡಿದನು ದೆಸೆದೆಸೆಯ || ೨೪ ||
ಧರಣಿಜಾತೆಯ ನೆಲೆಯಕಾಣದೆ । ತರಣಿಸಂಭವನೆಡೆಗೆ ಪೋದೊಡೆ । ಮರಣವೈದುವ ನವಳವಿರಹದೆ ರಾಘವೇಶ್ವರನು || ಹರಣವನು ಬಿಡು ತಿಹರು ಲಕ್ಷ್ಮಣ ॥ ಭರತಶತ್ರುಘ್ನಾದಿಗಳು ಭಾ । ಸ್ಕರತನಯ ಸುಗ್ರೀ ವನಳಿವ ನಖಿಳಕಪಿಗಳೊಡನೆ || ೨೫ || ನನಗೆ ಕಾಣಿಸಲಿಲ್ಲ ಜಾನಕಿ । ದನುಜನಾಥನ ಪುರದೊಳಗೆ ನಾ । ನುನೆರವನರಿಯೆ ಮುಂದೆಗತಿಯೇ ನೆಂದು ಯೋಚಿಸುತ || ಮನದೆಳುಂದಿ ಕೊರಗುತ ಮಾರುತಿ । ಜನಕ ಜಾತೆಯು ಲಂಕೆಯಲ್ಲಿಹ । ಳೆನುತೊರೆದ ಸಂಪಾತಿಯಾನುಡಿ ಸುಳ್ಳೆನಿಸಿ

ತೆಂದ ॥ ೨೬ ॥ ಪುರವನೆಲ್ಲವೆಹುಡುಕಿ ರಾವಣ । ನರವಮನೆಯನಿಂದರಸಿ ದೆನಿಶಾ । ಚರಪತಿಯೊಡನೆ ಮಲಗಿದಾಸುಂದರಿಯ ರೆಲ್ಲರನು ॥ ಅರಿದೆ ಧರಣೀಸುತೆಯು ಕಾಣಿಸ । ದಿರುವಳೆನಗೆಂದಾ ಹನುಮನೀ । ಪರಿಯೊ ಳಾಲೋಚಿಸಿದನಾ ತೋರಣದಕಂಬದಲಿ ॥ ೨೭ ॥ ಹುಡುಕದಸ್ಥಳವಿಲ್ಲ ನಾನೆ । ಲ್ಲೆಡೆಯೊಳೀ ಲಂಕಾಪುರದೊಳಾ । ಪೊಡವಿಜಾತೆಯನಿಂದೆನಗೆ ಸಿಕ್ಕದಿಹಳಾಸೀತೆ ॥ ಕಡಲೊಳಾಕೆಯು ಬಿದ್ದಳೋ ತ । ನ್ನೊಡಲನೀಗಿ ದಳೋ ಗರಳವನು । ಕುಡಿದಳೋ ತಾಂ ಜೀವಿಸಿಹಳೋ ಎನುತ ಚಿಂತಿಸಿದ ॥ ೨೮ ॥ ನಾನುಲಂಕೆಯೊಳಿಂದು ಕಾಣದೆ । ಜಾನಕಿಯ ನತಿದುಃಖದಿಂದಾ । ವಾನರೇಂದ್ರನಬಳಿಗೆಪೋದೊಡೆ ಲಯವನೈದುವುದು ॥ ಭಾನುಕುಲವದರಿಂದೆ ಜಲಧಿಯೊ । ಳಾನುಬಿದ್ದೆನ್ನಸುವ ನೀಗುವೆ । ನೀ ನಿಶಿಯೊಳೆಂದೆನುತ ನಿಟ್ಟುಸಿರಿಸಿದನು ಮನದೊಳಗೆ ॥ ೨೯ ॥ ಬಳಿಕ ತನ್ನೊಳುತಾನು ಯೋಚಿಸಿ । ನೆಲದಜೀವಿಸಿನೋಡುವೆನು ಶುಭ । ಗಳ ನು ಮಾನವನೆನುತ ಪಂಡಿತರೊರೆದಿಹರು ಮುನ್ನ ॥ ಇಳೆಯೊಳತಿಪಾತಕ ಮೆನಿಸುವುದೊ । ಡಲನು ನೀಗುವುದೆನುತ ಶಾಸ್ತ್ರಂ । ಗಳೊಳರಲುವುವ ವರಿಂದೆ ದೇಹವನಿಂದು ರಕ್ಷಿಪೆನು ॥ ೩೦ ॥ ಸಕಲತಾಣಂಗಳೊಳರಸಿದೆ ಜ । ನಕಸುತೆಯನೀ ಲಂಕೆಯೊಳಗೆ ಹು । ಡುಕದೆಬಿಟ್ಟಿಹೆ ನೀಯ ಶೋಕಾವನವನೆಂದೆನುತ ॥ ಪ್ರಕಟಮತಿ ವಾಯುಸುತನಾಗನೆ । ಲಕಿಳಿ ದೊಡನಾ ಕಂಬದಿಂದಿರ । ದೆ ಕಡುಜವದಿಂದೆ ನಡೆತಂದನಶೋಕವನ ಕಾಗಿ ॥ ೩೧ ॥ ಫಲಕುಸುಮದಳ ಕಿಸಲಯಗಳಿಂ । ದಲೆಮೆರೆವ ಮರ ಗಳನುಪಾದಪ । ಗಳಗೆಹಬ್ಬಿದ ಲತೆಗಳನು ಘನಗುಲ್ಮನಿವಹವನು ॥ ಜಲರುಹಾಕರಗಳನು ಸಿಕತಾ । ಚಲಗಳನು ಥಳಥಳಪ ಚಪ್ಪರ । ಗಳ ನು ಕಂಡನು ಮರುತಸಂಭವನಾವನದೆ ಬರುತ ॥ ೩೨ ॥ ಕಲಶಗೋ ಪುರ ಮಂಟಪಂಗಳ । ಬಳಗದಿಂದುರೆ ಮೆರೆವ ಗುಡಿಗಳ । ನೆಳೆದಳಿರ ಹಾಸಿಗೆಗಳ ನಖಿಳವಿಧಮೃಗಂಗಳನು ॥ ಉಲಿವಕೋಗಿಲೆ ನವಿಲುಗೊರ ವಕ । ಗಿಳಿಗಳ ನಶೋಕವನದೊಳುತಾಂ । ತಳುವದೀಕ್ಷಿಸುತವನಿಸುತೆ ಯನರಸಿದನಾಹನುಮ ॥ ೩೩ ॥ ಇನಜಸಚಿವನು ತಾನಶೋಕಾ । ವನದೊಳೆಲ್ಲೆಡೆಗಳನುಹುಡುಕುತ । ಮನದೊಳಾಶ್ಚರ್ಯವನು ತಾಳ್ದನು ವನದವೈಭವಕೆ ॥ ದನುಜನಾಥನ ನೇಮದಿಂದಲ । ವನಿಸುತೆಯ ಸುತ್ತಾ ಲೆಡೆಬಿಡದನು । ದಿನವು ಕಾವಲಿರುತಿಹ ರಕ್ಕಸಿಯರನುನೋಡಿದನು ॥೩೪॥ ತರತರದ ಘೋರಾಕೃತಿಗಳನು । ಧರಿಸುತೆಲ್ಲರನಂಜಿಸುವ ಸಕ । ಲ ರಜ

ನೀಚರ ವಸಿತೆಯೊರ ನಿರೀಕ್ಷಿಸುತವರನಡುವೆ || ತೊರೆದು ನಿದ್ರಾಹಾರಗ
ಳನುರೆ | ಕೊರಗುತಾ ರಘುವೀರನಡಿದಾ | ವರೆಗಳನು ಜಾನಿಸುವ ಸೀತೆ
ಯನಲ್ಲಿ ನೋಡಿದನು ||೩೫|| ಮಾರುತಾತ್ಮಜನಂದು ನೋಡುತ | ಧಾರು
ಣೀಸುತೆ ಸೀತೆಯನು ಗಂ | ಭೀರಜಲನಿಧಿಚಂದ್ರನನು ಕಂಡುಕ್ಕುವಂದ
ದಲಿ || ವಿಾರಿದಾನಂದವನು ತಾಳು | ತ್ತಾರುವರಿಯದ ತೆರದೆಬಂದನು |
ಬೀರಿದಾಬೆಳದಿಂಗಳೊಳು ಜಾನಕಿಯಹತ್ತಿರಕೆ || ೩೬ || ಸಕಲ ಚಿಹ್ನೆ
ಗಳಿಂದೆ ತ್ರಿದಶ | ನಕಸುತನುಜೆಯೆಂದೆನುತ ಚಿತ್ತದೊ | ಳು ಕಳೆದನು
ಮಾಸವನು ಮಾರುತಸುತನು ಸಂತಸದಿ || ಅಕಟಕಟ ರಾವಣನುಕೊ
ಟ್ಟಿಹ | ನು ಕಡುಗಾಸಿಯನೀ ಧರಣಿಸುತೆ | ಗೆ ಕೊನೆಗಾಣದವೋಲೆ
ನುತ ದುಃಖಿಸಿದಮನದೊಳಗೆ || ೩೭ || ಉಳಿದುರಾಜಸುಖಂಗಳನು ತಾ |
ನಳುತ ನಿದ್ರಾಹಾರವಿಲ್ಲದೆ | ಬಳಲುತಾಭರಣಂಗಳೊಂದನು ಧರಿಸದಾ
ವನದೆ || ಉಳಿದುಬಂಧುಗಳೆಲ್ಲರನು ಮನ | ದೊಳು ಪತಿಯಪಾದವನು
ಬಿಡದೆಹ | ಗಲಿರುಳುಂ ಜಾನಿಸುವಜಾನಕಿ ಕಾಣಿಸಿದಳಲ್ಲಿ || ೩೮ ||
ತನ್ನ ಕಷ್ಟವು ಫಲಿಸಿತೀದಿನ | ಮಿನ್ನು ರಕ್ಕಸಿಯರರಿ ಯದವೊಲು |
ಬನ್ನಿಯವರವನ್ನೈದಿ ನೋಡುವೆನೀಕೆಯಿರವನ್ನು || ಸನ್ನುತಚರಿತೆಗಿಂ
ತು ಧರಣಿಯೊ | ಳುನ್ನತವೆನಿಪ ದುಃಖವೊದಗಿದು | ದೆನ್ನುತಾ ಹನು
ಮಂತನಂದುರೆ ಶೋಕಿಸಿದನಿರದೆ || ೩೯ || ಒಡನೆಶಿಂಶುಪ ತರುವನೇರಿನಿ |
ಬಿಡವೆನಿಸಿದಾ ಕೊಂಬೆಗಳನಡು | ನಡುವೆ ಪಕ್ಷಿಯವೋಲ್ಲುಳಿತು
ಕೊಂಡಾ ಮರುತಸುತನು || ಪೊಡವಿಯಾತ್ಮಜೆ ಗಾವಬಾಧೆಯ | ಕೊ
ಡುವರೋ ದನುಜಾಂಗನೆಯರೆಂ | ದಡಿಗಡಿಗೆ ನೋಡುತ್ತಲಿದ್ದನು ಜಾಗ
ರಿಕನಾಗಿ || ೪೦ ||

ಇಂತು ೧೬ನೆ ಅಧ್ಯಾಯ ಸಂಪೂರ್ಣವು. ಪದ್ಯಗಳು ೬೮೩.



## ಹದಿನೇಳನೆ ಅಧ್ಯಾಯ.

**ಸೂಚನೆ** || ಬಂದುರಾವಣ ವರಿಸಬೇಕೆನು |
ತಂದುಬೇಡಲು ಕಠಿಣವಚನಗ |
ಳಿಂದೆಮಾರುತ್ತರವನಿತ್ತಳು ಸೀತೆಕೋಪಿಸುತ ||

ಆದಿನದನಿಶಿ ಕೊನೆಯಜಾವದೊ | ಳಾದಶಶಿರನು ತನ್ನಚಿತ್ತದೊ |
ಳೈದೆಜಾನಕಿಯನು ನೆನೆದುಕೊಂಡಧಿಕ ಮೋಹದಲಿ || ಆದರದೊಳೈತಂ

ದನು ಬಹುವಿ । ನೋದದಿಂದ ಅಶೋಕವನ ಕಂ । ದಾದನುಜನಾರಿಯರ
ಪೂಗಳಕೆಯಿಂದತಿಭರದಲಿ ॥ ೧ ॥ ಅಸುರನಾಥನ ಸುತ್ತಲಾವನ । ಕ ಸಡ
ಗರದಿಂದಿರವೆ ಬಂದರ । ತಿ ಸೊಗಸಿಂದುರೆ ಮೆರೆವಸತ್ತಿಗೆಚಾಮರಂಗಳ
ಸು ॥ ಹಸನಹ ಕನಕಪಾತ್ರೆಗಳನಂ । ದೊಸೆದು ಕೈಯೊಳುಪಿಡಿದು
ಬಹುಸಂ । ತಸದೆ ಕೈವಾರಿಸುತದೈತ್ಯಾಂಗನೆಯರಾದರದೆ ॥ ೨ ॥ ಭರ
ದೊಳೈತರುತಾದಶಶಿರನು । ಧರಣಿಜಾತೆಯು ಬಳಿಗೆಬಂದನು । ಪರಮ
ವೈಭವದಿಂದೆ ಕಾಮಾತುರನು ತಾನೆನಿಸಿ ॥ ಸುರವಿರೋಧಿಯು ಬರವಕಂ
ಡಾ । ಧರಣಿಜೆಯು ಮೆಯ್ಯಾಣದಂತಿರೆ । ಸೆರಗಿನಿಂ ದಾಚಿಟ್ಟಿದಿಸಿರ್ದಳು
ತಲೆಯಬಾಗಿಸುತ ॥ ೩ ॥ ನಿಂದುರಾವಣನವನಿಜಾತೆಯು । ಮುಂದೆಪೇ
ಳ್ದನು ರಾಜವೈಭವ । ದಿಂದೆ ಕಾಮಾತುರದೊಳತ್ರಿ ಚಾತುರ್ಯವಚನ
ದಲಿ ॥ ಇಂದುಮುಖಿಕೇಳೆನ್ನ ವರಿಸು । ತ್ತಿಂದುನೀನಖಿಳ ಸುಖಸಂಚ
ಯ । ದಿಂದವಿಹರಿಸು ನನ್ನೊಡನೆ ಸಂತೋಷವನುತಾಳ್ದು ॥ ೪ ॥ ಮೂ
ರುಲೋಕದ ವೀರರೊಳು ನನ । ಗಾರುಸರಿಯ ಲ್ಲಗ್ರಜನಹ ಕು । ಬೇ
ರನಂಜಯಿಸುತ ವಿಮಾನವತಂದಿಹೆನು ನಾನು ॥ ಘೋರತರತಪದಿಂದೆ ಮೆ
ಚ್ಚಿಸಿ । ಶಾರದಾಪತಿಯನ್ನು ಪಡೆದಿಹೆ । ಸಾರತರವೆನಿಪ ಖಿಳವಿಧವರ
ಗಳನು ಪೂರ್ವದಲಿ ॥ ೫ ॥ ಹರಿಣಲೋಚನೆ ಪಂಕಜಾನನೆ । ಉರಗವೇ
ಣಿಮೆ ದೇಭಗಾಮಿನಿ । ಯರುಣಪಲ್ಲವಪಾಣಿ ಕೋಕಿಲವಾಣಿ ಸುಶ್ರೋ
ಣಿ ॥ ವರಸುವರ್ಣಕಲಶ ನಿಭಪಯೋ । ಧರೆ ವಿರಾಜಿಪ ಶೋಣಬಿಂಬಾ ।
ಧರೆ ರವಿಸುನೀನೆನುತ ಪೇಳ್ದನು ಸೀತೆಗಾಖಳನು ॥ ೬ ॥ ಕಾಮಿನೀ
ಮಣಿ ಕೇಳುನಿನ್ನವೊ । ಲೀಮಹೀಮಂಡಲದೊಳಿಲ್ಲವು । ಭಾಮಿನೀವರ
ರಿಂದುನಿನ್ನಯ ರೂಪವನುಕಂಡು ॥ ಕಾಮಬಾಧೆಯ ತಾಳಲಾರದೆ ।
ಕೋಮಲವೆನಿಪ ನಿನ್ನಚರಣಕೆ । ನಾಮಣಿದುಬೇಡುತಿಹೆ ನನ್ನನುವರಿ
ಸಬೇಕೆನುತ ॥ ೭ ॥ ತಾಪಸರವೊಲು ಚಿತ್ತದೊಳಗನು । ತಾಪವನುತಾ
ಳ್ದಿ ರಘೂದ್ವಹ । ತಾಪದುಳದಿಂದಿರದೆ ದುಃಖಿಸುತಿಹನರಣ್ಯದಲಿ ॥ ಆಪದ
ಕ್ಕೊಳಗಾಗಿಹನು ನ । ನ್ನೀಪುರಕೆಬರಲಾರ ನೆನ್ನಸ । ಮಾಪದೊಳಿದಿರು
ನಿಲ್ಲುವಧಟುತನಮಿಹುದೆ ರಣದಲಿ ॥ ೮ ॥ ವಾರಿಧಿಯನು ಲ್ಲಂಘಿಸುವ
ಬಲ । ವಾರಘುವರಂಗಿಹುದೆ ಕೇಳು ವಿ । ಚಾರಿಸಲುತಾಂ ಮೃತಿಯನೈ
ದುವನೀ ಧರಣಿತಲದೆ ॥ ನಾರಿಯು ನುಡಿಗಧೀನನಾಗುತ । ಪೌರುಗಾಣದ
ಸಂಪದವನುಳಿ । ದಾರುಮಿಲ್ಲದರಣ್ಯಕೈದಿದ ಹೇಡಿಯಾಗಿಹನು ॥ ೯ ॥
ಉತ್ತಮಾಂಗನೆಕೇಳು ನಿನ್ನನು । ಹತ್ತುಸಾವಿರ ದಾದಿಯರು ನಲಿ । ದೆ

ತ್ತಲುಂ ಸೇವಿಸುವರೆನ್ನಾಜ್ಞೆಯೊಳಗನವರತ || ಚಿತ್ತವಿಡುನನ್ನೊಳು ನಿಜೇಶನ | ನಿತ್ತಕಾಣುವರೀತಿಯನು ಬಿಡೆ | ನುತ್ತ ಸೀತೆಗೆಪೇಳ್ದನಾ ದಶಕಂಠನಾವನದೆ || ೧೦ || ನನಗೆಭಾಸ್ಕರನಂಜಿ ತಾಪವ | ನನುದಿನವು ಮಾಡದಿಹನಾಯುನಿ | ಲನತಿ ಸೌಖ್ಯದಿಬೀಸುವನು ವಾಯುಸಖನುಷ್ಣ ವನು | ಅನುದಿನವು ಮಾಡದಿಹ ನಖಿಳಭು | ವನದ ಶೂರರು ನನ್ನನಾ ಮವ | ನೆನೆನೆನೆದು ಚಿತ್ತದಲಿನಡುಗುತ್ತಿಹರು ಸಂತತವು || ೧೧ || ಕೋ ಮಲಾಂಗಿಯೆಕೇಳು ನಿನಗಾ | ರಾಮನಿಂದಿನಿತಿಲ್ಲ ಸೌಖ್ಯವು | ಭೂಮಿ ಯೊಳು ಯವ್ವನವುಶಾಶ್ವತವಲ್ಲ ಮನುಜರ್ಗೆ || ಕಾಮಿತಾರ್ಥಂಗಳನು ಪಡೆದೀ | ಕಾಮಿನಿಯರಿಗೆ ಮಹಿಷಿಯಾಗುತ | ಕಾಮಕೇಳಿಯೊಳೆನ್ನನೊ ಲಿಸೆಂದೆನುತ ಪೇಳಿದನು || ೧೨ || ಲಲನೆಕೇಳೆನ್ನನು ವರಿಸುತೀ | ನೆಲ ದೊಳುತ್ತಮ ಮೆಂದೆನಿಸುವ ಸ | ಕಲ ಸುಖಂಗಳನಾಂತು ನಿನ್ನಯು ತಂದೆಜನಕಂಗೆ || ತಳೆದಸಂತಸದಿಂದೆ ಕೊಡುವುದ | ಖಿಳಪದಾರ್ಥಂಗ ಳನುನೀಂ ಮ | ತ್ತುಳಿದ ಬಂಧುಗಳೆಲ್ಲರನು ಸಂತವಿಸುಮನ್ನಿಸುತ ||೧೩|| ನನಗೆರಾಘವನೆಳ್ಳನಿತು ಸಮ | ನೆನಿಸನೈಶ್ವರ್ಯ ಕುಲ ಬಲ ಗುಣ | ಘನಪ ರಾಕ್ರಮ ರಾಜವೈಭವ ಕಲಿತನಂಗಳಲಿ || ವನಜಲೋಚನೆ ನೀನು ನ ನ್ನೊಳು | ಮನವನಿಟ್ಟುದ್ಧರಿಸು ವಂದಿಸು | ವೆನತಿಹಿತದಿಂದೆನುತ ರಾ ವಣ ನುಡಿದನವನಿಜೆಗೆ || ೧೪ || ಕಳೆದಿಹನು ಸೌಖ್ಯಂಗಳನು ನೆಲ | ದೊಳು ಮರಣವೈದುವನು ಸತ್ವವ | ನುಳಿದಿಹನು ರಾಘವನು ತಂದೆಯು ಮಾತನಾಲಿಸುತ || ಚಳಿಮಳೆಬಿಸಿಲು ಗಾಳಿಗಳಿಗೆ ಹ | ಗಲಿರುಳಂಜುತ ವಿಪಿನದೊಳಿಹನು | ನೆಲದೊಳೇನು ಸುಖವನುಹೊಂದಿದೆ ನೀನು ಪತಿ ಯಿಂದೆ || ೧೫ || ಪ್ರಮದೆನೀಂ ಕುಡಿಸಂತಸದೊಳು | ತ್ತಮಮೆನಿಪ ಪಾಸಂಗಳನು ನಿ | ನ್ನಮನವೊಪ್ಪುವ ಮೋಲ್ವಿಹರಿಸುದ್ಯಾನವನಗಳಲಿ | ರಮಿಸುನನ್ನೊಡ ನೀವಿಮಾನದೊ | ಳಮಲಭೋಗಂಗಳನು ಭುಂಜಿ ಸು | ವಿಮಲಮಣಿಕನಕಾಂಬರಂಗಳ ನೀವೆಮನದಣಿಯೆ || ೧೬ || ತೊರೆದು ರಾಜಸುಖಂಗಳೆಲ್ಲವ | ನುರಘುವರನಾ ಕಾನನದೊಳಿಹ | ನಿರು ಳು ಹಗಲಾಹಾರನಿದ್ರೆಯನುಳಿದು ಭಯದಿಂದ || ಇರದೆಲಂಘಿಸಿ ಜಲನಿ ಧಿಯನೀ | ಪುರಕೆ ಬಂದೊಡಗೊಂಡು ನಿನ್ನನು | ಹೊರಟುಹೋಗುವ ಶಕ್ತಿ ಯೆಲ್ಲಿಹುದಾನರಿಯದಂತೆ || ೧೭ || ಮಲಿನವಸ್ತ್ರವನೇಕೆ ಧರಿಸಿಹೆ | ಜಲವನೇತಕೆ ಸುರಿವೆನಯನಂ | ಗಳಲಿ ಧಾರುಣಿಗೇಕೆಬೊಗ್ಗಿಸಿಕೊಂಡಿ ಹೆ ತಲೆಯನು || ಲಲನೆಕೇಳೀ ದುಃಖದಿಂದೇಂ | ಫಲವಹುದು ನಿನಗೆನ್ನ

ವರಿಸುತ | ಖಿಳಸುಖಂಗಳನ್ನೈದಿ ನೀಂಬಾಳುವುದೆಲೇಸೆಂದ || ೧
ಭ್ರಮರಸಂಕುಯದಿಂದೆ ಶೋಭಿಪ | ಸುಮನಸಂಗಳನಾಂತು ಸಾ
ದಮಲತೀರದೊಳೆಸೆವ ಪಾದಪಚಯವನೀಕ್ಷಿಸುತ || ಭ್ರಮೆಯನ
ತೆನ್ನೊಳತಿ ಸಂ | ಭ್ರಮವನಾನುತ ವಿಹರಿಸತ್ಯ | ತ್ತಮವಿಭವದಿ
ತ ಸೀತೆಗೆಪೇಳ್ದನಸುರೇಂದ್ರ || ೧೯ || ದನುಜವಲ್ಲಭನಾವಹೀ
ಗೆನಲವಿಂಪಲತೆರದೆ ನೀನೆ | ನ್ನನು ವರಿಸಬೇಕೆಂದು ನಯಭಯ
ಯವಚನದಲಿ | ವನದೊಳಾಹನುಮಂತ ನೋಡುತಿ | ರೆ ನುಡಿದು
ಸುಷ್ಮನಾದನು | ತನಗೊದಗಿದಾಪದವ ನಾಲೋಚಿಸುತ ಚಿತ್ತ
|| ೨೦ || ಜನಕನಂದನೆ ಕೇಳ್ದು ರಾವಣ | ನನುಡಿಗಳನಾ ವನ
ಯಿಂ | ದೆ ನುಡಿದಳು ಕಡ್ಡಿಯನು ಕೈಯೊಳುಪಿಡಿದು ತಲೆವಾಗಿ
ನುಜಘಾತುಕ ಕೇಳು ಕಮಲಾ | ಸನನವಂಶದೊಳುದಿಸಿ ಬಹುನಿ
ನೆನಿಸುತ್ತಿಹೆ ಹೋಗುದೂರಕೆನುತ್ತ ಗಜರಿದಳು || ೨೧ || ಮ
ಲೋತ್ತಮ ರಾಮನಲ್ಲದೆ | ಮನದೊಳನ್ಯರನೆನೆವಳೀ ನಾಂ | ವ
ಭಕ್ಷಕಕೇಳು ವರಿಸೆಂದೆನ್ನ ಕೇಳುತಿಪ || ನಿನಗೆಸುಖವೆಂತಹುದ
ರಕ | ದನದೊಳಾ ರಘುವರನು ಕಾಲನ | ಮನೆಗೆ ನಿನ್ನನು ಕಳ
ನಖಿಳ ರಕ್ಕಸರಸಹಿತ || ೨೨ || ಖೂಳಕೇಳ್‌ನಿನ್ನಿನಯ ನಿಲ್ಲದ |
ದೊಳು ಸನ್ಯಾಸಿವೇಷವ | ತಾಳುತೈತಂದೆನ್ನನಿಲ್ಲಿಗೆ ತಂದೆ ಕಳ್ಳನೆ
ಕೇಳಲಾರದ ನುಡಿಗಳನು ನೀಂ | ಪೇಳುತೆನ್ನೊಡನೆ ನಲಿದಾ
ಕಾಲವಶದಿಂ ತೋರಿಸುತ ವಿಪರೀತ ಬುದ್ಧಿಯನು || ೨೩ || ನನ್ನ
ವಾಗೆನುತ ಕೇಳುವ | ನಿನ್ನ ನಾಲಿಗೆ ಸೀಳದಿಹುದೇ | ನಿನ್ನ ಕ
ಖೂಳರಾವಣ ರಾಘವನಿದಿರಲಿ || ನನ್ನೆಲೆಮನೆಗೆ ಬಂದು ಪಿಡಿದಿರ |
ನಾರಘುವೀರನಾಗಳೆ | ನಿನ್ನ ವಧಿಸುತ್ತಿದ್ದನಾ ಖರನಂತರ
|| ೨೪ || ದುರುಳ ರಾವಣ ಕೇಳು ನೀನಾ | ತರಣಿವಂಶಲಲಾವ
ಸು | ವರಘುಪತಿಗೆ ಸಮಾನನಲ್ಲವು ಮುಂದೆ ಬವರದಲಿ || ಶರಗ
ನಿನ್ನ ನಾರಘು | ವಠನು ಕೊಲ್ಲುವ ನೀಗಳಾತನ | ಚರಣಕೆರಗಿಯೆ
ಟ್ಟು ನನ್ನನು ಬಾಳುವುದುಲೇಸು || ೨೫ || ಹರಿಯಮುಂದೆ ಸ್ಥ
ನಿಪುದೇಂ | ನರಿಯ ಯುಕ್ತಿಗಳೆಲ್ಲ ನೋಡಲು | ಧರಣಿಯೊಳ್ವಿಫ
ಲ್ಲವೆ ರಾಘವನಮುಂದೆ || ದುರುಳನಿನ್ನ ಯುಕುತಿಗಳೆಲ್ಲವು | ಧ
ಳಾ ರಘುವೀರನಿಂದಲೆ | ಮರಣಸಂಭವಿಸುವುದು ಮುಂದೆ ನಿ
ನಿಶ್ಚಯವು || ೨೬ || ರಾಮನಶಿರಕಿರಿಸಿದ ತೋಳನು | ಭೂಮಿ

ತರ ಮನುಜರಿಗಿರಿಸೆ । ನಾ ಮನುಕುಲೋತ್ತಮನ ಪಾದವೆಗತಿಯು
ನನಗೆಂದುಂ ॥ ನೀ ಮನದೊಳರಿ ಕೈಟಭಾಂತಕ । ನೀ ಮಹೀತಲದೊ
ಳಗುದಿಸಿಹನು । ರಾಮನಾಗಿಮೆ ಹರಿಸಲೀ ಧಾರುಣಿಯ ಭಾರವನು
॥ ೨೭ ॥ ಕೊಂದುಹಾಕಿದರೂ ಸರಿಯೆನೀಂ । ಬಂಧಿಸಿದರೂ ಸರಿಯೆ
ನನ್ನನು । ತಿಂದರೂಸರಿ ಪೊರೆಯೆ ನೀದೇಹವನು ಮೋಹದಲಿ ॥ ಇಂದು
ಬೇಕಾಗಿಲ್ಲ ವೆನಗೀ । ಚಂದವಾಗಿಹ ವಸ್ತುಗಳು ರಘು । ನಂದನನೆ ಗತಿ
ಯೆನುತ ಜಾನಕಿಪೇಳ್ದಳಸುರಂಗೆ ॥ ೨೮ ॥ ದುರುಳನೀಂ ಕೇಳೆಲವೊ
ಪರಸತಿ । ಯರನು ದುಃಖಪಡಿಸುತಲಿರ್ಪ ಜ । ನರಿಗೆ ನಷ್ಟವೆನಿಪುದ
ಖಿಳಸೌಭಾಗ್ಯ ಸಂದೋಹ ॥ ಸುರವಿರೋಧಿಯೆಕೇಳು ನಿನ್ನಿಂ । ದುರು
ತರದಬಾಧೆಯನು ತಾಳು । ತ್ತಿರುವೆ ನನ್ನನಿಮಿತ್ತ ಸಾಯುವೆ ನೀನು
ಶೀಘ್ರದಲಿ ॥ ೨೯ ॥ ಪರಸತಿಪರಧನಂಗಳ ಗೆಳಸಿ । ಧರಣಿಯೊಳಪಹರಿ
ಸುತಖಿಳಮನು । ಜರಿಗೆ ನೋವನೆಸಗುವ ಬಹುಪಾತಕಿಗೆ ದಿನದಿನವು ।
ತರತರದ ದುಃಖಂಗಳೊದಗುತ । ಭರದೊಳಾತನ ಸಿರಿಗೆತಪ್ಪದೆ ॥ ಬರು
ತಿಹುದು ನಾಶನವಿದರೊಳನುಮಾನ ವೇನಿಹುದು ॥ ೩೦ ॥ ಪತಿಪರಾಯಣೆ
ಯೆನಿಪ ನನ್ನಯ । ವಿತತದುಃಖವೆ ನಿನ್ನವಂಶವ । ನತಿಭರದೊಳು ವಿನಾ
ಶಮಾಳ್ಪುದು ದುರುಳಕೇಳೆಲವೋ ॥ ಕ್ಷಿತಿಯೊಳನುದಿನ ನೀಚಕಾರ್ಯವ ।
ನು ತಿಳಿದಾಚರಿಸುತಿಹ ನರನಿಗೆ । ಸತತ ಕೇಡಾಗುತ್ತಿಹುದಲ್ಲದೆ ಸೌಖ್ಯವೆ
ತ್ತಣದು ॥ ೩೧ ॥ ದಾನವಾಧಮಕೇಳು ನೀನು ನಿ । ದಾನವಮಾಡದೆ ಹಗೆಯ
ನುಳಿದು । ಜ್ಞಾನಮಾರ್ಗದಿ ನಮಿಸಿ ರಾಮನಚರಣ ಪಂಕಜಕೆ ॥ ಸಾನು
ರಾಗದೊಳಿನ್ನು ನಿತ್ತಾ । ಭಾನುವಂಶಲಲಾಮನಿಗೆಲಂ । ಕಾನಗರದೊಳು
ಬಾಳು ಬಂಧುಗಳೊಡನೆ ಬಹುಕಾಲ ॥ ೩೨ ॥ ಭ್ರಷ್ಟನೆ ನಿನಗೆ ಬುದ್ಧಿಯಿ
ಹುದೇ । ನಷ್ಟಮದದಿಂದುಬ್ಬಿ ಗರ್ವಿಸಿ । ದುಷ್ಟಕಾರ್ಯಂಗಳನೆಸಗಿ ಸಾ
ಧ್ವಿಯರನೆಳೆತಂದು ॥ ಕಷ್ಟಪಡಿಸುತಲಿಹೆ ನಿನಗಿನ್ನೆಷ್ಟುದಿನ ಜಯವಾಗಿ
ಹುದು ಪೇಂ । ಳಿಷ್ಟಜನಗಳಸಹಿತನಾಶವನೈದುವೆ ಭರದಲಿ ॥ ೩೩ ॥
ಉತ್ತಮೋತ್ತಮ ಬುದ್ಧಿಯನು ನೀಂ । ಚಿತ್ತದೊಳ್ತಳೆದಾ ರಘುವರಂ ।
ಗಿತ್ತು ನನ್ನನು ಚರಣಕಾನತನಾಗಿ ಸಂತತವು ॥ ಬಿತ್ತರದ ಸಂಪದವ
ನನುಭವಿ । ಸುತ್ತಖಿಳ ಬಂಧುಗಳಪಾಲಿಸು । ತೆತ್ತಲುಂ ಸಂತವಿಸಿಬಾ
ಳ್ವುದೆ ಯೋಗ್ಯವೆನಿಸುವುದು ॥ ೩೪ ॥ ಕ್ಷಿತಿಯೊಳು ಪತಿವ್ರತೆಯರೆನಿಪ
ವ । ನಿತೆಯರತಿದುಃಖವನುಹೊಂದುತ । ಳುತನುಡಿದಶಾಪಾಗ್ನಿಯಿಂದಲೆ
ಭಸ್ಮವಾಗುವೆನು ॥ ಸತಿಸುತಸಹೋದರರು ಮೊದಲಹ । ವಿತತಬಂಧು

ಗಳೊಡನೆ ಮನುಜನೆ । ನುತ ನುಡಿವನೀತಿಯನುಳಿದು ನೀಂಕೆಡುವೆ ಕೇಳೆಲವೊ ॥ ೩೫ ॥ ಜ್ಞಾನಮಾರ್ಗವನುಳಿದು ತನ್ನವ । ಸಾನಕಾಗಿ ಯೆ ಧಾರುಣಿಯೊಳಾ । ಮಾನವನು ವಿಪರೀತಬುದ್ಧಿಯನೈದುವೆಂದದಲಿ ॥ ನೀನುರಾಘವನೊಳು ವಿರೋಧವ । ನಾನುತ ಸಕಲ ಬಂಧುಗಳಸಹಿ । ತೀನಗರದೊಳುನಾಶವಾಗುವೆ ಮುಂದೆದುಃಖಿಸುತ ॥ ೩೬ ॥ ಮುನಿಗಳಿ ಗೆ ಹಿಂಸೆಯನುಮಾಡಿದೆ । ವನಿತೆಯರೊಳುತ್ತಮರ ನೀಕ್ಷಿಸಿ । ಘನಬ ಲಾತ್ಕಾರದೊಳು ನೀಂ ಕರೆತಂದುಕೆಡಿಸಿರುವೆ ॥ ಮನದೊಳಾನಂದವನು ತಾಳ್ದು ಕ । ದನವನೆಸಗಿ ವಿಬುಧರಸಂಚಯ । ವನುರೆ ನೋಯಿಸುತಿ ರ್ಪ ನಿನಗಾಗುವುವೆ ಸೌಖ್ಯಗಳು ॥ ೩೭ ॥ ವಿನುತಮುನಿಪಾ ಬ್ರಹ್ಮ ಚರ್ಯದೊ । ಳುನಮಿಸುತ ವಿದ್ಯಾಗುರುವನನು । ದಿನವು ಸೇವಿಸಿ ತನ್ನ ರೂಪವನರಿತ ವಿಪ್ರನಿಗೆ ॥ ಅನವರತದೊಳಧೀನ ಮಾಗಿಹ । ಘನಸುವಿ ದ್ಯೆಗಳಂತೆ ರಘುನಂ । ದನನಿಗೀ ಧರಣಿಯೊಳಧೀನಳೆನಿಸಿರುತಿಹೆನೆಂದುಂ ॥ ॥ ೩೮ ॥ ದುರುಳರಾವಣ ಕೇಳೆಲವೊ ನೀಂ । ಮರುಳನಂದದೆ ನೈಜ ಬುದ್ಧಿಯ । ತೊರೆದು ಕಾಮಾತುರನೆನಿಸಿ ಠೀವಿಯೊಳು ನನ್ನೊಡನೆ ॥ ತರತರದ ಮಾತುಗಳನಾಡುವೆ । ಧರಣಿಯೊಳು ನೀನಿನ್ನು ನೋಡದೆ ವರಶುಭಂಗಳ ನೈದುವೆಜವದೊಳಾ ಯಮನಬಳಿಗೆ ॥ ೩೯ ॥ ಹೋಗೆಲ ವೆಲವೊ ಖೂಳನಿನಗಾ । ರಾಘವೇಂದ್ರನು ಮುಂದೆಮರಣವ । ನಾಗಿ ಸುವನಿದರೊಳಗೆ ಸಂಶಯವಿಲ್ಲನೀನಿಂದು ॥ ಕೂಗದೆನ್ನಬಳಿಯೊಳುದೂ ರಕೆ । ಬೇಗಪೋಗೆಂದೆನುತ ಪೇಳದ । ಳಾಗ ಧರಣೀಜಾತೆ ಬಹುಧೈರ್ಯ ದೊಳುರಾವಣಗೆ ॥ ೪೦ ॥ ಪೊಡವಿಯಣುಗಿಯ ನುಡಿಗಳನು ಕೇ । ಳ್ದೊ ಡನೆ ಕೋಪಾತಿಶಯದಿಂದಲೆ । ನುಡಿವನಾದಶಶಿರನು ಪಲ್ಗಳಕಡಿದು ಕಟಕಟನೆ ॥ ಕಿಡಿಗಳನುಕಾರುತ್ತ ಕಂಗಳೊ । ಳಡಿಗಡಿಗೆತಾಂ ತನ್ನ ತುಟಿಗಳ । ನಡುಗಿಸುತ್ತೊದೆ ದವನಿತಲವನ್ನಡದಕಾಲಿಂದೆ ॥ ೪೧ ॥ ತೊರೆದು ಬಂಧುಗಳೆಲ್ಲರನು ಹಗ । ಲಿರುಳು ರೋದಿಸುತೆನ್ನಧೀನದೊ ॥ ಳಿರುವನಿನಗಾ ರಾಮನಿಂದೆ ಸಹಾಯವಾಗುವುದೆ ॥ ಅರಿತುಚಿತ್ತದೊಳ ಖಿಳ ಲೋಕವ । ನುರೆನಡುಗಿಸುವ ನನ್ನನಿಂದೀ । ತೆರದಿನಿಂದಿಸಬಹುದೆ ಕೊಲ್ಲುವೆನಿನ್ನನೀಕ್ಷಣವೆ ॥ ೪೨ ॥ ಎನುತ ಕತ್ತಿಯನಾಗಪಿಡಿದಾ । ದನು ಜನಾಥನು ಝಳಪಿಸುತ ಮೋ । ದಿನಿಯಣುಗಿಯ ಸನಿಹಕೆಪಲ್ಗಡಿವುತ್ತ ನಡತರಲು ॥ ಅನಿತರೊಳು ರಾವಣನರಸಿ ಯೆಂ । ದೆನಿಪ ಮಂಡೋದರಿ ತಡೆದು ಗಂ । ಡನಿಗೆ ಪೇಳ್ದಳುನಮಿಸಿ ಪದಪಂಕೇರುಹಂಗಳಗೆ ॥ ೪೩ ॥

ಪತಿಯೆಕೇಳೀ ಸೀತೆನನಗಿಂ | ತತಿಶಯಳ್ ಸೌಂದರ್ಯದಲಿ ನೋ | ಡಿತಿಳಿಯದೆ ಕಾಮಾತುರದೊಳೇತಕ್ಕೆ ಬಳಲಿದಪೆ || ಹಿತದೆನನ್ನೊಳು ರಮಿಸು ಧರಣೀ | ಸುತೆಗೆ ಕಾಮೋದ್ರೇಕಮಿಲ್ಲವು | ವಿತತಕಾಮಾತುರಳನಿಪೆ ನಾನೆಂದುಪೇಳಿದಳು || ೪೪ || ಮಡದಿ ಮಂಡೋದರಿಯು ಪೇಳಿದ | ನುಡಿಯನಾಗಳ್ ರಾವಣನು ಕೇ | ಳ್ದೊಡನೆ ತನ್ನ ಮನದೊಳುದಾಸೀನವನು ತಾಳುತ್ತ || ತಡೆಯಲಾರದ ಸಂಕಟಂಗಳ | ನಡಗಿಸುತ ಮನದೊಳಗೆಸೀತೆಯು | ಕಡೆಗೆ ತನ್ನಯುಮುಖವತಿರುಗಿಸಿ ಮತ್ತೆಪೇಳಿದನು || || ೪೫ || ಧರಣಿಜಾತೆಯೆಕೇಳು ನಿನ್ನೊಳು | ಕರುಣಿಸುತ್ತೀದಿನವೊದಲುಗೊಂ | ಡೆರಡುತಿಂಗಳ ಗಡುವನಿತ್ತಿಹೆ ಕೇಳ್ನಗದರೊಳು || ವರಿಸಿ ನನ್ನನು ಸಂತವಿಸದಿ | ದ್ದರೆ ಕಡಿಕಡಿದು ನಿನ್ನಭೇದಿಸು | ವರೆನುತುಸುರಿದನಾ ನಿಶಾಚರಿಯರಿಗೆ ರಾವಣನು || ೪೬ || ನೀವುಕೇಳುವದೆನ್ನನೇಮವ | ನೀವನಿತೆ ನನ್ನನು ವರಿಸಿತಾ | ನಾವಗಂ ಸುಖಗೊಳಿಪ ತೆರದೊಳು ಬಹುವಿಧಂಗಳಲಿ || ಸಾವಕಾಶವ ಮಾಡದನುದಿನ | ವೀವನದೆ ಪೇಳುತ್ತಿಹುದೆಂದಾ | ರಾವಣನುಪೇಳುತ್ತ ಬಂದನು ರಾಜಮಂದಿರಕೆ || || ೪೭ || ದನುಜನಾಥನ ಬಳಸುತಾತನ | ಮನೆಗೆಬಂದರು ದೂತಿಕೆಯರಾ | ಮನುಜಘಾತುಕನನ್ನು ಬಿರುದುಗಳಿಂದೆ ಹೊಗಳುತ್ತ || ಘನತರದಲಂಕಾರದಿಂದೆಸೆ | ವ ನಿಜರಾಜಭವನಕೆ ನಡೆತಂ | ದನು ಮಡದಿ ಮಂಡೋದರಿವೆರಸಿ ರಾವಣಾಸುರನು || ೪೮ || ಈತೆರದೊಳಾ ದನುಜನಾಥನು | ಸೀತೆಯೊಡನಾಡಿದ ನುಡಿಗಳನು | ಮಾತರಿಶ್ವತನೂಜನಾ ಶಿಂಶುಪ ಮಹೀರುಹವೆ || ಕೂತುಕೇಳುತ ತನ್ನನರಿಯದ | ರೀತಿಯಿಂದಾ ಸೀತೆಗೊದಗಿದ | ಭೀತಿಯನು ತಾಂಕಂಡು ಶೋಕಿಸುತ್ತಿದ್ದನು ಮನದಲಿ || ೪೯ || ಅಸುರನಾಥನು ಪೋದಬಳಿಕಾ | ವಸುಮತೀಸುತೆ ತನ್ನಚಿತ್ತದೊ | ಳುಸಲೆದುಃಖಿಸಿ ರೋದಿಸುತಶೋಕವನ ಮಧ್ಯದಲಿ || ಬಿಸಲಿನತಿರ್ಝಳದಿಂದೆ ಬಾಡಿದ | ಕಿಸಲಯದವೋಲ್ಕಾಣಿಸಿದಳಂ | ದಸುರವಧುಗಳ ನಡುವೆಯುಂಜುತಳುತ್ತ ನಡುನಡುಗಿ || ೫೦ ||

ಇಂತು ಹದಿನೇಳನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೮೩೩



# ಹದಿನೆಂಟನೆಯ ಅಧ್ಯಾಯ.

**ಸೂಚನೆ**|| ದನುಜಪತಿ ದಶಶಿರನ ವರಿಸು |
ತ್ತನುದಿನವು ಸುಖಿಸೆಂದು ಪೇಳ್ದಾ |
ವನಿತೆಯರಿಗಾ ಜನಕನಂದನೆ ಪೇಳ್ದಳುತ್ತರವ ||

ಖಳನುತೆರಳದಬಳಿಕ ಸೀತೆಯ | ಬಳಿಗೆ ತಾನೈತಂದಿರದೆ ನುಡಿ | ದಳು ಮಹಾವೈಭವದೊಳೇಕಜಟೆ ಯೆನಿಪ ವನಿತೆಯು || ಇಳೆಯಣುಗಿ ಕೇಳಾ ದಶಶಿರನ | ನೊಲಿಸುತ ಸಕಲವಿಧದ ಸೌಖ್ಯಂ | ಗಳನು ಹೊಂದುವುದೆಲ್ಲರಿಗೆ ನೀನೊಡತಿಯೆಂದೆನಿಸಿ || ೧ || ಭರದೊಳಂದಾ ಜಾನಕಿಯಹ | ತ್ತಿರಕೆ ತಾನೈತಂದು ಪೇಳ್ದಳು | ಹರಿಜಟೆಯೆನಿಪ ರಕ್ಕಸಾಂಗನೆ ಬಹಳಯುಕ್ತಿಯಲಿ || ಧರಣಿಸುತೆ ಕೇಳಸುರನಾಥನ | ವರಿಸಿನೀನೀ ಲಂಕೆಯೊಳು ದನು | ಜರಿಗೆ ರಾಜ್ಞಿಯೆನಿಸುವುದಾವಗ ಮೆನುತ ಸಂತಸದಿ || ೨ || ಪ್ರಘುಸೆಯೆಂಬ ಪೆಸರಿನ ರಕ್ಕಸಿ | ರಘುವರನರಾಣಿಯಬಳಿಗೆ ಬಂ | ದು ಘನತರ ಸಂತೋಷದಿಂದಾ ವನದಮಧ್ಯದೊಳು. ಪೊಗಳುತಸುರೇಶ್ವರನ ಹಲವುವಿ | ಧ ಗುಣಸಂಚಯವ ನಡಿಗಡಿಗಾ | ಮುಗುಳುನಗೆ ಯಿಂದೊಲಿಸುತುಸುರಿದಳತಿ ವಿನೋದದಲಿ || ೩ || ಸುಂದರೀಮಣಿ ಕೇಳುನೀಂ ರಘು | ನಂದನನುಳದು ದನುಜನಾಥನಿ | ಗಿಂದು ಭಾರ್ಯೆಯೆನಿಸುತ ರಾಜಸುಖಂಗಳೆಲ್ಲವನು || ಹೊಂದಿ ಲಂಕಾಪುರವ ರವನಾ | ನಂದದಿಂ ಸಲಹುತ್ತ ವಾಸಿಪು | ದೆಂದುನುಡಿದಳು ಕೇಳುವಂದದೆ ಸಕಲನಾರಿಯರು || ೪ || ಜನಕಜಾತೆಯೆ ಕೇಳು ನಿನಗೆ ಸ | ಮನ ಹಕಾಂತಾಮಣಿ ಯರಿಲ್ಲವು | ದನುಜನಾಥನ ಮಡದಿಯಾಗುತ ವರವಿಮಾನದಲಿ || ದಿನದಿನವುನೀಂ ರಾಕ್ಷಸೇಂದ್ರನೊ | ಡನೆ ರಮಿಸುತಾನಂದದಿಂದಿಹು | ದೆನುತಪೇಳ್ದಳು ವಿಕಟೆಯೆನಿಪಾಘೋರ ರಕ್ಕಸಿಯು || ೫ || ಪೊಡವಿಜಾತೆಯ ಬಳಗೆಬಂದತಿ | ಸಡಗರದೊಳಾ ದುರ್ಮುಖಿಯೆನಿಪ | ಕಡುಮುಳಸನಾಂತಿರುವ ರಕ್ಕಸಿ ವನದಮಧ್ಯದಲಿ || ಬಿಡದೆನೀನೀಪುರದೊಳು ದನುಜ | ರೊಡೆಯನಾಗಿಹ ಪಙ್ತಿಕಂಠನ | ಮಡದಿಯಾಗುತ ಸಲಹು ನಮ್ಮನೆನುತ್ತಪೇಳಿದಳು || ೬ || ನಿನಗೆಸರಿಯೆಂದೆನಿಪ ಸುಂದರಿ | ಯನು ಚತುರ್ದಶ ಭುವನಗಳೊಳಾ | ವು ನೆರೆಯರಿಯೆವು ನಿನ್ನಬಿಡುವನೆ ದನುಜವಲ್ಲಭನು || ಮನದೊಳೊಂದನು ಯೋಚಿಸದೆ ದಿನ | ದಿನವು ಭೋಗಿಸುತಸುರನಾಥನೊ | ಡನೆ ಸಫಲವೆಂದೆನಿಸು ಹರಯುವನೆಂ

ದುಪೇಳಿದಳು ॥ ೭ ॥ ವನದೊಳಾಧರಣೀಸುತೆ ತನಗೆ । ದನುಜನಾರಿ
ಯರೆಲ್ಲ ಗರ್ಜಿಸಿ । ಘನಭಯವತೋರಿಸುತ ನುಡಿದಾನುಡಿಗಳೆಲ್ಲವನು ॥
ಮನಕೆತಾರದೆ ಕೋಪವನು ತಾ । ಳ್ದುನೆರೆ ಜರೆಯುತ ತೊರೆದು ಭೀತಿ
ಯ । ವಿನಯಹೀನರಿಗಿತ್ತಳತಿ ಧೈರ್ಯದೊಳಗುತ್ತರವ ॥ ೮ ॥ ದಿವಿಜ
ವಲ್ಲಭನಂ ಶಚಿಯುದೆಂ । ತು ವರಿಸಿಹಳಾ ಗುರುವಸಿಷ್ಠಮು । ನಿವರನ
ನರುಂಧತಿಯು ತಾನೆಂತೊಲಿದು ಸೇವಿಪಳು ॥ ಶಿವಶಿರೋಭೂಷಣನೆನಿ
ಸಿದವಿ । ಧುವನು ರೋಹಿಣಿಯೆಂತುಪರಿಚರಿ । ಸುವಳು ನಾನವರಂತೆಕೈ
ವಿಡಿದಿಹೆನು ರಾಮನನು ॥ ೯ ॥ ವಿನುತಲೋಪಾಮುದ್ರೆ ತಾನನು । ದಿನ
ವು ತೊರೆಯದಗಸ್ತ್ಯಮುನಿಪಾ । ಲನನು ಸೇವಿಸುತೆಂತವೆ ನಧೀನದೊ
ಳು ಸೇರಿಹಳು ॥ ಘನಭಕುತಿಯಿಂದಾ ಸುಕನ್ಯೆಯು । ವಸಿಯೊಳಾಚ್ಯ
ವನನ ವಶವೊಳೆಂ । ತು ನೆಲಸಿಹಳದರಂತೆ ನಾನಿಹೆ ರಾಮನವಶದಲಿ ॥
॥ ೧೦ ॥ ಪತಿಪರಾಯಣೆಯೆನಿಸ ಸಾವಿ । ತ್ರಿ ತಳೆದಾನಂದವನು ತನ್ನಯ ।
ಪತಿಯೆನಿಸುವಾ ಸತ್ಯವಂತನನೆಂತು ಸೇವಿಪಳು ॥ ಸತತವಾ ಶ್ರೀಮತಿ
ಯು ಕಪಿಲನ । ನು ತಿಳಿದೆಂತೊಲಿಸುತಿಹ ಳವರಂ । ತೆ ತಿಳಿದೊಲಿಸು
ತ್ತಿರುವೆನಾ ರಘುನಾಥನನು ನಾನು ॥ ೧೧ ॥ ಜಸವಡೆದ ಸಾದಾಸನಂ ಸಂ ।
ತಸವನಾನುತ್ತಮದ ಯಂತಿವೆ । ರಿಸಿದ ರೀತಿಯೊಳಾ ಸಗರನಂಕೇಶಿನಿ
ಯು ಬಿಡದೆ ॥ ಬಸೆದುಸಂತಸ ವಡಿಸುವಂದದೆ । ವಸುಧೆಯೊಳು ನಾಂ
ರಾಘುವೇಂದ್ರನ । ನೊಸೆದುಸೇವಿಪೆ ನಿತರರನು ಕಣ್ಣಿಂದಲೀಕ್ಷಿಸೆನು ॥
॥ ೧೨ ॥ ಭೂಮಿಪತಿ ನಳಚಕ್ರವರ್ತಿಯು । ನೀಮಹೀತಳದೊಳು ಜಸ
ವಡೆದ । ಭೀಮಭೂಪಾಲಕನ ಸುತೆದಮಯಂತಿ ವರಿಸುತ್ತ ॥ ಪ್ರೇಮ
ದಿಂದುಪಚರಿಸಿದಂದದೆ । ರಾಮಚಂದ್ರನನುಪಚರಿಸುತಿಹೆ । ನೀಮಹಿಯೊ
ಳನ್ಯರನು ವರಿಸೆನೆನುತ್ತ ಪೇಳಿದಳು ॥ ೧೩ ॥ ಬಳಸಿತನ್ನನು ಭೀತಿವ
ಡಿಸುವ । ಖಿಳ ಕುರೂಪಿ ನಿಶಾಚರಿಯರಿಗೆ । ತಿಳುವಳಿಕೆಯನು ತಾನರು
ಹುವೆಂತಾ ಮಹೀಸುತೆಯು ॥ ಇಳೆಯೊಳಾ ಪತಿಭಕ್ತಿಯಿಂದೆ ಪ್ರೊ । ಗ
ಳಿಕೆವಡೆದಾ ಸಾಧ್ವಿಯರ ಕಥೆ । ಗಳನು ಪೇಳುತ ಸುಮ್ಮನಾದಳು ಪತಿ
ಯ ಜಾನಿಸುತ ॥ ೧೪ ॥ ವಿನತೆಯೆಂಬ ಪೆಸರಿನರಕ್ಕಸಿ । ಜನಕನಂದನೆ
ಗೆಂದಳೆನ್ನವೆ । ಚನವನಾಲಿಸು ಸೀತೆ ರಾಕ್ಷಸರಾಜನೆಂದೆನಿಪ ॥ ಘನ
ಪರಾಕ್ರಮಿ ರಾವಣನ ವರಿ । ಸಿ ನಿರುತವು ಸಾಖ್ಯದೊಳಹುದು ಮೇ ।
ಲೆನಿಪುದಿದಕೊಪ್ಪದಿರೆ ಕೊಲ್ಲುವೆನೆನುತ ಪೇಳಿದಳು ॥ ೧೫ ॥ ಧರಣಿಜಾತೆ
ಯೆ ಕೇಳು ದಶಕಂ । ಧರನ ಸಾಧದೊಳಿರುವೆ ನಿನ್ನನು । ಕಳೆದುಕೊಂ

ಡೊಯ್ಯಲಳವಲ್ಲವು ಮೇಘವಾಹನಿಗೆ ॥ ಸುರವಿರೋಧಿ ದಶಾಸ್ಯನಿಗೆ ನೀ । ನರಸಿಯಾಗುತ ಸಲಹುನವ್ಮ್ಮನು । ಕರುಣೆಯಿಂದೆನುತಾ ವಿಕಟೆ ಪೇಳಿದಳು ವಿನಯದಲಿ ॥ ೧೬ ॥ ದನುಜರೆಲ್ಲರಿಗೊಡೆಯ ನಾಗಿಹ । ಮನುಜಹಿಂಸಕನೆನಿಪ ದಶಕಂ । ಠನಿಗೆ ಸತ್ತಿಯಾಗುತ್ತಖಿಳ ಸುಖಭೋಗಗಳನೆಲ್ಲ ॥ ದಿನದಿನವು ಹೊಂದುತ್ತಿಹುದುತ್ತಮ । ನಿನಗೆ ಸರಿಬೀಳದಿರೆಲೆನ್ನವ । ಚನವು ಕೊಲ್ಲುವೆನೀಗ ನಿನ್ನನೆನುತ್ತ ಪೇಳಿದಳು ॥ ೧೭ ॥ ಪಿಡಿದು ಶೂಲಾಯುಧವ ನಂದಡಿ । ಗಡಿಗೆತಿರುಗಿಸಿ ತನ್ನಪಲ್ಗಳ । ಕಡಿದು ರಕ್ಕಸಿಯರಿಗೆ ಸಂತೋಷವನು ಮಾಡುತ್ತ ॥ ಪೊಡವಿಜಾತೆಯ ಬಳಿಗೆ ನಡೆತಂ । ದೊಡನೆಪೇಳ್ದಳು ರಾಘವೇಂದ್ರನ । ಮಡದಿಗಾ ಚಂಡೋದರಿಯೆನಿಪ ಖೂಳರಕ್ಕಸಿಯು ॥ ೧೮ ॥ ಅಸುರನಾಥನಿಗಿಂದು ಪತ್ನಿಯೆ । ನಿಸುತ ಸಾಖ್ಯವಹೊಂದುವುದುಚಿತ । ವು ಸರಿಬೀಳದೆ ಹೋದರೆನ್ನನುಡಿಗಳು ನಿನಗಿಂದು ॥ ಉಸಿರನಾಡಿಸದಂತೆ ಸಲೆಛೇ । ದಿಸುತ ನಿನ್ನನು ನಾನಿರದೆ ಭ । ಕ್ಷಿಸುವೆ ನೆಣವಸೆಮಿದುಳು ಕರುಳಿದೆ ಮಾಂಸಗಳ ಸಹಿತ ॥ ೧೯ ॥ ಎನುತನಿಶ್ಚೈಸಿಹೆನು ಚಿತ್ತದೊ । ಳೆನಗೆ ನಿನ್ನಯ ಮಾಂಸಖಂಡಗ । ಳನುನಲಿದು ತಿನ್ನುವೆದರೊಳ ಗತ್ಯಾಸೆಯಾಗಿಹುದು । ಮನುಜಮಾಂಸವ ನುಳಿಯಲಾರೆನು । ವನಿತೆಕೇಳದು ನನ್ನಬುದ್ಧಿಯು । ನಿನಗೆಪೇಳಹೆನೆಂದು ನುಡಿದಳು ಸೀತೆಗಾದುರುಳೆ ॥ ೨೦ ॥ ಜಾನಕಿಯ ಕಂಠವನು ಛೇದಿಸು । ತೀನಿಶಾಂತ್ಯದೊಳೆಲ್ಲ ರುಳದನು । ಮಾನವನು ಭಕ್ಷಿಪುದೆ ನನಗಿಷ್ಟವೆನಿಸಿಹುದೀಗ ॥ ದಾನವೇಂದ್ರಂಗರುಹಲೀ ವಧು । ತಾ ನಳದಳೆನುತ್ತಿವರೊಳೆಮ ಗಿ । ನ್ನೇನು ಭಯವೆನುತಾ ಪ್ರಘಸೆ ಯೆಂಬವಳು ಪೇಳಿದಳು ॥ ೨೧ ॥ ಬರಿಯಮಾತುಗಳನ್ನ ಚಿತ್ತಕೆ । ಸರಿಯೆನಿಸುವುವೆ ಕೇಳಿ ನಾವೀ । ಧರಣಿಜಾತೆಯ ನೆರಡು ಭಾಗದಿಛೇದಿಸುತಲೀಗ ॥ ಭರದೆ ತಿನ್ನುವುದುಚಿತ ನೀವಿ । ಲ್ಲಿರಿಸುವುದು ಮದ್ಯಂಗಳನು ತರ । ತರದ ಲೇಹ್ಯಂಗಳನೆನುತ ಜಾಮುಖಿಯುಪೇಳಿದಳು ॥ ೨೨ ॥ ನನಗಜಾಮುಖಿ ಮುಖ್ಯರಾಗಿಹ । ದನುಜೆಯರು ಪೇಳಿದುದೆ ಸಮ್ಮತ । ವೆನಿಸಿತೋರ್ಪುದು ಸಕಲ ದುಃಖವಿನಾಶಕರವೆನಿಪ ॥ ವಿನುತಮದ್ಯಂಗಳನು ತನ್ನಿರಿ । ಘನವಿನೋದದೊಳೆಂಟ ಸೀತೆಯ । ತನುವಭಕ್ಷಿಸಬೇಕೆನುತ ಶೂರ್ಪನಖಿ ಪೇಳಿದಳು ॥ ೨೩ ॥ ಸೀತೆಯೆನು ತ್ತಿನ್ನುತ್ತ ಘನಸಂ । ಪ್ರೀತಿಯಿಂದಲೆ ಪಾನಮಾಡು । ತ್ತಾತುರದೊಳತಿ ಮೇಲೆನಿಪ ಮದ್ಯಂಗಳನು ನಾವು ॥ ಮಾತನಾಡುತ ತಿಂದುತೇಗಿ ಮ । ಹೀತಳದೊ

ಳಗೆ ಕುಣಿಯುಬೇಕೆಂ । ಬೀತೆರದ ಮತಿ ನನ್ನದೆನುತ ನುಡಿದಳು ಶೂ ರ್ಪನಖಿ ॥ ೨೪ ॥ ಕಾವಲಿರ್ಪ ನಿಶಾಚರಿಯು ರೆಂ । ದಾವೆಚನಗಳ ಕೇಳ್ದು ಜಾನಕಿ । ನೋವನೈದುತ ಧೈರ್ಯವನುಳಿದು ತಾನುರೋದಿಸುತ ॥ ಆವವಿಧದ ಸಹಾಯುಮಿಲ್ಲದೆ । ತೀವಿದಂಜಿಕೆಯುನ್ನು ಸೈರಿಸ । ದಾವನ ದೊಳಿದ್ದಳು ರಘೂತ್ತಮನನ್ನು ಜಾನಿಸುತ ॥ ೨೫ ॥ ಕ್ರೂರರಾಕ್ಷಸಿಯು ರನುಡಿಗಳನು । ಧಾರುಣೀಸುತೆ ಕೇಳ್ದು ಕಣ್ಣೊಳು । ನೀರಸುರಿಸು ತ್ತುಳುತಗದ್ಗದ ನಿನದದಿಂದೊಡನೆ ॥ ಈರೆನುಮನಕೆ ನಿಮ್ಮನುಡಿಗಳ । ಕ್ರೋರಿನನ್ನನು ಭಕ್ಷಿಸಿರಿ ನಾ । ನಾರಜನಿಪತಿಯುನ್ನು ವರಿಸೆನೆನುತ್ತ ಪೇಳಿದಳು ॥ ೨೬ ॥ ಪತಿಯುಕಾಣದೆ ವನದೊಳಾವೃಕ । ಏತತಿಯಿಂದೆ ಬೆದರಿದ ಪೆಣ್ಮೃಗ । ದತೆರದಿಂ ಪಂಗಗಳನಡಗಿಸಿಕೊಂಡು ದೇಹಗೊಳು ॥ ಕ್ಷಿತಿಸುತೆ ದನುಜನಾಥನಿಗೆ ಪೆದ । ರುತಸುಖಂಗಳಕಾಣವಸುರವ । ನಿತೆಯುರಾಮಧ್ಯದಲಿ ಕಂಪಿಸಿ ದುಃಖಿಸಿದಳಾಗ ॥ ೨೭ ॥ ಕುಸುಮಸಂಚಯು ದಿಂದೆ ಸಲೆಶೋ । ಭಿಸುವಶೋಕ ಕುಜದೊಳು ದೊಡ್ಡದೆ । ನಿಸಿದಕೊಂಬೆಯು ಪಿಡಿದುಕೊಳ್ಳುತ ಸೀತೆಬಿಸುಸುಯ್ದು ॥ ಬಸರುತಿಹ ಕಣ್ಣೀರಿನಲಿ ನೆನೆ । ಯಿಸುತ ತನ್ನಘನಸ್ತನಂಗಳ । ನು ಸಲೆಚಿಂತಿಸುತ್ತಿದ್ದಳನಯುನ ಪೆಸರಜಾನಿಸುತ ॥ ೨೮ ॥ ಬಿಡಗೆಬೀಸುತಿಹಬಿರುಗಾಳಿಯು । ಹೊಡೆತದಿಂ ದೀನೆಲಕೆ ಬಾಳೆಯು । ಗಿಡವುಬೀಳುವವ್ರೊಲು ಮಹೀಸುತೆ ಬಳಲಿಬೆಂಡಾಗಿ ॥ ನಡುನಡುಗಿ ರಾಕ್ಷಸಿಯುದಿಂದಡಿ । ಗಡಿಗೆ ಕಳಗುಂದಿಡಿದ ದುಃಖಕೆ । ಕಡೆಯುಕಾಣದೆ ಕೊರಗುತಿದ್ದಳು ವನದೆಶೋಕಿಸುತ ॥ ೨೯ ॥ ಕಾಳಪನ್ನಗನಂತೆ ಕಣ್ಣವಿ । ಶಾಲವಾಗಿಯೆ ತೋರುವವನೀ । ಬಾಲೆಯಾಜಡೆ ದೊಡ್ಡದೆನಿಸುತ ತೋರಿತೆಲ್ಲರಿಗೆ ॥ ಆಲಿಗಳನೀರನ್ನು ಸುರಿಸುತ । ತಾಳಲಾರದ ದುಃಖಭರದಿಂ । ದಾಲಿನೆಗೋಳಾಡಿದಳು ಬಿಸುಸುಯ್ದು ದೈನ್ಯದಲಿ ॥ ೩೦ ॥ ಹಾರಮಣ ಹಾರಾಮಹಾರಣ । ಧೀರಲಕ್ಷ್ಮಣ ಹಾ ದನುಜಸಂ । ಹಾರ ಹಾಕೌಸಲ್ಯೆ ಹಾಮಗಧೇಂದ್ರಸುತೆಯುನುತ ॥ ಧಾರುಣೀಸುತೆ ಕೂಗಿಕೊಂಡಳು । ತಾರನೆರವನು ಕಾಣದಾಗಳೆ । ಘೋರ ದುಃಖವನೈದಿದಳಶೋಕವನ ಮಧ್ಯದಲಿ ॥ ೩೧ ॥ ಮರಣಬಾರದಕಾಲ ದೊಳಬಲೆ । ಯರಿಗೆ ಪುರುಷರಿಗೆನ್ನುತ ವಿಬುಧ । ವರರುಹೇಳಿಹ ಲೋಕವಾರ್ತೆಯುುಸತ್ಯವಾಗಿಹುದು ॥ ತರತರದಘೋರಾಕೃತಿಗಳನು । ಧರಿಸಿದ ಸುರಾಂಗನೆಯುರಿಗೆಹಗ । ಲಿರುಳುಭೀತಿಪಡುತ್ತ ಬದುಕಿಹೆನೆಂದುಕೊರಗಿ ದಳು ॥ ೩೨ ॥ ಕಡಲನಡುವಲೆವಬಿರುಗಾಳಿಯು । ಹೊಡೆತದಿಂದಲೆಪೂರ್ಣ

ವಾಗಿಹ | ಹಡುಗುನಾಶವನೈದುವಂತತ್ಯಲ್ಪಪುಣ್ಯವೆನು || ಪಡೆದತಿಕೃಪಣ ಳೆನಿಸುತ್ತೀ | ಪೊಡವಿಯೊಳು ನಾನಿಂದುಬೇಗನೆ | ಬಿಡುವೆಜೀವವನೆನುತ ಬಿಸುಸುಯ್ದತ್ತಳಾಸೀತೆ || ೩೩ || ನೀರಿನತಿಶಯದಿಂದೆಮೊರೆದಾ | ವಾರಿಧಿ ಯುತಟದಂತೆನಾನೀ | ಕ್ರೂರರಕ್ಕಸಿಯರ ವಶದೊಳಗೆ ನಿರತವಾಸಿಸುತ || ವೀರರಾಮನಕಾಣದೆಸಲೆವಿ | ಚಾರವೆನುಳದು ಕಷ್ಟವತಡೆಯು | ಲ್ರರದ ಳವೆನೆನುತ್ತಜಾನಕಿರೋದಿಸಿದಳಲ್ಲಿ ||೩೪|| ನೆಲದೊಳೆನ್ನಪತಿಯನು ಸಂ ತಸ | ದಳೆದುನೋಡುವ ಜನರು ಧನ್ಯರು | ಜಲರುಹಾಕ್ಷನೆನಿಸುವ ನಾರ ಘುವರನುಸಂತತವು || ನಲಿದುಪೇಳ್ವನು ವಿಹಿತವಚನಂ | ಗಳನುಧರ್ಮಾ ತ್ಮನೆನಿಸುತ್ತಿಹ | ನಿಳೆಯೊಳೆಲ್ಲಜನರಿಗೆ ರಕ್ಷಕನೆನಿಸಿಕೊಂಡಿಹನು ||೩೫|| ಧರಣಿಯೊಳು ವಿದಿತಾತ್ಮನೆಂದೆನಿ | ಸಿರುವ ರಾಮನನಗಲಿ ದೆನ್ನಯ | ಹರಣವಿಂದಿಹುದೇನು ಗರಳವಕುಡಿದ ಜನರಂತೆ || ತರತರದಪಾಪಂಗಳ ನುಮಾ | ಡಿರುವೆ ಹಿಂದಣಜನ್ಮದಲೆನಗ | ದರಫಲವು ಸಂಪ್ರಾಪ್ತವಾಗಿ ಹುದೀತೆರದೊಳಂತು || ೩೬ || ನಿಂದಿಸೀ ಮಾನವರ ಜನ್ಮವ | ನಿಂದಿಸೀ ಪರವಶತೆಯನು ನಾ | ನಿಂದುರಾಮನ ನಗಲಿ ಬಹುಶೋಕವನು ಸೈರಿ ಸುತ || ಮುಂದೆ ಜೀವಿಸಲಾರೆನು ಮನಕೆ | ಬಂದತೆರದಿಂ ದಸುವನೀ ಗುವೆ | ನೆಂದು ಜಾನಕಿ ರೋದಿಸಿದಳಾವನದಮಧ್ಯದಲಿ || ೩೭ || ಧರಣಿ ನಂದನೆ ಕಣ್ಣೊಳುಜಲವ | ಸುರಿಸುತೀಪರಿಯಿಂದೆ ಪೇಳುತ | ಶಿರವ ಬಾಗಿಸಿಕೊಂಡು ರೋದಿಸುತಂದು ಭೂಮಿಯಲಿ || ಮರುಳರಂತಾ ಕು ಡುಕರಂತನ | ವರತ ಹೊರಳಾಡಿದಳು ಸಲೆಚೀ | ತರಿಸಿಕೊಳ್ಳದೆ ಭೀತಿ ಯನುತಾನಾಂತು ನಡುನಡುಗಿ || ೩೮ || ರಾಮಸತಿಯೆಂದೆನಿಪ ತನ್ನ ನು | ಕಾಮರೂಪಿ ದಶಾಸ್ಯನಿಲ್ಲಿಗೆ | ಕಾಮಿಸುತ ತಂದಿಹನತಿಬಲಾತ್ಕಾರ ದಿಂದಿರದೆ || ರಾಮನನುಳದು ಘೋರರೂಪಿನ | ಭಾಮಿನಿಯರ ವಶದೊ ಳಿರುತಲೀ | ಭೂಮಿಯೊಳಗಾನೆಂತು ಬದುಕುವೆನೆಂದು ಮರುಗಿದಳು || ೩೯ || ತರತರದ ಭೀತಿಗಳನಾಗಿಸು | ವೆರನುದಿನವೀ ರಾಕ್ಷಸಾಂಗನೆ | ಯರತಿದುಃಖಾರ್ತಳೆನಿಸುತ ರಾಮನನು ಬಿಟ್ಟೆನಗೆ || ಹರಣನಿಲ್ಲುವುದೆ ಧನಕನಕಾ | ಭರಣಗಳು ನನಗೇಕೆ ಪೊಂದುವೆ | ಮರಣವನುನಾನೆ ನುತ ಜಾನಕಿ ದೃಢವಮಾಡಿದಳು || ೪೦ || ನನ್ನ ಹೊಟ್ಟೆಯು ವಜ್ರದಿಂ ದಲೆ | ಮುನ್ನ ನಿರ್ಮಿತವಾಗಿಹುದರಿಂ | ದಿನ್ನು ಸೀಳದಿಹುದು ಮಹಾದುಃ ಖಾತಿಶಯದಿಂದೆ || ನನ್ನ ನಿಂದಿಸಬೇಕು ಭೂಮಿಯೊ | ಳೆನ್ನ ಗಂಡನ ಬಿಟ್ಟಿಹುದರಿಂ | ದೆನ್ನುತಾಭೂಮಿಸುತೆ ದುಃಖಿಸಿ ರೋದಿಸಿದಳಂದು

|| ೪೧ || ನಾನು ಪೂಜ್ಯಳೆನಿಸೆನು ಲೋಕದ | ಮಾನಿನಿಯರೊಳು ನೀ
ಚಳೆನಿಪೆನು | ಹೀನಚರಿತೆಯುನಾಂತಿಹೆ ನುಳಿದು ನನ್ನಗಂಡನನು ||
ಪ್ರಾಣವನು ರಕ್ಷಿಸುತಿಪುದರಿಂ | ದೀನೆಲದೊಳೆನ್ನ ಪತಿಭಕ್ತಿಗೆ | ಹಾನಿ
ಯಾಯ್ತೆನುತಾ ಮಹೀಸುತೆ ಶೋಕಿಸಿದಳರದೆ || ೪೨ || ಇರದೆ ನನ್ನನು
ಕೊಂದು ತಿನ್ನಲಿ | ಭರದೊಳೀಗಲೆ ಕತ್ತರಿಸಲಿ ಜ | ನರೊಡನೆ ಪ್ರಿಯ
ವಚನಗಳನಾಡುತ್ತ ನೆರೆನೆರೆದು || ಧರಣಿಪಾಲಕ ನೆಂದೆನಿಪ ರಘು | ವರ
ನನುಳಿದು ಬದುಕಿರಲಾರೆನು | ಮರಣವನು ಹೊಂದುವೆನೆನುತ ರೋದಿ
ಸಿದಳಾಸೀತೆ || ೪೩ || ರಮಣನಂ ತೊರೆದೀ ದನುಜಪತಿಯ | ಮನೆಯೊಳು
ದುಃಖವನುತಾಳುತ | ಸಮೆದುರೋದಿಸಿ ಬದುಕಿಫಲಮೇನಿಹುದು ಯೋ
ಚಿಸಲು || ಅಮರವೈರಿಯ ವಚನಗಳು ನ | ನ್ನ ಮನಕೊಪ್ಪುವುದಿಲ್ಲ
ವೆನದೇ | ಹಮನೆಡದಕಾಲಿಂದೆ ಸೋಕುವೆಳಲ್ಲ ಮನಸೋತು || ೪೪ ||
ದನುಜನೆನ್ನನು ವರಿಸುನೀನೆಂ | ದೆನುತ ಬೇಡುತ್ತಿಹುದರಿಂ ದಿವ | ನು
ನೆಲದೊಳು ಹಾಳಾಗುವನಖಿಳ ಬಂಧುಗಳಸಹಿತ || ಅನಲನಿಂದೆ ಸುಡಲಿ
ಕಡಿಯಲಿ | ನ್ನನುರೆ ಛಿನ್ನಾಭಿನ್ನವಾಗೀ | ಮನದೊಳವನನು ವರಿಸೆ
ನೆಂದಳು ಸೀತೆದುಃಖಿಸುತ || ೪೫ || ನಾನುಮಾಡಿದ ಪಾಪದಿಂದಲೆ | ತಾ
ನು ನನ್ನನುಹುಡುಕದೆಯು ದಾ | ಸೀನದಿಂದಿಹ ಕರುಣವಿಲ್ಲದೆ ರಾಮ
ನೆನ್ನೊಳಗೆ || ಜ್ಞಾನವಂತನು ಕರುಣಮುಳ್ಳವ | ನೀನೆಲದೊಳು ಖ್ಯಾತಿ
ವಡೆದಿಹ | ನಾನರೇಂದ್ರನು ವಿನುತಸದ್ವರ್ತನನು ತಾನೆನಿಸಿ || ೪೬ ||
ಪರಿಪರಿಯವಿಧದಿಂದೆ ಕೊರಗುವ | ದರೊಳು ಫಲವೇನಂದು ರಾಘವ |
ನಿರದೆಕೋಪಿಸುತಾ ಜನಸ್ಥಾನದೊಳು ನಡೆತಂದ || ಖರನನಾಹದಿನಾಲ್ಕು
ಸಾವಿರ | ದ ರಜನೀಚರರೊಡನೆ ಕೊಂದನು | ಭರದೊಳೆನ್ನನು ಕರೆ
ದುಕೊಂಡೊಯ್ಯದೆ ಬಿಡುವನೆಂತು || ೪೭ || ಹೀನವೀರ್ಯನು ಕಳ್ಳತನ
ದಿಂ | ದೀ ನಗರಕಂದೆನ್ನ ತಂದಿಹ | ನೀ ನಿಶಾಚರನನ್ನು ರಾಮನೆ ಸಂ
ಹರಿಸುತಿಹನು || ದಾನವವಿರಾಧನನು ದಂಡಕ | ಕಾನನದೊಳಗೆ ಕೊಂ
ದರಾಮನೆ | ತಾನು ನನ್ನನದೆಂತುಬಿಡುವನು ಭರದೆಬಂದಪನು || ೪೮ ||
ಜಲಧಿಮಧ್ಯದೊಳಹುದು ಲಂಕೆಯು | ಕಲಿಗಳಗೆ ಜಯಿಸಲ್ಕಸಾಧ್ಯವು |
ಜಲರುಹಾನನ ರಘುವರನಬಾಣಕ್ಕೆ ತಡೆಯುಂಟೆ || ಖಳನಿಶಾಚರನಿಂದೆ
ಕಾನನ | ದೊಳಪಹೃತಳೆಂದೆನಿಸಿ ದೆನ್ನನು | ತಿಳಿದುರಾಮನು ಬಿಡುವನೆ
ಯುದಾಸೀನವನು ತಾಳ್ದು || ೪೯ || ಪತಿಗೆ ನಾನಿಲ್ಲಿಹುದು ಗೊತ್ತಿ | ಲ್ಲ
ತಿಳಿದಿದ್ದರೆ ತಾಳ್ದು ಕೋಪವ | ನು ತಳುವದೆ ಸಂಹರಿಸಿ ಸಂಗ್ರಾಮ

ದೊಳು ರಾವಣನ ॥ ಅತಿಹರುಷದಿಂದೆನ್ನ ನೊಡಗೊಂ । ಡತಿಶಯದ ವಿಭವಂಗಳಿಂದೀ । ಕ್ಷಿತಿಯೊಳುನ್ನತಿ ವೆತ್ತಯೋಧ್ಯೆಗೆ ಪೋಗದಿರುತಿಹನೆ ॥ ೫೦ ॥ ತಿಳಿಯದಿದ್ದುದರಿಂದಲೆ ತರಣಿ । ಕುಲತಿಲಕ ಸುಮ್ಮನಿಹನೆನ್ನುತ । ತಿಳಿದುಕೊಂಡಿಹೆ ನೀದಶಶಿರನ ಪುರದೊಳಪ್ಪುದನು ॥ ತಿಳುಹುವವರಾ ರೆನ್ನ ಪತಿಗೀ । ಖಳನೊಡನೆಹೋರಾಡಿ ಕಾಳಗ । ದೊಳು ಮಡಿದನು ಜಟಾಯು ಬಿಡಿಸಲ್ಕೆನ್ನನೈತಂದು ॥ ೫೧ ॥ ಧರಣಿಪತಿರಾಘವನು ಲಂಕಾ । ಪುರದೊಳಗೆ ನಾನಿರುವುದನು ತಾ । ನರಿದೊಡೆ ನಿಶಾಚರರು ಲೋಕದೊಳಿಲ್ಲದ ತೆರದೊಳು ॥ ಶರಗಳಿಂದಲೆ ಕೊಲ್ಲುವನು ಸಾ । ಗರವಶೋಷಿಸಿ ದನುಜನಾಥನ । ಶಿರಗಳನು ಛೇದಿಸದೆಬಿಡುವನೆ ಮುಂದೆ ಸಂಗರದಿ ॥ ೫೨ ॥ ದನುಜನಾಥನ ದರ್ಪವನು ರಾ । ಮನು ವಿನಾಶವನಾಗಿಸುವನೀ । ಗನನಗೆಂತೊದಗಿಹುದು ಗೋಳಾಟವದರಂದದಲಿ ॥ ದನುಜರೆಲ್ಲರು ನಾಶವೈದಿದೊ । ಡನವರ ಸತಿಯರೆಲ್ಲದುಃಖಿಸು । ತನುದಿನವು ಗೋಳಾಡುವರವರ ಮನೆಗಳೊಳುಮುಂದೆ ॥ ೫೩ ॥ ಅನುಜನಿಂದೊಡಗೂಡಿ ರಾಮನು । ವನದೊಳು ಹುಡುಕುತೆನ್ನ ಸಾಗರ । ವನೋಣಗಿಸಿ ಲಂಕಾಪುರಕೆ ಶೀಘ್ರದಲಿಬರುತಿಹನು ॥ ಮನುಕುಲೋತ್ತಮ ನೆಂದೆನಿಪ ರಾ । ಮನನು ನೋಡಿದಕೂಡಲೆ ದಶಶಿ । ರನಳಿವನು ಜೀವಿಸದದೊಂದು ಮುಹೂರ್ತಪರ್ಯಂತ ॥ ೫೪ ॥ ನೆರೆವಲಂಕಾಪುರದ ದಾರಿಗ । ಳುರಿವಚಿತೆಗಳಹೊಗೆಗಳಿಂದ ನ । ವರತ ತುಂಬಿಕೊಳುತಿಹುದು ದೀಕ್ಷಿಸಲಾಗದೆಂಬಂತೆ ॥ ನೆರೆನೆರೆದು ಸೇರುವುವು ಹದ್ದುಗ । ಳರದೆ ಶೀಘ್ರದೊಳಾಸ್ಮಶಾನಕೆ । ಸರಿಯೆನಿಪ್ಪುದೀಲಂಕೆ ಫಲಿಸುವುದೆನ್ನ ಕೋರಿಕೆಯು ॥ ೫೫ ॥ ಮುಂದೆ ನಿಮಗೆವಿನಾಶವೊದಗುವು । ದಿಂದು ದುಶ್ಶಕುನಂಗಳೆಂತತಿ । ಚಂದದೊಳುಕಾಣುತಿಪ ವೀಲಂಕಾನಗರದೊಳಗೆ ॥ ಅಂದವಿಲ್ಲದೆ ಹೀನಕಾಂತಿಯು । ಹೊಂದುತೀಪುರವೆಲ್ಲ ರಕ್ಕಸ । ರಿಂದೆ ಹಾಳಾಗುವುದೆನುತ್ತಲೆ ನುಡಿದಳಾಸೀತೆ ॥ ೫೬ ॥ ಖಳನುಸಾಯಲು ಲಂಕೆಪತಿಯನು । ಕಳೆದ ಮಾನಿನಿಯಂತೆ ಶೋಕಿಸು । ತಳವುದೆಳ್ಳನಿತಿಲ್ಲನಗೆ ಸಂದೇಹವಿದರೊಳಗೆ ॥ ಬಳೆದಸಂಪದದಿಂದೆ ಸಲೆಕಂ । ಗೊಳಿಪ ಲಂಕೆಯು ರಕ್ಕಸರಸಹಿ । ತಲಯವಹುದತ್ಯನ್ನತಿಯ ಕಾರಣವಿನಾಶನಕೆ ॥ ೫೭ ॥ ಭರದೊಳೀಲಂಕೆಯಲಿ ದುಃಖಾ । ತರೆನಿಸುತಳುವ ರಾಕ್ಷಸಾಂಗನೆ । ಯರ ಮನೆಗಳೊಳು ರೋದನಧ್ವನಿಗಳನು ಕೇಳುವೆನು ॥ ಅರಿದರೆನ್ನನು ರಾವಣನ ಮಂ । ದಿರದೊಳಿರುವೆಂ ತೆನ್ನಗಂಡನು । ಶರಗಳಿಂದೀ ಸಕಲ

ರಾಕ್ಷಸರನ್ನು ವಧಿಸುವೆನು ‖ ೫೮ ‖ ಕತ್ತಲೆ ಕವಿದುಕೊಳ್ಳುವುದು ಮ
ನೆ | ವೆತ್ತ ಬಾಣಗಳಿಂದೆ ರಾಮನು | ಮತ್ತೆಮತ್ತೆ ಸುಡುತ್ತಿರಲುಲಂಕೆ
ಯನು ಕೋಪದಲಿ ‖ ಸತ್ತರಾಕ್ಷಸರಿಂದೆ ಲಂಕೆಯು | ಸುತ್ತಲುಂ ಕಾಂ
ತಿಯನುಳಿದು ತಾ | ನೆತ್ತಲುಂ ಸಲೆಭೀತಿಯನು ಮಾಡುತಿಹುದೆಲ್ಲರಿಗೆ
‖ ೫೯ ‖ ನನಗೆ ರಾವಣನಿತ್ತ ಗಡುವಿನ | ದಿನವುಬಂದುದು ಘೋರಪಾಪ
ಗ| ಳನೆಸಗುವರಾಕ್ಷಸರು ನೋಡರಕಾರ್ಯವೆಂಬುದನು ‖ ಮನುಜಭಕ್ಷಕ
ರೀಕ್ಷಿಸರು ಮೇ | ಲೆನಿಪ ಧರ್ಮವಿಚಾರಗಳ ವಧಿ | ಸೆನುತನಾಳೆಯೆ ನೇ
ಮಿಸುವೆನೀ ಖೂಳರಾವಣನು ‖ ೬೦ ‖ ಖಳರುಮಾಡಿದ ಧರ್ಮದಿಂದೀ |
ಗಲೆ ಮಹೋತ್ಪಾತಂಗಳೀ ಪುರ | ದೊಳಗೆ ಹುಟ್ಟುವುವಖಿಳ ರಾತ್ರಿಂ
ಚರರ ನಾಶನಕೆ ‖ ಹೊಳೆಹೊಳೆವ ರಕ್ತಾಂತನಯನಂ | ಗಳನು ತಾಳ್ದಾ
ರಘುವರನನಿಂ | ದುಳಿದು ಬದುಕುವೆನೆಂತೆನುತ್ತಳಲಿದಳು ಜಾನಕಿಯು
‖ ೬೧ ‖ ದನುಜರೊಳಗಾ ರಾದರುಸರಿಯೆ | ನನಗೆ ನಂಜನುತಂದು ಕೊ
ಟ್ಟರ | ದನು ಕುಡಿದುಸಾಯುವೆನು ಕೇಳರಿ ಖೂಳದನುಜೆಯರೆ ‖
ನನಗೆಗಂಡನನುಳಿದು ನಿಲ್ಲದು | ತನುವಿನೊಳು ಪ್ರಾಣಂಗಳೆನುತಾ | ಜನ
ಕಜಾತೆಯು ಶೋಕಿಸಿದಳೆಂದಾ ಮರದಕೆಳಗೆ ‖ ೬೨ ‖ ಧರೆಯೊಳಿಂದು
ಬದುಕಿರುವೆನ್ನನು | ಸರಸಿಜಾಕ್ಷನೆನಿಸುವ ರಾಘವ | ನರಿಯಲಿಲ್ಲವುತಿಳಿ
ದಿರಲು ತಾನೆನ್ನಹುಡುಕದೆಯೆ ‖ ಇರುವನಲ್ಲ ರಘುವರನೆನ್ನಯ | ವಿರ
ಹದಿಂದಲೆ ತೊರೆದುದೇಹವ | ಸುರರಲೋಕಕೆ ಹೋಗಿರುವನೆಂದೆಣಿಪೆ
ನಾನಿಂದು ‖ ೬೩ ‖ ಸುರರು ಸಿದ್ಧರು ತಾಪಸರು ಗಂ | ಧರುವರೆನ್ನಯ
ಗಂಡನಾಗಿಹ | ಸರಸಿಜಾಕ್ಷನೆನಿಸುವ ರಾಮನನಿಂದುನೋಡುವರು ‖ ನೆರೆ
ವಿಚಾರಿಸಲವರೆಧನ್ಯರು | ಪರಮ ಧರ್ಮಾತ್ಮನೆನಿಸುತಿಹಾ | ಪರಮಪುರು
ಷೋತ್ತಮನಿಗೆನ್ನಿಂದೇನು ಫಲವಿಹುದು ‖೬೪‖ ಪ್ರೀತಿತಾನಿಹುದೀಕ್ಷಿಸು
ತ್ತಿರ | ಲಾತೆರದೆ ನೋಡದಿರಲೀಧರ | ಶೀತಲದೊಳು ಸ್ನೇಹಮಿಲ್ಲದೆ ತ
ಪ್ಪಿಹೋಗುವುದು ‖ ನೀತಿಕೋವಿದ ನೆಂದೆನಿಪ ಸಾ | ಕೇತಪತಿ ರಾಮನು
ಳಿಯದಿರಲಿ | ಭೀತಿಯನುತಾಳುತ್ತಳಿಯಲಿ ಕೃತಘ್ನರವನಿಯೊಳು ‖
‖ ೬೫ ‖ ಗುಣಗಳಿಂದೇಂ ಫಲವಿಹುದು ಧಾ | ರುಣಿಯೊಳಾರಾಮನನು
ಬಿಟ್ಟನು | ದಿನವು ದುಃಖಿಸುವೆನಗೆ ಜೀವಿಪುದರೊಳು ಫಲವೇನು ‖
ಮನುಕುಲೇಂದ್ರನನುಳಿದು ಸಾಯುವು | ದೆನಗೆ ಭೂಮಿಯೊಳುತ್ತಮೋ
ತ್ತಮ | ವೆನುತಜಾನಕಿ ನುಡಿದಳಾದನುಜಾಂಗನೆಯರೊಡನೆ ‖ ೬೬ ‖
ಉಳಿದು ಶಸ್ತ್ರಾಸ್ತ್ರಂಗಳನು ವನ | ದೊಳಗೆ ಸಂಚರಿಸುತ್ತ ಭಕ್ಷಿಸಿ |

ಹಲವುಬಗೆ ಗಡ್ಡೆಗೆಣಸುಗಳನು ರಾಮಲಕ್ಷ್ಮಣರು ॥ ಅಳದರೋ ಓದು ಕಿರುವರೋ ವನ । ದೊಳು ದನುಜಪತಿಯಿಂದ ಮಡಿದರೊ । ಸಲೆಹು ಡುಕುತಿಹರೋ ಯೆನುತ ಗೋಳಿಟ್ಟಳಾಸೀತೆ ॥ ೬೭ ॥ ಮರಣವೇ ಶ್ರೇಷ್ಠತರವೆಂದೆನಿ । ಸಿರುವುದೆನಗಾ ಮೃತ್ಯುವೀಗಳೆ । ಬರುವುದಿಲ್ಲವು ಕಾಲವೀತೆರದಿಂದ ಪರಿಣಮಿಸೆ ॥ ನೆರೆದ ಸುಖದುಃಖಂಗಳೊಳು ತಾ । ವಿರಿಸಿ ಚಿತ್ತವನೊಂದೆ ತೆರದಿಂ । ದಿರುವತಾಪಸವರರು ಧನ್ಯರುವೇದಿನಿಯೊಳರಿಯೆ ॥ ೬೮ ॥ ಮುನಿಗಳು ಮಹಾತ್ಮರೆನಿಪರು ಮೇ । ದಿನಿಯೊಳಾತ್ಮಂಗಳನು ಜಯಿಸಿಹ । ರುನಿರತವು ಪಾಪಂಗಳನು ಪರಿಹರಿಸಿಕೊಂಡಿಹರು ॥ ಮನದೊಳಾ ಸುಖದುಃಖಗಳನನು । ದಿನದಲೊಂದೆಸವೆದಲಿ ನೋಡುವ । ಘನಮಹಾತ್ಮರಿಗೆರಗುವೆನು ನಾನಿಂದುವಿನಯದಲಿ ॥ ೬೯ ॥ ತೊರೆದುವಿದಿತಾತ್ಮನಹ ರಘುಕುಲ । ವರನನಾನಿಂದಿಂತು ದಶಕಂ । ಧರನಧೀನಕೆ ಸಿಕ್ಕಿದುಃಖಿಸುತನುದಿನವು ಬರಿದೆ ॥ ಹರಣವನುತಾಳ್ದ ಫಲವೇನೀ । ಪುರದೊಳೀಗಲೆ ಸಾಯುವೆನೆನುತ । ಧರಣಿಜಾತೆಯು ಪೇಳ್ದಳಾದನುಜಾಂಗನೆಯರೊಡನೆ ॥ ೭೦ ॥

ಇಂತು ಹದಿನೆಂಟನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೯೦೩

---

## ಹತ್ತೊಂಭತ್ತನೆಯ ಅಧ್ಯಾಯ.

ಸೂಚನೆ॥ ತ್ರಿಜಟೆಪೇಳ್ದ ಕನಸನಾಲಿಸು ।
ತ ಜನಕಜೆರೋದಿಸುತಿರಲು ಪವ ।
ನಜನೆರಗಿ ಪೇಳ್ದನು ರಘುಭೂವರನ ಸಂಗತಿಯ ॥

ಕೇಳಜಾನಕಿ ನುಡಿದನುಡಿಗಳ । ತಾಳಲಾರದೆ ರಾಕ್ಷಸಪತಿಗೆ । ಪೇಳಲೊಬ್ಬಳು ಪೋದಳೀ ತೆರನೆಲ್ಲವನುಕೂಡೆ ॥ ಆ ಲಲನೆಯರು ಮತ್ತೆಸೀತೆಗೆ । ಪೇಳ್ದರುಕಠಿನೋಕ್ತಿಗಳ ನಂ । ದಾಲಿಗಳೊಳುದುರಿಸುತ ಕೆಂಡಂಗಳನು ಕೋಪದಲಿ ॥ ೧ ॥ ಬಳಿಕ ಘೋರಾಕೃತಿಗಳನು ತಳೆ । ದಿಳೆಯೊಳೆಲ್ಲಾ ಮನುಜರಿಗೆ ಭಯ । ಗಳನು ಮಾಡುವ ರಕ್ಕಸಿಯರೈತಂದು ಜಾನಕಿಗೆ ॥ ಎಲೆಮಹೀಸುತೆ ಕೇಳು ನಿನ್ನನು । ಬಳಸಿಕೊಳ್ಳುತ ನಿನ್ನಮಾಂಸವ । ನೊಲಿದುತಿನ್ನುವೆವಿಂದು ರಕ್ಕಸರೆನುತ ಪೇಳ್ದರು ॥ ೨ ॥ ಈತೆರದೊಳಂಜುತ್ತ ಕೊರಗುವ । ಸೀತೆಯನು ಕಂಡಧಿಕತರ

ಸಂ । ಪ್ರೀತಿಯಿಂದಲೆ ನುಡಿದಳು ವಿಭೀಷಣನ ಮಗಳೆನಿಪ ॥ ನೀತಿ ಕೋವಿದೆಯಾ ತ್ರಿಜಟೆಯು ಮ । ಹಾತುರಂದಿ ಮಲಗಿರ್ದ ಸಮಯದ । ತಾತ್ರಿಳದ ಕನಸನ್ನು ವಿವರಿಸಿ ರಕ್ಕಸಿಯರೊಡನೆ ॥ ೩ ॥ ಎಲೆನಿಶಾಚರ ವನಿತೆಯರೆ ಮನ । ವೊಲಿದು ಕೇಳಿರಿ ಜಾನಕಿಯನಿಂ । ದುಳಿದು ನನ್ನನು ಭಕ್ಷಿಸಿರಿ ನಿಮ್ಮಿಚ್ಛೆಬಂದಂತೆ ॥ ಖಳರಿಗೆ ವಿನಾಶಕರವೆನಿಸು। ತ್ತಿಳೆಯುಮಗಳಿಗೆ ಸೌಖ್ಯದವೆನಿಸಿ । ಪೊಳೆವಕನಸನ ದೊಂದಕಂಡೆನು ಕೇಳಪೇಳುವೆನು ॥ ೪ ॥ ಧವಳವಸ್ತ್ರಂಗಳನು ಧರಿಸು । ತ್ತವನಿಜಾ ಲಕ್ಷ್ಮಣರೊಡನೆ ರಾ । ಘವನು ಸಾವಿರ ಹಂಸಪಕ್ಷಿಗಳಿಂದೆ ಶೋಭಿಸುತ॥ ತವಕದಿಂದೈತರ್ಪ ದಂತದ । ನವವಿಮಾನದ ಮಧ್ಯದಲಿಕುಳಿ । ತ ವಿರ ಳವಿಭವದಿಂದೆ ಮೆರೆದನು ಕೇಳಕನಸಿನೊಳು ॥ ೫ ॥ ಶ್ವೇತವಸ್ತ್ರಂಗ ಳನು ಧರಿಸಿಯೆ । ಸೀತೆ ರಾಘವನಂಕದೊಳು ಸಂ । ಪ್ರೀತಿಯಿಂದಲೆ ಕೂತುಕೊಂಡಾಜಲಧಿಮಧ್ಯದಲಿ ॥ ಖ್ಯಾತಿವಡೆದನವರತ ಮೆಸೆವಾ । ಶ್ವೇತಗಿರಿ ಶಿಖರದೊಳಗಿದ್ದವೊ । ಲೀತೆರದ ಕನಸೆನಗೆ ಬಂದುದು ರಾತ್ರಿ ನಿದ್ದೆಯಲಿ ॥ ೬ ॥ ಗಿರಿಗೆಸರಿಯೆಂದೆನಿಸಿ ಕಾಣುವ । ಕರಿಯಮೇಲೇ ರುತ್ತಭರತಾ । ವರಜಸಹಿತಾ ರಾಘವನು ಸಂಚರಿಸಿದನು ತಾನು ॥ ಧರಿಸಿ ಶುಕ್ಲಾಂಬರಗಳನು ತ । ನ್ನರಸಿತಮ್ಮಂದಿರ ಸಹಿತ ರಘು । ವರನುಕಂ ಗೊಳಿಸಿದನು ಮತ್ತಮದೇಭ ಕಂಧರದಿ ॥ ೭ ॥ ಪತಿಯುತೊಡೆಯಿಂದೆ ದ್ದುಧರಣೀ । ಸುತೆಕರಗಳಿಂ ಚಂದ್ರಸೂರ್ಯರ । ನತಿಹರುಷದೊಳು ಮುಟ್ಟುತಿದ್ದಳು ರಾಮಲಕ್ಷ್ಮಣರು ॥ ಕ್ಷಿತಿಸುತೆಸಹಿತ ವಾರಣವ ನಡ । ರುತ ಸುರೇಂದ್ರನ ನಗರಮೆಂದೆನಿ । ಸುತಿಹ ಲಂಕೆಯ ಮೇಲುಗಡೆ ತಾ ವಿದ್ದುದನುಕಂಡೆ ॥ ೮ ॥ ಬಿಳಿಯದೆಂದೆನಿಪಷ್ಟ ವೃಷಭಂ । ಗಳನು ಕ ಟ್ಟಿದ ರಥದೊಳಾ ರಘು । ಕುಲತಿಲಕ ರಾಘವನು ಜಾನಕಿ ಲಕ್ಷ್ಮಣರ ಸಹಿತ ॥ ಕುಳಿತುಕೊಂಡೀ ಲಂಕೆಗೈದಿದ । ವೊಲುನನಗೆ ಕಾಣಿಸಿದನು ಕನಸಿ । ನೊಳದು ಸತ್ಯವು ಕೇಳಮುಂದಿನ ವಿವರವನು ನೀವು ॥ ೯ ॥ ಸತಿಸಹೋದರರೊಡನೆ ರಾಘವ । ನತಿಹರುಷದಿಂದಾದಿವಾಕರ । ನ ತೆರ ದಿಂದೆ ವಿರಾಜಿಪ ವಿಮಾನದೊಳು ಕುಳ್ಳಿರ್ದು ॥ ಗತಿಯು ಜವದಿಂ ದು ತ್ತರದಕಡೆ । ಗೆ ತೆರಳದವೊಲ್ಕಂಡೆನು ಮಲಗಿ । ರುತ ವಿಭಾವರಿಯೆಂತ್ಯ ಕಾಲದ ಕನಸಿನೊಳು ನಾನು ॥ ೧೦ ॥ ಸುರರಲೋಕವು ಪಾತಕಿಗಳಹ। ಪುರುಷರಿಗಸಾಧ್ಯ ಮೆನಿಸುತ್ತಿಹ । ತೆರದೊಳಾರಾಮನನು ಸಂಗರ ರಂ ಗಮಧ್ಯದಲಿ ॥ ಸುರರು ಸಿದ್ಧರು ನರರು ರಾತ್ರಿಂ । ಚರರು ಯಕ್ಷರು

ಜಯಿಸಲಾರರು । ಭರಗೊಳ್ಳುತಂದೊಟ್ಟುಗೂಡುತ ತವ್ಮ ಪಡೆಯೊಡನೆ ॥ ೧೧ ॥ ದನುಜವಲ್ಲಭ ನರುಣವಸ್ತ್ರಗ । ಳನು ಧರಿಸಿ ಕೆಂಗಣಗಲೆಯ ಹೂ । ವಿನ ಸರಂಗಳ ತಾಳ್ದು ಹೆಂಡವಕುಡಿದು ತೈಲವನು ॥ ತನುವಿಗೆಲ್ಲ ಸವರಿಕೊಳುತ ವೇ । ದಿನಿಗೆ ಬಿದ್ದಂತೆನಗೆ ಕಾಣಿಸಿ । ದನು ಮಲಗಿ ನಿದ್ದಿಸುತಲಿರೆ ನಾನುದಯಕಾಲದಲಿ ॥ ೧೨ ॥ ಧರೆಗೆಬಿದ್ದನು ಪರವಿಮಾನದೊ । ಳಿರುತನಭದಿಂದಾ ದಶಾಸ್ಯನು । ಭರದೊಳೋರ್ವ ವನಿತೆಯು ಬಂದಾನಂದವನು ತಾಳ್ದು ॥ ಕರಿಯಬಟ್ಟೆಗಳನ್ನು ತಾಳು । ತ್ತ ರಜನೀಚರ ವಲ್ಲಭನನೀ । ಧರಣಿಯಿಂ ದೆಳದೊಯ್ದುತೆರದಿಂದೆನಗೆ ಕಾಣಿಸಿತು ॥ ೧೩ ॥ ಧರಿಸಿ ರಾಕ್ಷಸ ವಲ್ಲಭನು ತಾ । ನರುಣ ಪುಷ್ಪಂಗಳನು ಗಂಧವ । ನಿರದೆ ತೈಲವಕುಡಿದು ತನ್ನಯಮನದೆ ಭ್ರಮೆಗೊಂಡು ॥ ತರತರದ ನಾಟ್ಯಗಳನಾಡುತ । ಖರಗಳಂದೆಸೆದಿರ್ಪ ತೇರಿನೊ । ಳಿರುತ ತೆಂಕಣದೆಸೆಗೆ ಪೋದಂತೀಕ್ಷಿಸಿದೆ ಕನಸ ॥ ೧೪ ॥ ದನುಜಪತಿ ಗಾರ್ವಭವ ನೇರುತ । ವನಿಯೊಳಾ ದಕ್ಷಿಣದೆಸೆಗೆಪೋ । ದನಳುತತಿಭರದಿಂದೆ ಕಂಡೆನು ಕನಸಿನೊಳಗಿದನು । ಮನದೊಳತಿಭೀತಿಯನು ಹೊಂನುತ । ವನಿಗೆ ಬಿದ್ದನು ತಾನು ತಲೆಕೆಳ । ಗೆನಿಸುತಾಖರದಿಂದೆ ಕೇಳಿರಿ ಮುಂದಣಾ ಪರಿಯ ॥ ೧೫ ॥ ಮರುಳನಂತೆದ್ದು ಭ್ರಮೆಗೊಳ್ಳು । ತ್ತ ರಜನೀಚರ ವಲ್ಲಭನು ತಾ । ನಿರದೆಕೂಗುತ ತೊರೆದು ವಸ್ತ್ರವನಾಂತು ಭೀತಿಯನು ॥ ನರಕಕೆಣೆಯೆಂದೆನಿಸು ವತಿಭೀ । ಕರವನಾಗಿಸುತಂಧಕಾರದೊ । ಳಿರುವಮೇಧ್ಯದ ಕೆಸರಿನೋಳ್ಮುಳುಗಿದುದ ನೀಕ್ಷಿಸಿದೆ ॥ ೧೬ ॥ ಅರುಣ ವಸ್ತ್ರಂಗಳನು ತಾಳ್ದು ಕೆ । ಸರಿನಗಂಧವ ಸವರಿಕೊಳ್ಳುತ । ಕರಿಯಬಣ್ಣವ ನಾಂತವನಿತೆಯು ದೋರ್ವಳ್ಳುತಂದು ॥ ಭರದೊಳಾ ದಶಕಂಠನನು ತಾ । ನುರವಣಿಸಿ ಕಂಠದೊಳು ಬಂಧಿಸು । ತಿರದೆಳೆದು ಕೊಂಡೈದಿದಳು ದಕ್ಷಿಣದದಿಕ್ಕಿನಲಿ ॥ ೧೭ ॥ ನನಗೆತೋರಿದ ನಸುರವಲ್ಲಭ । ನನುಜನಾಗಿಹ ಕುಂಭಕರ್ಣನು । ಕನಸಿನೊಳು ರಾವಣನತೆರದಿಂ ದುದಯಕಾಲದಲಿ ॥ ದನುಜನಾಥನ ಮಕ್ಕಳೆಲ್ಲರು । ತನುವಿಗೆಣ್ಣೆಯ ಬಳೆದುಕೊಂಡಂ । ತೆನಗೆ ಕಾಣಿಸಿದರು ಮಲಗಿನಿದ್ದಿಸುತಲಿರೆ ನಾನು ॥ ೧೮ ॥ ಹಂದಿಯನು ತಾನೇರುತಾ ದಶ । ಕಂಧರನು ದಕ್ಷಿಣದೆಸೆಗೆ ಭರ । ದಿಂದೆಪೋದನು ಶಿಂಶುಮಾರವ ನಡರುತಿಂದ್ರಜಿತು ॥ ತಂದೆಯಂತಾ ಕಡೆಗೆಪೋದನು । ಹಿಂದೆಯುಷ್ಟ್ರವ ನಡರಿಕೊಂಡವ । ರಂದದಿಂದಲೆ ಕುಂಭಕರ್ಣನು ಪೋದನಾದೆಸೆಗೆ ॥ ೧೯ ॥ ಬಿಳಿಯಪೂಮಾಲೆಯ

ನು ಧರಿಸಿಯೆ | ಬಿಳಿಯ ಗಂಧವ ಲೇಪಿಸಿಕೊಳುತ | ಬಿಳಿಯಬಟ್ಟೆಗಳ ನು ಹೊದೆವುಕೊಂಡಾವಿಭೀಷಣನು || ಬಿಳಿಯದೆಂಡೆನಿಪಾನೆಯ ಕೊರಳ | ನೊಳು ಕುಳಿತುಮಂತ್ರಿಗಳ ನಾಲ್ವರು | ಗಳನಡುವೆ ರಂಜಿಸಿದ ತೂರ್ಯ ತ್ರಯದ ವಿಭವದಲಿ || ೨೦ || ದನುಜರೆಲ್ಲರು ಕೆಂಪುಬಟ್ಟೆಗ | ಳನು ಧರಿ ಸಿ ಕೆಂಪಾಗಿರುವ ಹೂ | ವಿನ ಸರಂಗಳನಾಂತು ಹೆಂಡವ ಕುಡಿದವೋಲಿ ನಗೆ || ಕನಸಿನೊಳು ಕಾಣಿಸಿದ ದೀಪುರ | ವು ನೆರೆಕಾಣಿಸಿತೆನಗೆ ಮನೆ ಗಳೊ | ಡನೆ ಮುರಿದ ಗೋಪುರಗಳಂ ದಬ್ಧಿಯೊಳಗಾಳ್ದಂತೆ || ೨೧ || ದನುಜನಾಥನ ಲಂಕೆಯನು ರಾ | ಮನ ಚರಣಸೇವಕನಹ ಕಪೀಂ | ದ್ರನು ದಹಿಸಿದಂತೆನಗೆ ಕಾಣಿಸಿತಿಂದು ಕನಸಿನಲಿ || ಮನವೊಲಿದು ತೈಲ ವನು ಕುಡಿದೀ | ದನುಜನಾರಿಯರೆಲ್ಲ ನರ್ತನ | ವನೆಸಗುತ ವಹ್ನಿಯೊ ಳುರಿದು ಪೋದಂತೆ ನೋಡಿದೆನು || ೨೨ || ತ್ರಿದಶಜಿತುವಾ ಕುಂಭಕ ರ್ಣನೆ | ಮೊದಲೆನಿಪಖಿಳ ದನುಜರೆಲ್ಲರು | ಹೊದೆದುಕೊಳ್ಳುತ ಕೆಂಪು ಬಟ್ಟೆಗಳ ನತಿಸಡಗರದಿ || ಹೆದರಿಕೊಂಡ್ಯೆತಂದು ದುರ್ಗಂ | ಧದ ಸಗಣಿ ಗರ್ತದೊಳು ಬಿದ್ದಂ | ತುದಯಕಾಲದ ಕನಸಿನೊಳು ಕಂಡೆನಿದನಾಲಿಪ್ರು ದು || ೨೩ || ಎಲೆನಿಶಾಚರ ವನಿತೆಯರೆ ನೀ | ವ್ಪೊಲಗಿ ದೂರಕೆ ನಾಶವ ಪ್ಪಿರಿ | ನೆಲದಣುಗಿಯನು ಸೇರುವನು ರಾಘವನು ಶೀಘ್ರದಲಿ || ತಳುವ ದೆಯೆ ಬಂದಪನು ರಾಮನು | ಮುಳಿದು ದನುಜರನೆಲ್ಲ ಯಮಪುರ | ದೊಳಗೆ ಸೇರಿಸಿ ಯಮನಿಗೌತಣವನ್ನು ಮಾಡುವನು || ೨೪ || ಬಿಡದೆ ಜಾನಕಿಯನ್ನು ಹಗಲಿರು | ಳಡಿಗಡಿಗೆ ನೋಯಿಸುವ ನಿಮ್ಮನು | ಬಿಡ ಸು ಸುಮ್ಮನೆ ರಾಮನೀಕೆಗೆ ಭಯವನಾಗಿಸದೆ || ಅಡಿಗೆರಗಿ ಸಂತವಿಸಿ ರಾತನ | ಮಡದಿಯನುನಾಂ ರಾತ್ರಿಯೊಳು ನಿ | ಮ್ಮೊಡನೆ ನಿದ್ದಿಸು ತಿವಿಧ ಕನಸುಗಳನು ನೋಡಿದೆನು || ೨೫ || ಇಂದುನಾ ನೀಕ್ಷಿಸಿದ ಕನ ಸುಗ | ಳಂದವನುವಿವರಿಸಿದೆ ನೆಲ್ಲವ | ಮುಂದೆ ಸಂತಸವೆಯ್ದಿ ಜಾನಕಿ ತನ್ನಪತಿಸಹಿತ || ಕುಂದದಾನಂದವನು ಪಡೆದಪ | ಳೆಂದುತಿಳಿದೀ ಸತಿ ಯ ಶರಣವ | ಹೊಂದಿಬದುಕಿರಿ ಪಗೆತನದಿ ನೀವ್ಕೆಟ್ಟುಪೋಗುವಿರಿ || || ೨೬ || ಮನುಕುಲೋತ್ತಮ ರಾಘವನ ಜಯ | ವನು ದಶಶಿರನ ನಾಶ ನವ ನೀ | ಜನಕಜಾತೆಯ ಭೀಷ್ಟವನು ನೋಡುವೆವು ಶೀಘ್ರದಲಿ || ದನುಜರೆಲ್ಲರು ನಾಶವಾಗುವ | ರಿನಕುಲತಿಲಕನಿಂದೆ ಕಾಣಿಸ | ವುನನಗೆ ವಿಲಕ್ಷಣಗಳೆಲ್ಲಿಯು ಸೀತೆಯಂಗದಲಿ || ೨೭ || ಜನಕಸುತೆಗಿಷ್ಟವ ನರು ಹಲೀ | ಕನಸೆ ಕಾರಣವಾಗಿರುವ್ರು ದೀ | ವನಿತೆಗಾ ರಾಘವನು ಮುಂದಿ

ರುವಂತೆ ತೋರ್ಪುದನು ॥ ವನದೊಳಂದು ನಮಗೆ ತಿಳುಹುವಂ । ತೆಸ ಹುಗುತ್ತಿಹ ವೀಕೆಯೆಡಗಡೆ । ಯ ನಯನವು ತೋಳು ತೊಡೆಗಳೆನುತ ಪೇಳ್ದಳಾ ತ್ರಿಜಟೆ ॥ ೨೮ ॥ ವಸುಮತೀಸುತೆ ಕೇಳ್ದು ರಾವಣ । ನುಸುರಿದಪ್ರಿಯ ವಚನಗಳ ದುಃ । ಖಿಸುತ ಗೋಳಾಡಿದಳು ಸಿಂಹವೆಕಂಡ ಕರಿಯಂತೆ ॥ ಅಸುರವಧುಗಳನಡುವೆ ಸಿಲುಕುತೆ । ಬಸವಳಿದು ಬೆಂಡಾಗಿಸಲೆ ರೋ । ದಿಸಿದಳಾ ಭೂಮಿಸುತೆ ಕಾಡೊಳು ಬಿಟ್ಟಣುಗಿಯಂತೆ । ॥ ೨೯ ॥ ಸಾವು ಬಾರದಕಾಲದೊಳೆನುತ । ಕೋವಿದರು ಪೇಳುವುದೆ ನಿಜ ವೀ । ರಾವಣನ ಮಂದಿರದೊಳಾ ರಾಮನನು ನಾನಗಲಿ ॥ ಜೀವಿಸಿರುವುದರಿಂದೆ ಸೌಖ್ಯವ । ನಾವಕಾಲಕೆ ನೋಳ್ಪ ನೆನಗೀ । ನೋವ ಪರಿಹರಿಸುವರ ದಾರೆನುತೆಂದಳಾಸೀತೆ ॥ ೩೦ ॥ ಪವಿಹತಿಗೆ ಸೀಳದ ಗಿರಿಶಿಖರ । ದವೊಲತಿಕಠಿನ ಮಾಗಿರುತ್ತಿಹು । ದವನಿಯೊಳು ನನ್ನೆದೆಯು ಜೀವಿಸಿಕೊಂಡಿಹುದರಿಂದ ॥ ಜವದೊಳೆನ್ನನು ದುರುಳರಾವಣ । ನು ವಧಿಸುವನೀ ಖೂಳನನು ನಾ । ನು ವರಿಸೆನು ನೋಡಿದೊಡೆ ದೋಷಗಳಿಲ್ಲನನ್ನೊಳಗೆ ॥ ೩೧ ॥ ನನ್ನಪತಿ ರಾಘವನು ಬರದಿರ । ಲೆನ್ನವಯವಂಗಳನು ರಾವಣ । ನಿನ್ನು ಕಡಿವನು ಗರ್ಭದೊಳಗಿಹ ಮಗುವಕಡಿವಂತೆ । ವಮುನ್ನತಾನೆನಗಿತ್ತ ವಾಯಿದೆ । ಯನ್ನು ತೀರಿಸಿಕೊಂಡು ತಸ್ಕರ । ನನ್ನು ಕೊಲುವಂತಸುರನಾಥನು ನನ್ನವಧಿಸುವನು । ೩೨ ॥ ಹಾರಮಣ ಹಾ ರಾಮ ಹಾರಣ । ಧೀರ ಹಾಸೌಮಿತ್ರಿ ರಿಪು ಸಂ । ಹಾರ ಹಾಕೌಸಲ್ಯೆ ಹಾಹಾ ಜನನಿಯೆನುತಾಗ ॥ ವಾರಿಧಿಯ ಮಧ್ಯದೊಳು ಜಂಝಾ । ಮಾರುತನಹತಿ ಗೊಡೆದನಾವೆಯು । ತೋರುವಂದದೆ ಸಾಯುವೆನೆನುತ್ತತ್ತಳಾಸೀತೆ ॥ ೩೩ ॥ ಮೃಗದರೂಪಿಂದಾ ನಿಶಾಚರ । ನಗಲಿಸಿಯೆ ಪತಿದೇವರರತಾಂ । ಪಗೆತನದಿ ಪೋದವನು ಕೊಂದಿರಬಹುದು ಕಾನನದೆ ॥ ಮೃಗದ ವೇಷವನಾಂತು ನನ್ನನು । ರಘುಕುಮಾರರ ಸನಿಹದಿಂ ತಾ । ನಗಲಿಸಿದವನೆ ಕಾಲಪುರುಷನೆನುತ್ತ ತಿಳಿದಿಹೆನು ॥ ೩೪ ॥ ಪತಿಯೆರಾಕ್ಷಸರಿಂದೆ ನನಗೆ ಬ । ರುತಿಹಸಾವನು ನೀನು ನೋಡದಿ । ರುತಿಹೆ ನಾನಾಚರಿಸಿದಂತಹ ಸಕಲಧರ್ಮಗಳು ॥ ಕ್ಷಿತಿಯೊಳು ವಿಫಲವೆಂದೆನಿಸಿದವು । ಪತಿಯಭಕ್ತಿಯು ರಕ್ಷಿಸದಿಹುದೆ । ನುತ ಮಹೀಸುತೆ ಬಾರಿಬಾರಿಗೆ ರೋದಿಸಿದಳಂದು ॥ ೩೫ ॥ ತಂದೆಯಪ್ಪಣೆಯಂತೆ ಸಂತಸ । ದಿಂದೆ ವನವಾಸವನೆಸಗಿ ಕಾ । ಡಿಂದಯೋಧ್ಯೆಗೆ ಹೋಗಿ ಸಕಲ ವ್ರತಗಳನುಮಾಡಿ । ಸುಂದರೀಮಣಿಯರೊಳು ಸೇರುತ । ವಮುಂದೆ ಸುಖಿಸುವೆ ಪತಿಯ

ದುಃಖವ । ನೊಂದಿದೆನಗಿನ್ನೇನುಗತಿಯೆಂದತ್ತಳವನಿಜೆಯು ॥ ೩೬ ॥ ಪತಿ
ಯೆನಿನ್ನೊಳು ಕಾಮವ ನನವ । ರತ ಮಿರಿಸುತೀ ಲಂಕೆಯೊಳು ದುಃ ।
ಖತತ್ರಿಯಿಂ ಕೊರಗುತ್ತ ಬಳಲುವೆ ನುಳದುಃಭೋಜನವ ॥ ಕ್ಷಿತಿಯೊಳ್
ನ್ನನು ನಿಂದಿಸಲು ಬೇ । ಕತಿಶಯದ ಪಾತಕಿಯು ನಾನೆನಿ । ಸುತಿಹೆ ಸಾ
ಯುವೆ ನೀಗಳೆಂದೆನುತತ್ತಳಾಸೀತೆ ॥ ೩೭ ॥ ವಿಷವ ನುಂಡಸುವೆನು
ಬಿಡಲೆನಗೆ । ವಿಷವನೀ ದನುಜಾಧಿಪನ ರಾ । ಜಸದನದೊಳೀವರನು
ಕಾಣೆನು ತಿಳದು ಯೋಚಿಸಲು ॥ ನಿಶಿತ ಕರವಾಳವನು ಕೊಂಡೆ । ನ್ನ
ಶಿರವನು ಛೇದಿಸುವೆ ನೆಂದೊಡೆ । ನಿಶಿಚರರೊಳೀರ್ವರು ಕೊಡರೆನುತ
ನೊಂದಳವನಿಜೆಯು ॥೩೮॥ ಏನಮೊಡಲಿ ಹಾಯೆನುತ್ತಾ । ಜಾನಕಿಯು
ಗೋಳಟ್ಟು ಮನದೊಳು । ಜಾನಿಸುತ ರಾಘವನ ನಂದೊಣಗಿದ್ದ ಮು
ಖದಿಂದೆ ॥ ನೇಣು ಹಾಕಿಕೊಳುತ ಬಿಡುವೆನು । ಪ್ರಾಣವನೆನುತ ಪಿಡಿ
ದು ಕೈಯೊಳು । ವೇಣಿಯನು ಹೂವಿಂದೆಸೆವ ಶಾಖೆಯನು ಸೇರಿದಳು ॥
॥ ೩೯ ॥ ಸಕಲವಿಧದಿಂದೆ ತಪಿಸುತ್ತ ಜ । ನಕಸುತೆ ಶಮಿಾ ಶಾಖೆಯನು
ತ । ನ್ನ ಕರದಿಂದೆ ಪಿಡಿದುರೆ ಗೋಳಿಡುತಂದುಚಿತ್ತದಲಿ ॥ ಪ್ರಕಟಮ
ತಿಯಿಂದಾ ರಘುವರನ । ನುಕುಲವನು ಸೌಮಿತ್ರಿಯನು ನೆನೆ । ದುಕೊ
ಳುತಿರೆ ಶುಭಶಕುನಗಳು ತೋರಿದವು ಜಾನಕಿಗೆ ॥ ೪೦ ॥ ಎಡದಕಣ್ಣಾದಿ
ರಿತವನೀಸುತೆ । ಗೆಡದ ತೋಳುತೊಡೆಗಳು ಶುಭಮೆನೆ । ನಡುಗಿದವು
ರಾಘವನು ಮುಂದಿರುವುದನರುಪುವಂತೆ ॥ ಪೊಡವಿಯಣುಗಿಯಸೀರೆಕಂ
ಪಿಸಿ । ತೊಡನೆ ಸಂತಸವಾದುದಾಕೆಗೆ । ಪೊಡವಿಯೊಳಣುಗಿ ದಾಮರ
ಚಿಗುರಿದಂತೆಮಳೆಯಿಂದೆ ॥೪೧॥ ಸುಖಕೆಕಾರಣಮೆಂದೆನಿಪಶುಭ । ಶಕುನ
ಗಳನೀಕ್ಷಿಸುತಚಿತ್ತದೊ । ಳುಕಡುಧೈರ್ಯವನಾಂತುಬೇಗನೆಕಳೆದುದುಃಖ
ವನು ॥ ಸಕಲಕಳೆಗಳನಾಂತ ಶಶಿಯಿಂ । ದೆ ಕಡುಬೆಳಗುವರಾತ್ರಿಯಂ
ತೆಜ । ನಕಸುತೆವಿರಾಜಿಸುತಲಿದ್ದಳು ತನ್ನ ಮುಖದಿಂದ ॥ ೪೨॥ ಹನುಮ
ನಾ ರಕ್ಕಸಿಯರಾಡುತಿ । ಹನುಡಿಗಳನಾ ಜಾನಕಿಯು ರೋ । ದನವನಾ
ತ್ರಿಜಟಾಕನಸುಗಳ ಪರಿಯನಾಲಿಸುತ ॥ ಜನಕಜಾತೆಗೆ ರಾಮನಕುಶಲ ।
ವನರುಹುವೆ ನಿಲ್ಲದಿರಲಿಂದಸು । ವನು ಬಿಡುವಳೆಂದೆನುತ ಪೇಳ್ದನು ರಾ
ಮಚರಿತವನು ॥ ೪೩ ॥ ಕೇಳುಸೀತೆಯೆ ದಶರಥ ಮಹೀ । ಪಾಲನೋ
ರ್ವನು ಧರಣಿಯೆಲ್ಲವ । ನಾಳುತಿದ್ದನು ಧರ್ಮದಿಂದವನಸುತ ರಾಘವನು ॥
ಕೇಳತಂದೆಯ ಮಾತನಡವಿಗೆ । ಲೀಲೆಯಿಂದೈತಂದ ನಂದುವಿ । ಶಾಲ
ಲೋಚನೆ ಸೀತೆಲಕ್ಷ್ಮಣರೊಡನೆ ಪುರದಿಂದ ॥ ೪೪ ॥ ಬಂದುದಂಡಕ ವ

ನದೊಳಿರಲ್ಕೆ । ತಂದುರಾವಣ ನಾತನರಸಿಯ । ನಂದುವಂಚಿಸಿಕೊಂಡು ಬಂದನು ತನ್ನಪಟ್ಟಣಕೆ ॥ ಇಂದುವದನೆಯ ಹುಡುಕುತಾ ರಘು । ನಂದನನು ತಮ್ಮನಸಹಿತ ಕಿ । ಷ್ಕಿಂಧೆ ಗೈತಂದನುಕಬಂಧನ ಮಾತನಾಲಿಸುತ ॥ ೪೫ ॥ ತರಣಿಸುತ ಸುಗ್ರೀವನಿಂದೆ ದ । ಶರಥನಸುತನು ಸಖ್ಯವನೆಸಗು । ತ ರಣದೊಳು ವಾಲಿಯನು ಕೊಂದಾ ತಪನತನಯಂಗೆ ॥ ಅರಸುತನವನುಕೊಟ್ಟು ಸೀತೆಯ । ನರಸಲಟ್ಟಿದನಾ ಕಪೀಂದ್ರರ । ನಿರದೆಯೋಚಿಸಿ ನಾಲ್ಕುದಿಕ್ಕುಗಳಿಗತಿಶೀಘ್ರದಲಿ ॥ ೪೬ ॥ ಹುಡುಕುತಾ ಸಂಪಾತಿಪೇಳಿದ । ನುಡಿಯನಾಲಿಸಿ ನಾನುಲಂಘಿಸಿ । ಕಡಲ ನಾತನರಾಣಿಯೆನಿಸುವ ನಿನ್ನನೋಡಿದೆನು ॥ ಕಡುಗಲಿಗಳಹ ರಾಮಲಕ್ಷ್ಮಣ । ರೊಡನೆ ಲಂಕೆಗೆ ಬರುತಿಹರು ಕೇ । ಳ್ಪಡೆಯ ನೊಡಗೊಂಡವರು ಕುಶಲವೆನುತ್ತಪೇಳಿದನು ॥ ೪೭ ॥ ಸೀತೆಸಂತಸದಿಂದೆ ಕೇಳ್ದಾ । ಮಾತುಗಳನಂದಿರದೆ ನೋಡಿದ । ಳಾತರುವಿನೊಳು ಕುಳಿತುಕೊಂಡಿಪ್ಪ ಮಾರುತಾತ್ಮಜನ ॥ ಭೀತಿಗೊಂಡಿದು ಕನಸೆನುತ ಭೂ । ಜಾತೆ ಯೋಚಿಸಿ ದೇವತತಿಯನು । ತಾತ್ರಿಳದು ಬೇಡಿದಳು ಮಂಗಳವಾಗಲೆಂದೆನುತ ॥ ೪೮ ॥ ಪರಮಭಕ್ತಿಯೊಳಾ ಮಹೀಸುತೆ । ಹರಿಹರ ವಿರಂಚಿ ರವಿಗಳಿಗಂ । ದೆರಗಿ ಬೇಡಿದಳಾ ರಘೂದ್ವಹ ಲಕ್ಷ್ಮಣರಿಗಿಂದು ॥ ಭರದೊಳಾಗಲಿ ಶುಭಗಳೀದಿನ । ದಿರುಳುಕಂಡೆನು ಕನಸಿನಲಿ ವಾ । ನರನನಿದು ಶುಭವಲ್ಲವೆನ್ನುತ ಬುಧರುಪೇಳುವರು ॥ ೪೯ ॥ ಹಗಲಿರುಳು ನಿದ್ದೆಯನುಮಾಡದೆ । ನಗೆ ಕನಸದೆಲ್ಲಿಬಹುದುಬಿಡದೆ । ರಘುವರನ ಜಾನಿಸುತಿಹುದರಿಂ ದಾತನಾಕಥೆಯ ॥ ಸೊಗಸಿನಿಂ ದಾಲಿಸಿದೆ ನೆನ್ನುಬ । ಳಗಸುರೇಂದ್ರನು ಬಂದುಪೇಳಿದ । ನು ಘನವಾನರ ರೂಪದೊಳೆನುತ ತಿಳಿದಳಾಸೀತೆ ॥ ೫೦ ॥

ಇಂತು ಹತ್ತೊಂಭತ್ತನೆಯ ಅಧ್ಯಾಯ ಸಂಪೂರ್ಣವು ಪದ್ಯಗಳು ೯೫೩.



## ಇಪ್ಪತ್ತನೆಯ ಅಧ್ಯಾಯ.

ಸೂಚನೆ ॥ ಸೀತೆಗೆತಿಳುಹಿ ರಾಮನಿರವನು ।
ಪ್ರೀತಿಯಿಂ ದಿತ್ತುಂಗರವ ನಾ ।
ಮಾತರಿಶ್ವನ ತನಯಕೊಂಡನು ವರ ಶಿರೋಮಣಿಯ ॥

ಮರುತನಾಮಗ ನಿಳದುಬನ್ನಿಯ । ಮರದಮೇಲಿಂ ದಧಿಕಭಕ್ತಿ

ಯೊ । ಳೆರಗಿಸೀತೆಯ ಚರಣಪಂಕಜ ಕಂದುನುಡಿಸಿದನು ॥ ಗರುಡಕಿ ನ್ನರ ಯಕ್ಷರಾಕ್ಷಸ । ಸುರನರೋರಗ ಮಾನಿನೀಮಣಿ । ಯರೊಳಗಾರೆ ಲೆತಾಯೆ ಪೇಳ್ವುದುನನಗೆ ನೀನೆನುತ ॥ ೧ ॥ ನಿನಗೆ ಪತಿಯಾರಮ್ಮ ನಿ ನ್ನಸು । ತನ ಪೆಸರದೇನಮ್ಮ ಯಾವುದು । ನಿನಗೆವಾಸಸ್ಥಳವು ಪೇಳು ವುದೆನಗೆ ನೀನಿವನು ॥ ದನುಜರಾವಣ ನಡವಿಯೊಳು ರಾ । ಮನನುವಂ ಚಿಸಿಕೊಂಡು ಬಂದಾ । ಜನಕಜಾತೆಯೆ ನೀನು ಹಾಗಿರಲೆನಗೆ ಪೇಳಂ ದು ॥ ೨ ॥ ದೀನತೆಯನಾಂ ತಿರುವನಿನ್ನನು । ಮಾನುಷ ಸ್ತ್ರೀಯೆನುತ ತಿಳಿವೆನು । ನೀನುರಾಮನ ಪತ್ನಿಯೆನ್ನುತ ತಿಳಿವೆನೆಂದೆನಲು ॥ ಜಾನಕಿ ಯು ಕೇಳ್ದನುಡಿಗಳನು । ತಾನುಪೇಳಿದ ಳಂದಿರದೆ ಪವ । ಮಾನತನ ಯಂಗೊಡನೆತನ್ನಯ ವಿವರವೆಲ್ಲವನು ॥ ೩ ॥ ರಾಯದಶರಥನ ಸೊಸೆಯು ಜನಕ । ರಾಯನ ಮಗಳುನಾನು ಕಮಲದ । ಳಾಯತಾಂಬಕ ರಾಮನ ಮಡದಿ ಸೀತೆಯೆಂದೆನುತ ॥ ಈ ಯವನಿಯೊಳು ಕರೆವರೆನ್ನನು । ರಾ ಯರಾಘವನಿಂದ ಹೊಂದಿದೆ । ನಾ ಯಯೋಧ್ಯೆಯೊಳಖಿಳ ರಾಜಸು ಖಂಗಳೆಲ್ಲವನು ॥ ೪ ॥ ಪತಿಯೊಡನೆ ಹನ್ನೆರಡು ವರ್ಷ ಮಿ । ರುತಿರಲಾ ದಶರಥ ಮಹೀವರ । ನು ತವಕದೊಳು ರಾಮನಿಗೆ ಪಟ್ಟಾಭಿಷೇಕವ ನು ॥ ಕ್ಷಿತಿಯೊಳಾಗಿಸ ಬೇಕೆನಲವನಿ । ಪತಿಯನಂದಾ ಕೈಕೇಳಿದ । ಳು ತನಗಿತ್ತ ವರಂಗಳೆರಡನು ಕೊಡುವುದೆಂದೆನುತ ॥ ೫ ॥ ಒಂದರಲಿ ಭರತಂಗೊಡೆತನವ । ನಿಂದು ಕೊಡುವುದು ಪತಿಯೆ ಕೇಳ್ಮ । ತ್ತೊಂದ ರಲಿ ಹದಿನಾಲ್ಕು ವತ್ಸರತನಕ ರಾಮನನು ॥ ಇಂದೆ ಕಾಡಿಗೆ ಕಳುಹಬೇ ಕೆನ । ಗಿಂದು ಕೊಡದಿರಲಿವನು ನಿನ್ನಯ । ಮುಂದೆಸಾಯುವೆ ನೆನುತ ಹಟವನು ಮಾಡಿದಳು ಕೈಕೆ ॥ ೬ ॥ ವನಕೆಪೋಗೆನುತಾ ದಶರಥ ನೃ । ಪನುನುಡಿಯಲಾ ರಾಘವನು ಬಂ । ದನು ಸತಿಸಹೋದರರ ಸಹಿತಾದಿನ ವೆ ಕಾನನಕೆ ॥ ಮುನಿಗಳಂದದೆ ದಂಡಕಾವನ । ದನಡುವಿರಲಾ ರಾಮ ಲಕ್ಷ್ಮಣ । ರನು ದಶಶಿರನು ವಂಚಿಸೆನ್ನನು ತಂದನೀಪುರಕೆ ॥ ೭ ॥ ವರಿ ಸಬೇಕೆನುತೆನಗೆ ಕೊಟ್ಟಿಹ । ನೆರಡುತಿಂಗಳ ಗಡುವನಾದಶ । ಶಿರನು ನಾನಾಬಳಿಕ ಸಾಯುವೆನೆಂದು ತಿಳುಹಿಸಲು ॥ ಪರಮಸಂತಸ ದಿಂದೆ ಕೇಳುತ । ಧರಣಿಜಾತೆಯ ಮಾತುಗಳನಾ । ವರಕಪೀಶ್ವರ ನಂದುಸೀತೆ ಗೆ ಮತ್ತೆ ಪೇಳಿದನು ॥ ೮ ॥ ರಾಮದೂತನು ನಾನುಬಂದಿಹೆ । ನಾಮನು ಕುಲೋತ್ತಮನ ಕಡೆಯಿಂ । ದೀ ಮಹೋದಧಿಯನ್ನು ಲಂಘಿಸಿ ಭರದೆ ನಿನ್ನೆಡೆಗೆ ॥ ಕ್ಷೇಮದಿಂದಿಹನಾ ರಘೂದ್ವಹ । ರಾಮನನುಜನು ಕುಶಲ

ದಿಂದಿಹ । ನಾ ಮಿಹಿರಸುತ ನೆನ್ನ ಕಳುಹಿದ ನಿನ್ನ ಹುಡುಕಲ್ಕೆ ॥ ೯ ॥
ನಿನಗೆ ವಂದನೆಗಳನು ಹೇಳೆನು । ತನಗೆ ಹೇಳದನಾ ಸುಮಿತ್ರೆಯು । ತ
ನುಜನಾ ರಾಘವನ ಹತ್ತಿರದಿಂದೆ ಬಂದಿಹೆನು ॥ ನಿನಗೆಸಂಶಯಬೇಡ ರ
ಘುನಂ । ದನರು ನಿನ್ನನಿಮಿತ್ತದಿಂ ದುರೆ । ಮನದಿ ಕುಂದಿಕೊರಗುತ
ಹುಡುಕುತ್ತಿಹರು ಸಂತತವು ॥ ೧೦ ॥ ವೇದವೇದ್ಯ ನೆನಿಸುವ ರಾಘವ ।
ನಾ ದಿವಾಕರ ಸುತನಭೀಷ್ಟವ । ನಾದರದೊಳಾಲಿಸುತ ನಾಲ್ದೆಸೆಗಳಿಗೆ
ಶೀಘ್ರದಲಿ ॥ ಮೇದಿನಿಯೊಳಹ ವಾನರೇಂದ್ರರ । ನಾದರಿಸಿ ಕಳುಹಿದನು
ಸೀತೆಯು । ನೀಧರಣಿಯೊಳು ಹುಡುಕಬೇಕೆನುತ್ತಿತ್ತು ವಾಯಿದೆಯು ॥
॥ ೧೧ ॥ ಜನಕನಂದನೆ ಕೇಳು ರಘುನಂ । ದನನು ನಿನ್ನನು ನೋಡಿ
ಕೊಂಡಾ । ತನಬಳಿಗೆ ಬರುವಂತೆ ನನ್ನನು ಕಳುಹಿಸಿದನೆನಲು ॥ ಹನು
ಮನಾಡಿದ ಮಾತುಗಳ ನಾ । ವನಿತೆಕೇಳುತ ತಳೆದುಸಂತಸ । ವನು
ಮನದೊಳಂದಂದುಕೊಂಡಳು ವನದಮಧ್ಯದಲಿ ॥ ೧೨ ॥ ಜೀವಿಸಿದ್ದರೆ
ನೂರು ವರ್ಷಗ । ಳಾವಕಾಲದೊಳಾದೊಡೆಯುನರ । ನೀ ವಸುಧೆಯೊ
ಳು ಸಂತಸವ ನೈದುವನು ತಾನೆನುತ ॥ ಕೋವಿದರು ಪೇಳರುವ ಗಾಥೆ
ಯು । ಭಾವಿಸಲು ಸತ್ಯಮೆನಿಸಿಹುದೆಂ । ದಾವನಿತೆ ತಾನಂದುಕೊಂಡ
ಳು ತನ್ನಮನದೊಳಗೆ ॥ ೧೩ ॥ ಬಳಿಗೆಬರಲಾ ಪವನಸಂಭವ । ನಿಳೆ
ಯನಂದನೆ ದೂರಕೈದುತ । ತಿಳಿದು ವಾನರರೂಪವನುತಾಳ್ದ ದಶಕಂಧರ
ನು ॥ ಬಳಿಗೆಬಂದಿಹ ನೆನುತ ಕೊಂಬೆಯ । ನುಳಿದುಮನಗೊಳು ಮು
ತ್ತದುಃಖವ । ತಳೆದುರೋದಿಸಿ ಕೂತುಕೊಂಡಳು ನೆಲದೊಳೊಂದುಕ
ಡೆ ॥ ೧೪ ॥ ಧರಣಿಜಾತೆಯು ಚರಣಪಂಕಜ । ಕೆರಗಲಾ ಹನುಮಂತನಾತ
ನ । ಕುರಿತೆಳೆ ದಶಗ್ರೀವ ನೀನಾಪಂಚವಟಿಗೆಯ್ದಿ ॥ ಭರದೆವಂಚಿಸಿ ಭಿ
ಕ್ಷುರೂಪದೊ । ಳರದೆನನ್ನನು ತಂದುದಲ್ಲದೆ । ತಿರುಗಿಮತ್ತೀತಕ್ಕೆ ಹೆವ
ರಿಪೆ ಕಾಮರೂಪದಲಿ ॥೧೫॥ ಮನುಜಭಕ್ಷಕ ಕೇಳುನೀನಾ । ದನುಜ
ವಲ್ಲಭನಲ್ಲದಾ ರಾ । ಮನಿಗೆ ಸೇವಕನಾಗಿ ವಾನರನೆನಿಸಿಕೊಂಡಿರಲು ॥
ನಿನಗೆಮಂಗಳವಾಗಲಾ ರಾ । ಮನಗುಣಂಗಳ ತಿಳುಹುನೀ ನಿಂ । ದೆ
ನಗೆಕಂಡೆನು ರಾಮಲಕ್ಷ್ಮಣರನ್ನು ಕನಸಿನಲಿ ॥ ೧೬ ॥ ವಾನರನ ನೋ
ಡಿದೆನು ಕನಸಿನೊ । ಳಾನು ಕನಸಿದೆನಿಸದು ನಿದ್ದೆಯು । ನಾನದನನಗೆ
ಕನಸುಬಪ್ಪುದೆ ಮರಳುತನವೆನಲು ॥ ನಾನು ಹುಚ್ಚಳೆನಿಸೆನು ಹಾ
ಹಾ । ಏನಮಾಡಲೆನುತ್ತ ನುಡಿಯದೆ । ಜಾನಕಿಕೊರಗುತ್ತಿದ್ದಳಾ ವನ
ದಲ್ಲಿ ದುಃಖಿಸುತ ॥ ೧೭ ॥ ಈ ತೆರದೊಳುರೆ ದುಃಖಿಪ ಜನಕ । ಜಾತೆ

ಯೆನು ಕಂಡೆರಗಿಪೇಳದ । ನಾತಪನಸುತ ಸಚಿವ ರಾಘವನೊಡನರಣ್ಯಾ ವಲಿ ॥ ಪ್ರೀತಿಯಿಂದಿಹ ನಿನ್ನ ನಿಲ್ಲಿಗೆ । ಮಾತನಾಡಿಸಿ ತಂದಿಹನದರ । ಹೇ ತುವಿಂದಾ ರಾವಣನಿದರ ಫಲವೆಹೊಂದುವನು ॥ ೧೮ ॥ ಸುರವಿರೋಧಿ ದಶಾಸ್ಯನನು ಮುಂ । ದೆರಣದೊಳಗಾ ರಾಘವನು ಸಂ । ಹರಿಸುವ ನವ ನಬಂಧು ವರ್ಗದಸಹಿತ ಕಡುಮುಳಿದು । ಭರದೊಳಾ ರಾಮನನುನೋ ಡುವೆ । ಶರಧಿಯನು ಲಂಘಿಸುತಬಂದಿಹೆ । ನು ರಘುನಾಥನ ಸನಿಹದಿಂ ದೆನುತೆರಗಿ ಪೇಳದನು ॥೧೯॥ ಅಗಲಿನಿನ್ನನು ದುಃಖಿಸುವನಾ । ರಘುವ ರೇಣ್ಯನು ತನ್ನ ಸುಖವನಿ । ನಗೆ ತಿಳುಹಿಸೆಂದೆನುತ ಪೇಳದ ನಮ್ಮ ಜಾ ನಕಿಯೆ ॥ ಮುಗಿದುಕೈಗಳ ಶಿರವಬಾಗಿ ನಿ । ನಗೆ ನಮಸ್ಕಾರಂಗಳನ ಡಿಗ । ಡಿಗೆ ತಿಳುಹೆನುತ ಲಕ್ಷ್ಮಣನೊಲಿದು ಪೇಳದನುನನಗೆ ॥ ೨೦ ॥ ತರಣಿಸುತ ಸುಗ್ರೀವನಾ ರಘು । ವರನಿಗೆ ಸ್ನೇಹಿತ ನೆನಿಸಿಕೊಂ । ಡಿರು ವನಾತನು ನಿನಗೆ ಕುಶಲವನರುಹಬೇಕೆನುತ ॥ ಪರಮಸಂತಸದಿಂದೆ ಪೇಳ್ದ ನ । ವರುಗಳನ್ನನು ಕಳುಹಲೈತಂ । ದಿರುವೆನಿಲ್ಲಿಗೆನುತ್ತ ಸೀ ತೆಗೆ ಪೇಳ್ದನಾ ಹನುಮ ॥ ೨೧ ॥ ಸ್ಮರಿಸುವನು ಸೌಮಿತ್ರಿ ಸುಗ್ರೀ । ವರುಸಹಿತ ರಾಘವನು ನಿನ್ನನು । ನಿರತವುಜಿಡದೆ ದೈವಯೋಗದೆ ದನು ಜನಾರಿಯರ ॥ ನೆರವಿಬೊಳುನೀಂ ಸಿಕ್ಕಿಬದುಕಿಹೆ । ಧರಣಿನಂದನೆ ಕೇ ಳು ನೀನತಿ । ಭರದೊಳೀಕ್ಷಿಪೆ ರಾಮಲಕ್ಷ್ಮಣ ಸೂರ್ಯಪುತ್ರರನು ॥ ॥ ೨೨ ॥ ನಾನು ರವಿಜನಮಂತ್ರಿ ನೀನನು । ಮಾನವನು ಬಿಡು ನಿನ್ನ ನೋಡಲು । ದಾನವೇಂದ್ರನ ಲಂಕೆಗೈತಂದಿಹೆನೆನಲು ಕೇಳ್ದು ॥ ಮಾನಿ ನೀಮಣಿ ಸೀತೆನುಡಿದಳು । ವಾನರೇಂದ್ರನೆ ರಾಘವನೊಡನೆ । ನೀನು ಸ ಖ್ಯವನೆಂತುಮಾಡಿದೆ ವನದೊಳಂದೆನುತ ॥ ೨೩ ॥ ನೀನು ಲಕ್ಷ್ಮಣ ನೆಂತು ತಿಳಿದಿಹೆ । ವಾನರನರರಿಗೆಂತು ಸಖತನ । ಕಾಣಿಸಿತು ರಾಘವ ನ ಲಕ್ಷಣಗಳನು ನನಗಿಂದು ॥ ನೀನರುಹು ಲಕ್ಷ್ಮಣನ ಚಿಹ್ನೆಗ । ಳೀ ನು ತಿಳಿಸೆಂದನಿಲ ಸುತನನು । ಜಾನಕಿಯು ಕೇಳದಳು ಸಂತೋಷವ ನು ತಾಳ್ದೊಡನೆ ॥ ೨೪ ॥ ಧರಣಿಸುತೆ ಕೇಳಾರಘುವರನು । ಸರಸಿಜಾಕ್ಷ ನೆನಿಪನು ಬೆಳಗುವ । ನುರವಿಯಂದದೆ ಸರ್ವಕಾಲವು ವಿನುತಬುದ್ಧಿ ಯೊಳು ॥ ಸುರಗುರುವಿಗೆ ಸಮಾನನೆನಿಪನು । ಧಳೆಗೆಣೆಯೆನಿಪನು ಕ್ಷಮೆ ಯೊಳಗ । ಮರಪತಿಗೆ ಸಮನೆಂದೆನಿಪ ನುರುತರದ ಕೀರ್ತಿಯಲಿ ॥ ೨೫॥ ಪೊರೆವನೆಲ್ಲರ ನವನಿಯೊಳು ನಂ । ಟರನು ಸಲಹುತ್ತಿಹನು ಸಾಧುಜ । ನರಿಗುಪಕೃತಿಗಳನು ಮಾಳ್ಪನು ರಾಜವಿದ್ಯೆಗಳ ॥ ಅರಿತಿಹನು ಧರ್ಮ

ಷ್ಯನವಸೀ । ಸುರರ ಸೇವಿಸುತಿಹನು ನಿತ್ಯವು । ನೆರೆಸಲಹುವನು
ಲ್ಕು ವರ್ಣಾಶ್ರಮದ ಮನುಜರನು ॥ ೨೬ ॥ ವೇದ ವೇದಾಂಗಂಗ
ವ ॥ ನಾದಿಯಿಂ ತಿಳಿದಿರ್ಪನು ಧನು । ರ್ವೇದದೊಳತಿ ವಿಶಾರದನೆ
ಕೊಂಡಿಹನು ತಾನು ॥ ಈ ಧರಣಿಯೊಳು ಶೀಲಯುತನಹ । ನಾ
ಕರಕುಲ ಲಲಾಮನ । ನಾದಿಯಿಂದಲೆ ರೂಪದಾಕ್ಷಿಣ್ಯ ಯುತನಾಗಿಹ
॥ ೨೭ ॥ ಕಾಲದೇಶಂಗಳ ನರಿತಿಹ ವಿ । ಶಾಲವಕ್ಷಸ್ಥಳನು ಪಿರಿದ
ತೋಳುಗಳನಾಂತಿಹನು ಶುಭ್ರಮುಖವನು ತಳೆದಿಹನು ॥ ಮೇಲ
ಸತ್ಯದೊಳು ನಿರತನು । ಕೇಳು ರಾಮನು ಕಂಬುಕಂಠನು । ಲೆ
ನೆನಿಪನು ನಿಗ್ರಹಾನುಗ್ರಹಗಳೆರಡರಲಿ ॥ ೨೮ ॥ ಗುಣದೊಳನು
ದೊಳು ರೂಪದೊ । ಳನವರತನಾ ರಾಮನಂತಿರು । ವನು ಸುವಿ
ಯತನಯನಾ ಲಕ್ಷ್ಮಣನು ಧರಣಿಯಲಿ ॥ ಜನಕಸುತೆ ಕೇಳಾತ
ರಾ । ಮನೊಡನಾ ಕೌಸಲ್ಯೆ ಪೊರೆದಳು । ಮನವೊಲಿದು ವಿಶ್ವಾಸ
ಲೆ ರಾಮನಂದದಲಿ ॥ ೨೯ ॥ ಅಡವಿಯೊಳಗಾ ರಾಮಲಕ್ಷ್ಮಣ ।
ಡಿಗೆ ತಾವಿರದೆ ನಿನ್ನನು । ಹುಡುಕುತಾ ಸುಗ್ರೀವನೆಡೆಗೈತಂದರತಿ
ದೆ ॥ ಒಡನೆರವಿಸುತ ದಶರಥ ಸುತರಿ । ಗೊಡರಿಸಿತು ಸಖತನವು
ರ । ರೊಡೆಯ ತೋರಿದ ನಿನ್ನೊಡವೆಗಳ ನಾರಘುವರಂಗೆ ॥ ೩
ಕೊಂದುವಾಲಿಯ ನಾದಿವಾಕರ । ನಂದನಂಗೊಡೆತನವ ಕೊಟ್ಟ
ನಂದುರಾಘವನವರ ದೂತನೆನುತ್ತ ಚಿತ್ತದಲಿ ॥ ಇಂದುನೀಂತಿಳಿ
ನಾರವಿ । ನಂದನನು ಕಳುಹಿಸಿದ ನರಸ । ಲ್ಕೆಂದು ನಿನ್ನನು ನಾ
ದೆಸೆಗಳಿಗಖಿಳ ಕಪಿವರರ ॥ ೩೧ ॥ ಅಂಗದನೊಡನೆ ವಿಂಧ್ಯನಗದೊ
ಸಂಗಳಿಸಿ ಹುಡುಕುತಿರೆ ನಿನ್ನನು । ತಿಂಗಳನವಧಿ ಕಳೆದುಪೋದುದ
ಳಕನಾವೆಲ್ಲ ॥ ಕಂಗೊಳಿಪ ಗುಹೆಯಿಂದೆ ವನಧಿಯ । ಮುಂ
ಬಂದೀಕ್ಷಿಸುತ ದನು । ಲಂಘಿಸದೆ ಕೈಕೊಂಡಿರಲು ಪ್ರಾಯೋಪವೇ
ನು ॥ ೩೨ ॥ ತಿಳುಹಿದನು ಸಂಪಾತಿ ರಾಮನ । ಲಲನೆ ಲಂಕೆಯೊಳ
ಳೆನುತಲೆ । ಜಲಧಿಯನು ದಾಟುತ್ತ ಕಂಡೆನು ನಿನ್ನನೀಪುರದೆ ॥ ತಿಳ
ನ್ನನು ರಾಮನಾಳೆಂ । ದುಳಿದು ಸಂದೇಹವನು ಕೇಳುಕು । ಶಲವ
ತಿಹ ನಾರಘುವರನು ಲಕ್ಷ್ಮಣನ ಸಹಿತ ॥ ೩೩ ॥ ಬಂದುರಾಮನು
ಧುಗಳೊಡನೆ । ಕೊಂದು ದಶಶಿರನನ್ನು ಕಡುಜವ । ದಿಂದಯೋ
ನಿನ್ನ ಕರೆದೊಯ್ವನಿದು ನಿಶ್ಚಯವು ॥ ಇಂದುವಿವರಿಸು ತೆಲ್ಲವನು
ದಲಿಂದರುಹಿದೆನು ನಾನುಕೇಸರಿ । ನಂದನನು ನಿನಗೇನುತೋಕ್ಷ

ದನ್ನು ತಿಳಿಸೆನಗೆ ॥ ೩೪ ॥ ಏನಮಾಡಲಿ ಏನಹೇಳುವೆ । ನೀನು ನೋಡೆಂದೆನುತ ಕೊಟ್ಟನು । ಜಾನಕಿಗೊಲಿದು ರಾಮನಾಮಾಂಕಿತವ ಮುದ್ರಿಕೆಯ ॥ ಪ್ರಾಣನಾಥನ ಹೊಂದಿದಂತಾ । ಮಾನಿನೀಮಣಿತೆಗೆದುಕೊಂಡನು । ಮಾನಿಸದೆ ನೋಡಿದಳು ಕಣ್ಣಳಿಗೊತ್ತಿ ಸಂತಸದಿ ॥ ೩೫ ॥ ಧರಣಿನಂದನೆ ರಾಹುತೊರೆದಾ । ವರಸುಧಾಕರನಂತೆ ಮೆರೆದಳು । ನೆರೆ ವಿರಾಜಿಪ ತನ್ನಮುಖದಿಂದೊಡನೆ ಹರ್ಷದಲಿ ॥ ಮರುತನಣುಗನೆ ನೀಂ ಸಮರ್ಥನು । ಧರೆಯೊಳು ಪರಾಕ್ರಮಿಯು ಧೀವರ । ವರನುನನ್ನೊಳು ನೀನುಸಂಭಾಷಿಸಲು ತಕ್ಕವನು ॥ ೩೬ ॥ ವನಧಿಯನು ಲಂಘಿಸುತ ದಶಕಂ । ಠನಪುರಂಕೆನೀಂ ಬಂದಕಾರಣ । ನಿನಗೆ ರಾವಣ ಭೀತಿಯಿಲ್ಲವು ಮೇದಿನೀತಲದಿ ॥ ನಿನಗೆಸಮನಹ ವೀರನಿಲ್ಲವು । ನನಗೆ ಪೇಳಾ ರಾಮಲಕ್ಷ್ಮಣ । ರು ನೆಲೆಯೊಳು ಸುಖದಿಂದಿಹರೆ ಕೌಸಲ್ಯೆಗೆ ಕುಶಲವೆ ॥ ೩೭ ॥ ಭರತ ಶತ್ರುಘ್ನರುಗಳಿಬ್ಬರಿ । 'ಹರೆ ಕುಶಲದಿಂದಾಸುಮಿತ್ರೆಯು । ಪುರದೆಸುಖವಾಗಿಹಳೆ ನಾನಾರಾಮಚಂದ್ರನನು ॥ ತೊರೆದಿಹುದರಿಂದೆನ್ನೊಳಾತಗೆ । ಕರುಣೆಯಿಲ್ಲದೆ ಪೋಗಿರಬಹುದು । ಪರಿಹರಿಪನೆಂತೆನ್ನ ದುಃಖವನಾರಘೂದ್ವಹನು ॥ ೩೮ ॥ ಅಣ್ಣನ ನೆರವಿಗೆಂದೆನುತ ಪಡೆ । ಯನ್ನು ಕಳುಹಿಸಿರುವನೆ ಭರತನು । ನನ್ನಬಿಡಿಸಲ್ಕಾ ರವಿಸುತನು ಋಕ್ಷಕಪಿಗಳನು ॥ ತನ್ನೊಡನೆ ಬರಮಾಡಿಕೊಳ್ಳುತ । ನನ್ನಗಂಡನ ಬಳಿಯೊಳಿಹನೇ ನಿನ್ನ ಲಕ್ಷ್ಮಣನೆಂತು ರಕ್ಕಸರನ್ನುವಧಿಸುವನು ॥ ೩೯ ॥ ಆವಸಮಯದೊಳೀಕ್ಷಿಸುವೆನೀ । ರಾವಣನು ರಘುನಾಥನಿಂದಳಿ । ಸಾವನಾಂಪುದನೆಂದುಜಾನಕಿ ಕೇಳಲನಿಲಜನು ॥ ದೇವಿನೀನೀ ಲಂಕೆಯೊಳಿಹುದ । ನಾವಿಭುವರನು ತಿಳಿಯಲಿಲ್ಲವು । ದೇವರಾಘವ ನಬ್ಧಿಯನು ಶೋಷಿಸುವನತಿ ಭರದ ॥ ೪೦ ॥ ಅವನಿಜೆಯೆಕೇಳಸುರರೆಲ್ಲರ । ನು ವಧಿಸುವನಾ ರಘುವರ ಸುನಿ । ನ್ನ ವಿರಹಾನಲನಿಂದೆ ದುಃಖಿಸುತಿಹನು ಹಗಲಿರುಳು ॥ ಜವದೆ ನೋಡುವೆ ಗಂಡನನಿದು ನಿ । ಜವು ರಘುವರನು ನಿನ್ನನೋಡದ । ರುವುದರಿಂದಲೆ ಮದ್ಯಮಾಂಸಂಗಳನು ಸೇವಿಸನು ॥ ೪೧ ॥ ಕನಕಮಂದರ ಪರ್ವತಗಳಾ । ಣೆನಿಜವಿದು ಕೇಳಮ್ಮ ಸೀತೆಯೆ । ಮನದೊಳು ಸ್ಮರಿಸುವನು ನಿನ್ನನೆ ರಾಮನನುದಿನವು ॥ ಜನನಿನಿದ್ದೆಯ ನುಳಿದಹನು ರಾ । ಮನುಮಲಗಿ ನಿದ್ದಿಸುತಜಾನಕಿ । ಯೆನಿಪನಾಮವ ಕೇಳ್ದಮಾತ್ರಕೆ ದುಃಖಿಸುವನೆದ್ದು ॥ ೪೨ ॥ ಫಲಕುಸುಮ ಸಂದೋಹವನು ನೋ । ಡಲಿರದೆಯೆ ಹಾ ಸೀತೆಯೆಂದಳು । ತಳುತ ಬಿಸುಸುಯ್ಯುವುಗಳನು ಕೈಕೊ

ಳದೆ ಬಿಡುತಿಹನು ‖ ಖಳ ದಶಗ್ರೀವನನು ಸಂಗರ । ದೊಳು ವಧಿಸಿ ನಿ
ನ್ನನು ಪಡೆಯಲು ಹ । ಗಲಿರುಳು ಬಹುಳ ಯತ್ನವನು ಮಾಡುವನು
ರಾಘವನು ‖ ೪೩ ‖ ಎಂದುಪೇಳಲು ಕೇಳ್ದುಧರಣೀ । ನಂದನೆ ನುಡಿದ
ಳಾಂಜನೇಯುನಿ । ಗಂದೆಲೆ ಪವನಸಂಭವನೆ ಕೇಳ್ಜಗದೊಳಾಯುವು
ನು ‖ ಸಂದಧಿಕ ಸಂಪದದೊಳಾಗಲಿ । ಕುಂದಿಪತಿದುಃಖದೊಳಗಾಗಲಿ ।
ಬಂಧಿಸುತ ಬಿಡದೆಳೆವ ರಜ್ಜುವಿನಿಂದೆಮಾನವನ ‖ ೪೪ ‖ ವಿಧಿಯು ದು
ಸ್ತರವೆನಿಸಿಕೊಂಡಿಹು । ದದನು ವಿಚಾರಲುಶಕ್ಯವಲ್ಲ ವ । ಸುಧೆಯೊಳಾರಿ
ಗು ನನ್ನ ಮುಳುಗಿಸಿರುವದು ದುಃಖದಲಿ ‖ ವಿಧಿನಿಯಾಮಕ ಬಂಧನಕೆ
ಸಿಲು । ಕಿ ಧರಿಸಲಸಾಧ್ಯವೆಹ ದುಃಖ ಜ । ಲಧಿಯೊಳೀಗ ಮುಳುಗಿರುತಿ
ಹರಾ ರಾಮಲಕ್ಷ್ಮಣರು ‖ ೪೫ ‖ ಎಂತು ದಶಕಂಧರನ ಕೊಲ್ಲುವ । ನೆಂ
ತು ನನ್ನನು ಹೊಂದುವನು ತಾ । ನೆಂತು ರಾಮನು ಲಂಘಿಸುವನೀ ದುಃ
ಖಸಾಗರವ ‖ ಪಿಂತೆನಗೆ ಕೊಟ್ಟಿಹನು ರಾವಣ । ಸಂತಸದೊಳೊಂದು
ವರುಷಗಡುವ । ನಿಂತುಕೊರಗುತ ನಾನುಕಳೆದೆನು ಹತ್ತು ತಿಂಗಳನು ‖
‖ ೪೬ ‖ ಎರಡುತಿಂಗಳು ಮಿಕ್ಕಿಹುದು ದಶ । ಶಿರನ ಸೋದರನಹ ವಿಭೀ
ಷಣ । ನು ರಘುನಾಥನಿಗೆನ್ನ ನೀವುದೆನುತ್ತ ದಿನದಿನವು ‖ ತರತರದನೀತಿ
ಗಳನರುಹಲ । ಸುರಪತಿಗೆಸರಿಬೀಳಲಿಲ್ಲನು । ತರುಹುತಿರ್ದಪಳನಲೆಯೆಂ
ಬ ವಿಭೀಷಣನಮಗಳು ‖ ೪೭ ‖ ವನದೊಳಾ ಹದಿನಾಲ್ಕುಸಾವಿರ । ದನು
ಜರನು ಸಂಹರಿಸಿದಾ ರಾ । ಮನಿಗೆ ಯುದ್ಧದೊಳದಿರುನಿಲ್ಲುವರುಂಟೆ
ಯೋಚಿಸಲು ‖ ದನುಜನಾಥನ ಸಂಹರಿಸದೆ ಬಿ । ಡನುರಘುಕುಲೋತ್ತ
ಮನು ಮುಂದೆ ಕ । ದನದೊಳೆನ್ನ ನಿಮಿತ್ತದಿಂದನು ತತ್ತಳಾಸೀತೆ ‖
‖ ೪೮ ‖ ಎನಲುಕೇಳ್ದು ಪವನಸಂಭವ । ನು ನುಡಿದನು ಕೇಳೆಲೆ ಮಹೀ
ಸುತೆ । ಮನುಕುಲೋತ್ತಮ ರಾಮನಾಕಪಿಸೈನ್ಯವನು ಕೂಡಿ ‖ ವನ
ಧಿಗಾಗಿಸಿಸೇತುವ ದಶಶಿ । ರನನು ಸಂಹರಿಸುವ ನಿದುನಿಜವು । ಮನದೊ
ಳನುಮಾನವನು ಬಿಡುನೀ ನಿನ್ನು ಚಿಂತಿಸದೆ ‖ ೪೯ ‖ ಇಲ್ಲದಿದ್ದರೆ ನಿನ್ನ
ನು ಹೆಗಲಿ । ನಲ್ಲಿ ಕೂಡಿಸಿಕೊಂಡು ರಾಘವ । ನಲ್ಲಿಗೆ ಕರೆದುಕೊಂಡು
ಹೋಗುವೆ ನಬ್ಧಿಯನುದಾಟ ‖ ಇಲ್ಲಿ ನಿನ್ನ ಸಮಸ್ತ ದುಃಖವ । ನೆಲ್ಲ
ಹರಿಸುವೆ ನೆನ್ನ ಮಸ್ತಕ । ದಲ್ಲಿ ಲಂಕೆಯುನಿರಿಸಿ ಕೊಂಡೈದುವೆ ನಸುರರೊ
ಡನೆ ‖ ೫೦ ‖ ಎನಲುಜಾನಕಿ ಕೇಳ್ದಲೆ ಪವನ । ತನಯ ನಿನ್ನಕಪಿತನ
ಕಾಣಿಸಿ । ತೆನಗೆ ಕಿರಿದಹ ದೇಹವನು ಹೊಂದಿರುವೆ ನೀನರಿಯೆ ‖ ವನ
ನಿಧಿಯನೆಂತೆನ್ನ ನಿರಿಸು । ತ್ತ ನಿಜ ಭುಜದೊಳು ಲಂಘಿಸುವೆ ರಾ । ಮ

ನೆಸವಿಹಾಪಕ ದೆಂತುಪ್ಪೋಗುವೆ ನನಗೆಹೇಳೆನಲು ॥ ೫೧ ॥ ತಿಳಿಯುಚೆನ್ನ
ಬಲಪ್ರಭಾವಂ । ಗಳನು ನೀನೀತೆರದಿಪೇಳುವೆ । ತಿಳಿದು ನೋಡುವುದೆ
ನ್ನ ರೂಪವನೆಂದುನುಡಿಯುತ್ತ ॥ ಬಳಿಕವಮಂದರಮೇರುಪರ್ವತ । ಗಳಿಗೆ
ಸರಿಯೆಂದೆನಿಸಿ ಸೀತೆಯು । ಬಳಿನೊಳಾ ಪವಮಾನಿನಿಂದನು ತಾಯೆ
ನೋಡೆನುತ ॥ ೫೨ ॥ ಸೀತೆಬಿಡು ಶೋಕವನು ನೀನಿಂ । ದೇತಕನು
ಮಾನಿಸುವೆ ರಾಕ್ಷಸ । ನಾಥನೊಡನೀ ಲಂಕೆಯುನಿರಿಸು ತೆನ್ನ ತಲೆಯೊ
ಳಗೆ ॥ ಭೀತಿಯಿಲ್ಲದೆ ರಾಮನೆಡೆ ಗೆನಿ । ಶೀಥಿಯೊಳಗಾಂ ಪೋಪೆನೆನೆ
ಭೂ । ಜಾತೆ ಪೇಳಿದಳಾಂಜನೇಯುನಿ ಗಧಿಕಹರ್ಷದಲಿ ॥ ೫೩ ॥ ನೀನೆ
ಘಟಕನು ನೀನೆಶಕ್ತನು । ನೀನೆಶೂರನು ನೀನಧೀರನು । ನಾನುತಿಳಿದೆ
ನು ನಿನ್ನಮಿತಬಲ ಶಕ್ತಿಗಮನಗಳ ॥ ಭಾನುವಂಶ ಲಲಾಮನ ಬಳಿಗೆ ।
ನಾನು ನಿನ್ನೊಡಬರ್ಪುದನುಚಿತ । ನೀನು ಯೋಚಿಸಿನೋಡು ನಿನ್ನಯು
ಮನಸಿನೊಳಗಿಂದು ॥ ೫೪ ॥ ನನ್ನೊಡನೆ ಜಲನಿಧಿಯುದಾಟುವ । ನಿನ್ನ
ಪಿಡಿದಿರೆ ಘಾತಿಸುತ್ತಿಹ । ರಿನ್ನು ರಣದೊಳಗೆಂತಿರುತಿಪವ್ಪೋ ಸೋಲು
ಗೆಲವುಗಳು ॥ ಮುನ್ನ ಪೇಳಲಸಾಧ್ಯ ಜಲನಿಧಿ । ಯುನ್ನು ನೀಂ ಲಂಘಿ
ಸುವ ಕಾಲದಿ । ನಿನ್ನ ಹೆಗಲಿಂ ಬಿದ್ದರುಂಬೀಳಬಹುದಬ್ಧಿಯುಲಿ ॥ ೫೫ ॥
ನಿನ್ನ ಸಂಗಡ ನಾನುಬಂದರೆ । ನನ್ನನು ಕಳತ್ರವತಿ ಜಾನಕಿ । ಯೆನ್ನು
ತೊರೆವರು ರಕ್ಕಸರೊಡನೆ ನೀನು ಕಾದುತಿರೆ ॥ ನಿನ್ನಹೆಗಲಿಂ ದವನಿ
ಯೊಳುರು । ಳ್ದೆನ್ನನು ಪಿಡಿದುಕೊಂಡು ದಾನವ । ರಿನ್ನು ಲಂಕೆಗೆತರು
ವರೆನ್ನುತ ನುಡಿದಳನಿಲಜಗೆ ॥ ೫೬ ॥ ದನುಜರೆಲ್ಲರ ನಿರಿವಶಕ್ತಿಯು ।
ನಿನಗಿರುತಿಹುದು ನೀನುಕೊಂದರೆ । ಮನುಕುಲೋತ್ತಮ ರಾಘವನ
ಗೌರವಕೆ ಕುಂದಹುದು ॥ ಅನಿಲನಂದನಕೇಳು ರಘು ನಂ । ದನನನು
ಳಿದೀ ನೆಲದೊಳನ್ಯರ । ತನುವನೋಕುವಳಲ್ಲನಾನೆನು ತೆಂದಳಾಸೀತೆ ॥
॥ ೫೭ ॥ ಕೊಂದು ದಶಶಿರನನ್ನು ದಶರಥ । ನಂದನನಯೋಧ್ಯಾ ನಗರ
ಕಿ । ಲ್ಲಿಂದೆ ನನ್ನನು ಕರೆದುಕೊಂಡ್ಪೋದೊಡೆ ಲೋಕದಲಿ ॥ ಮುಂದೆ
ಗೌರವ ಬರ್ಪುದಾ ರಘು । ನಂದನಂಗೆ ಸುರಾಸುರೋರಗ । ಗಂಧರುವ
ರೊಳಗಾರು ಸರಿಯುಲ್ಲವಿದು ನಿಶ್ಚಯುವು ॥ ೫೮ ॥ ಸೇರಿಸೆನ್ನನು ಶೀಘ್ರ
ದೊಳುನೀ । ನಾರಘೂದ್ವಹ ನೆಡೆಗೆನುತತಾ । ನಾ ರಜನಿಯೊಳು ಸೀತೆ
ಪೇಳಲು ಪವನಸಂಭವನು ॥ ವಿಚಾರಿದಾಸಂದವನು ತಾಳ್ದು । ಧಾರಿಣೀ
ಸುತೆ ನುಡಿಗಳನು ಕೇ । ಳ್ದಾರಮಣಿಗೆರಗುತ್ತ ಪೇಳಿದ ನತಿವಿನಯುದಿಂ
ದ ॥ ೫೯ ॥ ಸೀತೆನಿನ್ನಯು ನುಡಿಗಳೆಲ್ಲ ಸು । ನೀತಿಯುುತವಾಗಿರುವು

ವು ಧರಿ । ತ್ರೀತಲದೊಳದು ಸಹಜ ಹದಿಬದೆಯುರುಗಳೆಲ್ಲರಿಗೆ ॥ ಪೂತೆ ರಾಮನ ನುಳದು ಸೋಕೆನು । ಭೂತಲದೆ ಮತ್ತೊಬ್ಬರ ನೆನುವು । ದಾತನಮಡದಿ ಯೆನ್ನಿಪನಿನಗೆ ಯೋಗ್ಯವಾಗಿಪುವು ॥ ೬೦ ॥ ಧರಣೀಜಾತೆಯೆ ಕೇಳುಪದೆದಾ । ತರಣಿವಂಶ ಲಲಾಮನೊಳು ನನ । ಗಿರುವ ವಿಶ್ವಾಸಾತಿಶಯುದಿಂದಿಂತು ಪೇಳದೆನು ॥ ಭರದೊಳಾತನ ಬಳಿಗೆನಿನ್ನನು । ಕರೆದುಕೊಂಡೈದುವೆನು ಭಕ್ತಿಯೊ । ಳುರುತರದ ಗುರುಸೇವೆಯೆನು ತಾಂತಿಳದು ಮನದೊಳಗೆ ॥ ೬೧ ॥ ನಿನಗೆ ನನ್ನೊಡನೈತರಲು ಹಿತ । ಮೆನಿಸದಿದ್ದರೆ ರಾಮನರಿವಂ । ತೆನಗೆ ನೀಂಕೊಡು ನಿನ್ನಕುರುಹನೆನುತ್ತ ಬೆಸಗೊಳಲು ॥ ಜನಕನಂದನೆ ಕೇಳ್ದು ಹನುಮಂ । ತನಿಗೆ ಪೇಳದಳಧಿಕ ಸಂತಸ । ವನುತಳೆದು ಹಿಂದಾದ ಕಥೆಯುನುಕೂಡೆ ವಿವರಿಸುತ ॥ ೬೨ ॥ ಹಿಂದೆಮಂದಾಕಿನಿಯು ತೀರದೊ । ಳಂದವಾಗಿಹ ಚಿತ್ರಕೂಟದ । ಮುಂದೆ ಜಲಫಲ ಕಂದಮೂಲಗಳಿಂದೆ ಶೋಭಿಸುತ ॥ ಸುಂದರವೆನಿಪ ಪರ್ಣಶಾಲೆಯು । ಮುಂದೆ ರಾಮನ ತೊಡೆಯೊಳತಿ ಮುದ । ದಿಂದೆನಾಂ ಮಲಗಿದ್ದೆ ನೊಂದಾನೊಂದು ದಿವಸದಲಿ ॥ ೬೩ ॥ ಆಗೆ ವಾಯುಸವೊಂದು ಬಂದತಿ । ಬೇಗ ನೆನ್ನ ಮೊಲೆಗಳ ನಡುವಣ । ಭಾಗವ ನುಕಚ್ಚಿದುದು ಹೆಂಟೆಯೊಳೋಡಿಸಿದೆನದನು ॥ ರಾಘವೇಂದ್ರನು ಮತ್ತೆಮಲಗಿ ಸ । ರಾಗದಿಂದಲೆ ನನ್ನತೊಡೆಯೊಳ । ಗಾಗಹನದಲಿ ನಿದ್ದೆಯು ನೆಸಗುತ್ತಿದ್ದ ವೇಳೆಯುಲಿ ॥ ೬೪ । ಮತ್ತೆಬಂದಾಕಾಗೆ ಕಚ್ಚಿತು । ನೆತ್ತರೊನಲಿಡುವಂತೆ ನನ್ನ ಸು । ವೃತ್ತ ಕುಚಮಧ್ಯವನು ಬಳಕಲ್ಲಿಂದೊಡನೆ ಸುರಿದ ॥ ನೆತ್ತರಿಂದೆಚ್ಚರಿಕೆಯುನು ಹೊಂ । ದುತ್ತುರಗನಂದದೊಳು ಕೋಪಿಸಿ । ಹತ್ತಿರದೊಳಿಹ ವಾಯುಸವ ನೀಕ್ಷಿಸಿದ ನೆನ್ನಪತಿ ॥ ॥ ೬೫ ॥ ಒಡನೆ ಚಾಪೆಯೊಳೊಂದು ದರ್ಭೆಯು । ನೆಡದಕೈಯಿಂದಾಂತು ರಾಘವ । ನಡವಿಯೊಳಗಂ ದದನು ಬ್ರಹ್ಮಾಸ್ತ್ರದೊಳು ಸಂಧಿಸುತ ॥ ಬಿಡಲುಮಂತ್ರಿಸಿ ವಾಯುಸದ ಮೇ । ಲಡಿಗಡಿಗೆ ಭೀತಿಯುನುತಾಳುತ । ಕಡುಜವದೊಳಾ ಬ್ರಹ್ಮನೆಡೆಗೋಡಿದುದು ವಾಯುಸವು ॥ ೬೬ ॥ ಸುರಪತಿಯ ಸುತನೆನಿಪ ಕಾಕಾ । ಸುರನು ರಾಮಾಸ್ತ್ರಕ್ಕಳುಕುತದ । ಪರಿಹರಿಸಬೇಕೆನುತ ಬ್ರಹ್ಮಾದ್ಯಖಿಳ ವಿಬುಧರನು ॥ ಶರಣುಹೊಗಲಾವಾಯುಸವ ನೆ । ಲ್ಲರು ಸಲಹಲಾರದುಳಿಯುಲು ಬಂ । ದೆರಗಿದುದು ನೀಂ ರಕ್ಷಿಸೆನ್ನನೆನುತ್ತಲಿಂದ್ರನಿಗೆ ॥ ೬೭ ॥ ತಂದೆ ನನ್ನಿಂದಾಗದೆಂದೆನು । ತಂದುಳುಕಲು ಮತ್ತೆದಶರಥ । ನಂದನನ ಬಳಗೈದಿ ವಾಯುಸ ಸಲಹು

ನೀನೆನುತ ॥ ನಿಂದು ಹೊಗಳುತ ಪದಕೆರಗಲಾ । ನಂದವನು ತಾಳ್ದದರ ಬಳಗ । ಣ್ಣೊಂದನರಿದು ಸಲಹಿದನಾ ಕಾಕಾಸುರ ನಸುವನು ॥ ೬೮ ॥ ಬಳಿಕ ರಾಮನಿಗೆರಗಿ ತನ್ನ । ಸ್ಥಳಕೆಪ್ಪೋದುದು ಕಾಗೆಕೋಪವ । ತಳೆದು ನನ್ನ ನಿಮಿತ್ತದಿಂದಲೆ ವಾಯಸದ ಮೇಲೆ ॥ ಬಲಿದ ಬ್ರಹ್ಮಾಸ್ತ್ರವೆನುಬಿಟ್ಟನೆ । ಸುಳವನೇಂ ದಶಕಂಠನನು ರಣ । ದೊಳಗೆ ವಧಿಸದೆ ಕೇಳೆನುತ ಪೇಳದಳು ಭೂಮಿಸುತೆ ॥ ೬೯ ॥ ಆತನ ಬಲಪರಾಕ್ರಮಂಗಳ । ನಾತನ ಸುಗುಣ ಸಾಹಸಂಗಳ । ನಾತನ ಸಕಲ ಯುಕ್ತಿಶಕ್ತಿಗಳನ್ನು ನಾಂಬಲ್ಲೆ ॥ ಆತ ನನ್ನ ನಿಮಿತ್ತದಿಂದೀ । ಭೂತಲಕ್ಕೈತಂದ ಸುರಸಂ । ಘಾತವನು ಸಂಹರಿಸುವನು ರಣರಂಗದೊಳು ಮುಂದೆ ॥ ೭೦ ॥ ಆ ರಘುಕುಲೋತ್ತಮನಿಗೆ ಸುರ ನ । ರೋರಗ ದನುಜ ಸಿದ್ಧಸಾಧ್ಯರೊ । ಳಾರು ಸರಿಯಿಲ್ಲಧಿಕ ಭುಜಬಲ ಶೌರ್ಯಯುತನವನು ॥ ವೀರರೆನಿಸಿದ ರಾಮಲಕ್ಷ್ಮಣ । ರಾರವಿತನಯನೊಡನೆ ಲಂಕೆಗೆ । ಬಾರದಿರುವ್ದರಿಂದೆ ನಾನತಿಪಾಪಿಯಾಗಿಹೆನು ॥ ೭೧ ॥ ವಾಯುನಂದನಕೇಳು ಜನಸಮು । ದಾಯಕೆ ಸಕಲವಿಧದಬಾಧೆಯು । ನೀಯುತ ಮಹಾಪಾಪವ ನೆಸಗಿರುವುದರಿಂದೀಗ ॥ ವಾಯುವಗ್ನಿಗಳಿಗೆ ಸಮರೆನಿಪ । ರಾಯದಶರಥ ಸುತರು ಕಪಿಗಳ । ಸಾಯದಿಂದೈತಂದು ನನ್ನನು ಕಾಣದಿಹರೆನಲು ॥ ೭೨ ॥ ಆನುಡಿಯನಂದಾಲಿಸುತ ಪವ । ಮಾನನಂದನ ನೆರಗಿಸೀತೆಗೆ । ತಾನು ಪೇಳದ ನೆಲೆಮಹೀಸುತೆ ನಿನ್ನದುಃಖವನು ॥ ಭಾನುವಂಶತಿಲಕನು ಹರಿಸುವ । ನೀ ನುಡಿಯೊಳನುಮಾನ ವಿಲ್ಲವು । ನೀನುಸಿಕ್ಕಿದೆ ದೈವವಶದಿಂದೆನಗೆ ಲಂಕೆಯಲಿ ॥ ೭೩ ॥ ರಾಮನು ಮನದೆದುಃಖಿಸುತಿರಲು । ರಾಮನಂದದೆ ದುಃಖಿಸುವ ನಾ । ರಾಮನ ಸಹೋದರನು ತನ್ನಯಮನದೊಳನವರತ ॥ ನೀ ಮನದೊಳ್ಳೈದದಿರು ದುಃಖವ । ನೀ ಮುಹೂರ್ತದೊಳೀಕ್ಷಿಪೆ ಶುಭ । ಸ್ತೋಮವನು ಕೇಳೆನುತ ಪೇಳ್ದನುಮತ್ತೆ ಜಾನಕಿಗೆ ॥ ॥ ೭೪ ॥ ನಿನ್ನನೋಡುವಪೇಕ್ಷೆಯಿಂದಲೆ । ತನ್ನ ಕಪಿಗಳಕೂಡೆ ನಡೆತಂ । ದುನ್ನತ ಪರಾಕ್ರಮದೊಳಾ ರಘುವರನು ಲಂಕೆಯನು ॥ ಇನ್ನುಸುಡುವನುಬಿಡದೆ ರಾವಣ । ನನ್ನುಬಂಧುಗಳೊಡನೆ ಕೊಲ್ಲುತ । ನಿನ್ನ ಕರೆದೊಯ್ಯುವನು ತನ್ನಯಪುರಿಗೆ ಶೀಘ್ರದಲಿ ॥ ೭೫ ॥ ಮಾತೆ ರಾಮನಿಗೇನಹೇಳಲಿ । ನೀಂ ತಿಳಿಸೆನುತ ಕೇಳಲಂದಾ । ಸೀತೆನುಡಿವಳು ನೀನು ಕೇಳೆಲೆ ಪವನಸಂಭವನೆ ॥ ಆತನಿಗೆ ಪೇಳೆನ್ನ ತೆರವನು । ಸೀತೆನಮಿಸಿದಳೆಂದು ತಿಳಿಸೈ । ನೀ ತಿಳುಹು ಸೌಮಿತ್ರಿಗೆನ್ನಯ ವಿವರವೆಲ್ಲವನು ॥

॥ ೨೬ ॥ ತರಣಿತನಯಂಗರುಹು ನೀನೆ । ನ್ನಿರವ ನಾನಿನ್ನೊಂದು ತಿಂಗ ಳ । ವರೆಗೆ ಜೀವಿಸಿರುವೆನು ನಂತರ ಬಿಡುವೆದೇಹವನು ॥ ಮರುತನಣು ಗನೆ ನೀನುಶಕ್ತನು । ಭರದೊಳೆನ್ನಯ ದುಃಖವನು ಪರಿ । ಹರಿಸು ವಂತಾಗಿಪುದು ನೀನೆನುತೆಂದಳಾಸೀತೆ ॥ ೨೭ ॥ ಪವನಸಂಭವ ರಾಘವನಿ ಗೆಕೊ । ಡುವುದುನೀನೀ ಮಣಿಯುನೆನ್ನುತ । ತವಕದಿಂದಲೆ ಸೀರೆಸೆರಗ ನು ಬಿಚ್ಚಿ ಜಾನಕಿಯು ॥ ರವಿಯತೆರದಿಂ ಥಳಥಳಿಸುತ ಮೆ । ರೆವಸು ಚೂಡಾಮಣಿಯನಂದಾ । ಪ್ಲವಗನಾಥನ ಕೈಗೆಕೊಟ್ಟಳು ಬಹುಳಹ ರ್ಷದಲಿ ॥ ೨೮ ॥ ಆಮಣಿಯನಾಂ ತಧಿಕಭಕ್ತಿಯೊ । ಳಾಮಹೀಸುತೆ ಸುತ್ತಲುತಿರುಗಿ । ಕೈಮುಗಿದು ಸಾಷ್ಟಾಂಗದಿಂದೆರಗುತ್ತ ಭಕ್ತಿಯಲಿ ॥ ರಾಮನಂ ನೆನೆನೆನೆದು ಮನದೊಳು । ತಾಮಸವನುಳಿದನಿಲ ಸುತನಾ । ರಾಮನಬಳಿಗೆ ಪೋಗಬೇಕೆನುತಂದು ಯೋಚಿಸಿದ ॥ ೨೯ ॥

ಇಂತು ಇಪ್ಪತ್ತನೆಯ ಅಧ್ಯಾಯ ಸಂಪೂರ್ಣವು. ಪದ್ಯಗಳು ೧೦೩೭.



## ಇಪ್ಪತ್ತೊಂದನೆಯ ಅಧ್ಯಾಯ.

ಸೂಚನೆ ॥ ಸೀತೆವಿವರವ ನರಿತುರಾಘವ ।
ನೈತರುತಲಾ ಜಲನಿಧಿಗಿರದೆ ।
ಸೇತುವನೆಸಗಿ ಹೊಕ್ಕನಾಲಂಕೆಯನು ಬಲಸಹಿತ ॥

ಬಳಿಕಜಾನಕಿ ಪವನತನಯಂ । ಗೊಲಿದುಪೇಳಿದ ಳೆಲೆಕಪೀಂ ದ್ರನೆ । ಲಲಿತಚೂಡಾ ರತ್ನವನು ರಾಮನಿಗೆಗುರುತಾಗಿ ॥ ಸಲಿದುನೀಂ ಕೊಡು ಮಣಿಯನೋಡುತ । ತಿಳಿದುರಾಘವನು ಸ್ಮರಿಸಿದಪ । ನೊಲಿದು ನನ್ನನು ನಮ್ಮತಾಯಿಯನಾ ದಶರಥನನು ॥ ೧ ॥ ನನ್ನದುಃಖವು ಹೋ ಗುವಂದದೊ । ಳೆನ್ನಯತ್ನವ ಮಾಡುನೀನೆಂ । ದೆನ್ನು ತವಸಿಜೆಪೇ ಳಲಂದಾ ಪವನಸಂಭವನು ॥ ನಿನ್ನಕೋರಿಕೆಯಂತೆ ಫಲಿಸುವು । ದನ್ನು ನಾಂಪೋಗಿಬಹೆ ರಾಮನ । ಸನ್ನಿಧಿಗೆ ನನಗಪ್ಪಣೆಯ ನೀವುದೆನುತ ನ ಮಿಸಲು ॥ ೨ ॥ ಮರುತನಣುಗನೆ ರಾಘವೇಂದ್ರನಿ । ಗರುಹುನನ್ನಯ ಕುಶಲವಾರ್ತೆಯ । ಭರದೊಳಾ ಲಕ್ಷ್ಮಣನಿಗೆ ತಿಳುಹಿಸೆನ್ನ ಕುಶಲವ ನು ॥ ತರಣಿತನಯಂಗೆನ್ನ ರೀತಿಯ । ನರುಹು ಜಾಂಬವ ಮುಖ್ಯರಹ ಕಪಿ । ವರರಿಗೆನ್ನಯ ಕುಶಲವರುಹೆಂಧೆನುತ ಪೇಳಿದಳು ॥ ೩ ॥ ರವಿ

ಕುಲತಿಲಕ ರಾಮನೀ ದುಃ | ಖವನು ಪರಿಹರಿಸೆನ್ನನುರೆ ಸಲ | ಹುವ ವೊಲಾಗಿಸು ಶುಭಗಳಾಗಲಿ ನಿನಗೆ ನಾರಿಯೊಳು || ಪವನಸುತನೀ ನಿಲ್ಲಿ ರುವುದೀ | ದಿವಸವೆಲ್ಲವು ಮತ್ತೆ ನಿನ್ನ ಮು | ಖವನು ನೋಡುವೆನೆಂಬು ದೆನ ಗನುಮಾನವಾಗಿಹುದು || ೪ || ಬಂದುತಿಂಗಳು ಕಳೆವನಂತರ | ಕೊಂದುಹಾಕುವ ನೆನ್ನನಿಃ ದಶ | ಕಂಧರ ನಿವನಬಾಧೆ ನನಗತ್ಯಧಿಕ ವಾಗಿಹುದು || ಅಂದುಕೊಳ್ಳಲಸಾಧ್ಯ ಮೆನಿಸಿಹು | ದೆಂದಿವನಃ ವಿಸ್ತರಿ ಸುತಾ ರಘು | ನಂದನಂ ಗರುಹೆಂದು ಕಳುಹಿದಳಾಂಜನೇಯನನು || || ೫ || ಹೊರಟುಬಂದಾ ಪವನಸಂಭವ | ನಿರದೆಯೋಚಿಸಿ ತಾನುಬಂದಿ ಹ | ಪರಿಯನರಿಸದೆ ಪೋಪುದನುಚಿತ ಮೆಂದುಬಗೆದೊಡನೆ || ಭರದೊ ಳೈತಂದಾ ವನದಖಿಳ | ತರುಗಳನು ಭಂಗಿಸುತ್ತಿರಲು ಬಂ | ದರನಿಲ ಸುತನಮೇಲೆ ವನಪಾಲಕರು ಕಾಳಗಕೆ ||೬|| ಘಡಘಡೆಲವೋ ವೋ ತೊಲ ತೊಲಗು | ಕಡಿವು ಕಂಬಕೆ ಬಿಗಿವೆವೆನ್ನುತ | ನುಡಿದಿರದೆ ಕಾಳಗಕೆ ರಕ್ಕಸರೈತರಲು ಜವದೆ || ಕಡುಮುಳಿದು ಪವಮಾನಸಂಭವ | ಬಿಡ ದೆಕೊಂದನು ರಣದೊಳೆಲ್ಲರ | ನೊಡೆಯನಿಗೆ ಪೇಳದರುಳಿದವನ ಪಾಲ ಕರುಕೂಡೆ || ೭ || ಆ ದಶಶಿರನುಕೇಳಿ ಕಡುಮುಳಿ | ದಾವರದೆ ಕಳು ಹಿಸಿದನೆಂದಿರ | ದೈದುಜನ ಮಂತ್ರಿಸುತರನು ಕಾಳಗಕೆ ಮನ್ನಿಸುತ || ಕಾನುವಭಿಲಾಷೆಯನು ತಾಳ್ದ ವಿ | ನೋದವಮಾತ್ರದೆ ವಧಿಸಿದನವರ | ನಾ ದಿವಾಕರ ತನಯ ಸಚಿವನದೊಂದು ನಿಮಿಷದಲಿ || ೮ || ಸಾಯ ದೈತಂದವರು ದಾನವ | ರಾಯನಿಗೆ ಪೇಳದರು ಕೊಂದನು | ವಾಯು ನಂದನ ಸಚಿವಸುತ ಧ್ರುವರನು ಕೇಳೆನುತ || ಹಾಯೆನುತ ನೆರೆನೊಂದು ಸೈನ್ಯ ಸ | ಹಾಯದಿಂದಕ್ಷಯ ಕುಮಾರನ | ನಾಯನುವರಕೆ ಕಳುಹಿ ದನು ಮನ್ನಿಸುತ ರಾವಣನು || ೯ || ಅಟ್ಟಹಾಸದೊಳೈದಿ ಕದನಕೆ | ನೆಟ್ಟನಿದಿರೊಳು ನಿಂದ ದೈತ್ಯನ | ಥಟ್ಟನೀಕ್ಷಿಸಿ ಕೊಂದನಾ ಪವಮಾನ ನಂದನನು || ಛಟ್ಟನೆ ತಿಳಿದು ರಾವಣನಿದನು | ಹೊಟ್ಟೆಯೊಳಡಿದ ದುಃ ಖದಿಂದಲೆ | ಕಟ್ಟಿತಹುದಾ ಕಪಿಯನೆನು ತಿಂದ್ರಜಿತುವನು ಕಳುಹೆ || || ೧೦ || ಪಿತನ ನೇಮದೊಳಿಂದ್ರಜಿತು ಪವ | ನತನಯನಮೇಲಾಹ ವಕೆ ಬಂ | ದತಿಖತಿಯೊಳಂದಿರದೆ ಬ್ರಹ್ಮಾಸ್ತ್ರವನು ಬಿಡಲೊಡನೆ || ಮತಿಯೊಳರಿದಾ ಬ್ರಹ್ಮನಸ್ತ್ರವ | ನತಿಭಕುತಿಯಿಂ ದದಕೆವಶವಾ | ಗುತವನಿಗೆ ಮೈಮರೆದು ಬಿದ್ದನು ಹನುಮನಾಹವದೆ || ೧೧ || ಪಿಡಿದು ಹಗ್ಗಗಳಿಂದೆ ಕಟ್ಟಿಸು | ತೊಡನೆ ತಂದೆಯಬಳಿಗೆ ನಡೆತಂ | ದಿಡಿದಸಂ

ತಸದಿಂದೆ ಹನುಮಂತನನು ತೋರಿಸಲು ॥ ಕಡುಮುಳಿದು ನೋಡುತ್ತ ದಾನವ । ರೊಡೆಯ ಕೇಳಿದನೇವೊಕಪಿ ನೀಂ । ನುಡಿವು ದೆವ್ವೊಳಗಿಂ ದುನಿನ್ನಯ ಪರಿಯನೆಂದೆನುತ ॥ ೧೨ ॥ ನಾನುರಾಮನ ದೂತನಿಲ್ಲಿಗೆ । ಜಾನಕಿಯನೀಕ್ಷಿಸಲು ಬಂದೆನು । ದಾನವೇಂದ್ರನೆ ರಾಘವನಿಗೀವುದು ಮಹೀಸುತೆಯ ॥ ನೀನು ಕೊಡದಿರೆ ಬಂದುಲಂಕೆಗೆ । ಭಾನುವಂಶ ಲಲಾಮ ನಿನ್ನ ನಿ । ದಾನಿಸದೆ ಸಂಹಾರಮಾಡುವ ನಖಿಳಜನಸಹಿತ ॥ ॥ ೧೩ ॥ ಎಂದುಪೇಳಲು ಕೇಳ್ದುರಾವಣ । ನಂದುಮುಳಿದೀ ವಾನರನ ನೀ । ವ್ಕೊಂದು ಹಾಕುವದೆಂದು ದೂತರಿಗಾಣತಿಯ ಕೊಡಲು ॥ ಬಂದು ಶೀಘ್ರದೊಳಾ ವಿಭೀಷಣ । ನೊಂದುಕೊಳ್ಳುತ ಪೇಳದನು ದಶ । ಕಂಧರನೊಡನೆ ದೂತವಧೆ ಯುದ್ಧಗರ್ಹ್ಯ ವೆಂದೆನುತ ॥ ೧೪ ॥ ಇವನ ಬಾಲವ ಸುಡುವುದೆನ್ನುತ । ತವಕದಿಂದಸುರೇಂದ್ರ ನೇಮಿಸಿ । ದ ವಚನವಕೇಳುತ್ತ ಬಂದಾ ಕಪಿಯನೆಳತಂದು ॥ ಜವದೊಳಂದಿರ ದೆಣ್ಣೆಯೊಳು ನೆನೆ । ದ ವಸನಗಳನು ಸುತ್ತಿಸುಟ್ಟರು । ಪವನಜನ ಬಾಲವನು ದೂತರು ಬಹುವಿನೋದದಲಿ ॥ ೧೫ ॥ ಪುರದಬೀದಿಗಳಲ್ಲಿ ರಾತ್ರಿಂ । ಚರರಖಿಳವಾದ್ಯಗಳ ಬೊಬ್ಬೆ ಯೊ । ಳರದೆ ಹನುಮಂತನನು ಸುತ್ತಿಸುತಿರೆ ವಿನೋದದಲಿ ॥ ಧರ್ಣಜಾತೆಯಕೂಡೆ ರಕ್ಕಸಿ । ಯರು ನುಡಿದರೀ ಸಂಗತಿಯ ನತಿ । ಭರದೆ ಕೈಚಪ್ಪಾಳೆಗಳ ನಾಗಿಸುತ ಹರ್ಷದಲಿ ॥ ೧೬ ॥ ನಾನುಪತಿಯನು ಸೇವಿಸಿದ್ದರೆ । ನಾನುತಪವನು ವಿರಚಿಸಿದ್ದರೆ । ನಾನು ಭೂಮಿಯೊಳೇಕ ಪತ್ನಿಯೆನಿಸಿರೆ ರಾಮನಿಗೆ ॥ ನೀನು ಶೀತವನಾಗಿಸ್ಯೆಪವ । ಮಾನತನಯಂಗೆಂದು ನಮಿಸುತ । ಜಾನಕಿ ಬಕುತಿಯಿಂದೆ ವಹ್ನಿಯ ನೈದೆಬೇಡಿದಳು ॥ ೧೭ ॥ ರಾಮನಕರುಣೆ ನನ್ನೊಳಿದ್ದರೆ । ಭೂಮಿಯೊಳು ರಾಮನ ಸಮಾಗಮ । ನೇಮವೆನಗುಂಟಾಗುವಂತಿರಲಾಂಜನೇಯನಿಗೆ ॥ ತಾಮಸವ ನಾಗಿಸದೆನೀಂ ಬಿಡಿ । ಸೀ ಮಹಾಬಾಧೆಯನೆನುತ ಪೇ । ಳ್ದಾಮಹೀಸುತೆ ಬೇಡಿದಳು ಕೈಮುಗಿದು ವಹ್ನಿಯನು ॥ ೧೮ ॥ ನಾನುಹೊಂದಿರ ಲಲ್ಪಭಾಗ್ಯವೆ । ನಾನು ಸದ್ವರ್ತನೆಯೊಳಿರಲಾ । ಭಾನುಸಂಭವ ನೆನ್ನದುಃಖವ ಹರಿಸುವಂತಿರಲು ॥ ನೀನು ಶೀತವನಾಗಿಪುದು ಪವ । ಮಾನ ತನಯಂಗೆನ್ನು ತಂದು ನಿ । ದಾನಿಸದೆ ಬೇಡಿದಳು ಜಾನಕಿನಮಿಸಿ ವಹ್ನಿಯನು ॥ ೧೯ ॥ ವೀತಿಹೋತ್ರನಿಗೀಮ ತುಷ್ಟಿಯ । ನೀ ತೆರದೊಳಾಗಿಸುವೆ ನೆನ್ನುತ । ಮಾತರಿಶ್ವನ ತನಯ ನಂದತಿ ಕೋಪವನುತಾಳ್ದು ॥ ಭೀತಿಗೊಳ್ಳದೆ ಬಂದು ಸುಟ್ಟನು ।

ಯಾತುಧಾನರ ಘನಸದನ ಸಂ । ಘಾತವನು ತಾನಾ ವಿಭೀಷಣ ಭವನವ ನು ಬಿಟ್ಟು ॥ ೨೦ ॥ ಉರಿಯನಾಗಿ ಸದಗ್ನಿತನಗಂ । ದುರುತರದ ಶೈ ತ್ಯವ ನೆಸಗಲಾ । ವರಕಪೀಶ್ವರ ನಚ್ಚರಿವಡೆದು ಲಂಕೆಯೆಲ್ಲವನು ॥ ಉ ರಿಸಿ ಬೂದಿಯನಾಗಿಸುತ ಕೊಂ । ದು ರಜನೀಚರರನ್ನು ಜಲಧಿಯೊ । ಳುರಿಯನಾರಿಸಿಕೊಂಡ ನದ್ಭುತ ತನ್ನಬಾಲವನು ॥ ೨೧ ॥ ಮತ್ತೆ ಕಂ ಡು ಮಹೀಸುತೆಯು ನಂ । ದುತ್ತಮೋತ್ತಮ ಭಕ್ತಿಯಿಂ ದೆರ । ಗುತ್ತ ತಾನಲ್ಲಿಂದೆಬಂದಾ ಪವನನಂದನನು ॥ ಹತ್ತಿಬೆಟ್ಟವ ನಾಗಸಕೆ ಹಾ । ರುತ್ತಬಂದನು ಗಗನಮಾರ್ಗದೊ । ಳುತ್ತರದಕಡೆ ಜಾಂಬವಾದಿಗಳ ದ್ದ ಪರ್ವತಕೆ ॥ ೨೨ ॥ ಘನಮಹೇಂದ್ರಾಚಲದ ಶಿಖರದೊ । ಳನಿಲ ಸಂಭವ ನಿಂದು ಶಿರಬಾ । ಗಿ ನಮಿಸುತ ಜಾಂಬವನು ಮೊದಲಹ ವೃ ದ್ಧಕಪಿಗಳಿಗೆ ॥ ಜನಕಜಾತೆಯು ಕಷ್ಟವನರುಹಿ । ದನುಜನಾಥನ ಪುರ ದೊಳೆಸಗಿದು । ದನುತ್ರಿಳುಹಿ ಮಧುವನಕೆ ಬಂದನು ವಾನರರಸಹಿತ ॥ ॥ ೨೩ ॥ ಮನದಣಿಯೆ ವಾನರರೊಡನೆ ಮಧು । ವನುಕುಡಿದು ಬಳಿ ಕಾ ಪವನ ನಂ । ದನನು ಮಘುವನದಿಂದೆ ಪೊರಮಡು ತಂತರಿಕ್ಷದಲಿ ॥ ಘನಜವದೊಳೈತಂದು ರಘುನಂ । ದನನ ಪದಪಂಕಜಕೆ ಶಿರಬಾ । ಗಿ ನಮಿಸಿದನಾ ಪ್ರಸ್ರವಣ ಶೈಲದೊಳು ಕೈಮುಗಿದು ॥ ೨೪ ॥ ಶಿರವಬಾ ಗಿಸಿ ನಮಿಸಿರಾಮನ । ಚರಣ ಕಮಲಂಗಳಿಗೊಲಿದು ತಾ । ನರುಹಿ ಸೀ ತೆಯ ಕುಶಲವಾರ್ತೆಯು ನನಿಲಸಂಭವನು ॥ ಪರಮಸಂತಸದಿಂದೆ ಕೊ ಟ್ಟನು । ತರಣಿವಂಶ ಲಲಾಮನಿಗಮಲ । ತರದ ಚೂಡಾಮಣಿಯನಾ ಪ್ರಸ್ರವಣ ಶೈಲದಲಿ ॥ ೨೫ ॥ ಧರಣಿಜಾತೆಯು ದುಃಖವೆಲ್ಲವ । ನರುಹ ಲಾ ಪವಮಾನಸುತ ನಂ । ದು ರಘುನಾಥನು ಸೀತೆಯನು ಕಂಡಂತೆ ರ ತ್ನವನು ॥ ಹರುಷದಿಂ ದೀಕ್ಷಿಸುತಖಿಳ ವಾ । ನರರ ಮಧ್ಯದೊಳಾಂಜ ನೇಯನ । ನಿರದೆಸಲೆ ಕೊಂಡಾಡಿದನು ತಲೆದಡವಿ ಹರ್ಷದಲಿ ॥ ೨೬ ॥ ಪವನಸಂಭವನಿಂದ ಕೇಳ್ದು ರ । ಘುವರನಾ ದಶಕಂಧರನ ಸಕ । ಲವಿ ಭವಾತ್ರಿಶಯಂಗಳನು ಬಹುಕೋಪವನು ತಾಳ್ದು । ರವಿತನಯ ನಪ್ಪಣೆ ಯನಾಂತ ಕ । ಪಿವರರೆಲ್ಲರ ಸೇನೆಸಹಿತತಿ । ಜವದೊಳೈತಂದ ನುಳಿದಾ ಕಿಷ್ಕಿಂಧೆಯನುಕೂಡೆ ॥ ೨೭ ॥ ಪ್ಲವಗ ವೀರರ ಸೇನೆಸಹಿತ ರ । ಘು ವರನಾ ಕಿಷ್ಕಿಂಧೆಯನುಳಿದು । ತವಕದಿಂದೈತಂದನಾ ದಕ್ಷಿಣ ಜಲಧಿ ತಟಕೆ ॥ ಅವನಿಪಾಲಕ ರಾಮನೀಕ್ಷಿಸು । ತವನಧಿಯು ನಚ್ಚರಿವಡೆದು ಗಾ । ರವದೊಳಾ ಸುಗ್ರೀವನನು ಕರೆಯಿಸುತಲಿಂತೆಂದ ॥ ೨೮ ಎಂ

ತುಕಪಿಗಳು ಕಡಲದಾಟುವ । ರೆಂತುಲಂಕೆಗೆ ನಾವು ಪೋಗುವೆ । ವೆಂತು ದಶಕಂಧರನ ಸಂಹರಿಸುವೆನು ಸಂಗರದಿ ॥ ಎಂತುಸೀತೆಯ ಪಡೆವೆನೆಂದೆನು । ತಂತವಿಲ್ಲದೆ ರಾಮಚಂದ್ರನು । ಚಿಂತಿಸುತ ಕೇಳಿದನು ನೀಂ ತಿಳಿಸೆನುತ ರವಿಸುತನ ॥ ೧೯ ॥ ಅನಿತರೊಳು ರಾವಣನ ಸೋದರ । ನೆನಿಸುವ ವಿಭೀಷಣನು ರಘುನಂ । ದನನ ಬಳಿಗೈತಂದು ನಾಲ್ವರು ಮಂತ್ರಿಗಳ ಸಹಿತ ॥ ಮನುಕುಲೋತ್ತಮ ನನ್ನ ರಕ್ಷಿಸು । ನಿನಗೆಶರಣಾಗತನು ನಾನೆಂ । ದೆನುತ ರಾಮನ ಪದಕೆರಗಿದನು ಭಕ್ತಿಭಾವದಲಿ ॥ ॥ ೨೦ ॥ ಪರಸಿ ಮನ್ನಿಸಿ ರಾಮನಂದತಿ । ಕರುಣೆಯಿಂದ ವಿಭೀಷಣನಿಗಾ । ಶರಧಿತೀರದೊಳಿತ್ತು ಲಂಕಾರಾಜ್ಯ ಪದವಿಯನು ॥ ಹರುಷದಿಂದಭಿಷೇಕವನು ತಾಂ । ವಿರಚಿಸುತ್ತವೆ ನಭಿಮತದೊಳಾ । ಶರಧಿಯನು ಬೇಡಿದನು ದಾರಿಯ ನೀವುದೆಮಗೆನುತ ॥ ೨೧ ॥ ಜಲಧಿಪತಿ ಪ್ರತ್ಯಕ್ಷನಾಗದಿರೆ ರವಿ ।ಕುಲತಿಲಕನಂದೊಂದು ಶರವನು । ಮುಳಿದು ಬಿಡಲಾ ಬಾಣವತಿಭರದಿಂದೆ ಸಾಗರದ ॥ ಜಲವೆ ಶೋಷಿಸಲೊಡ ನೆಸಗಿದನು । ನಳನುಸೇತುವ ನೈದು ದಿವಸಂ । ಗಳಲಿ ವಾರ್ಧಿಗೆ ಕಪಿಗಳ ಸಹಾಯವನು ತಾಪಡೆದು ॥ ೨೨ ॥ ಸೇತುವನು ಕಂಡುತಲಿಮಾಗು । ತ್ತಾ ತರಣಿಕುಲತಿಲಕರಾಘವೆ । ನಾತಪದೊಳೀಕ್ಷಿಸಿದ ನುತ್ತಮತರಶಕುನಗಳ ॥ ಪ್ರೀತಿಯಿಂದಲೆ ಸಕಲಕಪಿ ಸಂ । ಘಾತವನು ಮನ್ನಿಸಿ ರವಿಸುತನ । ಮಾತನಾಲಿಸುತಾಗ ಲಂಕೆಗೆ ಪೋಗಲನುವಾದ ॥ ೨೩ ॥ ನೂರುಗಾವುದ ಸೇತುವನು ಕಂ । ಡಾ ರಘೂತ್ತಮ ನನುಜನೊಡನೆಯು । ವಿಾರಿದಾನಂದವನು ಪೊಂದುತ ತರಣಿಸಂಭವನ ॥ ಪ್ರೇರಣೆಯೊಳನಿಲಾತ್ಮಜನ ಭುಜ । ವೇರಿನಡೆದನು ಲಂಕೆಗಂಗದ । ನೇರಿಬಂದನು ಲಕ್ಷ್ಮಣನು ರಾಘವನಪಕ್ಕದಲಿ ॥ ೨೪ ॥ ಕೆಲರುಬಂದರು ಗಗನಮಾರ್ಗದಿ । ಕೆಲರು ತೆಪ್ಪಗಳಿಂದೆಬಂದರು । ಕೆಲರುಬಂದರು ಕಡಲೊಳೀಜುತ ರಾವಣನ ಪುರಿಗೆ ॥ ಕೆಲರುಬಂದರು ಲಂಘಿಸುತ್ತಲೆ । ಕೆಲರುಬಂದರು ನಡೆದು ಲಂಕೆಗೆ । ಕೆಲರುಬಂದರು ಕಲಕಲಾರವದಿಂದೆ ಗರ್ಜಿಸುತ ॥ ೨೫ ॥ ಪ್ಲವಗವೀರರ ಸೈನ್ಯಸಹಿತ ರ । ಘುವರನಾಲಂಕೆಯನು ಸೇರ್ದನು । ದಿವಿಜರಿಪು ರಾವಣನಮೇಲಾಗ್ರಹಿಸಿ ಶೀಘ್ರದಲಿ ॥ ಬವರಕುಜ್ಜುಗಿಸುತ್ತ ನೀಲನ । ನುವರ ವಾನರಸೈನ್ಯರಕ್ಷೆಗೆ । ತವಕದಿಂದಂದಿರಿಸಿ ಲಂಕಾಪುರವನೀಕ್ಷಿಸಿದ ॥ ೨೬ ॥ ಬಂದುಹೊಕ್ಕನು ಲಂಕೆಯನು ರಘು । ನಂದನನು ಪುರವರದ ಹೊರಗತಿ । ಚಂದವಾಗಿಹ ಶೈಲವನನದಿ ಕೂಪಸರಸಿ

ಗಳ ॥ ಅಂದವಾಗಿಹ ಸುಪದಂಗಳ । ನಂದುನೋತ್ತುತ ಹೊಗಳಿದನು ವಶ । ಕಂಧರನ ಭಾಗ್ಯಾತಿಶಯವನು ಸಲೆವಿವರಿಸುತ್ತ ॥ ೩೭ ॥ ಬಳಿಕ ರಾಘವನಾಕಪೀಂದ್ರರ । ಬಲವನೊಡಗೊಂಡಂದು ಬಂದನು । ತಳುವದೆ ಸುವೇಲಾಚಲದ ತಪ್ಪಲಿನಹತ್ತಿರಕೆ ॥ ತಿಳಿದು ಯುದ್ಧ ಚಮತ್ಕೃತಿಯ ನತಿ । ಬಲಯುತರೆನಿಪ ವಾನರರನು ಜ । ಗಳಕೆ ತಾನಿರಿಸಿದನು ಲಂಕೆಯ ನಾಲ್ಕುದೆಸೆಗಳಲಿ ॥ ೩೮ ॥ ತನ್ನ ಪಡೆಯನು ನೋಡಬೇಕೆಂ । ದೆನ್ನ ತೈತಂದ ಶುಕನಿಗೆ ಸಂ । ಪನ್ನಮತಿ ರಾಘವನು ಹಿಂಸೆಯನಂದು ಮಾಡಿಸದೆ ॥ ತನ್ನ ಸೈನ್ಯವನೆಲ್ಲ ಕಾಣಿಸು । ತಿನ್ನು ಹೋಗೆಂದವನ ಕಳುಹಿವ । ನುನ್ನತ ಸುವೇಲಾಚಲದ ಕಿಬ್ಬಿಯೊಳು ನಲವಿಂದೆ ॥ ೩೯ ॥ ಗರುಡನಾಕಾರದವೊಲಾ ರಘು । ವರನು ತನ್ನಯಪಡೆಯನಿಲ್ಲಿಸಿ । ವರ ವಿಭೀಷಣ ತರಣಿನಂದನ ಲಕ್ಷ್ಮಣರಸಹಿತ ॥ ಭರದೊಳಿರದೆ ಸುವೇಲಗಿರಿಯ ಶಿ । ಖರವನಾರೋಹಿಸುವ ರೀತಿಯ । ನರುಹಿದನು ಕಾಳಗವನೆಸಗುವ ಕೌತುಕದೊಳಂದು ॥ ೪೦ ॥

ಇಂತು ಇಪ್ಪತ್ತೊಂದನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೧೦೩೨.



## ಇಪ್ಪತ್ತೆರಡನೆಯ ಅಧ್ಯಾಯ.

ಸೂಚನೆ ॥ ಪತಿಯ ಮಾಯಾಶಿರವ ನೀಕ್ಷಿಸು ।
ತ ತಡೆಯದೆ ದುಃಖವನು ಧರಣೀ ।
ಸುತೆ ವಿಲಾಪಿಸಿ ಮರುಗುತಿದ್ದಳು ಭಯದೆನಡುನಡುಗಿ ॥

ಜಲನಿಧಿಗೆ ಸೇತುವನುಕಟ್ಟಿ ಸ । ಕಲ ಕಪೀಂದ್ರರ ಸೈನ್ಯಸಹಿತವ । ಹಿಲದೊಳು ಸುವೇಲಾಚಲದ ಕಿಬ್ಬಿಯಸಮೀಪದಲಿ ॥ ಇಳಿಸಿ ನಿಜ ಸೈನ್ಯವನು ಸಂಗರ । ಕೆಳಸಿನಿಂದಿಹ ರಾಮನನು ತಾ । ತಿಳಿದನಾದಶಶಿರನು ಶುಕಸಾರಣರ ಮುಖದಿಂದ ॥ ೧ ॥ ಸಾರಣನವಾತಿಂದೆ ಲಂಕೆಗೆ । ವೀರರಾಮನು ಬಂದರೀತಿಯ । ನಾ ರಜನಿಚರನಾಥನಾಲಿಸಿ ತಾಳ್ದುಭೀತಿಯನು ॥ ಕ್ರೂರಬುದ್ಧಿಯೊಳೊಂದು ಪಾಯವ । ನಾರುಮರಿಯದ ತೆರದೆಯೋಚಿಸಿ । ಘೋರವಿದ್ಯುಜ್ಜಿಹ್ವನನು ಕರೆಯಿಸುತಲಿಂತೆಂದ ॥ ೨ ॥ ನೀನು ರಾಮನಶಿರದವೋಲು ನಿ । ದಾನಿಸದೆ ತಲೆಯೊಂದನಾಗಿಸಿ । ದಾನ

ವರು ಸಂಹರಿಸಿದರು ರಘುನಂದನನನೆನುತ ‖ ಜಾನಕಿಯು ತಿಳಿವಂತೆ ನನಗನು । ಮಾನಿಸದೆ ನೀಂ ವನದೆತೋರಿಸು । ನಾನುಪೋಪೆ ನಶೋಕ ವನಕೆನುತ ಕಳುಹಿಸಿದ ‖ ೩ ‖ ಒಡನೆ ವಿದ್ಯುಜ್ಜಿಹ್ವನೈತಂ । ದೊಡೆಯ ನಾಣತಿಯಂತೆ ಸಂತಸ । ವೆಡೆದೆಸಗಿ ಕಾರ್ಮುಕಶಿರಂಗಳ ನೆರಡನತಿ ಜವದೆ ‖ ಪಿಡಿದುಕೊಂಡೈತಂದು ರಾವಣ । ನಡಿಗೆರಗಿ ಪೇಳಿದನು ರಾಮನು । ಮಡಿದನು ದನುಜರಿಂದೆ ನೋಡೈಶಿರಧನುಗಳೆನುತ ‖ ೪ ‖ ಜನಕಜಾತೆಗೆ ಕಾರ್ಮುಕಶಿರಗ । ಳನು ಮುದದೆತೋರಿಸುತ ರಘುನಂ । ದನನು ಸತ್ತನು ದನುಜರಿಂದೆಂದಸುರಪತಿ ನುಡಿಯೆ ‖ ಘನಕುಸುಮ ಗಂಧಾಕ್ಷತೆಗಳಿಂ । ದ ನೆರೆಶೋಭಿಪ ಧನುವನೀಕ್ಷಿಸು । ತಿನಯನ ಶಿರವ ಪಿಡಿದು ಗೋಳಾಡಿದಳು ವೈದೇಹಿ ‖ ೫ ‖ ನನ್ನ ಗಂಡನಳಿದನೆ ಹಾ ನನ । ಗಿನ್ನು ವೈಧವ್ಯ ವೊದಗಿದುದೇ । ನಿನ್ನಕೋರಿಕೆ ಸಫಲವಾದುದೆ ಕೈಕೆ ತಾನಿಂದು ‖ ತನ್ನ ತನಯನ ಮರಣವನು ಕಂ । ಡಿನ್ನು ಕೌಸಲ್ಯೆ ಬದುಕುವಳೆಂ । ತೆನ್ನುತಂದುರೆ ಶೋಕಿಸಿದಳಾ ಸೀತೆರೋದಿಸುತ ‖ ೬ ‖ ನಿನಗೆ ರಾಘವ ನಾವತೊಂದರೆ । ಯ ನೆಸಗಿದನೆಲೆ ಕೈಕೆ ನಿನ್ನಿಂ । ದಿನ ಕುಲವೆ ನಾಶವನು ಹೊಂದಿದುದಲ್ತೆ ಭೂಮಿಯಲಿ ‖ ವನಕೆ ಬಂದೆವು ನಾವು ಮೂವರು । ಮನುಕುಲೋತ್ತಮ ದಶರಥನು ಸ । ತ್ತನಸುರೇಂದ್ರನ ಬಂಧನಕೆನಾನಿಲ್ಲಿ ಸಿಕ್ಕಿದೆನು ‖ ೭ ‖ ಎನುತ ಸೀತೆ ಮುಹೂರ್ತ ಕಾಲದ ‖ ತನಕ ಮೂರ್ಛೆಯನೈದಿ ಬಳಿಕಾ । ವನದೊಳಂತಿರದೊಡನೆ ಚೇತರಿಸುತ್ತ ಬಿಸುಸುಯ್ದು ‖ ಘನತರವಲಂಕೃತಿಯ ಮಸ್ತಕ । ವನಿರದಾಘ್ರಾಣಿಸಿಯೆ ಕಾರ್ಮುಕ । ವನವಲೋಕಿಸುತಂದು ಗೋಳಾಡಿದಳು ಸ್ವೈರಿಸದೆ ‖ ೮ ‖ ಮುರಿದಬಾಳೆಯ ಗಿಡವತೆರದಿಂ । ದೊರಗಿದುಃಖವ ನಾಂತು ಗಂಡನ । ಮರಣವೆ ಮೊದಲಸಾವೆನುತ ಪೇಳುವರಬಲೆಯರಿಗೆ ‖ ಪಿರಿದೆನಿಪ ಶೋಕಾಬ್ಧಿಯೊಳು ಮುಳು । ಗಿರುವೆನನ್ನನು ಮೇಲಕೆತ್ತಲು । ಭರದೊಳೈತಂದೆನ್ನ ಗಂಡನಳಿದನೆ ತಾನಿಂದು ‖ ೯ ‖ ಜ್ಞಾನಿಗಳು ನುಡಿದಿದ್ದರು ಮೊದಲು । ನೀನು ದೀರ್ಘಾಯುಷ್ಯನೆನುತಿಂ । ದಾನುಡಿಯು ಸುಳ್ಳಾದುದಲ್ಲವೆ ನನ್ನಬಿಟ್ಟೀಗ ‖ ನೀನು ಭೂದೇವಿಯನು ಸತಿಸ । ನ್ಮಾನಿಸುತ್ತಾಲಿಂಗಿಸಿರುವೆ ಮ । ಹಾನುರಾಗದೊಳೆಂದು ಜಾನಕಿ ದುಃಖಿಸಿದಳಲ್ಲಿ ‖ ೧೦ ‖ ತಂದೆ ದಶರಥನೊಡನೆ ಕೂಡಿದೆ । ಹಿಂದೆ ಮರಣವನಾಂತ ಪಿತೃಗಳೊ । ಳಂದುಸೇರಿದೆಯಲ್ತೆ ನೀನಳಿದಮರಲೋಕದಲಿ । ಸಂದಸುಕೃತಗಳನ್ನು ವಿರಚಿಸಿ । ಚಂದದಿಂದುರೆ ಮೆರೆವತಾರಕ ।

ದಂದದೆ ನೆರೆವಿರಾಜಿಸುತ್ತಿಹೆ ಗಗನಮಂಡಲದಿ ‖ ೧೧ ‖ ಹುಡುಗಿಯಾಗಿ
ಹಕಾಲದಿಂದಲು । ಬಿಡದೆ ನಿನ್ನನುಸೇರಿ ಸಂತತ । ಪಡಿಗಡಿಗೆ ನಿನ್ನ ನತಿ
ಭಕ್ತಿಯೊಳ್ಪೃದೆ ಸೇವಿಸುತ ‖ ನಡೆದು ಸಹಧರ್ಮಿಣಿಯೆನಿಸಿದ । ನೆನ್ನೊ
ಡನೆ ನೀನೇಕಿಂದು ಕರುಣಿಸಿ । ನುಡಿವುದಿಲ್ಲವದೇಕೆ ನನ್ನನು ನೀನು
ನೋಡದಿಹೆ ‖ ೧೨ ‖ ಮದುವೆಕಾಲದೊಳೆನ್ನ ಮುಂಗಡೆ । ವಿದಿತನೀತಿ
ಪಥವನು ತಪ್ಪದ । ನುದಿನ ನಿನ್ನೊಡನಾಂ ಚರಿಪೆನೆಂದೊರೆದನುಡಿಗಳ
ನು ‖ ಹೃದಯದೊಳು ನೆನೆಯುತ್ತ ನನ್ನನು । ಪದೆದುಸಗ್ಗಕೆ ಕರೆದು
ಕೊಂಡೈ । ದದಿರುತಿಹೆ ನೀನಿಂದು ನನಗಿನ್ನೇನುಗತಿಯುಂಟೆ ‖ ೧೩ ‖
ಹಗಲಿರುಳು ದುಃಖಿಸುತ ನನ್ನಬ । ಳಗವಕಾಣದೆ ಪರವಶಕೆ ಸಿ । ಕ್ಕಿ
ಗತಗಡನೆಯೆ ನಡುಗುವೆನ್ನನುಬಿಟ್ಟು ನೀನಿಂದು ‖ ಸೊಗಸಿನಿಂದೀಲೋ
ಕವನು ತೊರೆ । ದು ಗಮಿಸಬಹುದೆ ನಾಕಲೋಕಕೆ । ಜಗದೊಳನ್ನಾ
ರೆನಗೆ ಗತಿಯೆಂದತ್ತಳಾಸೀತೆ ‖ ೧೪ ‖ ಮಂಗಳಕರಮೆನಿಸುತ ನಿರತ
ವು । ಕಂಗೊಳಿಸುವೆನ್ನ ಘನತರದಂ । ಗಂಗಳಂದಡಿಗಡಿಗೆ ನಾನಾಲಿಂಗಿ
ಸಿದನಿನ್ನ ‖ ಅಂಗವನು ತಿನ್ನುವುವು ಕೂಗುತ । ಸಂಗಳಿಸಿ ಗೋಮಾ
ಯು ರಣಗೃ । ಧ್ರಂಗಳೆಂದುರೆ ದುಃಖಿಸಿದಳಾಸೀತೆ ವನದೊಳಗೆ ‖ ೧೫ ‖
ಅಗ್ನಿಹೋತ್ರಗಳಿಂದೆ ನಿನಗಿಂ । ದಗ್ನಿಸಂಸ್ಕಾರ ನಡಿಯದಿಪುದೆ । ಭಗ್ನ
ವಾದುದೆ ನನ್ನ ಕೋರಿಕೆ ಧಾರಿಣಿಯೊಳಿಂದು ‖ ಅಗ್ನಿಯೊಳು ನಿನ್ನೊಡನೆ
ಬೀಳುತ । ಮಗ್ನಳಾಗದೆಪೋದೆ ಚಿತಿಯೊಳು । ಲಗ್ನಕಾಲದೊಳಾದಸ
ಖತನ ಮಿಂದಳಿದುದಲ್ತೆ ‖ ೧೬ ‖ ವನಕೆಬಂದೆವು ನಾವುಮೂವರು ।
ನಿನಗೆಬಂದುದು ಸಾವು ನಾನೀ । ದನುಜನಾಥ ನಧೀನವಾದೆನು ನಮ್ಮನ
ಗಲುತ್ತ ‖ ಘನಮನೋವ್ಯಥೆಯಿಂದ ಲಕ್ಷ್ಮಣ ‖ ನು ನಿಜನಗರಿಗೆ ಪೋಗ
ಲಿಂದಾ । ತನನು ಕೇಳ್ವಳು ತನಯನಕ್ಷೇಮವನು ಕೌಸಲ್ಯೆ ‖ ೧೭ ‖
ದನುಜರಿಂದಲೆ ನೀನಳಿದುದನು । ದನುಜನಾಥ ನಧೀನವಾದೆ । ನ್ನನು
ತಿಳುಹಲಾ ಲಕ್ಷ್ಮಣನು ಕೌಸಲ್ಯೆರೊದಿಸುತ ‖ ಘನತರದ ದುಃಖವನು
ಪೊಂದುತ । ತನುವನುಳಿದೈದುವಳು ಮರಣವ । ನೆನಗೆ ಬಾರದುಸಾವೆ
ದೇವನೆನುತ್ತ ಮರುಗಿದಳು ‖ ೧೮ ‖ ತರಣಿನಂದನನಿಂದೆ ಸಖ್ಯವ ।
ವಿರಚಿಸುತ ವಾನರರಸಹಿತೀ । ಶರಧಿಯನುದಾಟುತ್ತ ಲಂಕಾಪುರಿಗೆ ನಡೆ
ತಂದು ‖ ಭರದೆ ನನ್ನೊಡಗೊಂಡಯೋಧ್ಯೆಗೆ । ತೆರಳಬೇಕೆಂದಿದ್ದ ರಾ
ಮನು । ಧುರದೊಳೆನ್ನ ನಿಮಿತ್ತವಾಗಿಯೆ ಮಡಿದನೀಪರದಿ ‖ ೧೯ ‖
ದಶಶಿರನೆ ಕೇಳ್ರಘುವರನಿಗೀ । ವಸುಧೆಯೊಳು ನಾಂ ಮೃತ್ಯುವಾಗಿಹೆ ।

ದಶರಥನ ಮಂದಿರವನೇರಿದೆ ನಿಂದುನೀನಿರದೆ ॥ ಎಸೆವ ರಘುನಂದನನ
ಶಿರಕೆ । ನ್ನ ಶಿರವನು ದೇಹಕ್ಕೆ ದೇಹವ । ನೊಸೆದುಸೇರಿಸಿ ಬೇಗಸೆನ್ನನು
ರಾಘವನವೇಲೆ ॥ ೨೦ ॥ ಪತಿಯೊಡನೆ ವಹ್ನಿಯೊಳು ನಾನೆ । ಸ್ವ
ತನುವನು ಬೇಯಿಸಲು ನನಗೀ । ಕ್ಷಿತಿಯೊಳದು ಮಂಗಳಕರವೆನಿಸಿಪ್ಪು
ದಲ್ತೆ ಯೋಚಿಸಲು ॥ ಪತಿಯುಸದ್ಗತಿಯನ್ನು ಪೊಂದುವೆ । ನು ತಳು
ವದೆ ನಾನೀಮುಹೂರ್ತದೊ । ಳು ತನುವನುನೀಗುತ್ತ ಕೇಳೆಂದತ್ತಳ
ವನಿಜೆಯು ॥ ೨೧ ॥ ಪತಿಯೆದೈವವು ಪತಿಯೆಸದ್ಗತಿ । ಪತಿಯೆ ಸತ್ಯವು
ಪತಿಯೆ ಧರ್ಮವು । ಪತಿಯೆ ಸತಿಯರಿಗುತ್ತಮೆತರದ ಲೋಕಗಳೆನಿಪ್ಪವು ।
ಪತಿಯೆ ದಮೆಯು ಕ್ಷಮೆಯು ಪತಿಯೆ ವ । ನಿತೆಯರಿಗಹಿಂಸಾಗುಣವು
ಕೇ । ಳ್ಪತಿಯೆ ಭೋಗತ್ಯಾಗ ಪುಣ್ಯಗಳೆನಿಸಿಕೊಂಡಿಹನು ॥ ೨೨ ॥
ಎನುತಕೇಳಿಹೆ ನೋಡಲಿಂ ದಿನ । ಯನನು ಬಿಟ್ಟೆನಗಾಪಗತಿಯುಂ । ಟೆ
ನುತ ಗಂಡನ ಶಿರಶರಾಸನಗಳನು ನೆರೆನೋಡಿ ॥ ಜನಕನಂದನೆ ರೋದಿ
ಸಿದಳಾ । ವನದಮಧ್ಯದೊಳಂದು ರಘುನಂ । ದನನ ಸಾವನುಕೇಳ್ದು
ಸ್ಥೈರಿಸದತ್ತಮನದಲ್ಲಿ ॥ ೨೩ ॥ ದನುಜನಾಥನೆ ನಿನ್ನದರ್ಶನ । ಕೆನುತ
ಕಾದಿಹರಖಿಳರಾಕ್ಷಸ । ರೆನುತ ಸೇವಕನೊಬ್ಬ ನೈತಂದೆರಗಿಬಿನ್ನವಿಸೆ ॥
ವನವನುಳಿ ದತ್ಯಾತುರದೊಳಂ । ದು ನಡೆತಂದನು ಸಭೆಗಮಾತ್ಯರೊ ।
ಡನಸುರೇಂದ್ರನು ಯುದ್ಧದಾಲೋಚನೆಯನಾಗಿಸಲು ॥ ೨೪ ॥ ಚರನ
ಮಾತನುಕೇಳ್ದು ದಶಕಂ । ಧರನು ಸೇವಕರೊಡನೆ ನಿಜಮಂ । ದಿರಕೆ
ತೆರಳಿದಬಳಿಕ ಜಾನಕಿನೋಡುತಿರಲಂದು ॥ ಶಿರಶರಾಸನ ಗಳೆರಡಲ್ಲಿಯು ।
ಭರದಿಕಾಣದೆ ಮಾಯವಾದವು । ಧರಣಿಜಾತೆಗೆ ವಿಸ್ಮಯವನಾಗಿಸುತ ವನ
ದೊಳಗೆ ॥ ೨೫ ॥ ಈತೆರದ ಮೋಹವನು ಪಡೆದಾ । ಸೀತೆಯನುನೋ
ಡುತ ಸರಮೆ ಸಂ । ಪ್ರೀತಿಯಿಂದಲೆ ಪೇಳದಳು ಶೀಘ್ರದೊಳು ನಡೆತಂ
ದು ॥ ಸೀತೆಕೇಳೆಲೆ ತಾಯೆ ನೀನಿಂ । ದೀತಕೆ ಮನದೊಳಂತು ನೋ
ಯುವೆ । ಭೀತಿಯನುಬಿಡು ರಾಮನಳಿಯದೆ ಕುಶಲವಾಗಿಹನು ॥ ೨೬ ॥
ಅಮ್ಮ ಜಾನಕಿ ಕೇಳಸುರಪತಿ । ಸುಮ್ಮನೀತೆರದಿಂದೆ ಹೆದರಿಸಿ । ನಮ್ಮ
ಮುಂದೀವನದೊಳಗೆ ಮಾಯೆಯನುಕಲ್ಪಿಸಿದ ॥ ತಮ್ಮನೊಡನಾ ರಾಮ
ಚಂದ್ರನು । ನೆಮ್ಮದಿಯೊಳಿಹ ನೆನ್ನಮಾತನು । ನೆಮ್ಮಿನೀನಿರುಭಯ
ಪಡದೆ ಯಂದರುಹಿದಳುಸರಮೆ ॥ ೨೭ ॥ ವರಸುವೇಲಾಚಲದ ಕಿಬ್ಬ
ಯೊ । ಳುರವಣಿಸಿ ನಿಂದಿಹನು ದಶಕಂ । ಧರನ ಸಂಗರಕೆನುತ ವಾ
ನರರೊಡನೆ ರಾಘವನು ॥ ಹರುಷದಿಂದಿಹ ನಾರಘುವರನು । ಧರೆಯೊ

ಳಾತನ ತಮ್ಮ ಲಕ್ಷ್ಮಣ | ನಿರುವನು ಕ್ಷೇಮದಲಿ ರಾಮನನ್ನೊಲಿದು ಸೇ
ವಿಸುತ || ೧೯ || ಕ್ಷೇಮದಿಂದಿಹ ರಖಿಳವಾನರ | ರೀಮಹೀಮೊಳಾ
ತರಣಿಸುತನು | ಕ್ಷೇಮವಾಗಿಹ ನೆನ್ನ ಮಾತನು ಕೇಳು ಸತ್ಯವಿದು ||
ಭೂಮಿಸುತೆ ನಿನಗಾಗಿ ನನ್ನ | ಕ್ಷೇಮವನು ನೋಡುವವಳಲ್ಲವು |
ನೇಮದಿಂದಾವವಿಧ ಕಷ್ಟವನಾದರು ಸಹಿಸುವೆ || ೨೦ || ಜಾನಕಿ
ಯೆ ಕೇಳು ನಿನಗೊಸುಗ | ನಾನುಪಾಯವು ಸಿದ್ಧವಾಗಿಹೆ | ನೀನೆ
ಲಮೊಳಂದಿದನು ನಿಶ್ಚಯವೆಂದು ತಿಳಿಸೀನು || ದಾನವೇಂದ್ರನು ಮಂ
ತ್ರಿಗಳೊಡನೆ | ತಾನು ರಾಮನಮೇಲೆ ಕಾರ್ಯವಿ | ಧಾನವನುಯೋ
ಚಿಸುತ ಸಭೆಯಲಿ ಕುಳಿತುಕೊಂಡಿಹನು || ೨೧ || ದನುಜನಾಥನು
ಯುದ್ಧಸನ್ನ | ದ್ಧನೆನಿಸಿ ನಗರದಿಂದೆ ಪೊರಮಡು | ವನು ಮಹೀಸುತೆ
ಕವನ ಕೋಲಾಹಲ ನಿನಾದವನು || ಮನವಿರಿಸಿನೀಂ ಕೇಳು ರಘುನಂ |
ದನನು ದಶಕಂಠನವಧಿಸಿ ನಿ | ನ್ನನು ಕರೆದುಕೊಂಡೊಯ್ವ ನಾತನ
ಪುರಕೆಶೀಘ್ರದಲಿ || ೨೨ || ನಿನ್ನ ದುಃಖವುತೀರಿದುದು ಕೇ | ಳಿನ್ನು ನೀ
ನು ಪತಿಯನುಸೇರುವೆ | ನಿನ್ನಗಂಡನಕೂಡೆ ಸೌಖ್ಯಂಗಳನು ಪಡೆಯು
ತ್ತ || ಸನ್ನುತವೆನಿಪ ಯಜ್ಞಯಾಗಗ | ಳನ್ನು ಮಾಡುವೆ ಪತಿಸಹಿತ
ಕೇ | ಳೆನ್ನ ಮಾತನೆನುತ್ತ ಸೀತೆಗೆಪೇಳ್ದಳಾಸರಮೆ || ೨೩ || ಸರಮೆ
ಪೇಳಿದ ಮಾತನಾಲಿಸಿ | ಧರಣಿನಂದನೆ ಸಂತಸವನಾಂ | ತಿರದೆ ಮನ್ನಿಸಿ
ಕೈವಿಡಿದು ಕೂಡಿಸುತಲುಪಚರಿಸಿ || ಸರಮೆ ಕೇಳಿನ್ನಲ್ಲಿ ನಿನಗತಿ | ಕ
ರುಣೆಯಿದ್ದರೆ ದನುಜನಾಥನ | ಪರಿಯನರಿಯುತೆ ನನಗೆತಿಳುಹಿಸೆನುತ್ತ
ಪೇಳಿದಳು || ೨೪ || ಆಗಬಹುದೆಂದಾ ಸರಮೆಯನು | ರಾಗದಿಂದೆ ಮ
ಹೀಸುತೆಗೆ ನುಡಿ | ದಾಗಳಾವನದಿಂದೆ ಬಂದಾರಾವಣನಬಳಿಗೆ || ಪೋಗಿ
ತನ್ನನು ತಿಳಿಯದಂತಿರೆ || ಬೇಗ ದನುಜೇಶ್ವರನ ಯುದ್ಧೋ | ದ್ಯೋ
ಗವೆಲ್ಲವ ನರಿತುಬಂದಳಶೋಕವನಕಾಗಿ || ೨೫ || ಬಂದಶೋಕವನಕ್ಕೆ
ಸೀತೆಯ | ಮುಂದೆನಿಲ್ಲಲು ಸರಮೆಯನು ಸಾ | ನಂದದಿಂ ಕಂಡವಳ
ಮನ್ನಿಸಿ ಕುಳದೆಕೂಡಿಸುತ || ಇಂದು ನೀನೇನೇನನರಿತೈ | ತಂದೆ ತಾಯೆ
ಕರುಣಿಸಿತಿಳಿಸೆನೆ | ಗೆಂದುಕೇಳಲು ಸರಮೆಪೇಳಿದಳೊಲಿದು ಜಾನಕಿಗೆ ||
|| ೨೬ || ಜನಕನಂದನೆ ಕೇಳು ರಘುನಾ | ಥನಿಗೆ ನಿನ್ನನು ಕೊಡುವು
ದೆನ್ನುತ | ದನುಜನಾಥಂಗರುಹೆ ಪಲತೆರದಿಂದೆ ಮಂತ್ರಿಗಳು || ಮನಕೆ
ತಾರದೆ ಕೋಪಿದರು ಪೇ | ಳ್ದ ನುಡಿಗಳನಾ ದಶಶಿರನು ರಾ | ಮನೊ
ಳು ಯುದ್ಧಕೆ ಸಿದ್ಧವಾಗಿಹನವನ ಬಲಸಹಿತ || ೨೭ || ಪುರದನಾಲ್ದೆಸೆ

ಗಳಲಿ ಕಾಳಗ | ಕುರವಣಿಸಿ ನಿಲ್ಲುವುದೆನುತ ದಶ | ಶಿರನು ಸೇನಾಪತಿ ಗಳಿಗೆ ತಾನಪ್ಪಣೆಯಕೊಡಲು || ಭರದೊಳೆಲ್ಲರು ಕೋಪಿಸುತ ವಾನರರೊಡನೆ ಸಂಗರಕೆ ಸನ್ನ | ದ್ಧರೆನಿಸುತ ಚತುರಂಗಬಲಸಹಿತೀಗ ಹೊರಡುವರು || ೩೭ || ವೆುಂದೆಭೀಕರವೆುನಿಪ ಯುದ್ಧದೊ | ಳಂದಗ ಟ್ಟಳಿವರು ದನುಜರೆನು | ತಿಂದು ನಂಬಿಕೆಯಾಗಿಹುದೆನಗೆ ಜಾನಕಿಯೆ ಕೇಳು || ನೊಂದು ಬಾಂಧವರೊಡನೆ ರಾಘವ | ನಿಂದೆ ದಶಕಂಧರನ ಸಾಯುವ | ನೆಂದುತಿಳಿ ಲಯವೆಹುದು ಲಂಕಾಪುರವುನಿಜವಾಗಿ ||೩೮|| ತಾಯೆ ಕರುಣಿಸಿಕೇಳು ಬಂಧುನಿ | ಕಾಯಸಹಿತೀ ದಶಶಿರನ ರಘು | ರಾಯನು ವಧಿಸಿ ನಿನ್ನ ಕರೆದೊಯ್ಯುವನು ಶೀಘ್ರದಲಿ || ವಾಯುವೇಗ ದೊಳೀ ನಗರದಿಂ | ದಾಯುಯೋಧ್ಯೆಗೆ ಪೋಗುತಿಹನೀ | ಮಾಯೆಯನು ನೀಂ ತಿಳಿಯವೇತಕೆ ಬರಿದೆದುಃಖಿಸುವೆ || ೩೯ || ನಿನಗೆ ಒಳ್ಳಿಯದಾಗುವುದು ಮೇ | ದಿನಿಯಣುಗಿ ಕೇಳೆನ್ನ ಮಾತುಗ | ಳನು ನಿಜವೆನುತನಂಬು ಸಂದೇಹವನುಳದು ನೀನು || ದಿನಮಣಿಗೆ ನೀಂ ಭಕುತಿಯಿಂದೆರ | ಗು ನಿಸಗಾತನು ಶುಭವನೀಯುವ | ನನುತಸೀತೆಗೆ ಪೇಳ್ದು ಪೋದಳು ಸರಮೆತನ್ನೆಡೆಗೆ || ೪೦ || ಬಳಿಕಜಾನಕಿ ದುಃಖವನು ತಾನುಳದು ರಾಮನ ಚರಣಕಮಲಂ | ಗಳನು ತನ್ನಯಮನದೆ ಜಾನಿಸುತಾವನದ ನಡುವೆ || ಬಳಸಿತನ್ನನು ಭೀತಿವಡಿಸುವ | ಖಿಳ ನಿಶಾಚರ ವನಿತೆಯರ ನುಡಿ | ಗಳನು ಕೇಳುತ ನೋಡುತಿದ್ದಳು ರಾವನಾಗಮವ || ೪೧ ||

ಇಂತು ಇಪ್ಪತ್ತೆರಡನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೧೧೧೩.



## ಇಪ್ಪತ್ತಮೂರನೆಯ ಅಧ್ಯಾಯ.

ಸೂಚನೆ|| ಸೇರಿಲಂಕಾಪುರವ ನಾಜೆಯೊ |
ಳಾ ರಜನಿಚರರೊಡನೆ ಕಾದು |
ತ್ತಾ ರಘುವರನು ಮೂರ್ಛೆಹೋದನು ಸುರಪಜಿತುವಿಂದ ||

ಅತ್ತಲಾತಿರಲಾ ರಘೂದ್ವಹ | ನಿತ್ತಖಿಳವಾನರರ ಸಹಿತಲಿ | ರುತ್ತ ಮೆರೆವಸುವೇಲಗಿರಿಯ ಸಮೀಪದೊಳು ತಾನು || ಬಿತ್ತರವಕಪಿಸೈ

ನ್ಯವನು ನೋ । ಡುತ್ತ ದಶಕಂಧರ ನನುಜನನು । ಹತ್ತಿರಕೆಬರವೊ
ಡಿಸುತ ಪೇಳಿದನು ವೈದಡವಿ ॥ ೧ ॥ ದನುಜವಲ್ಲಭ ಕೇಳು ದಶಕಂ । ಠ
ನನು ಸಂಹರಿಸುವುದಕಾಗಿಯೆ । ಘನಜವದೊಳೀ ಲಂಕೆಗೆತೆರಳಬೇಕು
ರಾವಣನ ॥ ಮನೆಯನಾತನ ಪಟ್ಟಣವನಿಂ । ದು ನೆರೆಪರಿಕಿಸಬೇಕೆನು
ತೊರೆದು । ಘನಸುವೇಲಾಚಲದ ಸಾನುವನೇರಿದನು ಕೂಡೆ ॥ ೨ ॥ ಬಳ
ನೆಲಕ್ಷ್ಮಣ ಹನುಮವಾನರ । ರೊಡೆಯ ಸುಗ್ರೀವಾಂಗದ ಶರಭ ।
ಕಡುಗಲಿಗವಯ ಗಂಧಮಾದನ ಮುಖ್ಯಸೈನಿಕರು ॥ ಕಡುಜವದೊಳಾ
ರಾಘವನ ಹಿಂ । ಗಡೆಯೊಳೇರಿದರಾ ಗಿರೀಂದ್ರದ । ನಡುವೆರಂಜಿಪತ
ಪ್ಪಲನು ಕಲಕಲನಿನಾದವಲಿ ॥ ೩ ॥ ಬಳಿಕ ನೋಡಿದರಾ ತ್ರಿಕೂಟಾ । ಚಲ
ದ ಶೃಂಗವೊಳನವರತ ಕಂ । ಗೊಳಿಪ ಲಂಕೆಯನಖಿಳ ವಾನರವೀರ
ರೈತಂದು ॥ ಹೊಳೆವಸಾಧಗಳಿಂದೆ ಸಲೆಥಳ । ಥಳಿಪ ಬೀದಿಗಳಿಂದೆಸೆವ
ಬಾ । ಗಿಲುಗಳಿಂದಾ ಲಂಕೆಕಾಣಿಸಿತಂದು ಕಪಿಗಳಿಗೆ ॥ ೪ ॥ ವನಗಿರಿ
ನದೀ ಕೂಪಗೋಪುರ । ಘನಪತಾಕ ವಿಮಾನ ಸಚ್ಛ । ತ್ರನುತಚಾಮ
ರ ಮಕರತೋರಣ ಸಿಂಗುರಿಗಳಿಂದ ॥ ಅನುದಿನವೆಸೆವ ಲಂಕೆಯನುಬಂ ।
ದು ನೆರೆನೋಡಿದ ರಖಿಳವಾನರ । ರಿನಕುಲೇಂದ್ರನು ಕಂಡು ಲಂಕೆಯ
ನಾಂತನಚ್ಚರಿಯ ॥ ೫ ॥ ಎರಡನೆಗಾವುದದಗಲ ದಿಂದುರೆ । ಮೆರೆವವಿನು
ತ ಸುವೇಲಗಿರಿಯ ಶಿ । ಖರವನಾರಘುವರನು ಹತ್ತಿದ ನಖಿಳಬಲಸಹಿತ ॥
ಭರದೊಳಂದಿರದಾತ್ರಿಕೂಟ ಶಿ । ಖರದ ಗೋಪುರದೊಳು ಕುಳಿತುಕೊಂ ।
ಡಿರುವ ದಶಕಂಠನನು ಕಂಡನು ತನ್ನ ಮುಂದುಗಡೆ ॥ ೬ ॥ ಧರಿಸಿ ರತ್ನಾಭ
ರಣಗಳ ಕೇ । ಸರಿಸುಗಂಧವ ನಂಗದಲ್ಲಿ ಸ । ವರಿಕೊಳುತ ಪೀತಾಂಬ
ರವನಾಚ್ಛಾದಿಸುತ ನಲಿದು ॥ ಮೆರೆವಸತ್ತಿಗೆಯನು ಹಿಡಿಸಿಕೊಂ । ಡೆರಡು
ಚಾಮರಗಳನು ಬೀಸುತಿ । ಹ ರಮಣಿಯರಿಂದೆಸೆವ ರಾವಣನನ್ನು
ನೋಡಿದನು ॥ ೭ ॥ ತರಣಿಸುತ ಸುಗ್ರೀವನಾ ದಶ । ಶಿರನಕಂಡತಿಕೋ
ಪವನು ತಾ । ಳ್ದಿರದೆ ಗಗನಕೆಹಾರಿ ಬಂದೈತಂದುರಾವಣನ ॥ ವರಕಿರೀ
ಟವ ನಿಳೆಗೆಬೀಳಿಸಿ । ಧುರದೊಳಸುರೇಂದ್ರನನು ಸೋಲಿಸಿ । ಭರದೊಳಾ
ರಾಮನ ಸಮೀಪಕೆಬಂದನಲ್ಲಿಂದ ॥ ೮ ॥ ಬಳಿಕರಾಘವನಾ ಸುವೇಲಾ ।
ಚಲದ ಮೇಲಿಂದಿಳಿದು ಧಾರಿಣಿ । ತಳಕೆ ಕಪಿಗಳಸಹಿತ ಲಂಕಾನಗರಿ
ಗಿದಿರಿನಲಿ ॥ ಖಳನಿಶಾಚರ ನಾಥನೊಡನೆ ಜ । ಗಳವನಾಗಿಸಬೇಕೆನುತ
ಸಲೆ । ಮುಳಿದುನಿಂದನು ಲಂಕೆಗುತ್ತರಕಡೆಯ ಬಾಗಿಲಲಿ ॥ ೯ ॥ ವಾನ
ರರ ಕೋಲಾಹಲಗಳನು । ದಾನವರು ಕೇಳಿದರು ಕಿವಿಗೊ । ಟ್ಟೈನಗ

ರದೊಳು ತಮ್ಮ ಸದನಂಗಳೊಳು ತಾವಿದ್ದು ॥ ದಾನವರು ಭೀತಿಯನು
ಹೊಂದಿದ । ರಾನಿಶಾಚರನಾರಿಯರು ಶೋ । ಕಾನಲನ ಕೀಡಾಗಿಪೋ
ರು ಲಂಕೆಕಂಪಿಸಿತು ॥ ೧೦ ॥ ಸ್ಮರಿಸಿಕೊಳ್ಳುತ ರಾಜನೀತಿಯ । ನು ರ
ಘುವರನಾ ವಾಲಿಸುತನಂ । ಕರೆದುಪೇಳಿದನಾ ವಿಭೀಷಣ ನನುಮತಿಯ
ನಾಂತು ॥ ಇರದೆ ನೀನಾರಾವಣನ ಹ । ತ್ತಿರಕೆ ಪೋಗಿಯೆತಿಳುಪು ಸೀ
ತೆಯ । ನು ರಘುನಾಥನಿಗಿತ್ತು ಬಾಂಧವರೊಡನೆ ಸುಖಿಸೆನುತ ॥ ೧೧ ॥
ಧರಣಿಜಾತೆಯನಿತ್ತು ಬಂಧುನಿ । ಕರಸಹಿತ ನೀಂ ಸೌಖ್ಯವನು ಹೊಂ ।
ದಿರುವುದುತ್ತಮ ವಿಲ್ಲದಿದ್ದರೆ ಮುಳಿದುರಾಘವನು ॥ ಧುರದದಾನವರೆಲ್ಲರ
ಸಹಿತ । ಭರದೆನಿನ್ನನು ಸಂಹರಿಪನೆಂ । ದರುಹಿ ಬಹುದೆಂದೆನುತ ಕಳು
ಹಿದ ರಾಮನಂಗದನ ॥ ೧೨ ॥ ಅಗಲೆಂದೆನುತಾ ರಘುವರಂ । ಗಾಗಕೈ
ಮುಗಿದೆರಗಿ ಯಂಗದ । ನಾಗಸಕೆ ನೆಗೆದಸುರನಾಥನರಾಜಮಂದಿರಕೆ ॥
ಬೇಗನೈತಂದಾತನ ಸಭೆಗೆ । ಪೋಗಿ ಭೀತಿಯನುಳಿದವನ ಮುಂ । ಭಾ
ಗದಲಿ ನಿಲ್ಲುತ್ತಪೇಳ್ದನು ರಾಮನಪ್ಪಣೆಯ ॥ ೧೩ ॥ ದಾನವಾಧಿಪ ರಾವ
ಣನೆ ಕೇ । ಳ್ನಾನು ರಾಮನ ದೂತನೆನ್ನನು । ವಾನರಾಧಿಪ ವಾಲಿನಂದ
ನನಂಗದನೆನುತ್ತ ॥ ನೀನುತಿಳಿ ನಿನ್ನಬಳಿಗೆನ್ನನು । ಭಾನುವಂಶಲಲಾ
ಮ ರಾಮನು । ತಾನು ಕಳುಹಿಸಿರುವನು ಕೇಳಾತನ ವಚನಗಳನು ॥
॥ ೧೪ ॥ ದನುಜರಾವಣ ಕೇಳುನೀನಾ । ಮನುಕುಲೇಂದ್ರನ ಚರಣ
ಪಂಕಜ । ಕೆನವಿಸಿ ಮಹೀಸುತೆಯನಾತನಿಗಿತ್ತು ವಿನಯದಲಿ ॥ ಅನು
ದಿನದಖಿಳ ಬಂಧುವರ್ಗದ । ಜನರನೊಲಿಸುತ ಸೌಖ್ಯದಿಂದಿಹು । ದುನಿನ
ಗಿದು ಸುಕ್ಷೇಮವೆನ್ನುತ ನೀನುತಿಳಿಯುವುದು ॥ ೧೫ ॥ ಇಲ್ಲದಿದ್ದರೆ
ನಿನ್ನ ಬಂಧುಗ । ರೆಲ್ಲರೊಡನಾ ರಾಘವೇಂದ್ರನು । ಕೊಲ್ಲುವನು ರಣ
ದೊಳಗೆ ನಿನ್ನನುಮುಳಿದು ಮುಂದಿರದೆ ॥ ಎಲ್ಲಿಪೋದರು ನಿನಗೆ ರಕ್ಷ
ಕ । ರಿಲ್ಲ ಕಾಲಗೆಕರುಣ ನಿನ್ನೊಳ । ಗಿಲ್ಲ ರಾಮನೊಳೇಕೆ ಹಗೆತನ
ಮಾಳ್ಪೆಸುಮ್ಮನೆಪು ॥ ೧೬ ॥ ನೀತಿಬಾಹಿರ ನಿನಗೆ ಧರಣೀ । ಜಾತೆ
ಯೇ ಮೃತ್ಯುವೆನಿಸಿಹಳಂ । ದೇತಕಿದನು ತಿಳಿಯದೆ ನೀನತಿಗರ್ವದಿಂ
ದಿರುವೆ ॥ ಭೂತಳದೊಳತಿ ಪಾಪವನೆಸಗಿ । ದಾತನಿಗಹುದು ತಕ್ಕಫಲ
ವೀ । ಭೂತಲದೊಳೆಂಬುದ ನರಿಯದಿಹೆ ನೀನುಗರ್ವಿಸುತ ॥ ೧೭ ॥
ನಿನ್ನ ತಮ್ಮವಿಭೀಷಣನು ಸಂ । ಪನ್ನಮತಿ ಯಿಂದಾರಘುವರನ । ಸನ್ನು
ತ ಚರಣಪಂಕಜಕೆರಗಿ ಮಂತ್ರಿಗಳಸಹಿತ ॥ ಮುನ್ನಲಂಕಾರಾಜ್ಯದೈ
ಸಿರಿ । ಯನ್ನುಪಡೆದನು ಬುದ್ಧಿಯಿಲ್ಲದೆ । ನಿನ್ನ ಬಾಂಧವರೊಡನೆ ನೀ

ನೇಳಳವೆ ರಣದೊಳಗೆ ॥ ೧೮ ॥ ನೀನು ನನ್ನಯ ನುಡಿಯ ಕೇಳೆಲೊ ।
ಭಾನುವಂಶಲಲಾಮ ರಾಮನಿ । ಗಾ ನೆಲದಣುಗಿಯನ್ನು ಕೊಟ್ಟೆಲೊ ಸಾ
ಷ್ಟ್ಯಯುತನಾಗಿ ॥ ನೀನು ಸೀತೆಯನೀಯದಿದ್ದರೆ । ವಾನರರೊಡನೆ ರಾ
ಮನೈತಂ । ದೀ ನಗರವನು ಹಾಳುಮಾಡುವನೆಂದು ತಿಳಿಸೀನು ॥ ೧೯ ॥
ಎನುತ ದಶಕಂಠನಿಗೆ ವಾಲಿಸು । ತನು ತಿಳಿಹಲಂದಿರ ದಸುರನಾ । ಘನ
ರೆಕೋಪಿಸಿ ಪಲ್ಲಗಳನು ಕಡಿಕಡಿದು ಕಂಗಳಲಿ ॥ ಅನಲಕಣಗಳ ನುದು
ರಿಸುತ ಕಪಿ । ಯನು ಕೊಲುವುದೀಕ್ಷಣ ದೊಳೆಂದೆನು । ತ ನುಡಿದನು
ದೂತರಿಗೆ ಗರ್ಜಿಸುತಟ್ಟಹಾಸದಲಿ ॥ ೨೦ ॥ ಎಂದೊಡನೆ ನಾಲ್ಕುಜನರಕ್ಕ
ಸ । ರಂದುಬಂದಂಗದನನು ಹಿಡಿಯ । ಲಂದಗೆಡವವರೊಡನೆ ತಾಂ ನಗೆ
ದಂಬರಸ್ಥಳಕೆ ॥ ಕೊಂದನೆಲ್ಲರ ನವನಿತಳ ಕ । ಳ್ಳಿಂದೆಬೀಳಿಸಿ ಬೆಕ್ಕಸ
ದೆ ದಶ । ಕಂಧರನು ನೋಡುವವ್ರೊಲಾಗಸದಲ್ಲಿ ತಾಸಿರುತ ॥ ೨೧ ॥
ದಾನವಾಧಿಪ ನೀಕ್ಷಿಸುತ್ತಿರೆ । ವಾನರಾಧಿಪ ಗಗನವನು ಬಿ । ಟ್ಟಾನಗರ
ಮಧ್ಯದೊಳಿಹ ಪ್ರಾಸಾದಶಿಖರದೊಳು ॥ ತಾನುದುಮ್ಮಿಡುತದನು ಪಿಡಿ
ದುನಿ । ದಾನಿಸದೆ ಕಿತ್ತಿಳೆಗೆ ಕೆಡಹುತ । ಭಾನುಮಂಡಲಕಂದು ಹಾರಿದ
ನಾಪುರದನಡುವೆ ॥ ೨೨ ॥ ದನುಜವಲ್ಲಭನಿಗೆ ವಿವೇಕ ವ । ಚನಗಳ
ನು ತಾತಿಳಿಸಿ ರಕ್ಕಸ । ರನಿರಿದು ಪ್ರಾಸಾದಶಿಖರವ ಮುರಿದುಕೆಡಹು
ತ್ತ ॥ ಮನದೊಳಂಜದೆ ಯಂಗದನಖಿಳ । ದನುಜರಿಗೆ ತನ್ನ ಪೆಸರನರು
ಹು । ತಿನಕುಲೇಂದ್ರನ ಬಳಿಗೆಬಂದೆರಗಿದನು ಭಕ್ತಿಯಲಿ ॥ ೨೩ ॥
ಈಕ್ಷಿಸಿ ದನುಜವಲ್ಲಭನು ತಾ । ನಾಕ್ಷಣದೊಳಾ ವಾಲಿನಂದನ । ನೀಕ್ಷಿತಿ
ಗೆ ಕೆಡಹಿದ ಘನಪ್ರಾಸಾದಶಿಖರವನು ॥ ರಾಕ್ಷಸರ ನಾಶನಕೆ ತನ್ನಯ ।
ಮೋಕ್ಷಕೀ ಪ್ರಾಸಾದಭಂಗವೆ । ಸಾಕ್ಷಿಯಾಗಿಹುದೆನುತ ತಿಳಿದನು ತನ್ನ
ಮನದೊಳಗೆ ॥ ೨೪ ॥ ದನುಜರೆಲ್ಲರು ಸಿಂಹನಾದಗ । ಳನೆಸಗುತ್ತಲ
ಕೂಡೆ ರಘುನಂ । ದನನ ಮೇಲೆ ಜಗಳಕೆಬಂದರು ಮುಳಿದು ಬಲಸಹಿತ ॥
ಘನತರದ ಚತುರಂಗಸೈನ್ಯವ । ನು ನಡೆಸುತ ಮೂವತ್ತೆರಡುವಿಧ ।
ಮೆನಿಸುವಾಯುಧಗಳನು ಧರಿಸುತನಿಂದರಾಹವಕೆ ॥ ೨೫ ॥ ಪ್ಲವಗ
ವೀರರ ಸೈನ್ಯಸಹಿತಾ । ರವಿಕುಲತಿಲಕ ರಾಘವೇಂದ್ರನು । ಬವರಕ್ಕೆ
ತಂದನತಿ ಶೀಘ್ರದೊಳಂದು ಕೋಪಿಸುತ ॥ ತವಕದಿಂದೀ ಲಂಕೆಯನು
ಮು । ತ್ತುವ್ರದು ನಾಲ್ಕುಕಡೆಗಳೊಳಂ ದತಿ । ಜವದೊಳನುತ ಸುಷೇಣ
ನುಡಿದನು ಸಕಲಕಪಿಗಳಿಗೆ ॥ ೨೬ ॥ ಪುರದನಾಲ್ಕು ದೆಸೆಗಳೊಳೈತಂ ।
ದಿರದೆ ಮುತ್ತಿಗೆ ಹಾಕಿದಾಕಪಿ । ವರರಸೀಕ್ಷಿಸಿ ದನುಜನಾಥನು ತನ್ನಬೆ

ತ್ತದಲಿ ‖ ಧುರದೊಳಿಂತು ಜಯಿಸುವೆನೀ ವಾ । ನರರನೆನ್ನುತ ಮನದೆ ಯೋಚಿಸಿ । ಬಿರಿಸಿ ಧೈರ್ಯವಬಳಿಕ ಕಾಳಗಕಾಗಿ ನಡೆತಂದ ‖ ೭೭ ‖ ಬಂದು ಸಂಗರಮಧ್ಯದೊಳು ದಶ । ಕಂಧರನು ತಾಂನಿಂದು ನೋಡಿದ । ನಂದು ಮುಂಗಡೆನಿಂದ ರಾಘವನನ್ನು ಶೀಘ್ರದಲಿ ‖ ಸಂದಣಿಸಿನಿಂದಾ ರ ಜನಿಚರ । ರಿಂದಿಡಿದ ರಣರಂಗವನು ರಘು । ನಂದನನು ಕಾಣುತ್ತ ಯುದ್ಧಕೆ ಮೊದಲುಮಾಡಿದನು ‖ ೭೮ ‖ ಸ್ಮರಿಸಿಕೊಳ್ಳುತ ರಾಮನಾಗಳೆ । ಧರಣಿಜಾತೆಯ ನಂದುದುಃಖಿಸು । ತಿರದೆ ಕೋಪವನಾಂತ ಸುರರನು ಸಂಹರಿಸುವಂತೆ ‖ ಭರದೊಳಾಜ್ಞಾಪಿಸಲು ಕಪಿವೀ । ರರು ರವಣಿಸುತ ಜಗಳಕ್ಕೆತಂ । ದರು ಪಿಡಿದುಕೊಳ್ಳುತ್ತ ಮರಗಿಡ ಬೆಟ್ಟಕಲ್ಗಳನು ‖ ೭೯ ‖ ಅಸನಾಜ್ಞೆಯನಾಂತಖಿಳ ವಾ । ನರರು ಬಂದರು ಲಂಕೆಗಂದತಿ । ಭರದೆಗರ್ಜಿಸಿ ಸಿಂಹನಾದಂಗಳನು ವಿಂಚಿಸುತ ‖ ಮೆರೆವ ತೋರಣ ಗೋಪುರಗಳನು । ಮುರಿದು ಭಂಗಿಸಿ ತಾವು ಬೀಳಿಸಿ । ಧರೆಗೆ ಬಂದರು ತಳುವದೆ ಪ್ರಾಸಾದವನು ಕುರಿತು ‖ ೩೦ ‖ ನಿಂತುಕೊಂಡನು ಪೂರ್ವದಿಶೆಯೊಳು । ಸಂತಪವನಾಂತಾ ಕುಮುದನವ । ನಂತೆ ನಿಂದನು ದಕ್ಷಿಣದ ದಿಶೆಯೊಳಗೆ ಶತಬಲಿಯು ‖ ಚಿಂತಿಸದೆ ಪಶ್ಚಿಮದಕಡೆಯೊಳು । ನಿಂತನು ಸುಷೇಣನತಿಜವದಿಂ । ದಂತಕನತೆರದಿಂದೆ ನಿಂದನು ರಾಮನುತ್ತರದಿ ‖ ೩೧ ‖ ನೀವು ವಾನರರೊಡನೆ ಯುದ್ಧವ । ಗೈವುದೆನ್ನುತ ರಕ್ಕಸರ ನಾ । ರಾವಣನು ಕಾಳಗಕೆ ಕಳುಹಿಸಲಂದು ಸೈನಿಕರು ‖ ಸಾವಕಾಶವ ನಾಗಿಸದೆ ನರ । ದೇವರಾಮನ ಮೇಲೆ ಜಗಳಕೆ । ತಾವು ಬಂದರು ಕೂಡೆ ಘನಚತುರಂಗಬಲಸಹಿತ ‖ ೩೨ ‖ ಬಿಳಿಯ ಶಂಖಂಗಳನು ರಕ್ಕಸ । ರೊಲಿಯುತೂದಿಸಿ ತಮ್ಮ ಮುಂಗಡೆ । ಯೊಳಗೆ ಘನರಣ ಭೇರಿಗಳಹೊಡಿಸುತ್ತ ಚರರಿಂದ ‖ ಹೊಳೆವ ದಿವ್ಯ ರಥಂಗಳ ನಡರಿ । ತಳುವ ದೈತ್ಯಂದರಿಗಳೊಡನುರೆ । ಮುಳಿದು ನಿಂದರು ಕಾಳಗಕೆ ರಣರಂಗಮಧ್ಯದಲಿ ‖ ೩೩ ‖ ಘೋರಯುದ್ಧವು ನಡೆದುದಾಗಳ್ । ವೀರವಾನರ ದಾನವರುಗಳ್ । ಗಾ ರಣಮಹಿಯೊಳಂದು ಜಯವನು ಹೊಂದಬೇಕೆನುತ ‖ ವಿಸ್ತರಿದ ಪರಾಕ್ರಮದೊಳಾ ಕಪಿ । ವೀರರನು ಗುರಿಯಿಟ್ಟು ಹೊಡೆದರು । ಭೂರಿಪಟ್ಟಸ ಶಕ್ತಿ ತೋಮರ ಪರಶು ಗದೆಗಳಲಿ ‖ ೩೪ ‖ ಮರಗಳಿಂದಲು ಗಿಡಗಳಿಂದಲು । ಗಿರಿಗಳಿಂದಲು ಶಿಲೆಗಳಿಂದಲು । ಗುರುಗಳಿಂದಲು ಪಲ್ಗಳಿಂದಲು ತಮ್ಮ ಬಾಲಗಳ ‖ ತರತರದ ಹೊಡೆತಂಗಳಿಂದಲು । ಗಿರಿಶಿಖರಗಳ ಹತಿಗಳಿಂದಲು । ಧುರದೆ ಕಪಿಗಳು

ನೋಯಿಸಿದರಾ ದನುಜರನು ಮುಳ್ದು ॥ ೩೫ ॥ ಖಡಗದಲಿ ಶೂಲದಲಿ ಗದೆಯಲಿ । ಹೊಡೆದರು ಪ್ರಾಕಾರಗಳೊಳ । ದ್ದಡಿಗಡಿಗೆ ದಾನವರು ಭೂಮಿಯೊಳಿದ್ದ ಕಪಿಗಳನು ॥ ಬಿಡದೆ ಮೇಲಕೆ ಹಾರಿ ವಾನರ । ರೊಡನೆ ಕೆಡಹಿದ ರಸುರಭಟರನು । ಪೊಡವಿಗೆ ಪ್ರಾಕಾರದಿಂದತಿ ರಭಸ ದೊಳು ಕೊಂದು ॥ ೩೬ ॥ ದನುಜರಿಗೆ ವಾನರರಿಗೆ ನಡೆದು । ದನಿತರೊ ಳಗಾ ದ್ವಂದ್ವಯುದ್ಧವು । ದನುಜರನು ಹಿಂಸಿಸಿದರಾ ಕಪಿವರರು ಹೊ ಡೆಹೊಡೆದು ॥ ಘನಪರಾಕ್ರಮದಿಂದೆ ವಾನರ । ರನು ಬಿಡದೆ ಪೀಡಿಸಿ ದರು ದನುಜ । ರು ನಿಶಿತಾಯುಧಗಳನು ಕಪಿಗಳಮೇಲೆ ಸುರಿಸುತ್ತ ॥ ೩೭ ॥ ಒಡನೆ ಸಾಯಂಕಾಲವಾದುದು । ಬಿಡದೆ ಮುತ್ತಿದ ಕತ್ತಲೆ ಯೊಳಡಿ । ಗಡಿಗೆ ದನುಜರರಿಯದೆ ಹಿಂಸಿಸುತ್ತಿದ್ದ ರಸುರರನು ॥ ಕಡು ಮುಳಿದು ನೋಯಿಸಿದ ರಡೆವಿಡ । ದಿಡಿದಕತ್ತಲೆ ಯೊಳವನಿತಳಕೆ । ಕೆಡಹುತಾ ಕಪಿವೀರರನು ಕಪಿವರರು ಯುದ್ಧದಲಿ ॥ ೩೮ ॥ ಕೆಡಹು ಕ ವಿತ್ತಿವಿತಲೆಯ ಕತ್ತರಿ । ಸಿಡು ಹಗೆಗಳನು ಕೊಲ್ಲು ಕಾಲನು । ಪಿಡಿದು ಹೊಯ್ಯಾನೀತಕೋಡುವೆ ದಿಗಿಲುಪಡಬೇಡ ॥ ನಿಡುಸರಳ ತೊಡುಬಾ ಸಮೀಪಕೆ । ಪಿಡಿನಡೆಕಡಿಸಿಡೆಂಬ ಮಾತುಗ । ಳಡಿಗಡಿಗೆ ಕೇಳಿಸುತಲಿ ದ್ದವು ರಾತ್ರಿ ತ್ರಿಮಿರದಲಿ ॥ ೩೯ ॥ ಇರದೆ ಕೋಪಾವಿಷ್ಟರಾಗಿಯ । ಸುರರರು ಭಕ್ಷಿಸಬೇಕೆನುತ ವಾ । ನರರಮೇಲಂದಿರದೆ ಬಿದ್ದರು ಮಧ್ಯ ರಾತ್ರಿಯಲಿ ॥ ಕರಿರಥಸತಾಕೆ ಹಯಸಾರಥಿ । ವರಧವಳ ಚಮರಾದಿಗಳ ನಂ । ದಿರಿದು ಬೀಳಿಸಿದರು ಸವಾರರನಲ್ಲಿ ವಾನರರು ॥ ೪೦ ॥ ಹೊಡೆಯು ತ್ತಿದ್ದರು ರಾಮ ಲಕ್ಷ್ಮಣ । ರಡಿಗಡಿಗೆ ಶಸ್ತ್ರಾಸ್ತ್ರಚಯದಿಂ । ದೊಡನೆ ಕಾಣಿಸಿ ಕಾಣಿಸದಿರುವ ದನುಜರೆಲ್ಲರನು ॥ ಬಿಡದೆ ರಕ್ತವು ನದಿಗಳಂ ತಾ । ಪೊಡವಿಯೊಳು ಸಲೆಹರಿದುದಾರಣ । ಕಡುಭಯಂಕರವಾಗಿ ಕಾ ಣಿಸಿತಂದು ರಾತ್ರಿಯಲಿ ॥ ೪೧ ॥ ನೆಟ್ಟನೆ ರಘುವರನನು ರಕ್ಕಸ । ರಟ್ಟ ಕೊಂಡೈತಂದರಾಗಳೆ । ಬಿಟ್ಟನಾ ರಘುವೀರ ನಾರುಶರಂಗಳನವರಿಗೆ ॥ ಇಟ್ಟಣಿಸಿದವು ಯುದ್ಧಭೂಮಿಯೊ । ಳೊಟ್ಟಗಡು ತಖಿಳ ದೆಸೆಗ ಳಲಿ । ಥಟ್ಟನೆಬಿಡದೆ ರಾಮನಾಮಾಂಕಿತದ ಬಾಣಂಗಳು ॥ ೪೨ ॥ ಕೊಂ ದನಾಗಳೆ ರಣದೊಳಾ ರಘು । ನಂದನನು ಬಹುಮಂದಿ ದನುಜರ । ನಂ ಮ ಕಪಿಗಳ ಸಿಂಹನಾದಗಳೊಡನೆ ಮೊಳಗಿದವು ॥ ಅಂಧಕಾರದೊಳಾದ ಕಾಳಗ । ದಿಂದೆ ಸಮರಾಂಗಣವಧಿಕ ಭಯ । ಮೆಂದೆನಿಸು ತಲೆದೋ ರುತ್ತಿದ್ದುದು ಸಕಲವೀರರಿಗೆ ॥ ೪೩ ॥ ಸುರಪಸಂಭವ ತನಯನಾಗಳೆ ।

ಸುರಪಜಿತುವಿನ ತುರಗ ಸಾರಥಿ । ವರಪರೂಥಂಗಳನು ಖಂಡಿಸಿ ನೆಲ
ಕೆಬೀಳಿಸಿದ ॥ ಧುರದೊಳೆಲ್ಲರು ನೋಡುತಿರಲಂ । ಬರದೊಳಾ ವಿಬು
ಧೇಂದ್ರಜಿತು ಮಾ । ನರರು ಕಾಣದಂತೆದರೊಳಂತರ್ಧಾನ ನೆಸಿಸಿದನು ॥
॥ ೪೪ ॥ ಸುರರು ಕೊಂಡಾಡಿದರು ವಾಲಿಜ । ನುರುಪರಾಕ್ರಮವನ್ನು
ಹರ್ಷದೊ । ಳಿರದೆ ಮೆಚ್ಚಿದರಾಮುನೀಂದ್ರರು ರಾಮಲಕ್ಷ್ಮಣರು ॥
ಭರದೊಳಾತನ ನಪ್ಪಿಕೊಂಡರು । ಪರಮಸಂತಸದಿಂದ ಹೊಗಳುತ ।
ಸುರಪಜಿತು ಖತಿಗೊಂಡ ನಂಗದನಸ್ತ್ರ ಘಾತದಲಿ ॥ ೪೫ ॥ ಅಂಗದನಿಗೆ ಸ
ಹಾಯವಾಗಿಯೆ । ಸಂಗಳಿಸಿ ನೀವೆಲ್ಲರೀ ರಣ । ರಂಗದೊಳು ಯುದ್ಧ
ವನು ಮಾಳ್ಪುದು ಧೈರ್ಯದಿಂದೆನುತ ॥ ಜಗನ್ನಾಥನು ಕೂಗಿ ಪೇಳ್ದನು ।
ಮುಂಗಡೆಯೊಳಿಹ ವಾನರವರರಿ । ಗಂಗವನ ಸಾಮರ್ಥ್ಯಕೆ ಮನದೊ
ಳಾಂತುಸಂತಸವ ॥ ೪೬ ॥ ಸರಸಿಜಾಸನನಿಂ ದುರುತರದ । ವರಗಳನು
ಪಡೆದಿಂದ್ರಜಿತು ಸಂ । ಗರದೊಳತಿ ಮಾಯೆಗಳನಾಗಿಸಿ ಯುದ್ಧ ಮಾಡು
ವನು ॥ ಮರಣಕಾಲವು ಹತ್ತಿರಕೆ ಬಂ । ದಿರುವುದೀಖಳ ನಿಗೆವರಿಂದ
ಬ । ವರಕೆಬಂದಿಹ ನವೆಮ್ಮೊಡನೆನುತ ನುಡಿದನಾರಾಮ ॥ ೪೭ ॥ ಕ್ರೂರ
ಕೃತ್ಯದೊಳಿಂದ್ರಜಿತು ತಾ । ನಾರಜನಿಯೊಳು ಕಾಣಿಸದೆ ಕಪಿ । ವೀರ
ರೆಲ್ಲರನಂದು ಕೊಂದನು ತೀಕ್ಷ್ಣಶರಗಳಲಿ ॥ ಘೋರಸರ್ಪಮಯ ಶರಗ
ಳನು ಮ । ಹಾರಣದೊಳು ಸುರಿಸುತನುಜನೊಡ । ನಾರಘುಪತಿಯು
ನಿರದೆಬಿಗಿದನು ನಾಗಪಾಶದಲಿ ॥ ೪೮ ॥ ನಾಗಪಾಶಗಳಿಂದೆ ಬಂಧಿಸಿ ।
ಬೇಗಮೂರ್ಛೆಯ ನೈದಿಸಿದನಾ । ಮೇಘನಾದನು ರಾಮ ಲಕ್ಷ್ಮಣರಿಬ್ಬ
ರನು ಕಡಹಿ ॥ ಬೇಗಬೇಗನೆ ಘೋರಶರಗಳ । ನಾಗ ಸುರಿಸುತ ನೋ
ಯಿಸಿದನಾ । ರಾಘವೇಂದ್ರರ ನವರ ಮರ್ಮಸ್ಥಾನಗಳೊಳಂದು ॥ ೪೯ ॥
ಕ್ರೂರಬಾಣಗಳಿಂದೆ ಗರ್ಜಿಸು । ತಾರಘುವರರನಂದು ನಿರ್ಜರ । ವೈರಿ
ಹೊಡೆದನು ಸಕಲ ಮರ್ಮಸ್ಥಾನಗಳೊಳಡಗಿ ॥ ಬಾರಿಬಾರಿಗೆ ಬಾಣ
ಪಾತವ । ನೈರಿಸದೆಬಿದ್ದರು ರಕುತವನು । ಕಾರುತವನಿಗೆ ರಾಮಲಕ್ಷ್ಮ
ಣರೈದಿ ಮೂರ್ಛೆಯನು ॥ ೫೦ ॥ ನೆಲಕೆಬಿದ್ದು ಪ್ರಜ್ಞೆಯಿಲ್ಲದೆ ।
ಮಲಗಿಕೊಂಡಿಹ ರಾಮಲಕ್ಷ್ಮಣ । ರ ಲಲಿತಾಂಗಂಗಳನು ನೋಡಿದ
ರುಳಿದವಾನರರು ॥ ತಳೆದುದುಃಖವ ನೊಡನೆ ನೊಂದರ । ಖಿಳಕಪಿಗಳಾ
ಧರಣಿಪಾಲರೊ । ಡಲುಗಳಿಂದಲೆ ರಕ್ತ ಹರಿದುದು ನದಿಗಳಂದದಲಿ ॥
॥ ೫೧ ॥ ಸಕಲ ವಾನರವೀರರನು ಮೂ । ರ್ಛೆಕೆಡಹುತ ರಣರಂಗದೊ
ಳನೇ । ಕ ಕಪಿಗಳನಮರೇಂದ್ರಜಿತು ಸಂಹರಿಸಿಬೊಬ್ಬಿರಿದು ॥ ಪ್ರಕ

ಟಿಸುತ್ತಲೆ ತನ್ನ ಜಯವಿ | ಲ್ಲಕಡೆಯೊಳು ಸಂತ್ರಸಪಡಿಸಿ ಸೈ | ನಿಗರ
ಸಂಪಾಳಂಕೆಗೈತಂದ ನತ್ರಿಶೀಘ್ರದಲಿ || ೫೨ || ಒಡನೆ ಜಯಘೇರಿಯನು
ಮುಂಗಡೆ | ಹೊಡಿಸಿಕೊಂಡೈತಂದು ಲಂಕೆಗೆ | ಸಹಗರದೊಳಂದಾ ದಶ
ಶಿರನ ಚರಣಪಂಕಜಕೆ || ಒಡಲನೀಡಿ ನಮಿಸುತ ರಕ್ಕಸ || ರೊಡೆಯ
ನಿಗೆ ಪೇಳಿದನು ಸತ್ತರು | ಪಡೆಯೊಳಿಂದಾ ರಾಮಲಕ್ಷ್ಮಣರೆನುತಹರ್ಷ
ದಲಿ || ೫೩ || ಘೋರ ಶರಬಂಧಂಗಳಿಂದಂ | ದ ರಣದೊಳಾ ವಾನರರೊ
ಡನೆ | ವೀರರಾಘವ ನವನತಮ್ಮನಸಹಿತ ಜವದಿಂದೆ || ಧಾರಿಣಿಗೆ ಬಿದ್ದಿರ
ದೆ ರಕ್ತವ | ಕ್ಕಾರಿ ಮೂರ್ಛೆಯು ನಾಂತುದನು ಕೇ | ಳ್ದಾ ರಜನಿಚರ
ನಾಥನೈದಿದ ನಧಿಕಹರ್ಷವನು || ೫೪ || ತನಯನಂ ಕೊಂಡಾಡಿ ಮು
ದ್ದಿಸಿ | ದನುಜವಲ್ಲಭನಿರದೆ ಮನ್ನಿಸಿ | ಘನತರದ ಬಹುಮಾನವನು
ಕೊಟ್ಟೊಲಿದು ತಕ್ಕೈಸಿ || ಮನೆಗೆ ಬೀಳ್ಕೊಟ್ಟಿಂದ್ರಜಿತುವನು | ಮನ
ದೊಳಾನಂದವ ತಳೆದು ಬಿ | ಟ್ಟನು ತನಗೆ ರಾಘವನದೆಸೆಯಿಂ ದೊದಗಿ
ದಾಭಯವ || ೫೫ || ಕೊಂದರಣದೊಳಗಿಂದ್ರಜಿತು ರಘು || ನಂದನರ
ನೆನುತಸುರವಲ್ಲಭ | ನಂದು ಡಂಗುರವೊಯ್ಸಿದನು ತಾನೊಲಿದು ಲಂಕೆ
ಯಲಿ || ಇಂದೆಮಗೆ ಕೈಗೂಡಿದುದು ಜಯ | ವೆಂದೆನುತ ಸಂತಸವನೈ
ದುತ | ಬಂಧು ಮಿತ್ರರಿಗೆಲ್ಲರಿಗೆ ಪೇಳಿದನು ಸುರವೈರಿ || ೫೬ || ಕರೆದು
ಸೀತೆಗೆ ಕಾಪಲಿರ್ದಾ | ಶರವನಿತೆಯರ ದನುಜನೆಂದನು | ಧರಣಿನಂದನೆ
ಸೀತೆಯಬಳಿಗೆ ಪೋಗಿನೀವೀಗ || ವರವಿಮಾನದೊಳೊಸೆದು ಕೂಡಿಸಿ |
ಕರೆನುಕೊಂಡೈದಿ ರಣರಂಗಕೆ | ಭರದೆತೋರಿಸಿ ರಾಮಲಕ್ಷ್ಮಣರಳಿದ
ರೆಂಬುದನು || ೫೭ || ಪತಿಯಸುವನು ಕಾಣುತ ಮಹೀ | ಸುತೆ ನಿರಾಶೆ
ಯನೈದಿ ದಶರಥ | ಸುತನೊಳಾ ಬಳಿಕೆನ್ನ ಹೊಂದುವಳು ಪರವಶಳಾಗಿ ||
ಕ್ಷಿತಿಸುತೆಗೆ ತೋರಿಸುತ ರಾಘವ | ನ ತನುವನು ಪೇಳುವುದು ನೀವ್ಪೆ
ಲ | ವು ತೆರದಿಂದಲೆ ನನ್ನನುವರಿಸುವಂತ ಯುಕ್ತಿಯಲಿ || ೫೮ ||
ಪೋಗಿನೀವೆಂದೆನುತ ದಶಶಿರ | ನಾಗರಕ್ಕಸಿಯರಿಗೆ ಪೇಳ್ದತಿ | ವೇಗ
ಕಳುಹಿಸಿಕೊಟ್ಟನವರ ನಶೋಕವನಕಿರದೆ || ಬಾಗಿನಮಿಸಿ ದಶಾನನಂಗೆ
ಸ | ರಾಗದಿಂ ದವನೀಸುತೆಯ ಬಳಿ | ಗಾಗಿಬಂದರು ತೆಗೆಸಿಕೊಂಡಾ ವ
ರವಿಮಾನವನು || ೫೯ || ಬಂದು ಸೀತೆಯಹತ್ತಿರಕೆ ತಾ | ವೆಂದುಕಾವ
ಲಿನಬಲೆಯರು ದಶ | ಕಂಧರನ ನೇಮವನು ಕೈಕೊಂಡಾ ಜನಕಸುತೆ
ಯು || ಮುಂದುಗಡೆಯೊಳಿರಿಸಿ ವಿಮಾನವ | ನೆಂದರು ತಮಗೆ ರಾವಣ
ನು ನುಡಿ | ದಂದವನು ಧರಣೀಸುತೆಗೆ ಕೇಳುತಿರಲಾತ್ರಿಜಟೆ || ೬೦ ||

ಇಂತು ಇಪ್ಪತ್ತು ಮೂರನೆಯ ಅಧ್ಯಾಯ. ಸಂಪೂರ್ಣವು.
ಪದ್ಯಗಳು ೧೮೩೩.



## ಇಪ್ಪತ್ತುನಾಲ್ಕನೆಯ ಅಧ್ಯಾಯ.

ಸೂಚನೆ॥ ನಾಗಪಾಶದ ಬಂಧನದೊಳತಿ ।
ಬೇಗ ಮೂರ್ಛೆಯನಾಂತ ಪತಿಯನು ।
ಪೋಗಿ ಕಂಡಳಲಿದಳು ಪಲತರದಿಂದಲಾಸೀತೆ ॥

ಧರಣಿಜಾತೆಯಮೇಲಿಳಾ ದಶಕಂ । ಧರನಸುತ ನಿಂದ್ರಜಿತ್ತು ಕೊಂದನು । ಧುರದೊಳಂದಾ ರಾಮ ಲಕ್ಷ್ಮಣರನ್ನು ಬಲಸಹಿತ ॥ ವರವಿಮಾನದೆ ಸೀತೆಯನು ಕು । ಳ್ಳಿರಿಸಿಕೊಂಡಾ ರಣಮುಹಿಗೆ ಪೋ । ಗಿ ರಘುವರನನು ತೋರಿಸೆಂದೆಮ ಗಸುರಪತಿ ನುಡಿದ ॥ ೧ ॥ ವರವಿಮಾನದೊಳಿವ್ಳೊಡನೆ ಕುಳ್ಳಿ । ತು ರಣಭೂಮಿಗೆ ನೀನು ಬಹುದೆಂ । ದರುಹಿ ಕೂಡಿಸುತಾ ತ್ರಿಜಟೆಯುಸಹಿತ ವಿಮಾನದಲಿ ॥ ತ್ವರಿತದಿಂದಲೆ ರಕ್ಕಸಾಂಗನೆ । ಯುರುಗಳಾ ರಣರಂಗಕ್ಕೈತಂ । ದರು ಬಳಿಕ ತೋರಿದರು ವ್ಯೋಮರೆದಾ ರಘೂದ್ವಹರ ॥ ೨ ॥ ಕೂತುಕೊಂಡಾತ್ರಿಜಟೆ ಸಹಿತಾ । ಸೀತೆ ಪುಷ್ಪಕ ವರವಿಮಾನದೆ । ತಾತಪಿಸುತಾ ಯುದ್ಧರಂಗದ ಮಧ್ಯಭಾಗದೊಳು ॥ ಮಾತನಾಡದೆ ಸತ್ತಕಪಿ ಸಂ । ಘಾತವನವರ ಹತ್ತಿರದೊಳತಿ । ಭೀತಿಯಿಂದುರೆ ದುಃಖಿಸುವ ಕಪಿಗಳನು ನೋಡಿದಳು ॥ ೩ ॥ ರಾಮಲಕ್ಷ್ಮಣರನ್ನು ಬಳಸು । ತ್ತಾಮಹಾ ರಣರಂಗಮಧ್ಯದೆ । ಕೈಮೆಯುಳಿದತಿ ದುಃಖಪೀಡಿತರಾದ ಕಪಿಗಳನು ॥ ಭೂಮಿಸುತೆ ನೋಡಿದಳು ಬಳಿಕಾ । ರಾಮಲಕ್ಷ್ಮಣ ರಿಬ್ಬರತಿ ಘನ । ಕೋಮಲಾಂಗಂಗಳನುಕಂಡಳು ಮುಂದಕೈತರುತ ॥ ೪ ॥ ಶರಗಳಿಂದುರೆ ಪೀಡಿತರೆನಿಸಿ । ಧುರದೆಘನಶರ ತಲ್ಪದೊಳು ತಾ । ಪೊರಗಿಕಡಿದಾ ಕವಚಬಾಣಂಗಳನು ಧರಿಸುತ್ತ ॥ ಉರುತರದ ಶರಪಾತಕರ್ದಿಡಿ । ಗಿರದೆ ರಕ್ತವಕಾರುತ ಕದಲ । ದಿರುವ ಪತಿದೇವರರನೀಕ್ಷಿಸಿದ ಳವನೀಸುತೆಯು ॥ ೫ ॥ ಜನಕನಂದನೆ ಕಪಿಗಳೊಡನೆ ಕ । ದನದೆ ಮಡಿದಾ ರಾಮಲಕ್ಷ್ಮಣ । ರನು ಮಣಿದುನೋಡುತವ ರಿಬ್ಬರಮರಣವನು ಕುರಿತು ॥ ಮನದೊಳನುಮಾನಿಸುತ ಬಲಗೈ । ಯನಿರಿಸಿ ತಲೆಯುಮೇಲೆ ದುಃಖಿಸು । ತ ನಡುಗಿ

ಪಲವ್ರುತೆರದೊಳೆಂದುರೆ ರೋದಿಸಿದಳಲ್ಲಿ ॥ ೬ ॥ ಜ್ಞಾನಿಗಳು ಮುನ್ನನು ಡಿದಿದ್ದರು । ನೀನು ಮಕ್ಕಳಸಹಿತ ಬಾಳುವೆ । ನೀನು ವೈಧವ್ಯವನು ಹೊಂದುವಳಲ್ಲ ಭೂಮಿಯಲಿ ॥ ನೀನು ಹಯಮೇಧಗಳ ನಾಗಿಪ । ಮಾನವೇಂದ್ರನ ಪತ್ನಿಯೆನುತಾ । ಜ್ಞಾನಿಗಳ ವಚನಂಗಳೇದಿನ ಸುಳ್ಳೆನಿಸಿತಲ್ಲ ॥ ೭ ॥ ಜನಕನಂದನೆ ನೀನು ಶುಭಕರ । ಮನಿಪವ ಯವಂಗಳನು ಹೊಂದಿರು । ವೆ ನುತಿವಡೆದತಿ ಶೂರನನಿಸುತ್ತಿಳೆಯ ಪಾಲಿಸುವ ॥ ಜನಪತಿಗೆನೀಂ ಪಟ್ಟದಮಹಿಷಿ । ಯೆನಿಸುವೆ ಮಹಾ ಧನ್ಯಳಾಗುವೆ । ಯೆನುತಪೇಳ್ದ ವಿಬುಧರನುಡಿಗಳು ಸುಳ್ಳೆನಿಸಿತಲ್ಲ ॥ ೮ ॥ ಧರಣಿಪಾಲನ ಮದುವೆಯಾಗು । ತ್ತ ರವಣನೊಡನೆ ತನ್ನ ರಾಜ್ಯದೊ । ಳುರುತರದ ಪಟ್ಟಾಭಿಷೇಕವ ಸಾಂತ-ಸಾಖ್ಯವನು ॥ ಹರುಷದಿಂ ದನುಭವಿಪ ರೀತಿಯ । ನಿರದೆ ಸೂಚಿಸುವಂಥ ಕಮಲದ । ಗೆರೆಗಳನ್ನಯ ಪದದೊಳಿದ್ದರು ನಿಷ್ಫಲವೆನಿಸಿತು ॥ ೯ ॥ ವನಿತೆಯರಿಗೀ ಧಾರಿಣಿಯೊಳತಿ ॥ ಘನತರದ ಸೌಭಾಗ್ಯಕರವೆಂ । ದೆನಿಪ ಲಕ್ಷಣಗಳನು ಸತ್ಯವೆನಿಸುತ ತೋರಿಸುವ ॥ ವಿನುತಿವೆತ್ತ ಕಮಲದರೇಖೆಗ । ಳೆನಗೆ ಯಿದ್ದುಂ ವ್ಯರ್ಥವಾದವು । ಮನುಕುಲೋತ್ತಮ ರಾಮನಳಿದುದ ರಿಂದನುಜನೊಡನೆ । ॥೧೦॥ ಅವನಿಯೊಳು ನಾರಿಯರು ವೈಧ । ವ್ಯವನು ಹೊಂದುವ ಲಕ್ಷಣಗಳ । ನ್ನವಯವಂಗಳೊಳಿಲ್ಲ ನಿತ್ಯ ಸುವಾಸಿನಿಯೆನಿಸುವ ॥ ವಿವಿಧವೆಂಗಳ ಕರಗಳೆಂದೆನಿ । ಸುವ ಸಕಲ ಲಕ್ಷಣಗಳಿದ್ದರು । ಭುವಿಯೊಳೆಂದೆನಗೆಂತು ವೈಧವ್ಯವೊದಗಿರುತಿಹುದು ॥ ೧೧ ॥ ನನ್ನ ಕೂವಲು ಸೂಕ್ಷ್ಮವಾಗಿವೆ । ಕಣ್ಣಿಗೆ ಕರಿಯಬಣ್ಣದಿಂದತಿ । ಚೆನ್ನವೆನೆ ಮೃದುವಾಗಿ ತೋರುವುದಿಲ್ಲ ಜನಗಳಿಗೆ ॥ ನನ್ನ ಹುಬ್ಬುಗಳೆರ ಡವಿರಳವ । ವೆನ್ನಿಸುತಿಪವು ನನ್ನ ಜಂಘೆಗ । ಳುನ್ನತಿವಡೆನು ಕೂದಲಿಲ್ಲದೆಸೆವುವ್ರಗುಂಡಾಗಿ ॥ ೧೨ ॥ ನನ್ನ ಕೈಗಳು ನನ್ನ ಕಾಲ್ಗಳು । ನನ್ನ ಕಂಗಳು ನನ್ನ ತೊಡೆಗಳು । ನನ್ನ ಗುಲ್ಫಗಳೆಲ್ಲ ಸಮವೆನುತೊಪ್ಪಿ ಕಾಣುವುವು ॥ ನನ್ನ ಪಲ್ಗಳು ಕೂಡಿಕೊಂಡಿವೆ । ನನ್ನ ಬೆಂಳುಗಳತಿ ಲಲಿತವೆಂ । ದೆನ್ನಿಸುತ ಗುಂಡಾಗಿಹ ನಖಗಳೆಂದೆಕೂಡಿಹವು ॥ ೧೩ ॥ ವೊಲೆಗಳೆರಡುಂ ಸೇರಿಕೊಳುತಲೆ । ಬಲಿತುಕೊಂಡಿವೆ ಚೂಚುಕಂಗಳು । ಮೊಲೆಗಳೊಳಡಗಿ ಮಗ್ನವೆನಿಸುತ ಕಾಣಿಸುತ್ತಿಹವು ॥ ಬಳಗಿಳದು ಗಂಭೀರವೆನಿಸುತ । ಹೊಳೆವ ಪರ್ಯಂತಪ್ರದೇಶವ । ತಳೆದ ನಾಭಿಯು ನನ್ನದೇಹದೊಳಿದ್ದು ರಂಜಿಪುದು ॥ ೧೪ ॥ ನನ್ನ ಬಣ್ಣವು ರತ್ನದಂತಿದೆ । ನನ್ನ ಕೂದಲು

ಮೃದುಲವಾಗಿವೆ । ನನ್ನ ಪಾದಗಳೆರಡು ಮೆರೆವೈದು ಬೆರಳುಗಳ ॥ ಚೆ
ನ್ನವೆಂಬಂ ತೋರಿನಿಲ್ಲುವು । ವೆನ್ನ ಕರಚರಣಂಗಳೊಳು ಸಂ । ಪನ್ನ
ವಾಗಿಹವೆರಯವಾ ರೇಖೆಗಳು ತುಂಬಿಹವು ॥ ೧೫ ॥ ಇನಿತು ಶುಭ
ಲಕ್ಷಣಗಳಿದ್ದರು । ನನಗೆ ನಿಷ್ಫಲವೆನಿಸಿತಲ್ಲವೆ । ಮನುಕುಲೋತ್ತಮ
ರಾಮನಳಿದುದರಿಂದೆ ಕದನದೊಳು ॥ ನನಗೆ ರಕ್ಷಕರಿನ್ನು ಯಾರಿಹ ।
ರೆನುತ ಜಾನಕಿ ರಾಮಲಕ್ಷ್ಮಣ । ರ ನಡಿಗಡಿಗೀಕ್ಷಿಸುತ ಬಿಸುಸುಯ್ದು
ತ್ತಳಂದಿರದೆ ॥ ೧೬ ॥ ನೀನು ಮಂದಸ್ಮಿತೆ ಯೆನಿಸಿರುವೆ । ನೀನುಮಣಿ
ಮಯ ಪೀಠದೊಳು ಸುಂ । ಮಾನದಿಂದಲೆ ಪತಿಯಬಲಗಡೆ ಕುಳಿತು ವಿ
ಭವದಲಿ ॥ ಈನೆಲದ ಪಟ್ಟಾಭಿಷೇಕವ । ನಾನುವೆಯೆನುತ ಮುನ್ನ ನು
ಡಿದಾ । ಜ್ಞಾನನಿಧಿಗಳ ಮಾತುಗಳು ಸುಳ್ಳಾದುವಿನಗಿಂದು ॥ ೧೭ ॥
ಹುಡುಕುತ ಜನಸ್ಥಾನದೆ ಹಲವು । ಕಡೆಗಳೊಳಗಾ ರಾಮಲಕ್ಷ್ಮಣ ।
ರೊಡನೆ ಗೋವಿನಪಾದದಂತೀ ದಕ್ಷಿಣಾಬ್ಧಿಯನು ॥ ಬಿಡದೆಲಂಘಿಸಿ ನನ್ನ
ಸನಿಹಕೆ । ಕಡುಜವದೊಳೈತಂದು ಸತ್ತರು । ಪಡೆಯೊಳೆನ್ನ ನಿಮಿತ್ತ
ವಾಗಿಯೆ ಸುರಪಜಿತುವಿಂದೆ ॥ ೧೮ ॥ ಇವರುಬಲ್ಲರು ವಾರುಣಾಸ್ತ್ರವ ।
ನಿವರುಬಲ್ಲರು ಪಾವಕಾಸ್ತ್ರವ । ಇವರರಿವರಾ ಬ್ರಹ್ಮಶಿರವೆಂಬಸ್ತ್ರ
ವಿವರವನು ॥ ಇವರುಬಲ್ಲರು ವಾಸವಾಸ್ತ್ರವ । ನಿವರುಬಲ್ಲರು ಮಾರು
ತಾಸ್ತ್ರವ । ನಿವರ ರಾವಿಬುಧೇಂದ್ರಜಿತು ವಧಿಸಿದನು ಮಾಯೆಯಲಿ ॥
॥ ೧೯ ॥ ವೀರರೆನಿಸಿದ ರಾಮಲಕ್ಷ್ಮಣ । ರೀರಣದೊಳಾ ಶಕ್ರವೈರಿಯ ।
ಘೋರಶರಬಂಧಂಗಳಿಂದಲೆ ಮಡಿದುರುಳ್ದಿಹರು ॥ ಆ ರಜನಿಚರನಿವರಿಗಿಂ
ದು ಶ । ರೀರವನು ತೋರಿಸದೆ ಮಾಯಾ । ಕಾರ ಯುದ್ಧವನಾಗಿ... ೦
ದನು ವಂಚಿಸುತಿವರನು ॥ ೨೦ ॥ ಇವರಕಣ್ಣಿಗೆ ಕಾಣಿಸಿದ್ದರೆ । ಬವರ
ದೊಳು ಶಕ್ರಜಿತು ಜೀವಿಸು । ತವನ ತಂದೆಯಬಳಿಗೆ ಬರುತ್ತಿರಲಿಲ್ಲ ಹಿಂತಿ
ರುಗಿ ॥ ಇವರಸಾವನು ಕಂಡಕಟ ನಾ । ನವನಿಯೊಳುಜೀವಿಸುವು
ದೆಂತೆಂ । ದವನಿಜೆಯು ಗೋಳಾಡಿದಳು ನೋಡುತ್ತ ರಘುಜನರನು
॥ ೨೧ ॥ ಅತ್ತ ಕೌಸಲ್ಯೆಯನು ಕುರಿತೀ । ಹೊತ್ತಿನೊಳು ನಾನೆನ್ನ
ಮನದೊಳು । ಮತ್ತೆಮತ್ತಳುತಿರದೆ ದುಃಖಿಸುವಂತೆ ಕದನದೊಳು ॥
ಸತ್ತ ಪತಿದೇವರರನು ಕುರಿತು । ತತ್ತರಿಸುವವಳಲ್ಲ ನನ್ನನು । ಮತ್ತ
ನನ್ನಯ ತಂದೆತಾಯ್ಗಳ ಕುರಿತಳುವವಳಲ್ಲ ॥ ೨೨ ॥ ವನದವಾಸವ
ಮುಗಿಸಿಕೊಂಡು ನಿ । ಜನಗರಿಗೆ ಸತಿಸೋದರರೊಡನೆ । ತನಯತಾನಾ
ವಾಗ ಬರುತಿಹನೆಂದು ಕೌಸಲ್ಯೆ ॥ ಅನುದಿನವು ಚಿಂತಿಸುತಿರುವಳೆ । ವ್ಯ

ನು ಭರದೊಳೀಕ್ಷಿಸುವೆನೆಂದಾ । ಕೆ ನೆರೆಕಾತರಿಸುತ್ತಿಹಳು ಮನದೊಳ
ಗನವರತವು ॥ ೨೩ ॥ ಇಂತುಪಲತೆರದಿಂದೆ ಜಾನಕಿ । ಚಿಂತಿಸುತ್ತಿರ
ಲಾ ತ್ರಿಜಟೆ ಸಮೆ । ನಂತರದೊಳಾ ಧರಣಿಜಾತೆಯ ಹಸ್ತವನುಪಿಡಿದು ॥
ಸಂತಸದೊಳೆಂದಳೆಲೆ ಸೀತೆಯೆ । ಚಿಂತೆಯನುಬಿಡು ಚಿತ್ತವನುಮೊದ ।
ಲಂತೆ ನಿಲ್ಲಿಸು ನೀಂವಿಷಾದಿಸಬೇಡ ದುಃಖಿಸುತ ॥ ೨೪ ॥ ನಿನ್ನಗಂಡನು
ಜೀವಿಸಿರುವನು । ಅಣ್ಣತಮ್ಮಂದಿರು ಬದುಕಿರುವು । ದನ್ನು ಸೂಚಿಸು
ವಂಥ ಲಕ್ಷಣಗಳನು ನೋಡುವೆವು ॥ ನಿನ್ನಗಂಡನು ಮಡಿದುಯಿದ್ದರೆ ।
ಮುನ್ನಿನಂದದೊಳೀತನ ಮುಖವಿ । ದಿನ್ನಗಂ ತೋರುತಿರಲಿಲ್ಲವು ಶುಭ
ಕರವಿದೆನಿಸಿ ॥೨೫॥ ಮರಣವನು ಹೊಂದಿದ ಜನರಿಗೀ । ಧರೆಯೊಳಂತಾ
ನನಗಳತಿಶುಭ । ಕರವೆನಿಸಿ ಕಾಣಿಸುವುದಿಲ್ಲವು ರಾಮಲಕ್ಷ್ಮಣರ ॥ ಎರ
ಡುಮುಖಗಳು ಕೋಪವನು ತಳೆ । ದುರುತರದ ಸಂತೋಷವನು ವಿ ।
ಸ್ತರಿಸಿ ಕಂಗೊಳಸುತಿವೆ ಜಾನಕಿನೀನು ನೆರೆನೋಡು ॥ ೨೬ ॥ ಧುರ
ದೊಳಿಂದೀ ರಾಮಲಕ್ಷ್ಮಣ । ರಿರುವ ರಳದಿದ್ದಲ್ಲಿ ಪುಷ್ಪಕ । ವರವಿಮಾ
ನವು ನಿನ್ನಧರಿಸುತ ಲಿಲ್ಲಿಸಿಂದಿರದು ॥ ಮುರಿದ ಸೇನಾಪತಿಗಳಿಂದಲು ।
ತೊರೆದ ಸಮರೋದ್ಯೋಗದಿಂದಲು । ಕೊರಗುತಿಹಪಡೆ ತಿರುಗುತಿದೆ
ತಾನಾಂತುಭೀತಿಯನು ॥ ೨೭ ॥ ಹರುಷವಿಲ್ಲದೆ ಸಕಲಸೈನ್ಯವು । ತಿರು
ಗುತಿವೆ ಸಂಗರದ ಮಧ್ಯದೊ । ಳುರುಭಯವತಾನಾಂತು ಕದನೋತ್ಸಾ
ಹವನು ತೊರೆದು ॥ ನೆರೆಮು ಸುತ್ತಲು ಬಳಸಿಕೊಂಡು ಬ । ವರದೊ
ಳು ಸಕಲ ಕಪಿಗಳೆಲ್ಲರು । ಪೊರೆವುತಿಹರೀ ರಾಮಲಕ್ಷ್ಮಣರನತಿ ಜಾಗ
ರದೆ ॥೨೮॥ ಬಿಡುಭಯುವನೆಲೆ ಸೀತೆ ಸೌಖ್ಯವ । ನೊಡರಿಸುವ ಲಕ್ಷಣಗ
ಳಂವಲೆ । ಮಡಿಯದವರೆಂದರಿತು ನೋಡೀ ರಾಮಲಕ್ಷ್ಮಣರ ॥ ಪೊಡವಿ
ಯೊಳಳದ ಜನರಿಗಿಂತಿರ । ದೊಡಲಕಾಂತಿಯು ಕೇಳುಜಾನಕಿ । ನುಡಿದಿ
ರುವೆನಿಂದೆನಗೆ ನಿನ್ನೊಳಿರುತಿಹ ಸಖತನದೆ ॥೨೯॥ ನಾನುನಿನಗೀ ಸಂಗ
ತಿಯ ನನು । ಮಾನವಿಲ್ಲದಹಾಗೆ ಪೇಳದೆ । ಜಾನಕಿಯೆ ಕೇಳನೃತವೆನು
ನುಡಿವವಳುನಾನಲ್ಲ ॥ ನಾನು ನಿಶ್ಚಯುವಾಗಿ ನುಡಿದೆನು । ನೀನು ನಣ್ಣು
ಮನದೊಳು ಸೇರಿಹೆ । ಮಾನಿನೀಮಣಿ ನಿನ್ನ ಸಚ್ಚರಿತೆಗಳಬಲದಿಂದ ॥
॥ ೩೦ ॥ ಜನಕಸುತೆನೀಂ ಕೇಳು ಬವರದೊ । ಳನಕುಲೋತ್ತಮ ರಾ
ಮಲಕ್ಷ್ಮಣ । ರನಮರೇಂದ್ರನು ಜಯಿಸಲಾರನು ತನ್ನ ಬಲಸಹಿತ ॥
ಘನಪರಾಕ್ರಮದಿಂದೆ ನಿರ್ಜರ । ದನುಜಕಿನ್ನರ ಯಕ್ಷರೊಳಗೊ ।
ರ್ವನು ಸಮರ್ಥನೆನಿಸನು ರಘುನಂದನರ ಜಯಿಸಲ್ಕೆ ॥ ೩೧ ॥ ಇನಿತು

ಸರ್ವೋತ್ಕೃಷ್ಟ ಮೆಂದೆನಿ । ಸಿ ನುತಿವಡೆದ ಸುಲಕ್ಷಣಂಗಳ । ನು ನೆರೆನೋಡುತ ರಾಮಲಕ್ಷ್ಮಣ ರಂಗಗಳೊಳಗೆ ॥ ನಿನಗೆನಾಂ ಪೇಳದೆನು ನೋಡೆಲೆ । ಜನಕನಂದನೆ ನೀನುರಘುನಂ । ದನರ ದೇಹದೊಳಿರ್ಪ ಸಲ್ಲಕ್ಷಣಗಳಿಲ್ಲವನು ॥೨೦॥ ಚಲಿಸಲಾರದೆ ರಾಮಲಕ್ಷ್ಮಣ । ರಿಳೆಯೊಳಗೆ ಬಿದ್ದಿದ್ದರಿಬ್ಬರ । ನುಳಿಯದಿರ್ಪುದು ಭಾಗ್ಯಲಕ್ಷ್ಮಿಯು ಮೇದಿನೀತಳದಿ ॥ ಅಳಿದ ಮಾನವರೆಲ್ಲರಿಗೆ ಮುಖ । ಗಳು ವಿಕಾರವೆನಿಸುತ ಕಳೆಗುಂ । ದಿಳೆಯೊಳಿಂತು ವಿರಾಜಿಸದೆ ಕಾಣಿಸುವುವೆಲ್ಲರಿಗೆ ॥ ೨೨ ॥ ಇವರುಸಾವನು ಹೊಂದುವವರ । ಲ್ಲವನಿಯೊಳು ಮಾನವರ ರೂಪವ । ನು ವಹಿಸಿದ ದೇವತೆಗಳಲ್ಲವೆ ರಾಮಲಕ್ಷ್ಮಣರು ॥ ಇವರನೀ ಹದಿನಾಲ್ಕು ಲೋಕದೊ । ಳು ವಧಿಸುವರಾರಿಹರು ಕೇಳಂ । ದವನಿಜೆಯನಾ ತ್ರಿಜಟೆ ಸಂತೈಸಿದಳು ಪಲತೆರದೆ ॥ ೨೪ ॥ ಧರಣಿಜಾತೆಯೆಕೇಳು ನಾನು ವಿ । ವರಿಸಿಪೇಳದ ಲಕ್ಷಣಂಗಳ । ನರಿತು ಬಿಡುಭಯ ಶೋಕ ಮೋಹಂಗಳನು ಚಿತ್ತದಲಿ ॥ ಪುರುಷವೆನುತಾಳುತ್ತ ಚಿತ್ತವ । ನಿರಿಸು ಸುಸ್ಥಾಯಿಯೊಳಗೆಂದೆನು । ತರುಹಿದಳತಿ ರಹಸ್ಯದಿಂದಾ ತ್ರಿಜಟೆಜಾನಕಿಗೆ ॥೨೫॥ ಜನಕಸುತೆ ತನಗಾತ್ರಿಜಟೆ ಪೇ । ಳ್ದನುಡಿಗಳ ನೊಲಿದಾಲಿಸುತ್ತತಿ । ವಿನಯದಿಂದಲೆ ಕೈವಿಡಿದು ಗೌರರವಿಸುತಾಕೆಯನು ॥ ಮನುಕುಲೋತ್ತಮರಿಬ್ಬರಿಗೆ ನೀ । ನು ನುಡಿದಂದದೆ ಶುಭಗಳೊಡರಿಸ । ಲೆನುತ ಪೇಳ್ದಳೊಡನಿಳಿದಳಾ ವರವಿಮಾನವನು ॥ ೨೬ ॥ ವರವಿಮಾನವನಿಳಿದು ರಾಘವ । ನರಸಿಬಳಿಕಾ ತ್ರಿಜಟೆಸಹಿತಾ । ಧರಣಿಯೊಳಿರಲು ಕಾವಲಿನರಾಕ್ಷಸಿಯರೈತಂದು ॥ ಭರದೊಳವನೀ ಜಾತೆಯನ್ನುಹೆ । ದರಿಸುತ ಕರೆದು ಕೊಂಡುಬಂದರು । ಮೆರೆವಶೋಕಾವನಕೆ ಸುತ್ತಲು ಸುತ್ತಿಕೊಂಡಿರದೆ ॥ ೨೭ ॥ ಜನಕನಂದನೆ ಯುದ್ಧಭೂಮಿಗೆ । ದನುಜ ನಾರಿಯರೊಡನೆ ನಡೆತಂ । ದು ನೆಲದೊಳು ಬಿದ್ದಿದ್ದಪತಿದೇವರರ ನೀಕ್ಷಿಸುತ ॥ ಮನದೊಳು ವಿಷಾದವನು ತಳೆದಾ । ವನಕೆ ಮತ್ತೆ ಬರುತ್ತಡಿಗಡಿಗೆ । ಘನ ಮನೋವ್ಯಥೆಯಿಂದೆ ಯೋಚಿಸುತಿದ್ದಳಂದಿರದೆ ॥ ೨೮ ॥ ತನ್ನಿನಯ ದೇವರರ ಕಷ್ಟಗ । ಳನ್ನು ತಪ್ಪಿಸಬೇಕೆನುತ ಸಂ । ಪನ್ನಮತಿ ಭೂಜಾತೆ ಭಕ್ತಿಯೊಳಾವನದ ನಡುವೆ ॥ ತನ್ನೆರಡು ಕೈಗಳನುಜೋಡಿಸಿ । ಬಿನ್ನವಿಸಿ ನಮಿಸುತ್ತ ಭಾಸ್ಕರ । ನನ್ನು ಜಾನಿಸುತಿದ್ದಳನುಪಮ ಸಂಸ್ತುತಿಗಳಿಂದೆ ॥ ೨೯ ॥ ಸುರಪವೈರಿಯ ಬಾಣತತಿಯಿಂ । ದುರೆ ಬಳಲಿ ರಣರಂಗದೊಳು ಚೇ । ತರಿಸಿಕೊಳ್ಳದೆ ಮೂರ್ಛೆ

ಯಿಂದಲೆ ಬಿದ್ದುಕೊಂಡಿರುವ ‖ ತರಣಿವಂಶ ಲಲಾಮರೆನ್ನಿಸಿ । ದರಘುನಂ
ದನರನ್ನು ಕುರಿತನ । ವರತಚಿಂತಿಸುತಿದ್ದಳಾವನದೊಳಗೆವೈದೇಹಿ ‖೪೦‖

ಇಂತು ಇಪ್ಪತ್ತು ನಾಲ್ಕನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೧೨೧೩.



## ಇಪ್ಪತ್ತೈದನೆಯ ಅಧ್ಯಾಯ.

**ಸೂಚನೆ** ‖ ಬಂದು ಕಾಳಗದೊಳು ಸುರಪಜಿತು ।
ವಿಂದೆ ಮೂರ್ಛೆಯನಾಂತ ದಶರಥ ।
ನಂದನರನಾ ಗರುಡವೈದಡವುತ್ತ ಲೆಬ್ಬಿಸಿದ ‖

ಧುರದೊಳಾ ಕಪಿವೀರರೆಲ್ಲರು । ಕೊರಗುತತಿ ಖೇದವನು ತಾ
ವಾಂ । ತು ರಘುನಂದನರಿಬ್ಬರನು ತಾವ್ಸುತ್ತಿಕೊಂಡಿರದೆ ‖ ನೆರೆಮರುಗಿ
ಕೊರಗುತ್ತ ಮುಂದಿನ । ಪರಿಯಕಾಣದೆ ಧೈರ್ಯವನುಳಿದು । ಶಿರವಬಾ
ಗಿಸಿ ಮರುಗುತಿದ್ದರು ಸುರಿಸಿಕಂಬನಿಯ ‖ ೧ ‖ ಸುರಪಜಿತು ಮಾಯಾ
ಕವನವನು । ವಿರಚಿಸು ತ್ತಂಬರದೊಳಡಗಿ ಬ । ವರದೊಳೋರ್ವರು ತ
ನ್ನನರಿಯದತೆರದೆ ಕಡುಮುಳಿದು ‖ ತರತರದ ಶಸ್ತ್ರಾಸ್ತ್ರಪಾತವ ।
ನಿರದೆ ಬೀಳಿಸುತೆಲ್ಲರನು ಕೊಂ । ದು ರಘುನಂದನರನ್ನು ಮೂರ್ಛೆಗೆ
ಡಹಿದನೀದಿನದೆ ‖ ೨ ‖ ಇವರು ಭೂಮಿಯೊಳಿಂತು ಬದುಕುವ । ರಿವೆ
ರು ಮೊದಲಂತಾಹವದೊಳಂ । ದಿವರ ಶತ್ರುಗಳೊಡನೆ ಜಗಳವನೆಂತು
ಮಾಡುವರು ‖ ಇವರ ಕಷ್ಟವನೀಗ ತಪ್ಪಿಸು । ವವರದಾರಿಹ ರಕಟಿನು
ತ್ತ ಕ । ಪಿವರರೆಲ್ಲರು ಕೊರಗಿ ಗೋಳಿಡುತಿದ್ದರಡಿಗಡಿಗೆ ‖ ೩ ‖ ಇಂತು
ವಾನರರೈದೆ ರಣದೊಳು । ಚಿಂತಿಸುತಿರಲು ರಾಘವನು ಸಮ । ನಂತರ
ದೆ ಚೇತರಿಸುತೆದ್ದನು ತಾನೆತನ್ನೊಳಗೆ ‖ ಅಂತರಂಗದೊಳೆಲ್ಲ ಕಪಿಗಳು ।
ಸಂತಸವನೈದಿದರು ರಾಘವ । ನಂತುಬಿದ್ದಿಹ ಲಕ್ಷ್ಮಣನ ಕಂಡಿರದೆ ದುಃಖಿ
ಸಿದ ‖ ೪ ‖ ತಮ್ಮ ಲಕ್ಷ್ಮಣ ಸತ್ತೆಯಾ ನೀ । ನೆಮ್ಮೊಡವೆರಸಿ ವನಕೆ
ನಡೆತಂ । ದೆಮ್ಮನು ಪಲವುತೆರಗಳಿಂದಲೆ ರಕ್ಷಿಸಿದೆಯಲ್ಲ ‖ ನೆಮ್ಮದಿಯ
ನಾಂತಿರದೆ ರಣದೊಳು । ಸುಮ್ಮನಸುವನು ತೊರೆದೆಯಾ ಚಿ । ಕ್ಕಮ್ಮ
ನಿಗೆ ನಾನೇನಹೇಳುವೆನೆಂದು ಮರುಗಿದನು ‖ ೫ ‖ ನನ್ನೊಡನೆನೀಂ ಬ

ನಳೆ ಬಂದಂ । ತಿನ್ನು ಯಮಪುರಿಗಾನು ಬರುತಿಹೆ । ನಿನ್ನೊಡನೆ ರಣ ರಂಗದೊಳು ಜೀವವನುಬಿಡುತೀದು ‖ ನಿನ್ನನುಳಿದೆಂ ತವನಿಯೊಳು ನಾ । ನಿನ್ನುಬದುಕಲಿ ತಮ್ಮ ಹೇಳೆಂ । ದೆನ್ನುತತ್ತನು ರಾಮನುಂದಡಿ ಗಡಿಗೆ ಬಿಸುಸುಯ್ದು ‖ ೬ ‖ ನಿನ್ನ ಹೆಂಡತಿಗೇನಹೇಳಲಿ । ನಿನ್ನಬರವನೆ ನೆನೆದು ನಿತ್ಯವು । ತನ್ನಮನದೊಳು ಬೆಂದುಬೆಂಡಾಗಿಹ ಸುಮಿತ್ರೆಗೆ ನಾಂ ‖ ನನ್ನ ಮುಖವನದೆಂತು ತೋರಿಸ । ಲೆನ್ನುತಾ ರಘುವರನು ಲ ಕ್ಷ್ಮಣ । ನನ್ನು ಕಂಡಡಿಗಡಿಗೆ ರೋದಿಸುತಿದ್ದ ನನುವರವೆ ‖ ೭ ‖ ನನಗೆ ಜಾನಕಿಯೇತಕಿನ್ನು ಕ । ದನವಗೆಯ್ಯುವದವೇಕೆ ರಾಜ್ಯದ । ನೆನಪದೇತಕೆ ಲಕ್ಷ್ಮಣಾ ನೀನಳಿದಮೇಲಿನ್ನು ‖ ನನಗದಾರ್ಯೆದಿಕ್ಕು ಕಾಡಿನೊ । ಳೆನುತ ಸಾಮಿತ್ರಿಯನು ಕಂಡಳು । ತ ನಯನಗಳೊಳು ನೀರಸುರಿಸುತ್ತಿದ್ದನಾ ರಾಮ ‖ ೮ ‖ ಇಂತು ತಮ್ಮನಕಂಡು ರಾಮನು । ಸಂತತವು ದುಃಖಿ ಸುತಿರಲು ಸಮ । ನಂತರದೊಳಾ ವೈನತೇಯನು ತಿಳಿದು ತಾನಿದನು ‖ ಅಂತರಿಕ್ಷದೊಳ್ಯೆತರುತ ಬಹು । ಸಂತಸವನಾಗಿಸಲು ಸಾಗರ । ದಂತೆ ಕಾಣುವ ಯುದ್ಧಭೂಮಿಗೆ ಬಂದನತಿಭರದೆ ‖ ೯ ‖ ಗರುಡನನು ನೋ ಡಿದರಖಿಳ ವಾ । ನರರು ಮೇಲೆ ನಭಸ್ಥಳದೊಳಾ । ಗರುಡನನು ಕಂ ಡೊಡನೆ ರಘುವೀರರನು ಬಿಗಿದಿದ್ದ ‖ ಉರಗಗಳು ಭೀತಿಯನುಹೊಂದು ತ । ಭರದೊಳಲ್ಲಿರ ದೋಡಿಪೋದವು । ಗರಿಗೆದರುತಾ ವೈನತೇಯನಿಳಿದ ನು ಧಾರಿಣಿಗೆ ‖ ೧೦ ‖ ಆಗಸವನುಳಿದಾ ಗರುಡ ಬಲು । ಬೇಗಬಂದನು ಯುದ್ಧಭೂಮಿಗೆ । ರಾಘವೇಂದ್ರನು ಲಕ್ಷ್ಮಣನಸಹಿತಧಿಕ ಭಕ್ತಿಯಲಿ ‖ ಬಾಗಿ ನಮಿಸಲು ವೈನತೇಯನು । ಕೈಗಳಿಂದಲೆ ಮೈದಡವು ತನು । ರಾಗದಿಂದಾಶೀರ್ವದಿಸಿ ತಕ್ಕೈಸಿದನು ಪದೆದು ‖ ೧೧ ‖ ವೈನತೇಯನು ಮತ್ತೆ ದಶರಥ । ಸೂನುಗಳನಿಪ ರಾಮಲಕ್ಷ್ಮಣ । ರಾನನಂಗಳ ನೊ ಲಿದು ಸವರಿದನಂದು ಗರಿಗಳಲಿ ‖ ಜ್ಞಾನವಪಡೆದು ಸೋದರರಿರುವ । ರಾ ನೆಲದೊಳೊಡನೆದ್ದು ಕುಳಿತರು । ದಾನವೇಂದ್ರನ ಬಾಧೆಯನುಪರಿಹರಿ ಸಿಕೊಳುತಲ್ಲಿ ‖ ೧೨ ‖ ನೋವು ಕುಂದುಗಳಿಲ್ಲದಾ ನರ । ದೇವತೆಗಳಹ ರಾಮಲಕ್ಷ್ಮಣ । ರಾ ನೆಸುಮತಿಯೊಳೆದ್ದು ಕುಳಿತರು ಪೂರ್ವದಂ ದಲಿ ‖ ಆವಿಧದ ಮೂರ್ಛೆಯನು ಬಿಡುತಲೆ । ಠೀವಿಯಿಂದೆ ವಿರಾಜಿಸಿದ ರಂ । ದಾವಿಭುಗಳಿಂ ಮಿಗಿಲೆನಿಸಿದ ಪರಾಕ್ರಮಗಳಿಂದೆ ‖ ೧೩ ‖ ಕರುಣೆ ಯಿಂದಲೆ ಪದೆದುನೋಡುತ । ಗರುಡನಂದಾ ರಾಮಲಕ್ಷ್ಮಣ । ರಿರುವ ರನು ಜವದಿಂದಲೆಬ್ಬಿಸಿ ತನ್ನ ತೊಡೆಯೊಳಗೆ ‖ ಭರದಿ ಕೂಡಿಸಿ ಮೈದಡ

ವಿ ತ । ನ್ನೆರಡು ಕರತಳದಿಂದೆ ತಕ್ಕೈ । ಸಿ ರಣದೊಳವರ ಶಿರವನಾ
ಘ್ರಾಣಿಸಿದನಾ ಬಳಿಕ ॥ ೧೪ ॥ ಪರಿಹರಿಸಿಕೊಂಡೊಡನೆ ಮೂರ್ಛೆಯ ।
ನು ರಘುನಾಥನು ಲಕ್ಷ್ಮಣನಸಹಿ । ತ ರಣರಂಗದೊಳಂ ದಧಿಕಸಂತೋ
ಷವನು ತಾಳ್ದು ॥ ಶಿರದೊಳಂಜಲಿ ಬದ್ಧನಾಗುತ । ಗರುಡನನತಿ ವಿಧೇ
ಯತೆಯೊಳಾ । ದರಿಸಿ ಮಾತಾಡಿಸಿದನತಿ ಮೃದುಮಧುರ ವಚನದಲಿ ॥
॥ ೧೫ ॥ ಆರುನೀನೆಲೆ ದೇವ ನಿನಗಿಂ । ದಾರುನುಡಿದರು ನಮ್ಮ ಕಷ್ಟ
ವ । ನೀರಣಕೆ ನೀನೆಂತು ಕರುಣಿಸಿಬಂದೆ ನಮ್ಮೆಡೆಗೆ ॥ ಘೋರ ಶರಬಂ
ಧಂಗಳಿಂದೆಮ । ಗಾ ರಚಿಸಿಚರನಾಗಿಸಿನತಿ ಕ । ಠೋರತರ ಬಾಧೆಯನು
ತಪ್ಪಿಸಿ ನಮ್ಮ ರಕ್ಷಿಸಿದೆ ॥ ೧೬ ॥ ಪರಿಮಳಸುಗಂಧವ ನುದರಕೆ ಸ । ವೆ
ರಿಕೊಳುತ ನೀಂ ದಿವ್ಯವಾಗಿಹ । ವರಕುಸುಮ ಹಾರಂಗಳನು ಕಂಠ
ದೊಳರಿಸಿಕೊಂಡು ॥ ಮೆರೆವ ಕನಕಾಭರಣಗಳ ನಾಂ । ತು ರಮಣೀ
ಯಮೆನಿಸುತ ನಿರ್ಮಲ । ತರ ದುಕೂಲಂಗಳನು ಧರಿಸಿಹದೇವ ನೀ
ನಾರು ॥ ೧೭ ॥ ತಂದೆ ದಶರಥರಾಯನನುನಾ । ನಿಂದು ಕಂಡಂತಾಯ್ತು
ತಂದೆಯು । ತಂದೆ ಯಜಭೂಪನನು ಕಂಡವೊಲಾಯ್ತು ಸಂತಸವು ॥
ಬಂದು ನಮ್ಮನು ರಕ್ಷಿಸಿದೆ ದಯೆ । ಯಿಂದ ನೀನೆಲೆದೇವ ನನಗೊಲ ।
ವಿಂದೆ ತಿಳುಹಿಸು ನಿನ್ನ ರೀತಿಯನೆಂದನಾ ರಾಮ ॥ ೧೮ ॥ ಮುನ್ನ ಮಾಡಿದ
ಪುಣ್ಯಫಲದಿಂ । ದೆನ್ನ ಕಷ್ಟವ ನೀನು ಹರಿಸಿದೆ । ನಿನ್ನ ದರ್ಶನದಿಂದೆ ಧ
ನ್ಯನೆನಿಸಿದೆನಾನಿಂದು ॥ ಪನ್ನಗಾಂತಕ ಕರುಣಿಸುತೆನಗೆ । ನಿನ್ನ ತೆರವ
ನು ತಿಳುಹಬೇಕೆಂ । ದೆನ್ನುತ ಕರವಮುಗಿದು ಬೇಡಿದನಾ ರಘೂದ್ವಹ
ನು ॥ ೧೯ ॥ ಎನಲು ಕೇಳ್ದಾವೈನತೇಯನು । ಮನದೊಳತಿ ಸಂತೋ
ಷವನು ತಾ । ಳ್ದು ನೆರೆಮನ್ನಿಸುತಾಗ ರಾಮನನೊಡನೆ ವಿನಯದಲಿ ॥
ಘನ ದಯಾರಸದಿಂದೆ ನೋಡುತ । ಮನವೊಲಿದು ಪೇಳಿದನು ಮೃದು
ಮಧು । ರ ನುಡಿಯಿಂದಲೆ ತನ್ನ ರೀತಿಯ ನಂದುನಿವರಿಸುತ ॥ ೨೦ ॥
ರಾಮಕೇಳೈ ನಾನು ದಶರಥ । ಭೂಮಿಪಾಲನ ಮಿತ್ರನೀ ಸಂ । ಗ್ರಾಮ
ದೊಳು ಮೂರ್ಛೆಯನು ಹೊಂದಿದ ನಿಮ್ಮಗಳನಿಂದು ॥ ನಾಮನದೊಳ
ಗೆ ತಿಳಿದು ಬೇಗನೆ । ತಾಮಸವನಾಗಿಸದೆ ಬಂದಿಹೆ । ನೀ ಮಹಿಗೆನು
ತ್ತಾಗ ಗರುಡನು ತಿಳಿಸುತಿಂತೆಂದ ॥ ೨೧ ॥ ಕ್ಷತ್ರಿಯಕುಲೋತ್ತಮನೆ
ಕೇಳು ಧ । ರಿತ್ರಿತಲದೊಳೆನಗೆ ದಶರಥನು । ಮಿತ್ರನೆನಿಸುವ ನೆನ್ನ ಗ
ರುಡನೆನುತ್ತ ತಿಳಿನೀನು ॥ ಶತ್ರುವಿಂದುರೆ ನೊಂದನಿಮ್ಮನು । ಮಿತ್ರಪು
ತ್ರರೆನುತ್ತ ನೆನೆದಾ । ವೃತ್ರವೈರಿಯ ಶತ್ರುಬಾಧೆಯ ಹರಿಸಲೈತಂದೆ ।

॥ ೨೦ ॥ ನಾನು ಪಕ್ಷಿಗಳೊಡೆಯನಾಗಿಹೆ । ಭಾನುವಂಶಲಲಾಮ ದಶ ರಥ । ಮಾನವೇಂದ್ರನಿಗಾಪ್ತ ಸಖನೆಂದೆನಿಸಿಕೊಂಡಿಹೆನು ॥ ನಾನು ನಿಮ್ಮಯಪಿತನಿಗೆ ಬಹಿಃ । ಪ್ರಾಣದಂತಿರ ತಕ್ಕವನು ತಿಳಿ । ನೀನು ನನ್ನನು ಹಿತನು ಮಿತ್ರನು ನಿಮ್ಮಪಿತಗೆನುತ ॥ ೨೩ ॥ ಉರಗಗಳವಾ ಕದ್ರುಮಕ್ಕಳು । ಧರಣಿಯೊಳತಿ ಕಠೋರವಿಷವನು । ಧರಿಸಿರುತಿಹವು ತೀಕ್ಷ್ಣರದನಂಗಳನು ತಾಳ್ದಿಹವು ॥ ಶರದರೂಪಿಂದಿಂದು ನಿಮ್ಮನು ಧುರದೊಳಿವು ನೆರೆಬಾಧಿಸಿದವೀ । ಧರೆಯೊಳಾವನು ಶಕ್ತನಲ್ಲವು ಪರಿಹ ರಿಸಲಿವನು ॥ ೨೪ ॥ ಸುರರು ದೈತ್ಯರು ನರರು ವಿದ್ಯಾ । ಧರರು ಯಕ್ಷ ರು ಸಿದ್ಧರು ಪುರಂ । ದರನ ನೊಡವೆರಸುತ್ತಲೀ ರಣರಂಗಕೈತಂದು ॥ ಉರಗಮಯ ಶರಬಂಧವನು ಪರಿ । ಹರಿಸಲಾರರು ಮಾಯೆಯಿಂದಿವು । ಶರಗಳಾಗುತ ನಿಮ್ಮನಾಶ್ರಯಿಸಿದವು ನೆರೆನೆರೆದು ॥ ೨೫ ॥ ಹಗಲಿರುಳು ನೀವೀ ರಣಾವನಿಯೊ । ಳಗತಿ ಜಾಗ್ರತೆಯನ್ನು ಹೊಂದುತ । ಹಗೆಗ ಳೊಳು ಕಾಳಗವನಾಗಿಸಬೇಕು ಮುಂದಿನ್ನು ॥ ಬಗೆಬಗೆಯ ಮಾಯೆ ಗಳನಾಗಿಸು । ತ ಗಗನದೊಳಡಗಿಂದ್ರಜಿತುವು ನಿ । ಮಗೆ ತಲೆಯುತೋ ರಿಸದೆ ಯುದ್ಧವನೆಸಗುವನು ಮುಳಿದು ॥ ೨೬ ॥ ಅಸುರರೊಳುದಾಸೀನ ವನುನೀ । ವೆಸಗಲಾಗದು ಕರುಣವನು ಬಿ । ಟ್ಟು ಸಮರವನಾಗಿಸು ವುದೀ ರಜನೀಚರರೊಳನ್ನು ॥ ಜಸವಡೆದಿಹರು ಕೂಟಯುದ್ಧದೊ । ಳ ಸುರರೆಲ್ಲರು ನೀವು ರಣದೊಳು । ಬಸವಳಿದುದೇ ಸಾಕ್ಷಿ ಯೆನುತಾ ಗರು ಡಪೇಳದನು ॥ ೨೭ ॥ ಕೇಳು ರಾಘವ ನೀನು ರಣದೊಳು । ಲೀಲೆಯಿಂ ದಲೆ ಸಕಲ ರಾಕ್ಷಸ । ಜಾಲವನು ಸಂಹರಿಸಿ ದಶಕಂಧರನ ತಲೆಗಳನು ॥ ಸೀಳಿ ನಿಶಿತಾಸ್ತ್ರಂಗಳಿಂದೆ ವಿ । ಶಾಲಲೋಚನೆ ಜಾನಕಿಸಹಿತ । ಪಾಲಿ ಸುವೆ ಭೂವಲಯುವ ನಯೋಧ್ಯಾಪುರಿಗೆಪೋಗಿ ॥ ೨೮ ॥ ನಿನಗೆಮಂಗಳ ವಾಗಲಿ ದಶಶಿ । ರನನು ವಧಿಸುತ ಮೇದಿನೀಸುತೆ । ಯನು ಪಡೆವಯೋ ಧ್ಯೆಯನು ಸೇರುತ ಭರತನನ್ನೊಲಿಸಿ ॥ ಮನವೊಲಿದು ನೀಂ ಪಾಲಿಸು ಧರಣಿ । ಯನೆಲೆ ರಾಘವ ನಾನುಹೋಗುವೆ । ನೆನುತ ರಾಮನಿಗೆರಗಿಸು ತ್ತುಬಳಸಿದ ನಾಗರುಡ ॥ ೨೯ ॥ ಅನುಜ ಲಕ್ಷ್ಮಣನೊಡನೆ ರಘುನಾ । ಥನತಿ ಭಕ್ತಿಯೊಳೆರಗಿ ಕೈಮುಗಿ । ದು ನುತಿಸಿದನಾ ವೈನತೇಯನನಂ ದು ಸಂತಸದೆ ॥ ಘನದಯಾರಸದಿಂದೆ ವೈದಡ । ವಿ ನೆರೆಮನ್ನಿಸಿ ರಾಮ ಲಕ್ಷ್ಮಣ । ರನುಪದೇದು ತಕ್ಕೈಸಿ ಗರುಡನು ನಭಕೆಹಾರಿದನು ॥ ೩೦ ॥ ಘಡಘುಭಕ್ತಿಯು ನಾಂಜಳಿ ಕಟಿ । ವೆರರು ಬಳಕಾಕ್ಷೇಮಕಾರಿಗೆ । ಶಿಶವ

ಬಾಗಿಸಿ ನಮಿಸಿದರು ಕೈಗಳನುಜೋಡಿಸುತ ॥ ಹರಸಿವಾನರರೆಲ್ಲರ ನಧಿ
ಕ । ಹರುಷದೊಳು ಬಂದಂತೆಗಗನದೊ । ಳಿರದೆಪೋದನು ಗರುಡನಂ
ದಚ್ಚರಿಯನಾಗಿಸುತ ॥ ೩೧ ॥ ತಿಳಿದು ಮೂರ್ಛೆಯನಿಂತು ಮುದವನು ।
ತಳೆದು ರಘುಕುಲವಾರ್ಧಿ ಚಂದ್ರನು । ಬಳಿಕಖಿಳವಾನರರ ನೊಲಿಸಿದ
ನಾರಣಾಂಗಣದೆ ॥ ಬಲಪರಾಕ್ರಮ ಕಾಂತಿಶಕ್ತಿಗ । ಳೊಳಗೆ ತಾವೆರಡ
ಷ್ಟನಿಸಿ ಕಂ । ಗೊಳಿಸಿ ಯುದ್ಧಕೆಸಿದ್ಧರಾದರು ರಾಮಲಕ್ಷ್ಮಣರು ॥
॥ ೩೨ ॥ ಚೇತರಿಸಿ ತಾವ್ಪ್ರೊದಲಿನಂತಾ । ಭೂತಲದೆ ಕಾಳಗಕನಡೆತಂ ।
ದಾತರಣಿಕುಲ ಸಾರ್ವಭೌಮರ ನಲ್ಲಿನೋಡುತ್ತ ॥ ಭೀತಿಯನುಳಿದು ಕ
ಪಿಗಳೆಲ್ಲರು । ಮಾತನಾಡುತ ಸಂತಸವಡೆದ । ರೀತೆರದೊಳು ವಿಭೀಷಣ
ನು ಸಂತಸವನೈದಿದನು ॥ ೩೩ ॥ ಪರಮಸಂತಸದಿಂದಿರದೆ ಸಂ । ಗರ
ದೊಳು ಸಕಲ ಕಪಿಗಳೆಲ್ಲರು । ನೆರೆನೆರೆದೊಡನೆ ಸಿಂಹನಾದಗಳನ್ನು ವಿ
ರಚಿಸುತ । ಭರದೊಳಾ ಕಪಿಚೇಷ್ಟೆಗಳ ನೊಲಿ । ದು ರಚಿಸುತ್ತವನೀ
ತಲವಹೊಡೆ । ದರತಿ ದೀರ್ಘವೆನಿಸಿದ ಬಾಲಗಳಿಂದೆಪಲ್ಕಿರಿನು ॥ ೩೪ ॥
ಧರಿಸಿಕಾರ್ಮುಕ ಶರಗಳನು ತಾ । ವರಿಗಳೊಡನೆ ಕದನಕೆನಿಂದರು । ಭ
ರದೊಳಂದಾ ರಾಮಲಕ್ಷ್ಮಣ ರಿಬ್ಬರುರವಣಿಸಿ ॥ ತರಣಿಸುತ ಸುಗ್ರೀವ
ನಾಕಪಿ । ವರರನೊಲಿಸುತ ಕೂಡೆದೈತೇ । ಯುರೊಳು ಕಾಳಗಕೆಬ್ಬಿಸಿ
ದನಾ ರಾಮನಾಜ್ಞೆಯಲಿ ॥ ೩೫ ॥ ಘನತರದ ಕೋಲಾಹಲಗಳನು ।
ಮನಕೆಬಂದಂತೆಸಗಿ ಬಂಡೆಗ । ಳನುಪಿಡಿದು ವಾನರರುನಿಂದರು ಯುದ್ಧ
ಭೂಮಿಯಲಿ ॥ ದನುಜರೊಡೆಯ ವಿಭೀಷಣನು ನಿಂ । ದನು ದಶಶಿರನ
ಮೇಲೆ ಮುಳಿದು ಕ । ದನಕೆ ನಾಲ್ವರುಮಂತ್ರಿಗಳೊಡನೆ ತಾಳ್ದು ಕಾ
ರ್ಮುಕವ ॥ ೩೬ ॥ ತ್ವರಿತದಿಂದೈತಂದು ದಶಕಂ । ಧರನ ಪದಪಂಕೇಜಕೆ
ನಮಿಸಿ । ಚರರುಪೇಳ್ದರು ದೇವಕೇಳೈ ಭರದೊಳಿಂದ್ರಜಿತು ॥ ಉರಗ
ಪಾಶಗಳಿಂದೆ ಬಂಧಿಸು । ತ ರಣದೊಳು ಮೂರ್ಛೆಯನು ಹೊಂದಿಸಿ ।
ದ ರಘುವೀರರನಾ ಗರುಡನೆಬ್ಬಿಸಿದನೆಂದೆನುತ ॥ ೩೭ ॥ ಏನಿದೆತ್ತಣವಾ
ತು ನನಗನು । ಮಾನವಾಗಿಹು ದುರಗಬಂಧವ । ನೀನೆಲದೊಳಗೆ ಪರಿ
ಹರಿಪರಾರಿಹರು ಯೋಚಿಸಲು ॥ ವೈನತೇಯನು ಕರುಣದಿಂದಾ । ಮಾ
ನವೇಂದ್ರರ ನೆಬ್ಬಿಸಿದೊಡಿಂ । ನೇನಮಾಡುವುದೆಂದೆನುತ ರಾವಣನು
ಮುಳಿಸಿದ ॥ ೩೮ ॥ ನನ್ನಸುತನಿಂದ್ರಜಿತು ರಣದೊಳು । ತನ್ನರಿಗಳಹ
ರಾಮ ಲಕ್ಷ್ಮಣ । ರನ್ನು ಕೊಂದೈತಂದನು ಭುಜಗಪಾಶ ಬಂಧದಲಿ ॥
ಮುನ್ನಿನಂತಿವರೆದ್ದು ಜೀವಿಸ । ಲಿನ್ನುಮಾಡುವುದೇನು ಬಂದುದು ।

ನನ್ನ ಮರಣದ ಕಾಲವೆನುತಸುರೇಂದ್ರ ಬಿಸುಸುಯ್ದ ॥ ೩೯ ॥ ಇವರು ಮಾನುಷಮಾತ್ರ ವವರ । ಲ್ಲಿವರು ನನ್ನನು ಭರದೆಕೊಲ್ಲುವ । ರಿವರು ವಿಷ್ಣುವಿನಂಶದಿಂ ದಲವನಿಯೊಳುದಿಸಿಹರು ॥ ಇವರದೆಸೆಯಿಂ ದೆನ್ನಖಿಳ ಬಾಂ । ಧವರಿಗೆ ನನಗೆ ಲಂಕೆಗೆ ವಿನಾ । ಶ ವೊದಗಿದುದೆಂದೆನುತ ರಾ ವಣನಳುಕಿ ಶೋಕಿಸಿದ ॥ ೪೦ ॥

ಇಂತು ಇಪ್ಪತ್ತೈದನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೧೨೫೩.



## ಇಪ್ಪತ್ತಾರನೆಯ ಅಧ್ಯಾಯ,

ಸೂಚನೆ ॥ ದನುಜರೆಲ್ಲರು ಸತ್ತಬಳಿಕಾ ।
ದನುಜನಾಥನ ಕೊಂದು ರಘುನಾ ।
ಥ ನವನೀಸುತೆಯೆಡೆಗೆ ಕಳುಹಿದನಾಂಜನೇಯನನು ॥

ಬಳಿಕ ದಶಕಂಧರನು ದುಃಖವ । ನುಳಿದು ಧೈರ್ಯವನಾಂತು ತನ್ನಯ । ಬಳಿಗೆ ಧೂಮ್ರಾಕ್ಷನನು ಕರೆಯಿಸಿ ರಣಕೆನೀಂ ಪೋಗಿ ॥ ತಳುವಮಾಡದೆ ಸಕಲ ವಾನರ । ಬಲಸಹಿತ ರಘುವರನ ಕೊಂದುವ । ಹಿಲದೊಳೈತಹುದೆನ್ನೆಡೆಗೆನುತ ರಣಕೆ ಕಳುಹಿದನು ॥ ೧ ॥ ಒಡೆಯ ನಾಜ್ಞೆಯನಾಂತು ಜಗಳಕೆ । ಪಡೆಸಹಿತ ನಡೆತಂದು ನಿಂದಾ । ಕಡುಪ ರಾಕ್ಷಸಿಯೆನಿಪ ಧೂಮ್ರಾಕ್ಷನನು ಸಂಗರದೆ ॥ ಬಿಡದೆ ಕೊಂದನು ಪ ವನಸಂಭವ । ತಡೆದು ಗರ್ಜಿಪ ವಜ್ರದಂಷ್ಟ್ರನ । ಕಡಿದುಹಾಕಿದ ನಂದು ವಾಲಿಜ ನೊಂದು ಕಲ್ಲಿನಲಿ ॥ ೨ ॥ ಪವನಸಂಭವ ನಾಮಕಂಪನ । ನು ವಧಿಸಿದನಾಬಳಿಕ ಕೊಂದನು । ಬವರದೊಳಗಾ ನೀಲನುಕೆಮು ಳಿದಾ ಪ್ರಹಸ್ತನನು ॥ ವಿವಿಧ ಶಸ್ತ್ರಾಸ್ತ್ರಂಗಳ ನಿಡುತ ; ಜವದೊಳೈ ತಂದಾ ದಶಾಸ್ಯನ । ರವಿಕುಲತಿಲಕ ರಾಘವನು ಸೋಲಿಸಿದನನುವರದೆ ॥ ೩ ॥ ಪ್ಲವಗವೀರರ ನಡಿಗಡಿಗೆ ಕೊಂ । ದವಸರದೊಳೆಲ್ಲರನು ಭಕ್ಷಿ ಸಿ । ಬವರದೊಳು ತನ್ನ ನಿದುರಿಸಿದಾ ಕುಂಭಕರ್ಣನನು ॥ ಜವದೊ ಳಂದೀಕ್ಷಿಸುತ ಕಡುಮುಳಿ । ದು ವಧಿಸಿದನಾ ರಾಘವೇಂದ್ರನು । ತವ ಕದಿಂದಲೆ ಪೋಗಿಸುತ ಕಪಿವರರ ಭೀತಿಯನು ॥ ೪ ॥ ಕೊಂದನು

ನರಾಂತಕನ ವಾಸವ | ನಂದನಾತ್ಮಜ ಸಂಹರಿಸಿದನು | ಗಂಧವಹ ಸು
ತನು ತ್ರಿಶಿರ ದೇವಾಂತಕರುಗಳನು || ಬಂದುನಿಂದ ಮಹೋದರನ
ಮೇ | ಲಂದು ಬೀಳುತ ಕೊಂದನನಲನ | ನಂದನನೆನಿಪ ನೀಲನುರೆಮು
ಳಿದಬ್ಬರಿಸುತೊಡನೆ || ೫ || ಮುಳಿದುಕೊಂದನು ಮತ್ತನನು ರಣ |
ದೊಳು ಋಷಭನೆಂದೆಂಬ ಕಪಿವರ | ಬಳಿಕಲುನ್ಮತ್ತನನುಕೂಡೆ ಗವಾ
ಕ್ಷವಧಿಸಿದನು || ಕಲಿತನದೊಳಗ್ಗಳ ನೆನಿಸಿಕೊಂ | ಡಿಳೆಯೊಳತ್ಯು
ನ್ನತ ಶರೀರವ | ತಳೆದು ಮೆರೆವತಿಕಾಯನನು ಲಕ್ಷ್ಮಣನು ಬೀಳಿಸಿದ ||
|| ೬ || ಸುರಪಜಿತು ನಡೆತಂದು ಮತ್ತೆ ಬ | ವರಿಗೆ ನಭದೊಳು ತಾನಡ
ಗುತೊ | ಬ್ಬರಿಗೆ ಕಾಣಿಸದಂತೆಶಸ್ತ್ರಾಸ್ತ್ರಂಗಳನು ಸುರಿಸಿ || ಧರೆಗುರು
ಳ್ಚಿ ಕಪೀಂದ್ರರೆಲ್ಲರ | ನಿರದೆಬಳಿಕಾ ರಾಮಲಕ್ಷ್ಮಣ | ರಿರುವೆರನು
ಮೂರ್ಛೆಗೆಡಹುತ ಪಿತನೆಡೆಗೆ ನಡೆತಂದ || ೭ || ತಿಳಿದು ಮೂರ್ಛೆಯು
ನಾ ಪವನಸುತ | ನೊಲವಿನಿಂದಾ ಜಾಂಬವಂತನ | ಬಳಿಗೆ ನಡೆತಂದೆರ
ಗಲಾ ಕಪಿವರನು ಸಂತಸದಿ || ತಲೆದಡವು ತಾಶೀರ್ವದಿಸಿ ತಾಂ | ತಿಳು
ಹಿಸಿದ ನಾಬಳಿಕ ಮನ್ನಿಸಿ | ತಳುವದಾತನಿ ಗೆಸಗಬೇಕಾಗಿರ್ಪ ಕಾ
ರ್ಯವನು || ೮ || ಮರುತನಣುಗನೆ ಕೇಳು ನೀನತಿ | ಭರದೊಳಾತು
ಹಿ ನಾದ್ರಿಗೈದುತ | ದರೊಳೆಸೆವ ಕೈಲಾಸ ಋಷಭಾದ್ರಿಗಳ ಮಧ್ಯದಲಿ ||
ತರತರದ ಮೂಲಿಕೆಗಳಿಂದನ | ವರತ ಮೊಪ್ಪುತ ಮೆರೆಯು ವೋಷಧಿ |
ಗಿರಿಗೆ ಪೋಪುದು ಶೀಘ್ರಗಮನವನಾಂತು ಗಗನದಲಿ || ೯ || ಮೆರೆವ ಘನ
ಸಂಜೀವಕರಣಿಯು | ವರ ವಿಶಲ್ಯಕರಣಿಯು ಪಾವನ | ತರದ ಸಾವ
ರ್ಣ್ಯಕರಣಿಯು ಸಂಧಾನಕರಣಿಗಳು || ಇರುತಿಹವು ವೋಷಧ ಗಿರೀಂ
ದ್ರದೊ | ಳರಸಿ ನೀನವುಗಳನು ತಂದು ಬ | ವರದೊಳೊರಗಿದ ರಾಮ
ಲಕ್ಷ್ಮಣರಸುವ ನುಳುಹೆಂದ || ೧೦ || ಬಳ್ಕತೆಂದೆಸು ತಾಪವನಸುತ |
ನಲ್ಲಿನಿಲ್ಲದೆ ನೆಗೆದು ಸುರಪಥ | ದಲ್ಲಿ ಸಾವಿರ ಗಾವುದಂಗಳ ದೂರನಡೆತ
ರುತ || ಎಲ್ಲಗಿರಿಗಳಿಗಿಂತ ಧಾರುಣಿ | ಯಲ್ಲಿ ಯುನ್ನತಮೆನಿಸುತಾವಗ |
ಮೆಲ್ಲರಿಗೆ ಕಾಣುತಿಹ ತುಹಿನಾಚಲಕೆ ನಡೆತಂದ || ೧೧ || ಅಲ್ಲಿರುವೆ
ಪುಣ್ಯಾಶ್ರಮಂಗಳ | ನೆಲ್ಲನೋಡುತ ಮಾರುತಾತ್ಮಜ | ನೆಲ್ಲನೈತರುತಿ
ರಲು ಯೋಷಧಗಿರಿಯ ಹತ್ತಿರಕೆ || ಎಲ್ಲಕಾಲದೊಳಾ ಮಹೀಧರ | ದಲ್ಲಿ
ಮೆರೆವಾ ಮೂಲಿಕೆಗಳಂ | ದಲ್ಲಿಕಾಣದೆ ಮಾಯವಾದವು ಕಂಡು ಮಾ
ರುತಿಯು || ೧೨ || ಬಳಿಕಮಾರುತಿ ತನ್ನಬಾಲವ | ಬೆಳೆಯಿಸು ತೌ
ಷಧ ಗಿರೀಂದ್ರಕೆ | ತಳುವದಂ ದಡಿಗಡಿಗೆ ಸುತ್ತುತಕಿತ್ತು ಬೆಟ್ಟವನು ||

ಬಲದಕೈಯೊಳು ಪಿಡಿದುಕೊಳ್ಳುತ | ಬಳಲದಂ ದಾಗಸಕೆ ಲಂಘಿಸಿ | ತಳುವದೈತಂದಿಳಿದ ನತಿಶೀಘ್ರದೊಳು ಲಂಕೆಯುಲಿ || ೧೩ || ಬಂದು ಜಾಂಬವನಡಿಗೆರಗಿ ನಲ | ವಿಂದೆ ಕೇಸರಿ ತನಯ ನಾತನ | ಮುಂದೆ ಯೋಷಧಿ ಶೈಲವನಿರಿಸಿ ತಾತಚಿತ್ತ್ಯಸು || ಇಂದು ಮೂಲಿಕೆಗಳನು ಕಾಣದೆ | ನೊಂದು ಗಿರಿಯನೆ ತಂದಿಹೆನು ನಾ | ನೆಂದುಪೇಳ್ದು ವಿಭೀಷಣನ ನಾಲಿಂಗಿಸಿದ ನೊಲಿವು || ೧೪ || ಗಿರಿಯುಮೂಲಿಕೆಗಳ ಸುಗಂಧವ | ನಿರದೆಯುಛ್ವಾಸಿಸಿದವಾತ್ರಕೆ | ತೊರೆದುಮೂರ್ಛೆಯ ನೆದ್ದುಕುಳಿತರು ರಾಮಲಕ್ಷ್ಮರು || ಧುರದೊಳಳಿದಾ ಸಕಲಕಪಿ ವೀ ರರು ಮಲಗಿದವರೆದ್ದು ಕೂಡುವ | ತೆರದೆ ಶೀಘ್ರದೊಳೆದ್ದು ಕುಳಿತರು ತೊರೆದುಮೂರ್ಛೆಯನು || ೧೫ || ವೊದಲಿನಂತಾ ರಘುವರ ನತಿಭ | ರದೊಳು ವಾನರ ರೆಲ್ಲರ ಸಹಿತ | ಲೊದಗಿದಾಘನ ಮೂರ್ಛೆಯನು ಪರಿಹರಿಸಿಕೊಂಡೆದ್ದು || ಸದಯುದಿಂದಾ ವಾಯುಸುತನನು | ಪದೆದುಮನ್ನಿಸಿ ತಬ್ಬಿಕೊಳ್ಳುತ | ಕದನಕೊಡನೆಯೆ ಸಿದ್ಧವಾದನು ರಾಕ್ಷಸರಮೇಲೇ || ೧೬ || ಸತ್ತದೈತ್ಯರನೆಲ್ಲ ರಾವಣ | ನತ್ತಸುಡಿಸದೆ ಬಿಟ್ಟಿರುವನಿದು | ಉತ್ತಮವೆನಿಸದಾ ದಶಶಿರನಿಗಿಂದು ಯೋಚಿಸಲು || ಸುತ್ತಲುಂ ಲಂಕೆಯನು ಬೇಗನೆ | ಮುತ್ತಿಕೊಳ್ಳುತ ನೀವು ಸುಡುವುದೆ | ನುತ್ತಲಾ ಸುಗ್ರೀವನಿತ್ತನು ಭಟರಿಗಪ್ಪಣೆಯ || ೧೭ || ಉರಿವಬೆಂಕಿಯ ಕೊಳ್ಳಿಗಳನಾಂ | ತುರವಣಿಸಿ ವಾನರರು ನಡೆತಂ | ದಿರದೆಸುಟ್ಟರು ಮಹಡಿ ಗುಡಿ ಮನೆ ಮಂಟಪಂಗಳನು || ಉರಿಸಿದರು ಲಂಕೆಯೊಳಗತಿ ಸುಂ | ದರವೆನಿಪ ವಸ್ತುಗಳನಾ ದನು | ಜರಖಿಳ ಪದಾರ್ಥಗಳ ದಹಿಸುತೆ ಭಸ್ಮಮಾಡಿದರು || ೧೮ || ದ್ವಿವಿದನಾಕಲಿ ಶೋಣಿತಾಕ್ಷನ | ಸುಮತೆಗೆದನಾ ಮೈಂದನೆಂಬ ಕ | ಪಿವರನಾ ಯೂಪಾಕ್ಷನನು ಸಂಹರಿಸಿದನು ಬಿಡದೆ || ಪ್ಲವಗವಲ್ಲಭ ವಾಲಿಸುತನಾ | ಬವರದೊಳುಕಂಪನನು ಕೊಂದನು | ರವಿಸುತನು ಕೊಂದಾನಿಕುಂಭನ ನಬ್ಧಿಗುರುಳಿಸಿದ || ೧೯ || ಅನಿಲಸಂಭವ ಕುಂಭನನು ಕೊಂ | ದನು ಮುಳಿದುಸಂಹರಿಸಿದನು ರಾ | ಮನಿರದಾ ಮಕರಾಕ್ಷನನು ತಾನೊಂದುಬಾಣದಲಿ || ಘನಪರಾಕ್ರಮಿ ಶಕ್ರಜಿತುವನು | ಮನಗೆಡದೆ ಸೌಮಿತ್ರಿವಧಿಸುತ | ವನಿಗುರುಳ್ಚಿದ ನಮಿತ ಕೋಪಾಟೋಪವನು ತಾಳ್ದು || ೨೦ || ಮತ್ತೆ ದಶಕಂಧರನು ಹುಂಕರಿ | ಸುತ್ತ ರಾಮನಮೇಲೆ ಜಗಳಕೆ | ಬಿತ್ತರದ ಪಡೆಯೊಡನೆ ನಡೆತಂದಧಿಕಕೋಪದಲಿ || ಸುತ್ತುಬಳಸಿದ ಕಪಿಗಳನು ಕೊ | ಲ್ಲುತ್ತಬಂದನು ಬಿಡದೆ ಸಲೆಮುಸೆ |

ವೆತ್ತ ಕತ್ತಿಗಳಿಂದೆ ಖಂಡಿಸಿ ನೆಲಕೆಬೀಳಿಸುತ ॥ ೨೧ ॥ ತರಣಿಸುತ ಸು ಗ್ರೀವನು ಮಹೋ । ದರನ ಕಳುಹಿದನಂತಕನ ಮನೆ । ಗುರುಳಿಸಿದ ನಂವಾ ಮಹಾಪಾರ್ಶ್ವನನು ವಾಲಿಸುತ ॥ ತರತರದ ಬಾಣಂಗಳಿಂದೆ ಸ । ವರುತಿರಲು ವಾನರರನಾ ದಶ । ಶಿರನು ಲಕ್ಷ್ಮಣನಾತನಿದಿರೊಳು ನಿಂದ ನಾಹವಕೆ ॥ ೨೨ ॥ ಮುಳಿದು ಲಕ್ಷ್ಮಣನೈದೆ ಸಂಗರ । ದೊಳಸುರೇಂ ದ್ರನಮೇಲೆ ಬಾಣಂ । ಗಳನು ಸುರಿಸುತ್ತಿರಲವನು ಕತ್ತರಿಸಿ ರಾವಣ ನು ॥ ಬಳಿಕ ಶಕ್ತ್ಯಾಯುಧವ ಕಾರ್ಮುಕ । ದೊಳನುಸಂಧಿಸಿ ಮಂತ್ರಿ ಸುತ್ತ ಬಿ । ಡಲದು ಮೂರ್ಛೆಗೊಳಿಸುತ ಬೀಳಿಸಿತಿಳೆಗೆ ಲಕ್ಷ್ಮಣನ ॥ ॥ ೨೩ ॥ ಇಳೆಯೊಳೊರಗಿ ಪ್ರಜ್ಞೆಯಿಲ್ಲದೆ । ಬಳಲಿ ಮೂರ್ಛೆಯನಾಂ ತ ತಮ್ಮನ । ಲಲಿತ ದೇಹವನೀಕ್ಷಿಸುತ ರಘುವರನು ಬಿಸುಸುಯ್ದು ॥ ತಳೆದು ದುಃಖವ ನಡಿಗಡಿಗೆ ತಾ । ನಳುತ ದೈನ್ಯವನಾಂತು ತಪಿಸು ತಿ । ರಲು ಸುಷೇಣನುಸಂತವಿಸಿ ರಾಘವನನಾಬಳಿಕ ॥ ೨೪ ॥ ಮರುತನ ಣುಗನ ಕರೆದುಮನ್ನಿಸಿ । ಕರಪಿಡಿದು ಕೊಂಡೊಲಿಸಿ ನುಡಿದನು । ಭರ ದೊಳಂದಾ ಮೋಷಧಿಗಿರಿಗೆ ಪೋಗಿಮೊದಲಂತೆ ॥ ಸರಸಿಜೋದ್ಭವ ತನ ಯ ಜಾಂಬವ । ಕರುಣಿಸುತ ಪೂರ್ವದೊಳು ನಿನಗೊರೆ । ದಿರುವ ಮೂಲಿಕೆಗಳನು ತರಬೇಕೆನುತ ತಲೆದಡವಿ ॥ ೨೫ ॥ ಆಗಬಹುದೆಂದೆ ನುತ ನುಡಿವಂ । ದಾಗಸಕೆ ನೆಗೆದಾಂಜನೇಯನು । ಬೇಗಬಂದನು ನಭ ದೆ ಚಂದ್ರದ್ರೋಣ ಪರ್ವತಕೆ ॥ ಆಗಿರಿಯೊಳರಸುತ್ತ ಲತೆಗಳ । ನಾಗ ಕಾಣದೆ ಚಿತ್ತದೊಳು ಬೆರ । ಗಾಗಿ ನಗವನೆ ಕಿತ್ತುಕೊಂಡೈತಂದ ನತಿ ಭರದೆ ॥ ೨೬ ॥ ಬಂದುಲಂಕೆಗೆ ಜವದೊಳಾಗಸ । ದಿಂದಿಳಿದು ಪವಮಾ ನಸಂಭವ । ನಂದುಶೈಲವನಾ ಸುಷೇಣನಮುಂದೆ ತಾನಿಡಲು ॥ ತಂದ ಮೂಲಿಕೆಗಳನು ಕೊಂಡದ । ರಿಂದೆ ಚೂರ್ಣವನೆಸಗಿ ಸಂತಸ । ದಿಂದೆ ಕೊಟ್ಟನು ಲಕ್ಷ್ಮಣನ ಮೂಗಿಗತಿಜವದಿಂದೆ ॥ ೨೭ ॥ ಜನರುನಿದ್ದಿಸುತೆ ದ್ದುಕುಳಿತಂ । ತನಿತರೊಳು ಸೌಮಿತ್ರಿಬೇಗನೆ । ತನಗೊದಗಿದಾ ಮೂ ರ್ಛೆಯನು ಪರಿಹರಿಸಿಕೊಂಡೆದ್ದು ॥ ವಿನಯದಿಂದಾ ರಾಮನಿಗೆರಗಿ । ಯ ನಿಲನಂದನನಂ ಪೊಗಳುತ ಕ । ದನಕೆನಿಂದನು ಮೊದಲಿನಂದದೆ ಮತ್ತೆ ಗರ್ಜಿಸುತ ॥ ೨೮ ॥ ದನುಜವಲ್ಲಭ ನಬ್ಬರಿಸುತಾ । ಮನುಜಪಾಲಕ ನೊಡನೆನಿಂದು ಕ । ದನಕೆ ಕಾದಿದನಖಿಳ ಶಸ್ತ್ರಾಸ್ತ್ರಂಗಳನುಸುರಿಸಿ ॥ ಮನುಕುಲೋತ್ತಮ ರಾಮನಸುರೇಂ । ದ್ರನ ಶರಂಗಳನೆಲ್ಲ ಕಡಿದಾ । ದನುಜನಾಥನ ಸೋಲಿಸಿದನಾ ಯುದ್ಧಭೂಮಿಯಲಿ ॥ ೨೯ ॥ ಮತ್ತೆ

ದಶಕಂಧರನು ರಾಮನ । ಹತ್ತಿರಕೆ ನಡೆತಂದು ಹೂಂಕರಿ । ಸುತ್ತ ಹೊಡೆದನು ಶಸ್ತ್ರಸಂಚಯದಿಂದೆ ರಾಘವನ ॥ ಕತ್ತರಿಸುತಾ ಬಾಣಜಾಲವ । ನತ್ತರಾಯ ರಘುವರನಾ ಮೊಸೆ । ವೆತ್ತ ಬ್ರಹ್ಮಾಸ್ತ್ರದೊಳು ವಧಿಸಿದನಾ ದಶಶಿರನನು ॥ ೩೦ ॥ ಸುರರು ಕೊಂಡಾಡಿದರು ಪೂಮಳೆ । ಗರೆದುದು ಗಗನಮಂಡಲದೊಳತಿ । ಭರದೆ ದುಂದುಭಿಗಳನು ಬಾರಿಸಿದರು ದಿವೌಕಸರು ॥ ತರಣಿಸಂತಸದಿಂದೆ ನಭದೊಳು । ತಿರುಗಿದನು ಗಂಧವಹನಿಗೆ ಬಲು । ಹರುಷವಾದುದು ರಾವಣಾಸುರ ಸತ್ತುದುದರಿಂದೆ ॥

॥ ೩೧ ॥ ತನ್ನ ಪಗೆಯಹ ರಾವಣಾಸುರ । ನನ್ನು ರಣದೊಳು ರಾಘವೇಶ್ವರ । ನುನ್ನತ ಬ್ರಹ್ಮಾಸ್ತ್ರದಿಂದಲೆ ಕೊಂದುಕೆಡಹುತ್ತ ॥ ಮನ್ನಿಸಿ ಸಕಲ ಕಪಿಗಳನು ಸಂ । ಪನ್ನಮತಿಯೊಳ ಗಪರಕರ್ಮಗ । ಳನ್ನು ಮಾಡಿಸಿದನು ವಿಭೀಷಣನಿಂದೆ ಲಂಕೆಯಲಿ ॥ ೩೨ ॥ ಬಳಿಕ ರಘುಭೂವರನು ಸಂತಸ । ದಳೆದು ತಮ್ಮನಕರೆದು ಪೇಳದ । ನೆಲೆಸುಮಿತ್ರಾಸುತನೆ ಕೇಳುವಿಭೀಷಣನನಿಂದು ॥ ತಳುವಮಾಡದೆ ರತ್ನಪೀಠದೊ । ಳೊಲವಿನಿಂದಲೆ ಕೂಡಿಸುತ ನೀಂ । ಬಲುಜವದೆ ಪಟ್ಟಾಭಿಷೇಕವ ನಾಗಿಸೆಂದೆಸುತ ॥ ೩೩ ॥ ಆಗಲೆಂದೆನು ತಣ್ಣನಿಗೆ ಪೇ । ಳ್ದಾಗಲಾ ಸೌಮಿತ್ರಿ ಲಂಕೆಗೆ । ಬೇಗಬಂದು ವಿಭೀಷಣಂಗಾ ಲಂಕೆಯೊಡೆತನವ ॥ ರಾಘವನ ನೇಮದೊಳು ಕೊಟ್ಟನು । ರಾಗದಿಂದಲೆ ರತ್ನಪೀಠದೊ । ಳಾಗಮಾಡಿಸಿದನಭಿಷೇಕವ ನೊಲಿದುಕೂಡಿಸುತ ॥ ೩೪ ॥ ತಳೆದು ಲಂಕಾರಾಜ್ಯಪದವಿಯ । ನೊಲವಿನಿಂದ ವಿಭೀಷಣನು ತಾಂ । ತಳುವದಾ ರಘುನಂದನನ ಸನ್ನಿಧಿಗೆನಡೆತಂದು ॥ ವಲಿಮುಖರು ನೋಡುತ್ತಿರಲಾ ರವಿ । ಕುಲತಿಲಕ ರಾಘವನಚರಣ ಕ । ಮಲಕೆರಗಿ ಕೊಂಡಾಡಿದನನುಪಮ ಸ್ತುತಿಗಳಿಂದ ॥ ೩೫ ॥ ಕರುಣದಿಂದಾ ರಾಘವೇಂದ್ರನು । ಶಿರವಪಿಡಿದೊಲಿದೆತ್ತಿ ಮನ್ನಿಸಿ । ವರವಿಭೀಷಣನನ್ನು ತಬ್ಬಿಕೊಳುತ್ತ ಕೈಗಳಲಿ ॥ ಪರಮಮಿತ್ರನೆ ಕೇಳುನಿನ್ನಯ । ನೆರವಿಯಿಂದೆ ಜಯಿಸಿದೆನೀ ದಶ । ಶಿರನನಿಂದೆನಗಧಿಕ ಸಂತಸವಾಯ್ತು ನಿನ್ನಿಂದ ॥ ೩೬ ॥ ಧರೆಯೊಳಾ ರವಿಶಶಿಗಳಿರುವನ । ಕರಸನೆನ್ನಿಸಿ ಲಂಕೆಯನುನೀಂ । ಪೊರೆವುದೊಬ್ಬರು ನಿನ್ನನು ಜಯಿಸದಂತೆ ನಾಂನಿನಗೆ ॥ ವರವಕೊಟ್ಟಿಹೆನೆಲೆ ವಿಭೀಷಣ । ಹರುಷದಿಂದೀ ಮೇದಿನಿಯೊಳನ । ವರತ ಚಿರಜೀವಿಯೆನಿಸಿರೆನುತ ಪೇಳ್ದನಾರಾಮ ॥ ೩೭ ॥ ದನುಜರೊಡೆಯ ವಿಭೀಷಣಂಗಾ । ಮನುಜಪಾಲಕನಿಂತು ವರಗಳ । ನನುಗೊಳಿಸುತಾ ಬಳಿಕ ಕೇಸರಿತನಯನಂ ಕರೆದು ॥ ಮನ

ದಣಿಯೆ ತಕ್ಕೈಸುತಲವನ | ತನುವನಾಘ್ರಾಣಿಸುತ ತಲೆಯನು | ಮನ
ದಭೀಷ್ಟವನಂದು ಪೇಳ್ದನು ಬಹುಳಹರ್ಷದಲಿ ‖ ೩೮ ‖ ಮರುತನ
ಣುಗನೆ ಕೇಳುಲಂಕೆಗೆ | ಭರದೊಳೀಗಲೆ ಪೋಗಿ ನೀನೀ | ವರವಿಭೀಷ
ಣನನುಮತಿಯ ನಾಂತಸುರವಲ್ಲಭನ ‖ ಅರಮನೆಯಸೇರುತ್ತ ಜಾನಕಿ |
ಗರುಹು ರಾಮನುವಧಿಸಿದನು ಸಂ | ಗರದೊಳಾ ದಶಕಂಠನಸನೆಸುತ ಸಂ
ತಸವನಾಂತು ‖ ೩೯ ‖ ಬಳಿಕ ಜಾನಕಿನಿನಗೆ ಸಂತಸ | ದಳೆದು ಪೇಳು
ವ ನುಡಿಗಳನು ಕೇ | ಳ್ದೊಲವಿನಿಂದಾಕೆ ಯಭಿಲಾಷೆಯನರಿವುತಲ್ಲಿಂದೆ ‖
ತಳುವದಿಲ್ಲಿಗೆ ನೀಂಬಹುದೆನುತ | ಕಳುಹಿಕೊಟ್ಟನು ರಾಘವೇಂದ್ರನು |
ಇಳೆಯಣುಗಿಯಾ ಬಳಿಗೆ ಮನ್ನಿಸಿ ವಾಯುನಂದನನ ‖ ೪೦ ‖

ಇಂತು ಇಪ್ಪತ್ತಾರನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೧೮೩.



## ಇಪ್ಪತ್ತೇಳನೆಯ ಅಧ್ಯಾಯ.

ಸೂಚನೆ ‖ ಬಳಿಗೆಬಂದಾ ಜನಕಜಾತೆಯ |
ನೊಲಿದು ನೋಡದೆ ರಾಮಚಂದ್ರನು |
ಹಲವುಬಗೆಯೊಳು ನಿಂದಿಸಿದನತಿ ಕೋಪವೆನುತಾಳ್ದು ‖

ಹನುಮನಾ ರಘುನಂದನಂಗತಿ | ವಿನಯದೊಳೆರಗಿ ದನುಜನಾಥ
ನ | ಮನೆಗೆಬರುತ ವಿಭೀಷಣನ ಹಿಂದುಗಡೆಹರ್ಷದಲಿ ‖ ಅನವರತ ಕಂ
ಗೊಳಿಪ ಶೋಕಾ | ವನಕೆ ತಾನೈತರುತ ಕಂಡನು | ಜನಕಜೆಯ ಶಿಂ
ಶುಪದ ವೃಕ್ಷದಕೆಳಗೆ ಶೀಘ್ರದಲಿ ‖ ೧ ‖ ಉಳಿದು ನಿದ್ರಾಹಾರಗಳ
ನಳು | ತಳುತ ಬಹುಭೀತಿಯನು ಮಾಡುವ | ಪಲಲಭಕ್ಷಕರೆನಿಪ ರಾ
ಕ್ಷಸನಾರಿಯರ ನಡುವೆ ‖ ತಳೆದುದುಃಖವನಿರದೆ ರೋದಿಸು | ತ್ತಿಳೆಯ
ನೀಕ್ಷಿಸಿಕೊಂಡು ಸಾಧ್ವಿಪ | ನುಳದ ಸೀತೆಯಬಳಿಗೆ ಬಂದಾಹನುಮ
ವಂದಿಸಿದ ‖ ೨ ‖ ಬಡನೆಸೀತೆಗೆ ಮಣಿದೆರಗಲಾ | ಪೊಡವಿನಂದನೆ ವಾ
ಯುನಂದನ | ನಡಿಗಡಿಗೆ ತಾನೀಕ್ಷಿಸುತಶೋಕವನ ಮಧ್ಯದಲಿ ‖ ನುಡಿ
ಯದತಿ ಸಂತೋಷವನು ತಾಂ | ಪಡೆದದನು ತೋರಿಸಲು ರಾಮನ |
ಮಡದಿಗೆಂದನು ರಾಮಚಂದ್ರನು ಪೇಳ್ದನುಡಿಗಳನು ‖ ೩ ‖ ತಾಯೆ

ಜಾನಕಿಕೇಳು ರಾಘವ । ರಾಯ ಸುಖದಿಂದಿಹನು ಕಪಿಸಮು । ದಾಯ ದೊಳು ಸುಗ್ರೀವಲಕ್ಷ್ಮಣರೊಡನೆ ಹರ್ಷದಲಿ ॥ ಜೀಯರಾಘವ ಕೊಂದ ನೀದೈ । ತೇಯಪತಿ ದಶಕಂಠನನು ನಿಶಿ । ತಾಯುಧದೊಳಾ ಯುದ್ಧರಂಗದೊಳಿಂದು ಮನಗೆಡದೆ ॥ ೪ ॥ ನಿನಗೆ ತನ್ನ ಕ್ಷೇಮವನು ತಿಳಿ । ಸೆನುತ ನಿನ್ನ ಸಮೀಪಕೆ ಕಳುಹಿ । ದನತಿಶೀಘ್ರದೊಳೆನ್ನನೆಲೆ ಭೂಜಾತೆ ರಾಘವನು ॥ ನಿನಗೆ ಬಹುಸಂತೋಷಕರವೆಂ । ದೆನಿಪ ನುಡಿಗಳನಾಲಿಸು ಜನನಿ । ಮನದದುಃಖವನೆಲ್ಲ ಬಿಡು ದಶಶಿರನು ಸತ್ತಿಹನು ॥ ೫ ॥ ವರವಿಭೀಷಣನೆನಗಿದಾ ಘನ । ತರದ ಸಾಯಗಳಿಂದಲು ಸಹೋ । ದರನಶೌರ್ಯಾಧಿಕ್ಯದಿಂದಲು ಸಕಲವಾನರರು ॥ ಉರವಣಿಸಿ ತೋರಿಸಿದತಿಭಯಂ । ಕರದ ಕಾಳಗದಿಂದಲಾ ರಘು । ವರನುಕೊಂದನು ಬಂಧುಗಳಸಹಿತಾ ದಶಾಸ್ಯನನು ॥ ೬ ॥ ಕೊಂದುಪಗೆಯನು ರಾಘವನು ನಿನ । ಗಿಂದುತನ್ನಯ ಕುಶಲವನು ಪೇ । ಳೆಂದು ಹೇಳಿಕಳುಹಿದನೆನ್ನನು ನಿನ್ನ ಹತ್ತಿರಕೆ । ಕುಂದದಿಂ ನೀಂ ದೈವವಶದೊಳು । ಬಂದಕಷ್ಟವ ಪರಿಹರಿಸಿಕೊಂ । ಡಿಂದಿನವರೆಗೆ ಜೀವಿಸಿರುತಿಹೆ ತಾಯೆಲಂಕೆಯಲಿ ॥ ೭ ॥ ನನ್ನ ಪೆಸೆಯಿಂ ಜಯವು ಲಭಿಸಿದು । ದಿನ್ನು ನೀಂ ವ್ಯಥೆಯನ್ನು ಕಳೆಯುತೆ । ನಿನ್ನ ಚಿತ್ತವ ನಿನ್ನು ಸುಸ್ಥಿತಿಯೊಳಿರಿಸೆಲೆ ತಾಯೆ ॥ ತನ್ನ ಪಗೆಯಹ ರಾವಣಾಸುರ । ನನ್ನು ರಾಮನುಕೊಂದು ಗುಣಸಂ । ಪನ್ನನೆನಿಪ ವಿಭೀಷಣಂಗೊಡೆತನವ ತಾನಿತ್ತ ॥ ೮ ॥ ತೊರೆದು ನಿದ್ರಾಹಾರಗಳ ನೀ । ಶರಧಿಗಾಗಿಸಿ ಸೇತುವನು ರಘು । ವರನನಿಲ್ಲಿಗೆಬರಿಸಿ ಸಂಗರದಲ್ಲಿ ದಶಶಿರನು ॥ ಮರಣವೈದುವ ವೊಲೆಸಗಿದೆನೆಲೆ । ಧರಣಿಜಾತೆಯೆ ಫಲಿಸಿತೆನ್ನು ರು । ತರವಶಸಥ ವಿಭೀಷಣನ ವಶದೊಳಹುದೀಲಂಕೆ ॥ ೯ ॥ ಮನದೊಳು ಸಮಾಧಾನವನು ಪಡೆ । ಜನನಿ ನಿನ್ನಯಮನೆಯೊಳಹೆನೀ । ನೆನಗೆ ನಿನ್ನನು ಕಂಡು ಬಹುಸಂತೋಷವಾಯ್ತೆನಲು ॥ ಜನಕನಂದನೆ ಪದೆದು ನೋಡು । ತ್ತನಿಲನಂದನನನ್ನು ನುಡಿಯದೆ । ಪನದೊಳಿದ್ದಳು ಮೌನಭಾವವನಾಂತು ಹರ್ಷದಲಿ ॥ ೧೦ ॥ ಎಲೆ ಮಹೀಸುತೆ ನೀನು ಸಂತಸ । ದಳೆದು ನನ್ನೊಳಗೇಕೆ ನುಡಿಯದೆ । ಬಲಿದಚಿಂತೆಯನಾಂತು ತಲೆವಾಗಿರುವೆಪೇಳೆನಲು ॥ ಎಲೆಪವನಸುತ ಕೇಳು ಗಂಡನ । ಗೆಲವನಾಲಿಸಿ ನನ್ನ ಮನದೊಳು । ಬೆಳೆದಸಂಮುದದಿಂದೆ ನುಡಿಯಲ್ಕಾರದವಳಾದೆ ॥ ೧೧ ॥ ನನಗೆ ಸಂತೋಷವನೆಸಗಬೇ । ಕೆನುತ ಶುಭ ವಾರ್ತೆಯನು ಪೇಳುವ । ನಿನಗೆ ನಾನಿಂದೇನು ಬಹುಮಾನವನೆಸಗಲೆನುತ ॥ ಮನ

ದೊಳಾಲೋಚಿಸುವೆ ನೀವೋ । ದಿನಿಯೊಳಹ ವಸ್ತುಗಳೊಳಾವುದ । ನಿನಗೆ ಕೊಟ್ಟರು ಸಾಂದೆನುತಾ ಸೀತೆ ಪೇಳಿದಳು ‖ ೧೨ ‖ ಪತಿಯೊಳನುರಾಗವ ನಿರಿಸುತಾ । ಪತಿಯುಜಯುವನೆ ನಿತ್ಯವುಂ ಬಯು । ಸುತಿಹ ಸೀತೆಯೆ ನೀಸು ತಕ್ಕವಳೆಂತು ನುಡಿಯುಲ್ಕೆ ‖ ಕ್ಷಿತಿಸುತೆಯೆ ಕೇಳ್ನಿನ್ನ ನುಡಿಗಳ್ । ನುತಿವಡೆದ ಶಕ್ರನ ಪದವಿಗಿಂ । ತತಿಶಯುದ ಬಹುವಾನವಾಗಿಹುದೆನಗೆ ಕೇಳವ್ವ ‖ ೧೩ ‖ ವೈರಿಯುನು ಸಂಹರಿಸಿ ಜಯುವನು । ಘೋರಯುದ್ಧದೊಳ್ಳೆದಿದಾ ರಘು । ವೀರನನು ನೀಂ ಕಾಣ್ಬದೆಂದಾ ಹನುವು ನುಡಿಯುಲ್ಕೆ ‖ ಧಾರಿಣೀಸುತೆ ಸೀತೆಕೇಳ್ದಾ । ಮಾರುತಿಯ ನುಡಿಗಳನು ಕೂಡೆ ಸ । ಮೀರಸುತನನುಹೊಗಳಿದಳು ಘನಸಂತಸವನಾಂತು ‖ ೧೪ ‖ ಮರುತತನಣುಗನೆ ಕೇಳುನೀನೀ । ಧರಣಿಯೊಳತಿ ಶ್ಲಾಘ್ಯತೆಯನಾಂ । ತಿರುವೆ ನಿನ್ನೊಳು ಶೌರ್ಯಧೈರ್ಯಸ್ಥೈರ್ಯವಿನಯುಗಳು ‖ ಮೆರೆವ ಸತ್ಯಪರಾಕ್ರಮ ಕ್ಷಮೆ । ಕರುಣೆಶಮೊದಮೆ ದಾನದಯೆಗಳು । ನೆರೆದು ತುಂಬಿಹವೆನುತ ಜಾನಕಿ ಪೇಳ್ದುನುತಿಸಿದಳು ‖ ೧೫ ‖ ಮತ್ತೆ ಸೀತೆಯು ಪಾದಗಳಿಗೆರ । ಗುತ್ತ ಪೇಳಿದನೆಲೆಮಹೀಸುತೆ । ಸುತ್ತ ನಿನ್ನನು ಬಳಸಿಕೊಂಡೀ ವನದಮಧ್ಯದಲಿ ‖ ಹೊತ್ತುಹೊತ್ತಿಗೆ ಬಾಧೆಯುನುಮಾ । ಡುತ್ತ ಪೀಡಿಸಿ ದೀವನಿತೆಯುರ । ಸಿತ್ತಸಂಹರಿಸುವೆನೆನಗೆ ಜೆಸನೀವುದೆಂದೆನುತ ‖ ೧೬ ‖ ಕೇಳು ವಾನರವೀರ ಧರಣೀ । ಪಾಲನಪ್ಪಣೆಗಳನು ಶಿರದೊಳು । ತಾಳಿ ನನ್ನನು ಪೀಡಿಸಿದರಿವರೊಳಗೆತಪ್ಪಿಲ್ಲ ‖ ಖೂಳರಾವಣ ನಾಜ್ಞೆಯುಂತೀ । ಬಾಲೆಯುರು ಹೆದರಿಸಿದರೆನ್ನನು । ಕಾಲವಶದಿಂದೆನಗೆ ಸಂಭವಿಸಿರ್ದುದೀಕಷ್ಟ ‖ ೧೭ ‖ ಅರಸನಪ್ಪಣೆಯಂತೆ ನಡೆಯುವ । ವರೊಳು ಕೋಪವ ಮಾಡಲಾಗದು । ಮರುತನಣುಗನೆ ಕೇಳು ಹಿಂದಣ ಜನ್ಮದಲಿ ನಾನು ‖ ವಿರಚಿಸಿದ ದುರಿತಂಗಳಿಂದಲು । ಪರಮದೌರ್ಭಾಗ್ಯ ದೆಸೆಯಿಂದಲು । ಧರೆಯೊಳೀವಿಧವಾದ ಕಷ್ಟಂಗಳನು ಹೊಂದಿದೆನು ‖ ೧೮ ‖ ರಾವಣನಳಿದು ಹೋದನವರಿಂ । ದೀವನಿತೆಯುರು ಮೊದಲಿನಂತೆ ನ । ಗಾವನೋವನು ಮಾಡಲಾರರೆನುತ್ತ ಜಾನಕಿಯು । ಭಾವಿಸುತ ಮನದೊಳಗೆಪೇಳಲು । ದೇವಿನಿನಗೇನು ಡಿವಿಹಿತ ವಹು । ದೀವಸುಧೆಯೊಳು ನೀನೆಸತಿಯರೊಳುತ್ತಮಳೆನಿಸುವೆ ‖ ೧೯ ‖ ಜನಕನಂದನೆ ಕೇಳು ಜಗದೊಳು । ಘನತರದ ಕೀರ್ತಿಯನು ಹೊಂದಿದೆ । ಮನುಕುಲೋತ್ತಮ ರಾಮನಿಗೆ ನೀಂ ಧರ್ಮಪತ್ನಿಯಹೆ ‖ ನನಗೆ ನೀ ನಪ್ಪಣೆಯಕೊಡು ನಿ । ನ್ನಿನಯುನೆಡೆಗೈದುವೆನು

ನಾನೆಂ । ದೆನುತಕೇಳಲುಸೀತೆ ಪೇಳವಳಾಂಜನೇಯನಿಗೆ ॥ ೧೦ ॥ ಅನಿಲ ನಂದನ ಕೇಳುರಘುನಂ । ದನನ ನೀಕ್ಷಿಸಲಾನಪೇಕ್ಷಿಪೆ । ನೆನೆಯುಸೀತೆಯ ನುಡಿಯ ನಾಲಿಸುತಂಜನಾಸುತನು ॥ ಜನಕಜಾತೆಯೆ ಹಾಗೆಯಾಗಲಿ । ಯ ನುಜನಿಂದೊಡಗೂಡಿ ದಶಕಂ । ಠನನು ವಧಿಸಿದಪತಿಯನೋಡುವೆನೀನು ಶೀಘ್ರದಲಿ ॥೧೧॥ ಎಂದುಬಿನ್ನವಿಸುತ್ತ ಜಾನಕಿ । ಗಂದತಿಭಕುತಿಯಿಂತೆ ಕೇಸರಿ । ನಂದನನೆರಗಿಬಳಿಕ ಶೋಕವನವನು ತಾನುಳಿದು ॥ ಸಂದಸಂ ತಸದಿಂದೆ ದಶರಥ । ನಂದನನಬಳಿಗೈದಿ ಕೈಮುಗಿ । ದೆಂದನು ಶಿರವಬಾಗಿ ನಮಿಸುತಲಧಿಕವಿನಯದಲಿ ॥ ೧೨ ॥ ದೇವರಾಘವ ಚಿತ್ತವಿಸು ನೀ । ನಾ ವನೆವ ದಿಂದೀರಣದೆ ೞಳಾ । ರಾವಣನಸಂಹರಿಸಿ ಲಂಕಾಪುರವ ಜಯಿಸಿದೆ ಯೋ ॥ ಭಾವಿಸುತದನು ಸೀತೆಯನು ಸಂ । ಭಾವಿಸಿವಿಲೋಕಿಪ್ರದು ಜಾ ನಕಿ । ತೀವಿದ ಜಯವ ನಾಲಿಸುತ ಸಂತಸವನೈದಿದಳು ॥ ೧೩ ॥ ಆಕೆ ನಿನ್ನನುನೋಡಬೇಕೆಂ । ಬಾಕುತೂಹಲದಿಂದಿಹಳು ಕರು । ಣಾಕರ ನೆನೀಂ ಚಿತ್ತವಿಸೆನುತ ಬಿನ್ನವಿಸಲೆರಗಿ॥ ಆಕಪಿವರನ ನುಡಿಯನಾಲಿಸು । ತಾ ಕಮಲದಳ ನೇತ್ರನೆನೆದು ವ । ನೌಕಸರಮಧ್ಯದೊಳು ಕರೆಯಿಸಿದ ನು ವಿಭೀಷಣನ ॥೧೪॥ ವರವಿಭೀಷಣ ಕೇಳು ನೀನಾ । ಧರಣಿಜಾತೆಸ್ನಾ ನವನೆಸಗಿ । ಮೆರೆವದಿವ್ಯಾಭರಣಮಂಗಳ ವಸ್ತ್ರಗಳನೆಲ್ಲ ॥ ಧರಿಸಿಕೊಂ ಡೆನ್ನಯ ಸಮೀಪಕೆ । ಭರದೊಳೈತರುವಂತೆಪೇಳುತ । ಕರೆತರುವುದೆಂ ದಾತನನು ಕಳುಹಿಸಿದನಾರಾಮ ॥೧೫॥ ತಳೆದುರಾಘವನಪ್ಪಣೆಯ ನಾ ॥ ಬಳಿಕ ತನ್ನಂತಃಪುರವರಕೆ । ತಳುವದೈತಂದಾ ವಿಭೀಷಣನಧಿಕ ಹರ್ಷ ದಲಿ ॥ ಬಳಗೆಬರಿಸುತ ಸೇವಕಿಯರಾ । ಬಳಗವೆನುಮಿಗೆ ಯುಪಚರಿಸಿ ಸ । ಲ್ಲಲಿತ ಮಧುರವಚೋರಚನೆಯಿಂದಿಂತುಪೇಳದನು ॥ ೧೬ ॥ ಜನ ಕಸುತೆ ದಿವ್ಯಾಂಗರಾಗವ । ತನುವಿನೊಳುತಾ ನಿರಿಸಿಕೊಳ್ಳುತ । ವಿನು ತದಿವ್ಯಾಭರಣ ವಸ್ತ್ರಂಗಳನು ತಾ ಧರಿಸಿ ॥ ಇನಯನೆಡೆಗಾ ಶಿಬಿಕೆ ಯೊಳು ತಾ । ಮನವೊಲಿದು ಕುಳಿತೈತರುವುದೆಂ । ದೆನುತ ಪೇ ಳುವುದೆಂದು ನುಡಿದನುಸೇವಕೀಜನಕೆ ॥ ೧೭ ॥ ಅರಸನಾಜ್ಞೆಯ ನಾಂತುರಜನೀ । ಚರಿಯರು ವಿಭೀಷಣನೊಡನೆ ನಡೆ । ತರುತಶೋಕವ ನಕ್ಕೆ ಜಾನಕಿಗೆರಗಿ ಭಕ್ತಿಯಲಿ ॥ ಧರಣಿಜಾತೆಯೆ ಕೇಳು ನೀನಾ । ತರಣಿವಂಶಲಲಾಮ ನೆಡೆಗೈ । ತರುವುದೀಗಳೆನುತ್ತ ಬಿನ್ನವಿಸಿದರುಕೈ ಮುಗಿದು ॥ ೧೮ ॥ ಆನುಡಿಯನಾಲಿಸುತ ಘನಸುಂ । ಮಾನವನು ತಾನೈದಿ ಮನದೊಳು । ಜಾನಕಿ ವಿಭೀಷಣನ ಮುಖವನು ನೋಡಿ

ತಲೆವಾಗಿ ॥ ಸ್ನಾನವನೆಸಗಿ ಗಂಡನಬಳಿಗೆ । ನಾನು ಬರುವೆನೆನುತ್ತ ಪೇ
ಳಲು । ಮಾನವೇಂದ್ರನು ಪೇಳಿದಂತೆಸಗೆನುತ ಪೇಳಿದನು ॥ ೨೯ ॥ ಧರ
ಣಿನಂದನೆ ಮಜ್ಜನವೆಸಗಿ । ಮೆರೆವ ರತ್ನಾಭರಣಗಳ ತಾ । ನಿರಿಸಿಕೊ
ಳ್ಳುತ ದಿವ್ಯವಸ್ತ್ರವನುಟ್ಟು ಹರ್ಷದಲಿ ॥ ಮೆರೆವಪಲ್ಲಕ್ಕಿಯೊಳು ಕುಳ್ಳಿ
ರೆ । ಭರದೊಳಾಕೆಯ ನಾವಿಭೀಷಣ । ಕರೆದುಕೊಂಡಾ ಮನುಕುಲೇಂ
ದ್ರನಬಳಿಗೆ ನಡೆತಂದ ॥ ೩೦ ॥ ರಾಯನಿಂಚಿತ್ತವಿಪ್ರದು ಜನಕ । ರಾಯ
ನ ಮಗಳು ಬಂದಿರುವಳೆಂದು । ತಾಯುಸುರಪತಿ ಬಿನ್ನವಿಸಲಾ ಮನುಕು
ಲೋತ್ತಮನು ॥ ತೋಯಜಾಕ್ಷಿಯನೀಗ ಕಪಿಸಮು । ದಾಯ ಮಧ್ಯ
ದೊಳೆನ್ನ ಹತ್ತಿರ । ಕೀಯೆಡೆಗೆ ಬರಿಸೆನುತ ಪೇಳಿದನಾ ವಿಭೀಷಣಗೆ
॥ ೩೧ ॥ ಒಡನೆ ರಾಮನ ನೇಮದಂತಾ । ಪೊಡವಿಯಣುಗಿಯ ನಾ
ವಿಭೀಷಣ । ನಿಡಿವಸಂತಸದಿಂದೆ ಬರಿಸಲು ರಾಘವನಬಳಿಗೆ ॥ ಮಡದಿ
ಜಾನಕಿಯನು ವಿಲೋಕಿಸಿ । ದೊಡನೆ ಸಂತಸದೈನ್ಯಕೋಪಗ । ಳೊಡ
ರಿಸಿದವಾ ರಾಘವೇಶ್ವರನಿಗತಿ ಶೀಘ್ರದಲಿ ॥ ೩೨ ॥ ಧರಣಿನಂದನೆ ಲಜ್ಜೆ
ಯನು ತಾ । ಳ್ದಿರದ ವಯವಂಗಳೊಳು ಮುಳುಗುತ । ಹರುಷದಿಂದೆ
ವಿಭೀಷಣನ ನೇಮುವನು ಕೈಕೊಂಡು ॥ ಭರದೆ ನಡೆತಂದಾ ರಘುವ
ರನಿ । ದಿರೊಳು ನಿಂದಳು ಸಕಲ ವಾನರ । ವರರು ನೋಡುತ್ತಿರಲಧಿಕ
ಸಂತೋಷವನುತಾಳ್ದು ॥ ೩೩ ॥ ವಸನದಿಂದಲೆ ಮುಖವನಿರದಾ ।
ವಸುಮತೀಸುತೆ ಮರೆಸಿಕೊಳ್ಳುತ । ತಿಶಯಮಾಗಿಹ ನಾಚಿಕೆಯನಾಂ
ತಿಳೆಯನೀಕ್ಷಿಸುತ ॥ ಸರಸಿಜಾಂಬಕ ರಾಘವೇಶ್ವರ । ನೆಸೆವಮುಖವನು
ಕಾಣುತಲೆ ರೋ । ದಿಸಿದಳು ತಳುವದಾರ್ಯಪುತ್ರನೆ ಯೆನುತ ತಾಂ ನು
ಡಿದು ॥ ೩೪ ॥ ಪತಿಯೆದೈವವೆನುತ್ತ ತಿಳಿದಾ । ಕ್ಷಿತಿತನುಜೆಯಾಶ್ಚರ್ಯ
ದಿಂದಲು । ವಿತತಸಂತಸದಿಂದಲು ಸ್ನೇಹತನದಿಂದಲು ತಾಂ । ಅತಿಶಯ
ದ ಗಾಂಭೀರ್ಯಮಿನಿಸುಮೆರೆವ । ಪತಿಯಮುಖವನು ನೋಡಿದಳು ಕಪಿ ।
ತತಿಯಮಧ್ಯದೊಳಧಿಕ ಲಜ್ಜೆಯತಾಂತು ಶೀಘ್ರದಲಿ ॥ ೩೫ ॥ ಮನದ
ದುಃಖವನೆಲ್ಲ ಬಿಡುತಾ । ಜನಕಸುತೆ ಬಹುಕಾಲದಿಂದಲು । ತನಗೆ ದರ್ಶನ
ವಿಲ್ಲದಾ ರಘುನಾಥನಾನನವ ॥ ಮನದಣಿಯೆ ನೋಡುತ್ತ ಪೂರ್ಣಿಮೆ ।
ದಿನದ ಉದಯಿಸಿದ ಪೂರ್ಣಚಂದ್ರನ । ನೆಸೆಯನಿಪ ಮುಖದಿಂದೆ ಕಂಗೊ
ಳಿಸುತ್ತ ತೋರಿದಳು ॥ ೩೬ ॥ ತನ್ನಮುಂಗಡೆ ನಿಂದಜಾನಕಿ । ಯನ್ನು
ನೋಡುತ ರಾಮಚಂದ್ರನು । ಮುನ್ನ ಚಿತ್ತದಕೋಪವನು ಹೊರವಡಿ
ಸಲುಜ್ಜುಗಿಸಿ । ಸನ್ನುತಚರಿತೆ ಧರಣಿನಂದನೆ । ಯನ್ನು ಕುರಿತೆಲೆ ಸೀತೆ

ರಾವಣ । ನಿನ್ನ ಸಂಹರಿಸುತ್ತ ನಿನ್ನನು ನಾನು ಜಯಿಸಿದೆನು ॥ ೩೭ ॥ ಜನಕನಂದನೆ ಕೇಳವನಿಯೊಳು । ಘನಪರಾಕ್ರಮದಿಂದೆ ಪಡೆದೆನು । ಮನುಜಪಾಲಕರ್ಗೈದ ಬೇಕಾಗಿರುವಕೀರ್ತಿಯನು ॥ ವಿನುತಪೌರುಷ ವನ್ನು ತೋರಿದೆ । ನನುವರದೊಳಗೆ ಫಲಿಸಿತೆನ್ನಯ । ಮನದಕೋರಿಕೆ ದೈವವಶದಿಂದೆನುತ ಲಿಂತೆಂದ ॥ ೩೮ ॥ ಧರಣಿಸುತೆನೀಂ ಕೇಳು ದಶಕಂ । ಧರನು ನಿನ್ನನು ಕೊಂಡುಬಂದುದು । ತರವದೋಷವಕಳೆ ದುಕೊಂಡೆನು ನಾನು ಭೂಮಿಯಲಿ ॥ ಧರೆಯೊಳಾದಪಕೀರ್ತಿಯನು ಪರಿ । ಹರಿಸಿಕೊಳ್ಳಲು ಶಕ್ತಿಯಿಲ್ಲದ । ನರನಿಗೆಂದಿಗೆ ತಾನೆ ಲಭಿಸುವು ದಾವಪುರುಷಾರ್ಥ ॥ ೩೯ ॥ ಜನಕಸುತೆ ಕೇಳ್ಕಳೆದುಕೊಂಡೆನು । ಮನುಜಮಾತ್ರದವನೆನಿಸಿದನಾ । ನೆನಗೆ ಬಂದಾನಿಂದ ನೆಯನಾದೈವವಶ ದಿಂದೆ ॥ ಹನುಮನ ಪರಾಕ್ರಮವು ಸುಗ್ರೀ । ವನತಿ ಸಾಹಸವಾವರವಿ ಭೀ । ಷಣನ ಸಾಯವು ಸಫಲಮಾದವು ಯುದ್ಧ ಭೂಮಿಯಲಿ ॥ ೪೦ ॥ ಎನುತಪೇಳುವವಚನಗಳನಾ । ವನಿತೆಕೇಳುತ್ತಿರಲನಿತರೊಳು । ಜನಕ ಜೆಯ ಕಂಗಳೊಳು ಕಂಬನಿ ತುಂಬಿ ತಧಿಕಮೆನೆ ॥ ಜನಕಜಾತೆಯ ನೀಕ್ಷಿಸುವರಾ । ಮನವಮುಖದೊಳುಂಟಾಯ್ತು ಕೋಪವ । ವನಿಮೊ ಳುಜ್ವಲಿ ಪಗ್ನಿಯಂದದೆ ಭಯವನಾಗಿಸುತ ॥ ೪೧ ॥ ಲಲನೆಜಾನಕಿ ಕೇಳು ನಾನಾ । ಖಳದಶಶಿರನು ತಂದನಿನ್ನನು । ಬೆಳೆದವಿಕ್ರಮದಿಂದೆ ಜಯಿಸಿದೆ ನಿನ್ನ ಪಯಶವನು ॥ ಕಳೆದುಕೊಂಡೆನು ಜಯವನಾಂತೆನು । ಲಲನೆನಿನ್ನನು ಪಡೆಯಬೇಕೆನು । ತ್ತಿಳೆಯೊಳಾ ದಶಕಂಠನನು ಸಂಹರಿಸಿ ದವನಲ್ಲ ॥ ೪೨ ॥ ನಿನ್ನ ಸಚ್ಚರಿತೆಯನು ರಕ್ಷಿಸ । ಲುನ್ನತಬಲಾಢ್ಯ ನಹರಾವಣ । ನನ್ನು ಕೊಂದೆನು ಘೋರಸಂಗರದೊಳೆಲೆವೈದೇಹಿ ॥ ನಿನ್ನ ನೇಮವನಾಂತು ಭರದೊಳು । ನಿನ್ನ ಮನಬಂದಂತೆ ನೀಂ ಪೋ । ಗಿನ್ನು ದಶದಿಶೆಗಳೊಳಗಾ ವೆಡೆಗಾದರೆಯು ಸರಿಯೆ ॥ ೪೩ ॥ ಇಳೆಯ ನಂದನೆ ಕೇಳು ನನಗೀ । ನೆಲದೊಳಗೆ ನಿನ್ನಿಂದಮಿನಿ ಸುಂ । ಕೆಲಸವಿ ಲ್ಲವು ಪೋಗುನಿನಗಿಷ್ಟಮೆನಿಸಿದಕಡೆಗೆ ॥ ನೆಲದೊಳಾವನು ತಾನೆ ಬಗೆ ಯ । ಲ್ಪಲವು ದಿನಮೆಂತನ್ಯರ ಮನೆಗ । ಳೊಳಿರುತಿದ್ದ ಸತಿಯನುಬಿಡ ದೆಮೆ ಮರಳಿಹೊಂದುವನು ॥ ೪೪ ॥ ರಾವಣನತೊಡೆಯಲ್ಲಿ ಕುಳಿತಾ । ರಾವಣನ ಕಾಮಾತುರದ ನಯ । ನಾವಲೋಕನ ಕೊಳಗೆನಿಸಿದಾನಿನ್ನ ನಾನರಿತು ॥ ಆವಕಾರಣದಿಂದ ಹೊಂದುವೆ । ನೀವಸುಧೆಯೊಳು ಮತ್ತೆ ಕೇಳೆಂ । ದೀವಿಚಾರವತಿಳಿದು ನಿನ್ನನುನಾನು ಜಯಿಸಿದೆನು ॥ ೪೫ ॥

ಜನಕನಂದನೆ ಕೇಳುನಿನ್ನೊಳು । ನನಗೆಸಖತನ ವೆಂಬುದಿನಿತಿ । ಲ್ಲನು
ದಿನವು ಸೌಖ್ಯವನು ನೀಂಪಡೆವಂತೆಭೂಮಿಯೊಳು ॥ ಮನಮಿರಿಸುಲಕ್ಷ್ಮ
ಣನೊಳಾಗಲಿ । ಮನುಜರೊಡೆಯು ಭರತನೊಳಾಗಲಿ । ನನಗೆಬೇಕಾಗಿಲ್ಲ
ನೀಂತಿಳಿ ನಿನ್ನಚಿತ್ತದೊಳು ॥ ೪೬ ॥ ನಿನಗೆ ಸುಖವುಪ್ಪಂತೆ ಸಂತತ ।
ಮನಸನಿರಿಸಿನ ಸುತನೊಳಾಗಲಿ । ವಿನಯದೆ ವಿಭೀಷಣನೊಳಾಗಲಿ ಸೀತೆ
ನೀನಿಂದು ॥ ದನುಜಪತಿ ದಶಶಿರನು ತನ್ನಯ । ಮನೆಯೊಳಿದ್ದತಿ ದಿವ್ಯ
ತರವೆಂ । ದೆನಿಪ ರೂಪವನಾಂತ ನಿನ್ನೊಳು ಸುಖಿಸದಿಹನೇನು ॥ ೪೭ ॥
ಪ್ರಿಯವಚನವನೆ ನಿತ್ಯಸಾಲಿಪ । ಬಯಕೆಯನು ಪಡೆದಾಮಹೀಸುತೆ ।
ಭಯವನಾಗಿಪ ಗಂಡನ ಪ್ರಿಯವಚನವನು ಕೇಳ್ದು ॥ ಪ್ರಿಯನವೊಂ
ಗಡೆನಿಂದು ಬಹುವಿ । ಸ್ಮಯದೆ ಕಂಪಿಸುತೊಣಗಿದಾ ಕಿಸ । ಲಯದ
ವ್ರೋಲ್ಕಳಗುಂದಿ ರೋದಿಸುತಿದ್ದಳಡಿಗಡಿಗೆ ॥ ೪೮ ॥ ಮುಳಿದಗಂಡನ
ಕಠಿನವಚನಂ । ಗಳನುಕೇಳುತ ಜನಕನಂದನೆ । ಬಳೆದರೋವೊಂಚನ
ವನೀಕ್ಷಿಸಿ ತನ್ನದೇಹದೊಳು ॥ ತಳೆದು ಬಹುಲಜ್ಜೆಯ ನವಯವಂ ।
ಗಳೊಳು ತಾಂಮುಳುಗುತ್ತ ದುಃಖಿಸಿ । ದಳಡಿಗಡಿಗಾ ರಾಮಚಂದ್ರನ
ಮುಂಗಡೆಯೊಳಳುತ ॥ ೪೯ ॥ ಪತಿಯ ಕರ್ಕಶವಚನಗಳ ನಾ । ಕ್ಷಿತಿ
ಜೆಕೇಳುತ ನೊಂದುಮನದೊಳು । ವಿತತ ನಯನಾಂಬುವನು ಸುರಿಸು
ತ್ತಿರಡು ಕಂಗಳಲಿ ॥ ಹಿತದಧೈರ್ಯವನಾಂತು ದುಃಖವಿ । ತತಿಯನಡಗಿಸಿ
ಕೊಂಡು ನುಡಿವಳು । ಚತುರತನದಿಂದಿಂತು ಗದ್ಗದಕಂಠದಿಂದಳುತ ॥
॥ ೫೦ ॥ ಧರಣಿನಂದನೆತನ್ನಕಣ್ಣೊಳು । ಸುರಿವಜಲದಿಂದಿರದೆ ವಕ್ತ್ರವ ।
ನೊರಸಿಕೊಳ್ಳುತ ಶಿರವಬಾಗಿ ನೆಲವನೀಕ್ಷಿಸುತ । ನೆರೆದಖಿಳವಾನರರ
ಮಧ್ಯದೊ । ಳಿರದೆ ಗಂಡನ ಚರಣಪಂಕಜ । ಕೆರಗಿಪೇಳಿದಳಿಂತು ಕೈ
ಮುಗಿದತಿ ವಿನಯದಿಂದ ॥ ೫೧ ॥ ವೀರನೀನೇಕಿಂತು ನನ್ನವಿ । ಚಾರ
ದೊಳು ಸಂದೇಹಪಡುವೆ ಕ । ಠೋರತರವೆಂದೆನಿಸ ನುಡಿಗಳನೇಕೆ
ಹೇಳುತಿಪೆ ॥ ಭೂರಿಕೋಪವನಾಂತು ಚಿತ್ತಕೆ । ತೋರಿದಂದದೆ ನುಡಿ
ಯಬೇಡ ವಿ । ಚಾರಿಸಲುನೀಂ ಪೇಳವಂತಿನಿಸಿಲ್ಲ ನನ್ನೊಳಗೆ ॥ ೫೨ ॥
ನನ್ನ ಪಾತಿವ್ರತ್ಯಮಹಿಮೆಯೊ । ಳನ್ನ ನಾನೀ ಕಪಿಗಳನಡುವೆ । ನಿ
ನ್ನ ಸಂದೇಹಕ್ಕೆ ಪರಿಹಾರವನು ತೋರಿಸುವೆ ॥ ನನ್ನನುಕುರಿತುನೀನು
ನುಡಿದ । ತೆನ್ನೊಳು ದುರಿತಮಿಲ್ಲಪೇನುಡಿ । ಯನ್ನು ಘನತರಶಪಥ
ಮೂಲಕವಾಗಿ ಪೇಳುವೆನು ॥ ೫೩ ॥ ಇತರವಧುಗಳ ನಡತೆಗಳನೇ ।
ಸತತವಿಾಕ್ಷಿಸುತೆ ನ್ನನುಕುರಿತು । ಹಿತದೊಳೀತೆರದಿಂದೆ ಪೇಳುವೆ

ಮನಕೆಬಂದಂತೆ ॥ ಪತಿಯೆ ನಿನಗಿಂದಂಥ ಸಂಶಯ । ಮತಿಯೊಳಂಕು
ರಿಸದವೊಲಿದಕೇ । ಕ್ಷಿತಿಯೊಳು ಪ್ರತ್ಯಕ್ಷಮಾಳ್ಪೆನು ನೋಡುನಾಸೀಗ ॥
॥ ೫೪ ॥ ದೇವಚಿತ್ತವಿನೋದನನುಜ ವರ । ನಾವನದೊಳಗೆ ನನ್ನ ಪಿಡಿ
ಯುತ । ಲಾವಿಪಾಯಸ ಪಥದೊಳ್ಯತಂಪಾಗನಾ ಸವನ ॥ ಕ್ಯವಶ ನಿ
ಸಿ ಯುಕ್ತ್ಯವಿಲ್ಲದೆ । ನೋಡೆನ್ನಮುತ ನೆರವಕಾಣಿ । ರಾವಣಸದೇಹವನು
ನೋಕಿದೆ ವಿವರಳೆನಿಸುತ್ತ ॥ ೫೫ ॥ ಆವನು ಕಾವ ವಿಕಾರದಿಂದನ ।
ಗಿವವಳಲ್ಲವು ದೈವದಾ ತ । ಪ್ಪದರೊಳಿಪುದು ಹೊರಿತು ನನ್ನ ಪರಾಧ
ಮಿನಿತಿಲ್ಲ ॥ ಇವರೊಳೇಕನುಮಾನ ವನ್ನಮು । ಹೃದಯು ನಿನ್ನೊಳಿಮ್ಮೆ
ಪಾಗಿ । ತ್ರಿದನು ನಿಶ್ಚಯವಾಗಿಪೇಳುವೆನೀಗ ನಿನ್ನೊಡನೆ ॥ ೫೬ ॥
ಪ್ರಾಣನಾಥನೆ ಕೇಳು ಪರರಿಗ । ಧೀನವಾದಂಗಂಗಳೊಳು ನಾ । ನೇನ
ಮಾಡಲನಾಥ ಳೆನ್ನಿಸುತಂದು ವಿಪಿನದಲಿ ॥ ನೀನುನನ್ನಯ ಪತಿಭಕುತಿ
ಯನು । ಕಾಣವವನಂತಿಂತು ಪೇಳುವೆ । ನಾನು ನಿನಗನುಮಾನವಿಲ್ಲದಹಾ
ಗೆಮಾಡುವೆನು ॥ ೫೭ ॥ ದೇವಚಿತ್ತವಿನೆನ್ನ ಮನದಾ । ಭಾವನಿನಗಂ ತಿ
ಳಿಯಲಿಲ್ಲವು । ದೇವರಿಸದೆ ನಿವಾಸಿಸಿತೀಗಮನೋಡು ಮನದೊಳಗೆ । ಈ
ವಸುಮತಿಯೊಳೆನ್ನ ಮೇಲೆಸಿ । ಪಾ ವಿಮಲತರ ಶೀಲವನುಸೀ । ನಾವ ।
ವಿಧದಿಂದಿಂತು ದೂಷಿಸುತಿರ್ದಪೆ ತಿಳಿಯದು ॥ ೫೮ ॥ ನನ್ನೊಳಿಹಪತಿ
ಭಕ್ತಿಯನು ನೀ । ನಿನ್ನಗಂ ತಿಳಿಯದವನೆಂತ್ರಿಪೆ । ನಿನ್ನನೇಮವನಾಂ
ತು ಕೇಸರಿಸುತನು ಪೂರ್ವದಲಿ ॥ ನನ್ನ ನರಸುತ ಲಂಕೆಗೈದಂ । ದನ್ನ
ಶೀಲವನೆಲ್ಲ ಕಾಣುತ । ನಿನ್ನ ಸಂಗಡ ಪೇಳಿಹನೆನುತ ನಾನುನಂಬುವೆನು ॥
॥ ೫೯ ॥ ಪ್ರಾಣಕಾಂತನೆ ಕೇಳುನಾನೀ । ಭಾನುಸುತಸುಗ್ರೀವನಿದಿ
ರೊಳು । ನೀನುಪೇಳುವ ಮಾತುಗಳನಾಲಿಸುತ ಚಿಂತಿಸದೆ ॥ ಪ್ರಾಣವ
ನುಳಿಡುತಿರ್ಪೆ ನಿನ್ನನು । ನಾನುಬಿಟ್ಟಿರಲಾರೆ ನೆನ್ನುತ । ಜಾನಕಿ ಪತಿಗೆ
ಪೇಳ್ದು ಮತ್ತಿಂತೆಂದಳಂದಿರದೆ ॥ ೬೦ ॥ ಪ್ರಾಣವನು ಸಂದೇಹದೊಳ್ಳಿ
ರಿಸಿ । ನೀನುತೋರಿಸಿದಂಥ ಸಾಹಸ । ಮೇನು ಕೆಲಸಕೆಬಾರದಂತಾಯ್ತು
ಕಟ ಯೋಚಿಸಲು ॥ ಭಾನುನಂದನ ನಾದಿಯಾಗಿಹ । ವಾನರರು ತೋ
ರಿಸಿದಕಷ್ಟವು । ಹೀನವೆಂದೆನಿಸುತ್ತ ನಿಷ್ಫಲವಾಗಿತೋರುವುದು ॥
॥ ೬೧ ॥ ಮನುಜಪಾಲಕ ಕೇಳುತಿಳಿಯದ । ಮನುಜನಂತೆ ಸ್ತ್ರೀತ್ವ
ವನು ನಿಜ । ಮನದೊಳಂದತಿ ಮುಖ್ಯವಾಗೆಣಿಸುತ್ತನನ್ನೊಳಗೆ ॥ ಘನ
ತರದಕೋಪವನು ಮಾಡುವೆ । ನಿನಗೆ ನನ್ನಯಶೀಲವೀದಿನ । ಮನಕೆ
ಬಾರದೆಹೋಯಿತಲ್ಲವೆಯೆಂದು ಕೇಳಿದಳು ॥ ೬೨ ॥ ನನ್ನ ಜನ್ಮಸ್ಥಾ

ಸಪೆನು ಮ | ತ್ತಿನ್ನ ಸಚ್ಚರಿತೆಯನು ಚಿತ್ತದೊ | ಳಿನ್ನು ತಿಳಿದು ವಿಚಾರ
ಮಾಡಿದೊಡಿಂದು ಮೊದಲಂತೆ || ನನ್ನೊಳನುಮಾನಿಸದಿರುವೆ ನೀ | ನೆ
ನ್ನ ತಪಸೀನಂದನೆ ಪತಿಯು | ಸನ್ನಿಧಿಯೊಳಳುತ್ತಳುತ ನುಡಿದಳುನೊಂ
ದುಕ್ಕೆಯುಗಿದು || ೬೭ || ಜನಕಭೂಪನ ಹೇತುವಿಂದಲ | ವನಿಯೊಳು
ದ್ಭವಿಸಿದು ನಾ ಪಾಲಿಸು | ತನದ ಮೊದಲಿಂದಾಚರಿಸಿದಾ ನನ್ನ ನಡತೆಯನು ||
ಏನುತಿಪತ್ನಾ ಸುಜನಸನ್ನುತ | ಮೆನಿಪ ಪಾಣಿಗ್ರಹಣವನು ನೀ | ನೆಣಿ
ಸಲಿಂದಿಂತು ಪ್ರಮಾಣವೆನುತ್ತೆ ತಿಳಿದಿರುವೆ || ೬೮ || ನನ್ನ ಮದುವೆಯು
ನನ್ನ ಭಕ್ತಿಯು | ನನ್ನ ಶೀಲವು ನನ್ನ ನಡತೆಯು | ನನ್ನ ಪಾತಿವ್ರತ್ಯ ಧ
ರ್ಮವು ನನ್ನ ಸುಚರಿತ್ರೆಯು || ನಿನ್ನ ಮುಂಗಡೆ ವಿಫಲವೆನಿಸಿದು | ದೆನ್ನು
ತತ್ತಳು ಧಾಳಿಸುತೆ | ತನ್ನೆರಡು ಕಂಗಳೊಳು ನೀರನುಸುರಿಸುತ
ತಿಗತಿಗ || ೬೯ || ಪತ್ರಿಯು ಶಕ್ತ್ರದಸಿಂತು ಬಹುವ್ಯ | ನ್ಯತಿಪೊಳ್ಗನಸೀ
ತಳವನೀಕ್ಷಿಸು | ತತಿವಿಷಾದವನ್ನೈದಿದಾ ಸಾವಿತ್ರಿಯನುಕ ಹು || ವಿತತ
ಮಹಿಮೆ ತಾಳಲಾರದೆ | ಚತುರತೆಯೊಳಿಂತೆಂದು ನುಡಿದಳು | ಸತಿಶಿರೋ
ಮಣಿಸೀತೆ ಗದ್ಗದಸಿನದದಿಂದಳುತ || ೭೦ ||

ಇಂತು ಇಪ್ಪತ್ತೇಳನೆಯ ಅಧ್ಯಾಯ ಸಂಪೂರ್ಣವು
ಪದ್ಯಗಳು ೧೪೫೯.

## ಇಪ್ಪತ್ತೆಂಟನೆಯ ಅಧ್ಯಾಯ

ಸೂಚನೆ || ಉರಿವ ವೈಶ್ವಾನರನೊಳಂಜದೆ |
ಧರಣಿನಂದನೆ ಬೀಳಲಗ್ನಿಯು |
ಪೊರೆವುತಾಕೆಯ ನಿತ್ತನಾ ರಘುನಂದನಂಗೊಲಿದು ||

ತಂದೆ ಲಕ್ಷ್ಮಣ ಕೇಳು ರಾಘವ | ನಿಂದು ನನ್ನನು ಕೆಟ್ಟ ಮಾತುಗ |
ಳಿಂದೆ ಮೂಷಿಸಿಬಿಟ್ಟನೆನುತಲಿ ನುಡಿದನೆನ್ನೊಡನೆ || ನೊಂದುಕೊಳ್ಳುವ
ದೇಕೆ ಮರುಳು | ವ್ಯಂದದವಡುವೆ ನನ್ನ ಗಂಡನ | ಕಂದುಕಸರಿಕಯ
ನ್ನು ಹರಿಸುವೆನೀಗ ಶೀಘ್ರದಲಿ || ೧ || ಕೆಟ್ಟ ಮಾತನು ನಾನು ಪಡೆದೀ |
ಹೊಟ್ಟೆಯನು ನದೆಂತಿರಿಸಿಕೊಳ್ಳಲಿ | ನೆಟ್ಟನೆ ಪ್ರಾಣವನು ಬಿಡುವೆನು ಕೇ
ಳು ಮೈದುನನೆ || ಕಟ್ಟಿಗೆಗಳಂ ಚಿತಿಯಗೆಯ್ಯುವೆತೆ | ಮುಟ್ಟಸಗ್ನಿಯನದ

ರೊಳೀಗಲೆ । ಥಟ್ಟನುರುಳುತ್ತಿದಕೆ ತೋರಿಪೆನಾನು ನಿಷ್ಕೃತಿಯ ॥
॥ ೨ ॥ ವಿನುತ ಪಾತಿವ್ರತ್ಯಮಹಿಮೆಗೆ । ಮನವೊಲಿಯ ದಾಪತಿಯ
ದೆಸೆಯಿಂ । ಘನಸಭಾಮಧ್ಯದೊಳಗಲಿಕೆಯನಾಂತ ನನಗಿಂದು ॥ ಅನಲ
ನೊಳುಬೀಳುಪ್ರದೆ ಸಮ್ಮತ । ವೆಸಿ ಪ್ರದಲಿ ಸೌಮಿತ್ರಿ ಜಿತ್ತ... । ಳೆ
ಣಿಕೆಗೊಳ್ಳದೆ ಚಿತ್ರಿಯನೆನಗೆಂದೆನುತ ಪೇಳಿದಳು ॥ ೩ ॥ ಜನಕಸುತೆ ತ
ನ್ನೊಡನೆ ಪೇಳ್ದತಿ । ವಿನಯವಚನಂಗಳನು ಕೇಳುತ । ಮನಮರುಗಿ
ಸೌಮಿತ್ರಿ ರಾಮನ ಮುಖವನೀಕ್ಷಿಸಲು ॥ ಮನವಭೀಷ್ಟವ ನರುಹು
ವಂದದೊ । ಳನುಜನಿಗೆ ತಿಳುಹಿದನು ರಘುನಂ । ದನನು ಲೋಚನಸಂ
ಜ್ಞೆಯಿಂದಲೆ ಚಿತಿಯನೇಗೆನುತ ॥ ೪ ॥ ತಿಳಿದುರಾಮನ ಮನದಭೀಷ್ಟ
ವ । ಬೆಳೆದಚಿಂತೆಯನಾಂತು ಮನದೊಳ । ದಳುತ ಲಕ್ಷ್ಮಣನಲ್ಲಿ ಚಿತಿ
ಯನು ನಿರ್ಮಿಸುತ್ತದಕೆ ॥ ತಳುವದಗ್ನಿಯ ನಿಡಲದುವು । ಜ್ವಲಿಸುತ ನ
ಭೋಮಂಡಲತನಕ । ಬೆಳೆವು ಧಗಧಗನುರಿಯುತಿದ್ದುದು ಭಯವನಾ
ಗಿಸ ತ ॥ ೫ ॥ ಕ್ಷಿತಿಯನೀಕ್ಷಿಸುತಾಗ ನಿಂದಿಹ । ಪತಿಯಬಳಿಗೈತಂದು
ಧರಣೀ । ಸುತೆಯು ಭಕ್ತಿಯೊಳು ಪ್ರದಕ್ಷಿಣೆಬಂದು ಮೂರುಸಲ ॥ ವಿ
ತತ ವಿನಯದೊಳೆರಗಿ ಕೈಮುಗಿ । ದತಿ ಭರದೊಳೈತಂದಳು ಜ್ವಲಿ । ಸು
ತಿಪ ವಹ್ನಿಯ ಪತ್ತಿರಕೆ ವಿಸ್ಮಯವನಾಗಿಸುತ ॥ ೬ ॥ ಬಳಿಕಜಾನಕಿವೀತಿ
ಹೋತ್ರನ । ಬಳಿಗೆತಾನೈತಂದು ಬದ್ಧಂ । ಜಲಿಪುಟಳೆನಿಸಿ ರಾಮನಾ
ಮವ ಜಪಿಸುತಡಿಗಡಿಗೆ ॥ ತಲೆಯಬಾಗಿಸಿ ಸಕಲದೇವತೆ । ಗಳಿಗೆವಿಪ್ರ
ರಿಗೆರಗಿ ಪೇಳ್ದಳ । ನಲನಮುಂಗಡೆನಿಂದು ತಾನೀತೆರದ ಕೈಮುಗಿದು ॥
॥ ೭ ॥ ನನ್ನ ಚಿತ್ತವದೆಂತು ರಾಘವ । ನನ್ನು ಬಿಟ್ಟರಲಿಲ್ಲವಂತಿಂ । ದಿನ್ನೆ
ಗಂ ನೀಂತಿಳಿದಪಕ್ಷದೊಳೀಗ ಕರುಣಿಸುತ ॥ ನನ್ನಪಾಲಿಸು ವೀತಿಹೋ
ತ್ರನೆ । ನಿನ್ನ ಬಿಟ್ಟರೆ ಕಾವರಿಲ್ಲವು । ನಿನ್ನನೀಲೋಕಕ್ಕೆ ಸಾಕ್ಷಿಯೆನುತ್ತ
ಪೇಳುವರು ॥ ೮ ॥ ಧರಣಿಮಂಡಲ ದೊಳತಿರಾವನ । ಚರಿತಳೆಂದೆನಿಪೆ
ನ್ನ ನೀರಘು । ವರನು ದುಷ್ಟಚರಿತ್ರೆಯನ್ನು ತಮಂತು ಳಿದಿಹನೋ ॥
ಕರುಣಿಸುತ ನೀನಿಂದುರಕ್ಷಿಸು । ಭರದೊಳೆನ್ನನು ದೇವ ವೈಶ್ವಾ । ನ
ರನೆ ನೀಂ ಪ್ರತ್ಯಕ್ಷ ಸಾಕ್ಷಿ ಯೆನಿಸುವೆ ಲೋಕಕ್ಕೆ ॥ ೯ ॥ ಮನಸಿನಿಂದ
ಲು ನುಡಿಗಳಿಂದಲು । ತನುವಿನಿಂದಲು ಕಜ್ಜದಿಂದಲು । ವಿನುತಿ ಪಡೆದಿಂ
ದ್ರಿಯಗಳಿಂದಲು ಹೇಗೆ ಸಂತತವು ॥ ಮನುಕುಲೋತ್ತಮ ನೆಂದೆನಿಪ
ರಾ । ಮನನು ಬಿಡದಿಹೆನೆಂತು ಚಿತ್ತದೊ । ಳನಲದೇವನೆ ರಕ್ಷಿಸುವು
ದಂತೆನ್ನ ನೀನೊಲಿದು ॥ ೧೦ ॥ ರವಿಯುಚಂದ್ರನು ಹಗಲುರಾತ್ರಿಯು ।

ಪವನನು ಸಕಲದಿಕ್ಕುಗಳು ಗಗ | ನವು ವಸುಮತಿಯು ಸಂಧ್ಯೆ ಜಲ
ನಿಧಿ ಸಪ್ತಶೈಲಗಳು || ಅವನಿಮಂಡಲ ದೊಳಹ ಪಾವನ | ವಿವಿಧವಸ್ತು
ಗಳೆಂತು ಸುಚರಿತೆ | ಯಿವಳೆನುತ ತಿಳಿದಿರುವು ವಂತೊಲಿದೆನ್ನ ರಕ್ಷಿ
ಪುದು || ೧೧ || ಇಂತು ನುಡಿಸುತ ಮೇದಿನೀಸುತೆ | ಚಿಂತಿಸದೆ ಮೂರು
ಸಲ ವಹ್ನಿಗೆ | ಸಂತಸವನಾಂತು ಪ್ರದಕ್ಷಿಣೆ ಬಂದು ನಮಿಸುತ್ತ || ಅಂತ
ರಂಗದೊಳಾಗ ಭಯಪಡ | ದಂತೆ [illegible] ತನಕಕೆಂದಳಿ | ರಂತು
ರಿವ ಬೆಂಕಿಯೊಳು ಬಿದ್ದಳು ಪತಿಯ ಧ್ಯಾನಿಸುತ || ೧೨ || ಧರಣಿಸುತೆ
ದೇಹಾಭಿಮಾನವ | ತೊರೆದು ಭೀತಿಯ ನೀಗಿಸುತ್ತಂ | ದುರಿವವೈಶ್ವಾ
ನರನೊಳಂಜದೆ ಬೀಳುತಿರಲಲ್ಲ || ನರ[illegible]ಳೆಲ್ಲ ರೀಕ್ಷಿಸಿ | ದರತಿ
ಶಯದ ವ್ಯಾಕುಲವನಾಂ | ತಿರದ ನಯನೋದಕವ ಸುರಿಸುತ ಲಧಿಕದೈ
ನ್ಯದಲಿ || ೧೩ || ಹೊಳೆವ ಚಿನ್ನದ ಕಾಂತಿ ಯಂತುರೆ | ಥಳಥಳಿಪತನು
ಕಾಂತಿಯನು ತಾಂ | ತಳೆದ ಜಾನಕಿ ಚಿನ್ನದೊಡವೆಗಳಿಂದೆ ಶೋಭಿಸು
ತ || ಬಳಸಿನಿಂದ ಸಮಸ್ತ ಜನಗಳು | ತಿಳಿಯುವಂದದೆ ಬಿದ್ದಳಂಜದ |
ನನೊಳಾ ರಾಘವನನಾಮವ ಜಾನಿಸುತಕೂಡೆ || ೧೪ || ವಿನುತಿವೆತ್ತತಿ
ಪುಣ್ಯಕರವೆಂ | ದೆನಿಸುವಾಜ್ಯಾಹುತಿಯ ತೆರದಿಂ | ದನಲನೊಳುತಾಂ
ಬೀಳುತಿರಲಾ ಮೇದಿನೀಸುತೆಯು || ಘನಮನೋವ್ಯಥೆಯಿಂದ ಲಾತ್ರಿ
ಭು | ವನದಜೀವಿಗಳೆಲ್ಲ ಕಂಡರು | ಮನಮರುಗಿ ಬಹುವಿಸ್ಮಯವನಾಂ
ತಳುತ ಲಂಕೆಯಲಿ || ೧೫ || ಪರಮಪಾವನಮುನಿಪ ಯಜ್ಞದೊ | ಳು
ರಿವವಹ್ನಿಗೆ ಮಂತ್ರಗಳನು | ಚ್ಚರಿಸಿಸಂತತ ಸುರಿಸುವಾಜ್ಯಾಹುತಿಯ
ತೆರದಿಂದೆ || ಉರಿವಪಾವಕನೊಳಗೆ ಬೀಳು | ತ್ತಿರುವ ಧರಣೀಸುತೆಯ
ನೀಕ್ಷಿಸು | ತಿರದೆ ಖೇದವನಾಂತು ಕೊರಗಿದರಖಿಳವಾನರರು || ೧೬ ||
ಘೋರಶಾಪವನಾಂತು ನೊಂದು ವಿ | ಚಾರವಿಲ್ಲದೆ ತೊಲೆದುಸಗ್ಗವ |
ನಾರಕದೊಳಗೆ ಬೀಳ್ವದೇವತೆಯಂತೆ ವಹ್ನಿಯಲಿ || ಧಾರಿಣೀಸುತೆ ಬೀ
ಳುತಿರಲು | ಮೂರುಲೋಕದ ಜೀವಿಗಳು ಬೃಂ | ದಾರಕರು ಗಂಧ
ರ್ವರು ಗಳೀಕ್ಷಿಸಿದರತಿಭಯದೆ || ೧೭ || ಧರಣಿಸುತೆಬೀಳುತಿರ ಲಗ್ನಿ
ಯೊ | ಳಿರದೆ ದನುಜರು ಸಕಲವಾನರ | ವರರು ಹಾಹಾಕಾರಗಳನೆಸ
ಗಿದರು ರೋದಿಸುತ || ತರಣಿವಂಶಲಲಾಮ ನಂದಾ | ತೆರದನುಡಿಗಳನೆ
ಲ್ಲ ಕೇಳುತ | ಸುರಿಸಿಕಂಬನಿಗಳನು ದುಃಖಿಸುತ್ತಿದ್ದನಡಿಗಡಿಗೆ || ೧೮ ||
ಪರಮಧಾರ್ಮಿಕನೆನಿಸುವಾ ರಘು | ವರನು ದುಃಖವನಾಂತು ಮನದೊ
ಳು | ಧರಣಿಜಾತೆಯ ನೀಕ್ಷಿಸುತ ನಯನೋದಕವಸುರಿಸಿ || ಶಿರವಬಾ

ಗಿಸಿ ಮಾತನಾಡದೆ | ಬೆರಳಮೂಗಿನೊಳೊಂದು ಗಳಿಗೆಯ | ಪರೆಗೆ ಚಿಂ
ತಾವಿಷ್ಟನಾದನು ತಿಳಿಯದವನಂತೆ || ೧೯ || ಅನಲನುಷ್ಣವ ನಾಗಿಸದ
ಮೇ | ದಿನಿಯಣುಗಿಗಾ ಮಂಜಿನಂದದಿ | ಘನತರದ್ಯುತ್ಯವನು ಮಾಡದ
ನಂದು ಚಿತಿಯೊಳಗೆ || ಜನಕನಂದನೆ ಮುಡಿದಹೂಗಳು | ಜನಗಳಿಗೆ
ಕಾಣಿಸಿದುವಾ ಯನ | ಲನೊಳುಬಾಡದೆ ಬಿರಿದಮೊಗ್ಗೆಗಳಂತೆ ಕಂಗೊ
ಳಿಸಿ || ೨೦ || ಧರಣಿಜಾತೆಯ ಮುಡಿವ ಧಗಧಗ | ನುರಿದ ವಹ್ನಿಯೊ
ಳಿನಿಸುಬಾಡದೆ || ಸುರುಚಿರವುದೆಂದೆನ್ನಿಸಿದುದಾದು ವಿಮಲಕಾಂತಿಯು
ಲಿ || ಧರಿಸಿದಂಬರ ವಹ್ನಿಯೊಳಿನಿಸು | ಮುರಿಯದಿದುದದು ಕಾಣಿಸಿದ
ಳಾ | ಧರಣಿಸುತೆ ಪ್ರುಟವಿಟ್ಟಚಿನ್ನದತೆರದೆ ಸಕಲರಿಗೆ || ೨೧ || ಪಿತನ
ಮಂದಿರದೊಳಿರುವಂತಾ | ಕ್ಷಿತಿಸುತೆವಿಕಾರವ ನುಳಿದುರಿವ | ಚಿತಿಯ
ಮಧ್ಯದೊಳಿದ್ದಳಂಜದೆ ಬಹುವಿನೋದದಲಿ || ಪತಿಪರಾಯಣೆಯರ್ಗೆ
ದುಃಖ | ಪ್ರತತಿಗಳು ಪರಿಹಾರ ವಹುದೀ | ಕ್ಷಿತಿಯೊಳಿಕ್ಷಿಸ ಲೆಂತೊ ಪ
ತಿಭಕ್ತಿ ಪ್ರಭಾವವದು || ೨೨ || ಸುರಪತಿ ಯಮ ಕುಬೇರ ಶಂಕರ |
ವರುಣ ಚತುರಾ ನನನು ಮೊದಲಹ | ಸುರರು ಸಂಗಳಿಸುತ್ತ ಸೂರ್ಯಗೆ
ಸಮಮೆನಿಸಿ ಮೆರೆವ || ವರವಿ ಮಾನಂಗಳೊಳು ಕೂಡುತ | ಧರದೊ
ಳೈ ತಂದಿಳಿಗೆ ಲಂಕಾ | ಪುರವ ಸೇರುತ ಬಂದುನಿಂದರು ರಾಮಸಿದಿನ
ಲಿ || ೨೩ || ಇವರೊಳಂಜಲಿ ಬದ್ಧನಾಗುತ | ಮುದದಿ ನಿಂದಿಹ ರಾಘವ
ನನಾ | ತ್ರಿದಶವರ ರೀಕ್ಷಿಸುತ ಹಸ್ತಾಭರಣಗಳ ನಾಂತು || ಮುದವಡಸ
ಕ್ತೈ ಗಳನು ಚಾಚುತ | ಸದಯ ದಿಂದಲೆ ರಾಮನಿಗೆ ಪೇ | ಳಿದರೊಲಿದು
ಮೃದು ಸ್ನಿಗ್ಧಧುರ ಗಂಭೀರ ವಚನಂಗಳಲಿ || ೨೪ || ಸಕಲ ಲೋಕಂಗಳಿ
ಗೆ ನೀಂ ರಕ್ಷಕ ನೆನಿಸಿ ಕೊಂಡಿರುವೆ ನುತಿಪೆ | ತ್ತಖಿಳ ಸುಜ್ಞಾನಿಗ
ಳೊಳುತ್ತಮ ನಾಗಿ ಕಾಣಿಸುವೆ || ಶಿಖಿಯೊಳಂಜುತ ಬಿಳುತಿಪ ಬಾ |
ನಕಿಯ ನೀಕ್ಷಿಸು ತೆಂತು ಪೇಕ್ಷಿಪೆ | ವಿಕಟ ಮಾನವ ನಂತೆ ನೀಂ ನಲ
ವಿಂದೆ ರಕ್ಷಿಸದೆ || ೨೫ || ಸುರರ ಸಂದೋಹಕೊಗಗೆ | ಸರನೆಸಿ
ಸಿ ಕೊಂಡಿರುವ ನೀನೆಂ | ತರಿಯ ದಿರ್ದಪೆ ಕೇಳು ನಿನ್ನನು ರಾಘವೇ
ಶ್ವರನೆ | ನೆರೆವಿರಾಜಿಸು ವಷ್ಟ ವಸುಗಳ | ನೆರವಿಯೊಳು ಋತು ಧಾಮ
ನೆಂದೆನಿ | ಪುರುತರದ ಪೆಸರಾಂತು ನೀಂ ವಿಖ್ಯಾತ ನಾಗಿರುವೆ || ೨೬ || ಪ
ನಗಶಿಲ್ಲರಿ ಗರಸನಾಗಿಹೆ | ವಿನುತಿ ವೆತ್ತಾ ತ್ರಿಭುವನಕೆ ಮೊದ | ಲನೆ
ಯ ದೇವರೆನಿಸುವೆ ರುದ್ರರೊ ಳೆಂಟನೆಯವನಹೆ || ಘನತರದ ಸಾಧ್ಯರೊ
ಳು ನೀ ನೈ | ದನೆಯವನೆನಿಪೆ ಕಿವಿಗಳನಿಪರು | ನಿನಗು ಭಯಪಾರ್ಶ್ವ

ದೊಳಗಶ್ವಿನಿ ದೇವತೆಗಳರಿಯೆ ॥ ೨೭ ॥ ನಿನಗೆ ಕಣ್ಣುಗಳಾಗಿರುತ್ತಿಹ । ರಿನಶಶಿಗಳೀರ್ವರು ಸಮಸ್ತ ಭು । ವನಗಳಾಭ್ಯಂತಂಗಳಲಿ ಕಾಣಿಸುತಿರುವೆ ನೀನು ॥ ವನಜನಾಭನೆ ಸುರರೊಳುತ್ತಮ । ನೆನಿಸಿಕೊಂಡಿಹೆ ನೀನದೆಂತೀ । ಗನಲನೊಳು ಬೀಳುತಿಹ ಸತಿಯ ನುಪೇಕ್ಷಿಸುವೆ ಪೇಳೈ ॥ ೨೮ ॥ ಎನುತ ಪೇಳಿದ ದಿಕ್ಪತಿಗಳತಿ । ವಿನುತ ವಚನಗಳನ್ನು ಕೇಳುತ । ಮನುಜಪತಿ ಕೈಗಳನುಜೋಡಿಸುತೆರಗಿ ದಿವಿಜರಿಗೆ ॥ ಮನುಕುಲೋತ್ತಮ ದಶರಥನ ಸುತ । ನೆನುತ ನನ್ನನು ತಿಳಿದುಕೊಂಡಿಹೆ । ಮನುಜಮಾತ್ರದವನೆನುತ ತಿಳಿದುಕೊಂಡಿರುವೆನಾನು ॥ ೨೯ ॥ ಆರುನಾನೆಂಬುದನು ನನ್ನನು । ಧಾರಿಣಿಯೊಳೆಂತಪ್ಪನೆಂದು ವಿ । ಚಾರಿಸಿ ತಿಳಿದುಕೊಂಡಿರುವಿರೆಂಬುದನು ನನ್ನೊಳಗೆ ॥ ಮಾರಿದಾಕ್ಷಿಪೆಯು ಸಿರಿಸುತವಿ । ಸ್ತಾರವಾಗಿಯೆ ತಿಳಿಸಬೇಕೆಂ । ದಾ ರಘುವರನು ಬೇಡಿದನು ದೇವತೆಗಳೆಲ್ಲರನು ॥ ೩೦ ॥ ಪರಮ ಭಕ್ತಿಯೊಳಂತು ಬೇಡುವ । ಧರಣಿಪಾಲನ ಮಾತುಗಳ ನಾ । ದರದೊಳಾಲಿದಾಲಿಸುತ ಬುಜಭವನಾರಘೂದ್ವಹನ ॥ ಕುರಿತು ಸಂತಸದಿಂದೆ ಪೇಳ್ದನು । ಭರದೆಕೇಳೆಲೆ ರಾಘವನೆ ಮನ । ಮಿರಿಸುತೆನ್ನಯ ಸತ್ಯಮೆನಿಸುವ ವಚನಗಳನೊಲಿದು ॥ ೩೧ ॥ ನೀನು ಚಕ್ರಾಯುಧವನಾಂತಿಹೆ । ನೀನು ದೇವೋತ್ತಮನೆನಿಸಿರುವೆ । ನೀನು ಲಕ್ಷ್ಮೀರಮಣನಾಗಿಹೆ ದೇವಲೋಕದಲಿ ॥ ನೀನೆ ನಾರಾಯಣನು ಲಕ್ಷ್ಮಿಯೆ । ಜಾನಕಿಯು ಮಧುಕೈಟಭಾಂತಕ । ನೀನೆ ವಾಮನರೂಪವನು ಪಡೆದಾದಿಕೇಶವನು ॥ ೩೨ ॥ ನೀನು ಮಧುಕೈಟ ಭರವಧಿಸಿದೆ । ನೀನು ಯುದ್ಧದೊಳು ದಶಶಿರನ । ಪ್ರಾಣವನು ಪೋಗಿಸಿದೆ ಪರಮಾತ್ಮಸ್ವರೂಪನಹೆ ॥ ನೀನೆ ಅಕ್ಷರದ ಸ್ವರೂಪನು । ನೀನು ಶಾಶ್ವತ ನಜನನಾಮಯು । ನೀನೆಲದೆವರ ಶಾರ್ಙಧರನೆಂದೆನಿಸಿಕೊಂಡಿರುವೆ ॥ ೩೩ ॥ ನೀನು ಜಗದೊಳು ತುಂಬಿಕೊಂಡಿಹೆ । ನೀ ನಖಿಳಲೋಕಂಗಳಲಿ ಸ । ನ್ಮಾನವನು ಪಡೆದುತ್ತಮೋತ್ತಮ ಧರ್ಮವೆನಿಸಿರ್ಪೆ ॥ ನೀನು ಪುರುಷೋತ್ತಮನು ನೀನಾ । ದಾನವಾಂತಕನೆನಿಪೆ ಕೇಳೈ । ನೀನೆ ವಿಷ್ವಕ್ಸೇನನೆಂ ಬಾಪೆಸರನಾಂತಿರುವೆ ॥ ೩೪ ॥ ನೀನುಜಯಿಸಲಸಾಧ್ಯನಾಗಿಹೆ । ನೀನು ಮೇಲೆನಿಪಿಂದ್ರಿಯಂಗಳಿ । ಗೀ ನೆಲದೊಳಗರಸನೆನಿಸಿಕೊಂಡಿರುವೆ ಸಂತತವು ॥ ನೀನು ನಾಲ್ಕು ಭುಜಗಳನಾಂತಿಹೆ । ನೀನು ಸರ್ವವ್ಯಾಪಿಯಾಗಿಹೆ । ನೀನೆ ನಂದಕವೆಂಬ ಖಡ್ಗವನಾಂತು ಕಾಣಿಸುವೆ ॥ ೩೫ ॥ ನೀನೆ ವಿಷ್ಣುವು ನೀನೆ ಕೃಷ್ಣನು । ನೀನೆ ಸುರಗುರು ನೀನೆ

ವಿಬುಧರ । ಸೇನೆಯನು ಸಂರಕ್ಷಿಸುತ್ತಿಹ ವೀರನಾಗಿರುವೆ ॥ ನೀನೆ ದಿವ್ಯ ಪುರಗಳ ಪೊರೆಯುವೆ । ನೀನೆ ಬುದ್ಧಿಯು ನೀನೆ ಶಕ್ತಿಯು । ನೀನೆ ಸುರಪತಿಯಂತೆ ಬಹುಸಂಪದವನಾಂತಿರುವೆ ॥ ೩೬ ॥ ನೀನೆ ನಾರಾಯ ಣನುಪೇಂದ್ರನು । ನೀನೆ ಕೇಳೆಲೆ ರಾಘವೇಶ್ವರ । ನೀನೆ ದಮೆಯುಕ್ಷ ಮೆಯು ನೀನಾಗಿರುವೆ ಲೋಕದಲಿ ॥ ನೀನೆ ಪಾಲಕ ನೀನೆ ನಾಶಕ । ನೀನೆ ಜಿಷ್ಣುವು ನೀನೆ ಶರ್ವನು । ನೀನೆ ಶತ್ರುವಿನಾಶಕನೆನಿಸಿಕೊಂಡು ತೋರುತಿಹೆ ॥ ೩೭ ॥ ನೀನೆ ಪ್ರಭವವು ನೀನೆ ನಿಧನವು । ನೀನೆ ಶತಜಿಹ್ವ ನೆಲೆರಾಘವ । ನೀನೆ ಯಜ್ಞವು ನೀನೆ ಓಂಕಾರಸ್ವರೂಪನಹೆ ॥ ನೀನು ದಶರೂಪ ಧರನಾಗಿಹೆ । ನೀನು ಪಂಕಜನಾಭನೆನಿಸಿಹೆ। ನೀನೆ ಮೂಲೋ ಕಕ್ಕೆ ಮೊದಲನೆ ದೇವರಾಗಿರುವೆ ॥ ೩೮ ॥ ದೇವಯೋಗ್ಯರೆನಿಸುವ ತಾಪಸ । ರೀವಸುಧೆಯೊಳಗಿರುತಿಹ ಸಕಲ । ಜೀವಿಗಳ ಪಾಲಿಸುವೆ ನೀ ನೆಂದೆನುತ ಪೇಳುವರು ॥ ಭಾವಿಸಲು ಸಿದ್ಧರಿಗೆ ಸಾಧ್ಯರಿ । ಗಾವಗಂ ನೀ ನಾಶ್ರಯನೆನಿಪೆ । ದೇವರಾಘವ ಸಾವಧಾನದಿ ಕೇಳು ನೀನೊಲಿದು ॥ ೩೯ ॥ ನೀನು ಯಾರೆಂದರಿಯಲಿಲ್ಲವೆ । ಮಾನವಾಗ್ರಣಿ ನೀನು ನಿನ್ನ ನು । ನೀ ನಖಿಳಭೂತಂಗಳೊಳು ವಿಪ್ರರೊಳು ಕಾಣಿಸುವೆ ॥ ನೀನು ಗೋವುಗಳೊಳು ನದಿಗಳೊಳು । ಕಾಣಿಸುವೆ ಗಿರಿಗಳೊಳು ನಭದೊ ಳು । ನೀನು ಕಾಣಿಸುತಿರುವೆ ದಿಕ್ಕುಗಳೊಳು ನಿರಂತರವು ॥ ೪೦ ॥ ಸಾಮವೇದದ ರೂಪಿನಿಂದಲೆ । ಭೂಮಿತಲದಲಿ ನೀನು ತೋರುವೆ । ರಾಮಚಂದ್ರನೆ ವಿಬುಧರೊಳು ನೀಂ ಶ್ರೇಷ್ಠನಾಗಿರುವೆ ॥ ವ್ಯೋಮಕೇ ಶನ ಮಿತ್ರನಾಗಿಹೆ । ಕಾಮಿತಾರ್ಥವ ನೀಯುತಿಹೆ ಯಭಿ । ರಾಮಮಾ ಗಿರುವಾ ವಷಟ್ಕಾರವೆನಿಸುತ್ತಿರುವೆ ॥ ೪೧ ॥ ಸಾವಿರ ತಲೆಗಳನ್ನು ಧರಿ ಸಿಹೆ । ಸಾವಿರ ಪದಗಳನ್ನು ಪಡೆದಿಹೆ। ಸಾವಿರ ನಯನಗಳನು ನೀಂ ತಳೆ ದಿರುತ ಕಾಣಿಸುವೆ ॥ ಆವಗಂ ಸಚರಾಚರದಖಿಳ । ಜೀವಿಗಳ ನಾಶೈಲಗ ಳನಾಂ । ತೀವಸುಧೆಯನು ಧರಿಸಿಕೊಂಡಿಹೆ ನೀನು ಸಂತತವು ॥ ೪೨ ॥ ಉರಗತಲ್ಪದೆ ಮಲಗಿ ದೇವಾ । ಸುರಗರುಡ ಗಂಧರ್ವ ವಿದ್ಯಾ । ಧರರ ಸಂಚಯದಿಂದೆ ಕೂಡಿದ ಮೂಜಗಂಗಳನು ॥ ಇರಿಸಿಕೊಳ್ಳುತ ನಿನ್ನು ದರದೊಳು । ನಿರುತಸಲೆಕಂಗೊಳಿಸಿ ತೋರು । ತ್ತಿರುವೆ ರಾಘವ ನಿನ್ನ ಭಕ್ತರನೊಲಿದು ರಕ್ಷಿಸುತ ॥ ೪೩ ॥ ನಾನು ನಿನ್ನ ಯಹೃದಯವೆನಿಸುವೆ । ವಾಣಿನಿನ್ನ ಯ ನಾಲಗೆಯು ಗೀ । ರ್ವಾಣರೆಲ್ಲರು ನಿನ್ನ ದೇಹದ ಕೂದ ಲಾಗಿಹರು ॥ ನಾನೆ ಪೂರ್ವದೊಳಿಂತು ವಿಧಿಸಿದೆ । ಮಾನವೋತ್ತಮ

೯ಳು ಯೋಚಿಸ । ಲೀ ನೆಲದೊಳಗೆ ನಿನ್ನನುಳಿದೊಂದಿಲ್ಲ ಸರ್ವತ್ರ ॥೪೪॥
ನಗೆ ರಾತ್ರಿನಿಮೇಷವೆನಿಪುದು । ಮನುಜನಾಥನೆ ಕೇಳ್ವುದುನ್ಮೇ । ಷಣ
) ಹಗಲಾಗಿಹುದು ಪರಿಕಿಸೆ ನಾಲ್ಕುವೇದಗಳು ॥ ನಿನಗೆ ಸಂಸ್ಕಾರವೆನಿಪ
) ಮೇ । ದಿನಿಯೆ ನಿನ್ನ ಸ್ಥೈರ್ಯವಾಗಿಹು । ದಿನಕುಲೋತ್ತಮ ವಹ್ನಿ
ನ್ನಯು ಕೋಪವಾಗಿಹುದು ॥ ೪೫ ॥ ರವಿಕುಲೋತ್ತಮ ಕೇಳು ಚಂ
)ನೆ । ಸುವಿಮಲವೆನಿಪ ನಿನ್ನ ಸೌಮ್ಯಗು । ಣವೆನಿಸಿರುವನು ಸಕಲ
ೋಕವೆ ನಿನ್ನ ತನುವಹುದು ॥ ತವಕದಿಂ ಬಲಿಯನ್ನು ಬಂಧಿಸಿ । ದಿವಿ
ನಾಥನಿಗಿತ್ತೆ ಇಂದ್ರಪ । ದವನು ವಾಮನರೂಪದೊಳು ಮೂಜಗವ
ಾಕ್ರಮಿಸಿ ॥ ೪೬ ॥ ಸೀತೆ ಲಕ್ಷ್ಮಿಯು ನೀನೆ ವಿಷ್ಣುವು । ಭೂತಲವೊಳತ್ತಿ
ಾರನೆನಿಸಿ । ಖ್ಯಾತಿವಡೆದಿಹ ರಾವಣನ ಸಂಹಾರಕೋಸುಗವೆ ॥ ಈತೆರದ
ನುಜಾವತಾರದೊ । ಳೀತರಣಿಕುಲದೊಳುದಿಸಿದೆ ಭೂ । ನಾಥ ದಶರಥ
ಕ್ರವರ್ತಿಗೆ ಮಗನೆನಿಸಿಕೊಂಡು ॥ ೪೭ ॥ ನೀನುನಮ್ಮ ಕೆಲಸವನೆಸ
ದೆ । ದಾನವಾಧಿಪ ರಾವಣನಳಿದ । ನೀನು ಸಗ್ಗವೆಕುರಿತುಬರ್ಪುದು
ೂರೆದುಭೂಮಿಯನು ॥ ಮಾನವಶರೀರವನು ಧರಿಸು । ತ್ತೀ ನೆಲದಭಾ
ರವನು ಹರಿಸಿದೆ । ಭಾನುವಂಶಲಲಾಮ ನಿನಗೆಣೆಯಾರು ಮೂಜಗದೆ
೪೮ ॥ ನಿನ್ನ ವೀರ್ಯವೆ ಮೋಘವಾದುದು । ನಿನ್ನಶಕ್ತಿಯು ಮೋಘವಾ
ದುದು । ನಿನ್ನತಿಪರಾಕ್ರಮವಮೋಘವೆನಿಪುದು ಲೋಕದಲಿ ॥ ನಿನ್ನರೂ
ಪವಮೋಘವಾದುದು । ನಿನ್ನನಾಮವಮೋಘವಾದುದು । ನಿನ್ನಭಕ್ತರ
ೋಘ ವಿದ್ಯಾನಿಧಿಗಳೆನಿಸುವರು ॥ ೪೯ ॥ ಪರಮಭಕ್ತಿಯನಾಂತು
ನ್ನನು । ಧರಣಿಮಂಡಲದಲ್ಲಿ ಸಂತತ । ವರಿದುಪಾಸನೆ ಮಾಳ್ಪಮಾನವ
ಪರಂಗಳಲಿ ॥ ನಿರುತವಿಷ್ಟಾರ್ಥಂಗಳನು ಹೊಂ । ದಿರುವನೀ
ನಕಥೆಯನೋದುವ । ನರರಿಗೆ ಪರಾಭವಗಳುಂಟಾಗದು ಧರಿತ್ರಿಯಲಿ
೫೦ ॥ ಈ ಕಥೆಪುರಾತನವೆನಿಸಿರುವು । ದೀ ಕಥೆಯು ಶಾಶ್ವತವೆನಿ
ತಿಹು । ದೀಕಥೆ ರಚಿತವಾಗಿಹುದು ವಾಲ್ಮೀಕಿಮುನಿಯಿಂದೆ ॥ ಈ
ಥೆ ಮನೋರಥವನಾಗಿಪು । ದೀ ಕಥೆದುರಿತಗಳನು ಪೋಗಿಪು । ದೀ
ಥೆ ಶುಭಾವಹವೆನಿಸಿ ಕೊಡುತಿಹುದು ಮುಕ್ತಿಯನು ॥ ೫೧ ॥ ಕಮ
ಸಂಭವನಿಂತು ಪೇಳ್ದತಿ । ವಿಮಲವಾಗಿಹ ವಚನಗಳ ನಂ । ದಮಲ
ನದಿಂ ದಾಲಿಸುತ ವೈಶ್ವಾನರನೊಡನೆಯೆ ॥ ಅಮರರೀಕ್ಷಿಸುತಿರಲು
ಘ್ರದೆ । ಕಮಲನೇತ್ರಿಯು ನೆತ್ತಿಕೊಳ್ಳುತ । ಸಮೆದಚಿತ್ತಿಯಿಂದೆದ್ದು
ದನು ತಾನು ಮೇಲುಗಡೆ ॥ ೫೨ ॥ ಚಿತಿಯನುಳಿದಾ ವೀತಿಹೋ

ತ್ರನು । ವಿತತರತ್ನಾಭರಣಗಳನಾಂ । ತತಿ ಮನೋಹರವೆನಿಪ ಪೀ ತಾಂಬರವ ಧರಿಸುತ್ತ ॥ ಅತಿಶಯದ ಕಾಂತಿಯನು ತಾಳುತ । ಸತತವೆ ಸೆವಾಜಾನಕಿಯ ನತಿ। ಹಿತದೆ ಕೊಟ್ಟನು ನಮಿಸಿ ರಘುಭೂಪತಿಗೆ ನಡೆ ತಂದು ॥ ೫೭ ॥ ಬಾಲಸೂರ್ಯ ಸಮಾನರುಚಿಯುತೆ । ನೀಲಕುಂಚಿತ ಮೂರ್ಧಜೆಕುಸುಮ । ಮಾಲಿಕಾನ್ವಿತೆ ಸುಂದರೀಮಣಿ ಯೆನಿಪಸೀತೆ ಯನು ॥ ಲೀಲೆಯಿಂದಾ ದಶರಥಮಹೀ । ಪಾಲನ ಸುತಂಗಿತ್ತು ನುಡಿದ ನು । ಲಾಲಿಸೆನ್ನುತ ಲೋಕಸಾಕ್ಷಿಯೆನಿಪ ಧನಂಜಯನು ॥ ೫೪ ॥ ಈಕೆ ಜನಕಮಹೀವರನ ಮಗ । ಳೀಕೆಯೊಳನಿತು ಪಾಪವಿಲ್ಲವು । ಈಕೆ ನಿನ್ನ ನು ಬಿಟ್ಟಿತರರನು ನೆನೆದಿರುವಳಲ್ಲ ॥ ಈಕೆಯನು ಪಂಚವಟಿಯೊಳ ಗಾ । ಲೋಕಕಂಟಕ ರಾವಣನು ಬಹು । ಭೀಕರ ಬಲಾತ್ಕಾರದಿಂದಲೆ ತಂದಿರುವನೆಂದು ॥ ೫೫ ॥ ಮನಸಿನಿಂದಲು ವಚನದಿಂದಲು । ನೆನಪಿನಿಂ ದಲು ನಯನದಿಂದಲು । ಜನಕನಂದನೆ ಬಿಟ್ಟು ನಿನ್ನನು ಚರಿಸಿದವಳ ಲ್ಲ ॥ ವಿನುತ ಸಾಧ್ವೀಮಣಿಯು ತಾನೆಂ । ದೆನಿಸಿ ಸದ್ವರ್ತನೆಯ ನಾನು ತ । ವಿನುತಿಪೆತ್ತಿಹ ಳೀಯೊಳತಿ ಧರ್ಮಿಷ್ಠಳೆಂದೆನಿಸಿ ॥ ೫೬ ॥ ಮನುಜರಿ ಲ್ಲದ ಪಂಚವಟಿಯೊಳು । ಜನಕನಂದನೆ ನಿನ್ನ ನಗಲುತ ॥ ಮನದೆ ಭೀತಿಯೊಳಂಜಿ ಪರವಶಳಾಗಿ ರೋದಿಸುತ ॥ ದನುಜನಾಥನಧೀನಕೆ ಸಿಲುಕಿ । ಮನದೆನಿನ್ನನು ಜಾನಿಸುತ್ತ ಗ । ಗನಪಥದೊಳೀ ಲಂಕೆಗೆ ತರಲ್ಪಟ್ಟಿಹಳು ಹಿಂದೆ ॥ ೫೭ ॥ ಘೋರರೂಪುಗಳನ್ನು ತಾಳ್ದ ವಿ ಕಾರಿಗಳೆನಿಸ ರಕ್ಕಸಿಯರಿಂ । ದೀ ರಮಣಿದಶಕಂಠ ನಂತಃಪುರದೊಳ ನುದಿನವು ॥ ಬಾರಿಬಾರಿಗೆ ರಕ್ಷಿಸಲ್ಪಡು । ತಾರನೆರವಿಯ ನ್ಯೆದದಿದ್ದರು । ಕೋರಿನಿನ್ನನೆ ಭಜಿಸುತಿದ್ದಳು ಪರಮಭಕ್ತಿಯಲಿ ॥ ೫೮ ॥ ಕಾಮಭಾ ಧೆಯನಾಂತು ರಾವಣ ॥ ನೀಮಹೀಸುತೆಯ ನಡಿಗಡಿಗೆ । ಪ್ರೇಮವಚನ ಗಳಿಂದೆ ಕಾಲ್ಗೆರಗುತ್ತ ಬೇಡಿದರು ॥ ಕಾಮರೂಪವನಾಂತು ತಾನೀ । ಕೋಮಲೆಗೆ ಭೀತಿಯನೆಸಗಿದರು । ರಾಮಕೇಳವನಲ್ಲಿ ಚಿತ್ತವನಿರಿಸಿದ ವಳಲ್ಲ ॥ ೫೯ ॥ ಪಾಪರಹಿತಳು ಸೀತೆ ನೀಂಬಿಡು । ಕೋಪವನು ನಿನ ಗೆಳ್ಳನಿತು ಬೇ । ಡೀ ಪತಿವ್ರತೆಯಲ್ಲಿ ಸಂಶಯಬೇರೆವಿಧವಾಗಿ ॥ ಭೂ ಪರಾಘವ ಕೇಳು ನಿನಗಾ । ಜ್ಞಾಪಿಸಿ ನುಡಿವೆನೀಕೆ ನಿನಗನು । ರೂ ಪಳಾಗಿರುತಿಹಳು ನಿರ್ಮಲಭಾವನೆಯನಾಂತು ॥ ೬೦ ॥ ಎನುತಪೇಳ್ದಾ ವೀತಿಹೋತ್ರನು । ವನಜಮುಖಿ ಸೀತೆಯನು ರಾಮನಿ । ಗನುನಯ ದೊಳಂ ದಿತ್ತುನುಡಿಯದೆ ಮೌನದಿಂದಿರಲು ॥ ಮನುಜಪಾಲಕ ರಾಘವೇ

ರ | ನನಲನನುಡಿಯು ನಾಲಿಸುತ ನಿಜ | ಮನದೆಯೊಳಚಿಸುತಿದ್ದ
ಒಂದುಮುಹೂರ್ತಪರ್ಯಂತ || ೬೧ || ಭೂರಿಶೋಕವನಾಂತು ಚಿಂ
ಸಿ | ಬಾರಿಬಾರಿಗೆ ರಾಘವನು ಕ | ಣ್ಣೀರಿನಿಂದಲೆ ತುಂಬಿಕೊಂಡಿರು
ರಡುಕಂಗಳಲಿ || ಕಾರಿಸಿಜಲವ ನೈದೆ ಬಿಸುಸು | ಯ್ಯಾರಸೆಯು ನೀಕ್ಷಿ
ಸುತ ನೊಂದನು | ವಿಾರಿದ ಮನೋವ್ಯಥೆಯುನಾಂತು ಮುಹೂರ್ತಪ
ರ್ಯಂತ || ೬೨ || ಅನಲನಾಡಿದ ಮಾತುಗಳನಾ | ಮನುಕುಲೋತ್ತಮ
ಮನಾಲಿಸಿ | ಘನಭಕುತಿಯಿಂ ದಿಂತುಪೇಳ್ದನು ದಿವಿಜನಾಥನಿಗೆ ||
ನಕಜಾತೆಯೊಳಿಲ್ಲ ಪಾಪವು | ದನುಜವರನಂತಃಪುರದೊಳೀ | ವನಿತೆ
ಹುದಿನ ವಾಸಿಸಿದ್ದಳು ಬಂಧುಗಳನಗಲಿ || ೬೩ || ಜನಕತನುಜೆಯು
ನ್ಯಚಿತ್ತಳು | ವಿನುತ ಭಕ್ತಿಯುನಾಂತು ನನ್ನಲಿ | ಮನವಿರಿಸಿ ನಡೆ
ಯುತ್ತಿರುವಳು ನಿರಂತರವುತಿಳಿದು || ನನಗೆ ಸೀತೆಯು ನಡತೆಗೊತ್ತಿ
ರು | ದಸೆಲನೊಳು ಬೀಳುತ್ತಿರಲು ನಾಂ | ಮನದೊಳಗುದಾಸೀನನೆನಿ
ದೆ ಮೂಜಗವರಿಯುಲು || ೬೪ || ಧರಣಿಸುತೆಯನು ಶೋಧಿಸದೆ ನಾಂ |
ರೆದುಕೊಂಡೆನ್ನೊಡನೆ ಪೋದರೆ | ಪುರವರಕೆ ಸತ್ಪುರುಷರೆಲ್ಲರು ಕಾ
ಮುಕನೆನುತ್ತ || ಜರೆವರೆನ್ನನು ಮೂಢನೆನ್ನುತ | ಕರೆಯುವರುನಾನು
ತ್ರಿಲೋಕದೊ | ಳುರುತರವೆನಿಪನಿಂದೆ ಗೀಡಾಗುವೆನುಸಂತತವು
೬೫ || ಮೂರುಜಗಕೆ ಪ್ರತ್ಯಯಾರ್ಥವೆ | ತೋರಿಸಲುದಾಸೀನ
ನಾಡಿದೆ || ನೀ ರಮಣಿತಾಂ ಬೀಳುತಿರಲಾ ವೀತಿಹೋತ್ರನಲಿ || ವಾರಿ
ದಡವನೆಂತನುದಿನವು | ವಿಾರದಿಹುದಂತು ದಶಶಿರನೀ | ನಾರಿಯನು
ಕೊಂದಲವನಿ ಗಸಾಧ್ಯವೆನಿಸುತ್ತಿಹುದು || ೬೬ || ಸರಸಿಜಾಕ್ಷಿಯ ನಾ
ದಶಶಿರನು | ಪೂರೆವುತಿದ್ದರು ತನ್ನ ಸಾಧದೊ | ಳುರುತರದ ನಿಜತೇಜ
ದಿಂದಲೆ ಬಹುಳದಿನತನಕ || ಉರಿವ ವಹ್ನಿಜ್ವಾಲೆಯುನರಿಯೆ | ನರರು
ಡಿಯದಿರುವ ವೊಲಾ ದಶ | ಶಿರನು ಹೊಂದಲಶಕ್ತನಹನೀ ಪರಮ
ಸಾಧ್ವಿಯುಸು || ೬೭ || ಇವಳು ದಶಕಂಧರನ ಸುಂದರ | ಭವನದೊಳ್
ಸಂಪತ್ತುಗಳನನು | ಭವಿಪಳಲ್ಲವು ಕಾಂತಿರವಿಯುನದೆಂತು ಬಿಡದಿಹು
ದೊ || ಇವಳು ತಾನಂತೆನ್ನನು ಬಿಡದಿ | ರುವಳು ಜಾನಕಿ ಸನ್ನು
ವಡೆದಿ | ರುವಳು ಪರಿಶುದ್ಧಳೆನಿಸಿಕೊಳುತ ಮೂರುಲೋಕದಲಿ
೬೮ || ಜನರು ತಮ್ಮಯ ಕೀರ್ತಿಯುನು ಮೋ | ದಿನಿಯೊಳು ಬಿಡದ
ಾಗೆನಾ ನೀ | ವನಿತೆಯುನು ಕೈಕೊಳ್ಳುವೆ ಬಿಡದೆ ಹರ್ಷವನುತಾಳ್ದು ||
ಮನದೊಳೆನ್ನ ಸುಖವನೆ ಕೋರುತ | ನನಗೆ ಹಿತವನೆ ಪೇಳ್ವನಿಮ್ಮ

ಯ | ವಿನುತವಚನಂಗಳನು ಕೇಳುವೆನೆಂದನಾರಾಮ || ೬೯ || ನೀವು ಜಗದೊಳು ಪೂಜ್ಯರೆನಿಪಿರಿ | ತ್ರಿವಿದ ಕರುಣೆಯುಳ್ಳವರು ಸಂ | ಭಾವಿ ಗಳೆನುತ ದೇವಪತಿಗಾರಘುವರನು ಪೇಳ್ದ || ರಾವಣನ ಸಂಹಾರಕೋ ಸುಗ | ಭೂವಲಯದೊಳು ಜನ್ಮವನುಪಡೆ | ದಾ ವಧೂಮಣಿಜಾನಕಿ ಸಹಿತ ಸುಖವನ್ನೈದಿದನು || ೭೦ ||

ಇಂತು ಇಪ್ಪತ್ತೆಂಟನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೧೪೬೯.



## ಇಪ್ಪತ್ತೊಂಬತ್ತನೆಯ ಅಧ್ಯಾಯ.

ಸೂಚನೆ || ಧರಣಿಸುತೆ ಲಂಕಾನಗರವನು |
ತೊರೆದುಬಂದಳು ಪತಿಯಸಹಿತತಿ |
ಭರದೆ ನಂದಿಗ್ರಾಮಕೆ ವಿಮಾನದೊಳು ತಾಕುಳಿತು ||

ರವಿಕುಲೋತ್ತಮ ರಾಮನಾಡಿದ | ಸುವಿಮಲೋಕ್ತಿಗಳನ್ನು ಕೇಳ್ದು | ದಿವಿಜ ವಲ್ಲಭ ನಂತರಂಗದೆ ಸಂತಸವನಾಂತು || ಜವದೊಳಾ ದಶರಥ ನರೇಂದ್ರನ | ಕುವರನಿಗೆ ತಾನಿಂತು ನುಡಿದನು | ದಿವಿಜರೆಲ್ಲರು ಕೇಳುತ್ತಿರಲತ್ತಿ ಮಧುರ ವಚನದಲಿ || ೧ || ವನಜಲೋಚನ ಕೇಳು ರ ಘುನಂ | ದನನೆ ಭುವನತ್ರಯಕೆ ಯೋಚಿಸ | ಲನುದಿನ ಪ್ರಬಲಕರಮಾ ಗಿ ವ್ಯಾಪಿಸುತಲಿದ್ದ || ದನುಜ ರಾವಣ ನಿಂದಡಿಗಡಿಗೆ | ಜನಿಸಿದತಿ ಭಯ ಮೊಂಬತಮವನು | ಮನವೊಲಿದು ಪರಿಹರಿಸಿ ಸಂರಕ್ಷಿಸಿದೆ ಭೂಮಿಯ ನು || ೨ || ದೈವಬಲದಿಂ ದೀದನುಜಪತಿ | ರಾವಣನ ಸಂಹರಿಸಿದೈ ರಾ | ಜೀವ ಲೋಚನ ರಾಘವೇಂದ್ರನೆ ಕೇಳು ನೀನಿನ್ನು || ಸಾವಕಾಶವ ನಾ ಗಿ ಸದಯೋ | ಧ್ಯಾ ವರಪುರಿಗೆ ಪೋಗಿ ನಿನ್ನನೆ | ಭಾವಿಸುತ ಲಿರ್ಪ ಭರತನನು ಬೇಗಸಂತವಿಸು || ೩ || ಸಂತಸಂಗೊಳಿ ಸೈಯ್ಯ ರಾಮನಿ | ರಂತರವು ನೀಂ ಘನತರ ಯಶೋ | ವಂತರಹ ಕೌಸಲ್ಯೆ ಕೈಕೆ ಸುಮಿತ್ರೆ ಯರ ನೊಲಿದು || ಸ್ವಂತ ರಾಜ್ಯವ ನಾಂತು ಪಾಲಿಸು | ಸಂತತವು ಸು ತರಂತೆ ಜನರನು | ಸಂತವಿ ಸಖಿಳ ಮಿತ್ರರ ನಯೋಧ್ಯಾ ಪುರವರದೊ ಳು || ೪ || ರವಿಕುಲವ ನುದ್ಧರಿಸು ಹಯಮೇ | ಧವನೆಸಗಿ ಕೀರ್ತಿಯ

ನು ಹೊಂದುಥ । ನವೆನು ಕೊಡು ಭೂಸುರರುಸಲೆಸಂತುಷ್ಟಿ ಯುಪ್ಪಂತೆ ॥ ಅವನಿಯುನು ಸಂರಕ್ಷಿಸಿ ಬಳಿಕ । ದಿವಕೆ ಬಾರ್ರೆ ರಾಘವೇಂದ್ರನೆ । ಜವೆ ದೊಳ್ಳೈ ತಂದಿಹನು ನಿನ್ನಯು ತಂದೆ ದಶರಥನು ॥ ೫ ॥ ವರವಿಮಾನದೆ ಕೂಡುತ್ತಿಲ್ಲಿಗೆ । ಪರವು ಸಂತಸದಿಂದೆ ನಡೆತಂ । ದಿರುವ ನಿಂದ್ರನ ಲೋಕದಿಂದಲೆ ದಶರಥ ನೃಪತಿಯು ॥ ಗುರುವೆನಿಸಿ ಕೊಂಡಿದ್ದ ನಲ್ಲವೆ । ಧರಣಿ ಲೋಕದೊ ಳೀತನು ನಿನಗೆ । ಚರಣ ಕೆರಗ್ಯೆ ಪಿತಗೆ ಸತಿಸೋದರ ರೊಡನೆ ನೀನು ॥ ೬ ॥ ತನಯು ನಾಗಿಹ ನಿನ್ನ ದೆಸೆಯಿಂ । ದಿನ ಕುಲೋತ್ತಮ ದಶರಥನು ಸ । ನ್ಮನದೆ ತಾರಿತ ನಾದ ನೆಲೆ ರಾಘವನೆ ಕೇಳೆನಲು ॥ ಅನುಜ ಲಕ್ಷ್ಮಣ ನೊಡನೆ ಸಂಕ್ರಂ । ದನನ ವಚನವ ಕೇಳ್ದು ರಘುನಂ । ದನ ನೆರಗಿದನು ವರವಿ ಮಾನದೊ ಳಿದ್ದ ದಶರಥಗೆ ॥ ೭ ॥ ವಿಮಲ ವಸ್ತ್ರಂಗಳನು ಧರಿಸು । ತ್ತಮರ ಪಥದೆ ವಿಮಾನ ದೊಳ್ಕುಳಿ । ತವುಲ ನಿಜತನು ಕಾಂತಿ ಯಿಂದುರೆ ಮೆರೆವ ತಂದೆಯುನು ॥ ಕಮಲ ಲೋಚನೆ ಸೀತೆ ಯೊಡನಾ । ದ್ಯುಮಣಿ ವಂಶಲಲಾಮು ರಾಘವ । ನಮಲ ಮನದಿಂ ದೀಕ್ಷಿಸಿದ ನಾ ಲಕ್ಷ್ಮಣನ ಸಹಿತ ॥ ೮ ॥ ತನ್ನ ಸುವಿಗಿಂ ತಧಿಕನಾಗಿಹ । ತನ್ನ ಸುತನನು ಕಂಡು ಘನ ಸಂ । ಪನ್ನ ಮತಿ ದಶರಥ ಮಹೀ ವರ ನಂದು ಹರ್ಷದಲಿ ॥ ತನ್ನ ತೊಡೆಯೊಳು ರಾಮು ಲಕ್ಷ್ಮಣ । ರನ್ನು ಕೂಡಿಸಿ ತಬ್ಬಿ ಕೊಳ್ಳುತ । ಮನ್ನಿಸಿ ಬಳಿಕ ನುಡಿದನಿಂತಾ ರಾಮುಚಂದ್ರನಿಗೆ ॥ ೯ ॥ ಮಗನೆ ಕೇಳ್ಯೆ ನಿನ್ನ ನಗಲಿದೆ । ನಗೆವಿಬುಧವರ ರಿಂದನು ದಿನ ವೊ । ದಗು ತಿರುವ ಮನ್ನಣೆ ಗಳೆಲ್ಲವು ರುಚಿಸದಿರುತಿಹವು ॥ ಸೊಗಸ ದೆನಗಾ ಸ್ವರ್ಗ ವಾಸವು । ಪಗೆಗಳ ನಿರಿದು ವಿಪಿನ ವಾಸವ । ಮುಗಿಸ್ಸಿ ಕೊಂಡಿಹ ನಿನ್ನ ಕಂಡತಿ ಹರ್ಷ ವಾಯ್ತೆನಗೆ ॥ ೧೦ ॥ ವನಕೆ ಪೋಗೆಲೆ ರಾಘವನೆ ನೀ । ನೆನುತ ನಿನ್ನನು ಕುರಿತು ರಾಜ ಭ । ವನದೊ ಳಾಡಿದ ಕೈಕೆಯು ನುಡಿಗಳಿನ್ನ ಮನದೊಳಿವೆ ॥ ತನಯು ಕೇಳ್ಸತಿ ಸೋದರರ್ಕಳ । ಸನಿಹದೆ ಕುಶಲ ದೊಳಿಹ ನಿನ್ನನು । ಮನವಣಿಯೆ ಕಾಣುತ್ತ ಕಳೆದೆನು ಸಕಲ ದುಃಖಗಳ ॥ ೧೧ ॥ ತೀವಿದ ಹಿಮುವ ನುಳಿದವರ ರಾ । ಜೀವ ಸಖನಂತೆನ್ನ ಚಿತ್ತದ । ನೋವನು ಳಿದೆನು ರಾಮು ಚಂದ್ರನೆ ನಿನ್ನ ದೆಸೆಯಿಂದ ॥ ರಾವಣನ ಸಂಹಾರ ಕೋಸುಗ । ದೈವ ವಶದಿಂ ದಿಂತು ನಡೆದಿಹು । ದೀವಸುಧೆ ಯೊಳು ನಾನು ತಾರಿದ ನಾದೆ ನಿನ್ನಿಂದೆ ॥ ೧೨ ॥ ಸುತನೆ ಅಷ್ಟಾ ವಕ್ರ ನೆನ್ನಿಹ । ಸುತನ ದೆಸೆಯಿಂ ತಾರಿತ ನೆನಿಸಿ । ನುತಿವಡೆದಿಹಾ ಧಾರ್ಮಿಕ ನೆನಿಪ ವಿಪ್ರ ನಂದ

ದಲಿ ॥ ಕ್ಷಿತಿಯೊಳು ಸುಪುತ್ರ ನಹ ನಿನ್ನಯ । ವಿತತ ವರ್ತನೆ ಯಿಂದೆ ನಾಂತಾ । ರಿತನೆನಿಸಿರುವೆ ನೆಂದನಾದಶರಥನು ಸುತನೊಡನೆ ॥ ೧೩ ॥ ಸತಿ ಸಹೋದರ ರೊಡನೆ ಲಂಕೆಯ । ನತಿಭರದೆ ಬಿಡುತಿಂದ ಯೋಧ್ಯೆಗೆ । ಜತನದಿಂದಲೆಪೋಗು ನಿನ್ನನು ಕಂಡು ಕೌಸಲ್ಯೆ ॥ ವಿತತ ಸಂತಸ ದಿಂ ದೆತಾಂ ಥ । ನೃತೆಯು ನೈದುವಳು ಪುರವನು ಸೇ । ರುತಿಹ ನಿನ್ನನು ನೋಳ್ಪ ಮನುಜರು ಧನ್ಯ ರೆನಿಸುವರು ॥ ೧೪ ॥ ಪುರದೊ ಳಭಿಷೇಕ ವನು ತಾಳ್ದೀ । ಧರಣಿಯನು ಪಾಲಿಸುವ ನಿನ್ನನು । ಪರಮ ಸಂಮದ ದಿಂದೆ ನೋಡುವಜನರು ಧನ್ಯರಲಾ ॥ ಭರತನನು ಸಂತವಿಸು ಸತಿ ಸೋ । ದರರಸಹಿತೀ ವನದೆ ವಾಸಿಸು । ತಿರುವ ನಿನಗಾಗಿಹವು ಕೇಳ್ದಿನಾಲ್ಕು ವರುಷಗಳು ॥ ೧೫ ॥ ನಿನ್ನ ಕಾನನ ವಾಸ ಮುಗಿದುದು । ನಿನ್ನ ಮೇಲೆನಿಪ ಪ್ರತಿಜ್ಞೆಯು । ಮನ್ನಣೆಯ ನಾಂತೈದಿತು ಸಫಲವ ನೆಲೆರಾಘವನೆ ॥ ನಿನ್ನ ಹಗೆಯಹ ರಾವಣಾಸುರ । ನನ್ನು ವಧಿಸಿದೆ ಸಕಲ ನಿರ್ಜರ । ರನ್ನು ಸಂತಸ ಪಡಿಸಿ ಘನತರ ಕಾರ್ಯವ ನೆಸಗಿದೆ ॥ ೧೬ ॥ ಅನುಜ ನಿಂದಲೆ ಕೂಡಿಕೊಂಡನು । ದಿನವು ರಾಜ್ಯವ ನಾಳುತ ಬದುಕ । ವನಿಯೊಳಗೆ ಚಿರಕಾಲದ ತನಕ ನಿನ್ನ ಸತಿ ಸಹಿತ ॥ ಘನತರದ ಕೀರ್ತಿಯನುಹೊಂದಿಧೆ । ಯೆನುತ ಸಂತವಿಸುತ್ತ ರಘುನಂ । ದನಿಗೆ ಪೇಳಿದನಾ ದಶರಥ ಮಹೀ ವರನು ನಲಿದು ॥ ೧೭ ॥ ತಂದೆ ನುಡಿಗಳ ನಾಲಿಸುತ ರಘು । ನಂದನನು ಕೈ ಮುಗಿದೆರಗಿ ತಾ । ನಂದು ದಶರಥ ಭೂಮಿಪತಿ ಗೆಂದನತಿ ವಿನಯದಲಿ ॥ ತಂದೆ ಕೇಳಾ ಕೈಕೆಗೆ ತನಯ । ನಿಂದೆ ಕೂಡಿದ ನಿನ್ನನು ಬಿಡುವೆ । ನೆಂದು ಕೊಟ್ಟಹ ಶಾಪವನು ಪರಿಹರಿಸು ನೀನೆನುತ ॥ ೧೮ ॥ ಭರತನೊಳು ಕೈಕೆಯೊಳು ನೀನಿಡು । ಪರಮ ವಿಶ್ವಾಸವ ನೆನುತ್ತಂ । ದೆರಗಿ ದಶರಥ ನಡಿಗೆ ರಘುನಂದನನು ಬೇಡುತಿರೆ ॥ ಹರುಷ ದೊಳ ಗಂತಾಗಲೆನುತತಿ । ಕರುಣೆ ಯಿಂದಲೆ ಪೇಳ್ದು ರಘುಭೂ । ವರನ ನಾಲಿಂಗಿಸುತಪೇಳ್ದನು ಕುರಿತು ಲಕ್ಷ್ಮಣನ ॥ ೧೯ ॥ ತನಯ ಕೇಳೆಲೆ ಲಕ್ಷ್ಮಣನೆ ನೀ । ನನುದಿನವು ಭಕ್ತಿಯನು ತಾಳುತ । ಜನಕ ನಂದನೆ ಯಿಂದೆ ಕೂಡಿದ ರಾಮಚಂದ್ರನನು ॥ ಮನವೊಲಿದು ಸೇವಿಸಿದೆ ಯದರಿಂ । ದೆನಗೆ ಮಹದಾನಂದ ಮಾಗಿಹು । ದಿನಕುಲದೆ ನೀನಧಿಕ ಪುಣ್ಯವ ಪಡೆದು ಪೆಸರಾಂತೆ ॥ ೨೦ ॥ ನಿನಗೆಬಂದುದು ಬಹುಳ ಕೀರ್ತಿಯು । ನಿನಗೆ ಮಂಗಳ ಮಕ್ಕೆ ರಘು ನಂ । ದನನು ಹರ್ಷವ ನೈದಿದರೆ ಸಗ್ಗದೊಳುತ್ತಮರ್ಶ್ಯದೆ ॥ ನಿನಗೆ ಬಂದಂತಹುದು ಸ

ಕಲಭು । ವನಗಳ ಶುಭಂಗಳೊಳಗೆ ನಿರತ । ನೆನಿಸಿಕೊಳ್ಳುತ ರಾ ಮನುನ್ನತಿ ವೆತ್ತು ತೋರುವೆನು ‖ ೨೧ ‖ ಅಮರ ವಲ್ಲಭ ನರ್ಚಿಸು ವನೀ । ಕಮಲ ನಾಭನ ನೊಲಿದು ಪೂಜಿಪ । ರಮಲ ಮನದೊಳು ಸು ರರು ಸಿದ್ಧರು ನರರು ತಾಪಸರು ‖ ಕಮಲಸಂಭವ ನಿಂತು ವಿಧಿಸಿದ । ನ ಮನು ಇದುಬಹುಗೌಪ್ಯ ಮಾಗಿಹು । ದಮರಪತಿ ರಾಘವನೆ ವೇದಕೆ ಹೃದಯ ವಾಗಿಹನು ‖ ೨೨ ‖ ಜನಕ ನಂದನೆ ಸಹಿತರಘುನಾ । ಥನನು ನಿತ್ಯವು ಭಕ್ತಿಯಿಂದಲೆ । ಮನವೊಲಿದು ಸೇವಿಸಿದ ನಿನಗೀ ಮೇದಿನೀತ ಲದೆ ‖ ಘನತೆ ವೆತ್ತಿಹ ಕೀರ್ತಿ ಬಂದುದು । ವಿನುತ ಧರ್ಮಾ ಚರಣೆ ನೆಲ ಸಿತು । ತನಯ ನಿನ್ನೊಳೆನುತ್ತ ಪೇಳ್ದಂತೆಂದ ನವನಿಜೆಗೆ ‖ ೨೩ ‖ ಜನಕನಂದನೆ ಕೇಳು ರಘುನಂ । ದನನು ನಿನ್ನನು ಬಿಟ್ಟಿರುವೆ ನೆಂ । ದೆನುತ ಪೇಳ್ದುದ ಕಾಗಿ ಕೋಪಿಸ ಬೇಡ ಚಿತ್ತದಲಿ ‖ ನಿನಗೆ ಹಿತವನೆ ಪೇಕ್ಷಿಸು ತಿಳಿಯು । ಜನರ ನೊಪ್ಪಿಸ ಲಿಂತು ನುಡಿವನು । ನಿನಗೆ ಮೂ ಜಗ ದೊಳಪ ಕೀರ್ತಿಯು ಬಾರದಂದದಲಿ ‖ ೨೪ ‖ ಪತಿಯ ಶುಶ್ರೂಷೆ ಯನು ವಿರಚಿಸು । ಸತತ ನನ್ನಯ ನುಡಿಯ ಕೇಳ್ದತಿ । ಹಿತದೆಪತಿಸೇ ವೆಯೊಳುದಾಸೀನವನು ಮಾಡದಿರು ‖ ಪತಿ ಪರಾಯಣೆ ನೀನೆನುತರು ಹಿ । ಸುತರ ನಾಭೂಜಾತೆಯನು ದಶ । ರಥನು ಸಂತಸ ಪಡಿಸಿ ತೆರಳಿದ ನಿಂದ್ರಲೋಕಕ್ಕೆ ‖ ೨೫ ‖ ವರವಿಮಾನದೊ ಳಾದಶರಥನು । ಸುರಪಲೋ ಕಕೆ ಪೋದೊಡನೆ ಬಲು । ಹರುಷ ದಿಂದಮರೇಂದ್ರ ನಾರಘು ವೀರನನು ಕುರಿತು ‖ ಭರದೊ ಳಂತೆಂದನೆಲೆ ರಾಘವ । ಧರಣಿಯೊಳೆ ಮಗ ಮೋ ಘ ಮೆನಿಸಿತು । ಸರಸಿಜಾಕ್ಷ ನೆನಿಸಿದ ನಿನ್ನಯ ದಿವ್ಯದರ್ಶನವು ‖ ೨೬ ‖ ನೀನು ಮನದೊಳ ಪೇಕ್ಷಿಸಿದುದನು । ನಾನು ಕೊಡುವೆನು ಮಾನವೇಂ ದ್ರನೆ । ನೀನು ತಿಳುಹಿಸು ನಿನ್ನ ಚಿತ್ತದ ಕೋರಿಕೆಯ ನೆನಲು ‖ ಜಾನ ಕೀಸಾಮಿತ್ರಿಯ ರೊಡನೆ । ಯಾನುಡಿಯ ನಾಲಿಸುತ ಘನಸುಂ । ಮಾನ ದೊಳು ಸುರಪತಿಗೆಪೇಳಿದನಿಂತು ರಾಘವನು ‖ ೨೭ ‖ ನಿನಗೆ ನನ್ನೊ ಳು ಕರುಣೆಯಿದ್ದರೆ । ರಣದೊಳೆನ್ನ ನಿಮಿತ್ತದಿಂದೆ ಮ । ರಣವನೈದಿದ ಕಪಿಗಳೆಲ್ಲರು ಜೀವಿಪಂದದಲಿ ‖ ಮನಕೆತರುವುದು ನನ್ನ ಹಿತಕೆಂ । ದೆ ನುತ ಹೆಂಡತಿ ಮಕ್ಕಳನು ತೊರೆ । ದನುವೆರದೊಳೀತೆರದೆ ಮರಣವನಾಂ ತಿಹರು ಬಂದು ‖ ೨೮ ‖ ದಿವಿಜನಾಥನೆ ನಿನ್ನ ದೆಸೆಯಿಂ । ದಿವರುಬದುಕಲಿ ಸತ್ತವಾನರ । ರವಯವಂಗಳು ಮಕ್ಷತಗಳಾಗಿರಲಿ ಲೇಸೆನಿಸಿ ‖ ಇವರು ನಿಲ್ಲುವ ಕಡೆಗಳಲ್ಲಿರು । ವವನಿರುಹಗಳ ಕಾಲದೊಳಗೆ ಫ । ಲವನು

ಬಿಡುವಂತಾಗಲಿ ಸತತವೀಮಹೀತಲದಿ ‖ ೨೯ ‖ ನದಿಗಳಮಲೋದಕವ
ನಾಂತಿರ | ಲೊದಗಿಸೆನಗೀ ವರಗಳನೆನುತ | ಪದುಮನಾಭನು ಬೇಡುತಿರ
ಲಂದಮರ ನಾಥನನು ‖ ಇದುಮಹತ್ತರ ಮನಿಸಿಕೊಂಬುದು | ಸದಯ
ದಿಂದಲೆ ಕೊಟ್ಟಹೆನಿದನು | ಬದುಕುವರಳಿದ ಕಪಿಗಳೆಲ್ಲರು ನಿನ್ನ ಭಿಮ
ತದೊಲು ‖ ೩೦ ‖ ಇವರು ರೋಗವ್ರಣಗಳಿಲ್ಲದೆ | ಬುವಿಯೊಳತಿಬಲ
ಪೌರುಷವ ನಾಂ | ತಿವರ ಬಾಂಧವ ಪುತ್ರ ಮಿತ್ರರಸಹಿತ ಲನುದಿನವು ‖
ವಿವಿಧ ಸೌಖ್ಯವ ನಾಂತಧಿಕ ಹ | ರ್ಷವನು ಹೊಂದಿರುತಿಹರು ಧರಣಿ
ಯೊ | ಳಿವರಿರುವ ಕಡೆಫಲವನೀವುವು ಸಕಲವೃಕ್ಷಗಳು ‖ ೩೧ ‖ ಇವ
ರುವಾಸಿಪ ಕಡೆಯೊಳಪುರ್ದು | ಸುವಿಮಲೋದಕ ದಿಂದೆನದನದಿ | ನಿವ
ಹಮೆಂದೆನು ತಮರವರನೆಂದೊಡನೆ ನಿದ್ರಿಪರು ‖ ಅವನಿಯೊಳುತಾ ವೆದ್ದು
ಕುಳಿತಂ | ತೆಪ್ರೊಲುಶಕ್ರನು ನೋಡುತಿರಲಾ | ಪ್ಲವಗವೀರರು ಮೇಲ
ಕೆದ್ದುಕುಳಿತರು ಶೀಘ್ರದಲಿ ‖ ೩೨ ‖ ಮುರಿದತೋಳ್ತೊಡೆ ಕೈಗಳಿಂದಲು |
ಧುರದೊಳಳಿದಾ ಕಪಿಗಳೆಲ್ಲರು | ಪರಮವಿಸ್ಮಯ ಮೆನುತಚಿತ್ತದೊಳಿಂ
ದುಕೊಂಡಿರದೆ ‖ ಭರದೊಳೆಂದೆದ್ದಾ ರಘುವರನ | ಚರಣಪಂಕಜ ಕತಿ
ವಿನಯದಿಂ | ದೆರಗಿಕೊಂಡಾಡಿದರು ಹರುಷದೊಳಾತ ನಿದಿರಿನಲಿ ‖ ೩೩ ‖ ಬ
ಳಿಕನಿರ್ಜರ ರೆಲ್ಲಸಂತಸ | ದಳೆದುರಘುನಾ ಥನನುಹೊಗಳುತ | ಕಳು
ಹಿಸೀಕಪಿಗಳನ ವರನೆಲೆಗೆಲೆ ಮಹಾತ್ಮಕನೇ ‖ ತಳುವದೆತೆರಳ ಯೋ
ಧ್ಯೆಗೆಸತ್ರಿಯ | ನೊಲಿದುಸಂತಸ ಪಡಿಸುಮನ್ನಿಸಿ | ಸಲಹಿಸೇವಿಸಿ ತೃ
ಪ್ತಿಪಡಿಸುವು ದಖಿಳಜನನಿಯರ ‖ ೩೪ ‖ ಅನುಜ ಶತ್ರುಘ್ನನಿಗೆ ಹರ್ಷ
ವ | ನನುಗೊಳಿಸುಧರ್ಮಿಷ್ಠ ನಹಭರ | ತನಿಗೆ ದರ್ಶನವನ್ನುಕೊಡು ಪ
ಟ್ಟಾಭಿಷೇಕವನು ‖ ಮನವೊಲಿದು ನೀಂ ತಳೆದಯೋಧ್ಯೆಯ | ಜನರನೊ
ಲಿಸೆಂದೊರೆದು ರಘುನಂ | ದನನಿಗೆ ವಿಬುಧರೆಲ್ಲಪೋದರು ತಮ್ಮನೆಲೆಗಳಿ
ಗೆ ‖ ೩೫ ‖ ಸೀತೆಲಕ್ಷ್ಮಣ ರೊಡನಧಿಕ ಸಂ | ಪ್ರೀತಿಯಿಂದೆ ಸಮಸ್ತವಿ
ಬುಧರಿ | ಗಾತರಣಿ ಕುಲತಿಲಕ ರಾಘವನೆರಗಿ ಕೈಮುಗಿದು ‖ ಖ್ಯಾತಿವ
ಡೆದೆಸೆ ವಖಿಳಕಪಿಸಂ | ಘಾತದಿಂದಾರಾತ್ರಿ ಧರಣೀ | ಜಾತೆಯೊಡನಾ
ಲಂಕೆಯಲಿ ವಾಸವನುಮಾಡಿದನು ‖ ೩೬ ‖ ಮರುದಿವಸ ಸೂರ್ಯೋದಯ
ದೊಳಾ | ವರವಿಭೀಷಣ ನತಿವಿನಯದಿಂ | ದಿರದೆರಾಮನಬಳಿಗೆ ನಡೆತಂ
ದೆರಗಿ ಭಕ್ತಿಯಲಿ ‖ ಪರಮಕರುಣಾ ನಿಧಿಯೆ ನೀನೀ | ಧರಣಿಜಾ ಸೌ
ಮಿತ್ರಿವಾನರ | ವರರ ನೊಡಗೊಂಡಿತ್ತು ಪುರಿಗೈತರಲು ಬೇಡುವೆನು
‖ ೩೭ ‖ ಮಂಗಳಸ್ನಾನವ ನೆಸಗಿನಿ | ನ್ನಂಗನೆವೆರಸಿ ಮೇಲೆನಿಪವಸ ‖

ನಂಗಳನು ಕೈಕೊಂಡಖಿಳ ರತ್ನಾಭರಣಸಹಿತ ‖ ರಂಗನಾಥನೆ ನಿನ್ನಪ ದಕವು | ಲಂಗಳಿಗೆ ನಾನಾಗಿಸುತ್ತಿಹ | ಸಿಂಗರವೆನಿಪ ಪೂಜೆಯನು ತ ಳೆದೆನ್ನ ನುದ್ಧರಿಸು ‖ ೩೮ ‖ ಬಳಿಕಯೋಧ್ಯೆಗೆ ಹೋಗಬಹುದೆಂ | ದೊಲಿದುಬೇಡಲು ಕವಿಕುಲಸಖಕುಲ | ತಿಲಕನಂದಾ ನುಡಿಯನಾಲಿಸುತಾ ವಿಭೀಷಣನ ‖ ತಲೆದಡವಿ ಪೇಳಿದನು ಮನದೊಳು | ತಳೆದು ಮುದವನು ಮಧುರತರ ಕೋ | ಮಲವಚನಗಳ ನಖಿಳಕಪಿಗಳ ಮನವನೊಲಿಸುತ್ತ ‖ ೩೯ ‖ ದನುಜನಾಥನೆ ಕೇಳುರವಿನಂ | ದನನುವೊದಲಹ ಕಪಿಗಳೆಲ್ಲರ | ಮನದಣಿಯೆನೀಂ ಮಂಗಳಸ್ನಾನವನು ಮಾಡಿಸುತ ‖ ಧನಕನಕ ವಸ್ತ್ರಾಭರಣ ವಾ | ಹನಗಳಿಂತಹಲೆ ತುಷ್ಟಿಪಡಿ ಸಿಂ | ದೆನಗೆ ಬೇಕಾಗಿಲ್ಲ ಮಂಗಳಮೆನಿಪ ಮಜ್ಜನವು ‖ ೪೦ ‖ ಧರಣಿಯೊಳು ಧರ್ಮಾತ್ಮನೆನಿಸಿದ | ಭರತನನುಳಿದು ನಾನುಮಂಗಳ | ಕರಮೆನಿಪ ಮಜ್ಜನವನೆಸಗುವುದಿಲ್ಲ ಮೇಲೆನಿಪ ‖ ಮೆರೆವ ದಿವ್ಯಾಂಬರಗಳನೊಲಿದು | ಧರಿಸುವವನಲ್ಲಖಿಳ ರತ್ನಾ | ಭರಣಗಳ ನಂಗದೊಳು ತಾಳುವನಲ್ಲ ಸಂತಸದೆ ‖ ೪೧ ‖ ಹಿತದೆಲಂಕೆಯ ನುಳಿದಯೋಧ್ಯೆಗೆ | ಸತಿಸಹೋದರರೊಡನೆ ಪೋಗುವೆ | ನತಿಭರದೆ ಬಹುದುರ್ಗಮ ಮೆನಿಸಿರುತಿಹುದಾದಾರಿ ‖ ಜತನದಿಂದಲೆ ಹೋಗಬೇಕೆನೆ | ಮತಿವಿಶಾರದ ನಾನುಡಿಯನತಿ | ಹಿತದೆ ಕೇಳುತ ಪದಕೆರಗಿ ಪೇಳಿದನು ರಾಘವನ ‖ ೪೨ ‖ ಸ್ವಾಮಿರಾಘವ ಕೇಳುನಿಮ್ಮನು | ರಾಮಣೀಯಕ ಮೆನಿಪಪುಷ್ಪಕ | ನಾಮಕ ವಿಮಾನದೊಳು ಕೂಡಿಸು ತೆರಡು ಜಾವದಲಿ ‖ ಭೂಮಿ ಸಂಪನ್ನಿಲಯ ಮಿದೆನಿಸು | ವಾ ಮಹಾಯೋಧ್ಯೆಯನು ಸೇರಿಪೆ | ರಾಮಚಂದ್ರನೆ ಸಂಶಯವನುಳಿದಿದನು ಕೇಳುವುದು ‖ ೪೩ ‖ ರವಿಗೆಣೆ ಯೆನಿಸುವಾ ವರವಿಮಾ | ನವಿದೆಲಂಕೆಯೊಳದನುತಂದಿರು | ವವನುವೈಶ್ರವಣ ನನುಸೋಲಿಸಿ ರಾವಣಾಸುರನು ‖ ಅವನಿಪತಿಕೇಳಾ ದಶಾಸ್ಯನ | ಭವನದೊಳಿಹುದು ಪುಷ್ಪಕ ವಿಮಾ | ನವದರೊಳು ಕೂಡುತ್ತ ಪೋಪು ದಯೋಧ್ಯೆಗಿಲ್ಲಿಂದೆ ‖ ೪೪ ‖ ನಿನಗೆನನ್ನೊಳು ಕರುಣೆಯಿದ್ದರೆ | ಮನದೊಳೆನ್ನಯ ಬಿನ್ನಪವನೀ | ನೆನೆದುಸೀತಾ ಲಕ್ಷ್ಮಣರೊಡನೆ ಲಂಕೆಗೈತಂದು ‖ ಮನವೊಲಿದು ನಾನಿಂದೆಸಗುವ | ನ್ನಣೆಗಳನು ಕೈಕೊಂಡು ನಾಳೆಯ | ದಿನವೆಪೋಗಬಹು ದಿದರಿಂದಲೆ ಧನ್ಯನಾಗುವೆನು ‖ ೪೫ ‖ ಭಕುತನಾಗಿಹ ನನ್ನೊಳುನಿನಗೆ | ಸಖತನವುದಿರು ತಿದ್ದರೆನ್ನಯ | ಯುಕುತಿಗಳ ಲಾಲಿಸುತಬಿಜಯಂಗೈದುನಾನೆಸಪ ‖ ಸಕಲ ಪೂಜೆಗಳನ್ನು ಕೈಕೊಂ | ಡ

ಖಿಳವಾನರರೊಡನೆ ಪೋಪುದು । ಸುಖದೊಳೆನ್ನುತ ನಮಿಸಿಪೇಳದ ನಾವಿ
ಭೀಷಣನು ॥ ೪೬ ॥ ಆನುಡಿಗಳನು ಕೇಳುತಂದಾ । ಭಾನುವಂಶಲ ಲಾ
ಮನೊಲಿದಾ । ವಾನರವರರು ನೋಡುತ್ತಿರೆ ಕುರಿತಾವಿಭೀಷಣನ ॥ ದಾನ
ವೋತ್ತಮ ಕೇಳೆಲೆಸಖನೆ । ನಾನುನಿನ್ನ ಸಹಾಯದಿಂದನು । ಮಾನವಿ
ಲ್ಲದೆ ಪೂಜಿಸಲ್ಪಟ್ಟಿರುವೆ ನನವರತ ॥ ೪೭ ॥ ಭರತನನುನಾಂ ನೋಡಬೇ
ಕೆಂ । ದಿರುವೆ ನಾತುರ ಗೊಂಡಿದೆಮನವು । ಭರತನಂದಾ ಚಿತ್ರಕೂಟ
ಗಿರೀಂದ್ರಕೈತಂದು ॥ ಪುರದಮಾನವ ರೊಡನೆನನ್ನನು । ಪರಿಪರಿವಿಧದೆ
ಬೇಡಿದನುನೀ । ನರಸನಾಗು ನಗರಿಗೆಬಂದೆನು ತಧಿಕಭಕ್ತಿಯಲಿ ॥ ೪೮ ॥
ಭರತನಾಡಿದ ಮಾತಿಗೊಪ್ಪದೆ । ಪುರಕೆನಾನಾತನನು ಕಳುಹಿದೆ । ನಿರು
ವೆಹದಿನಾಲ್ಕುಬುದವನದೊಳೆನುತ್ತ ಸಮ್ಮತಿಸಿ ॥ ಗುರುವಸಿಷ್ಠಾದಿಗಳ
ಚರಣ । ಕ್ಕೆರಗ ಬೇಕೆಂದಿರುವೆನು ಜನನಿ । ಯರನು ನೋಡಲಪೇಕ್ಷಿಪ
ಡುವೆನು ಕೇಳುನೀನಿವನು ॥ ೪೯ ॥ ಕೆಲಸವಾದ ಬಳಿಕೆನಗೀಪುರ । ದೊಳ
ರೆ ಮನವೊಪ್ಪುವುದೆ ನೀಂತರಿ । ಸೆಲೆ ವಿಭೀಷಣ ಭರದೆ ಪುಷ್ಪಕವರ ವಿ
ಮಾನವನು ॥ ತಳುವದೀಗಲೆ ಹೊರಡುವೆನು ಮನ । ದೊಳತಿ ಸಂತೋ
ಷವನುಪಡು ಖತಿ । ಗೊಳಲು ಬೇಡೆನು ತಂದುರಾಘವ ನೊಲಿಸಿಪೇಳದ
ನು ॥ ೫೦ ॥ ರಾಮನಾಡಿದ ನುಡಿಯಕೇಳುತ । ಕೈಮುಗಿದೆರಗಿ ವರವಿ
ಮಾನವ । ನಾಮನುಕುಲೋತ್ತಮನ ಬಳಿಗೆತರಿಸಿ ವಿಭೀಷಣನು ॥
ಪ್ರೇಮದಿಂದದನೊಪ್ಪಿಸಿ ನನಗೆ । ನೇಮವೇನೆನು ತೊಲಿದುನುಡಿದನು । ತಾ
ಮರಸ ನೇತ್ರಂಗೆತಾನತಿ ವಿನಯವಚನದಲಿ ॥ ೫೧ ॥ ಆನುಡಿಯ ನಾಲಿ
ಸುತ ಘನಸುಂ । ಮಾನದಿಂದಿಂತೆಂ ದರುಹಿದನು । ಮಾನವೋತ್ತಮ ನಾ
ವಿಭೀಷಣನಿ ಗತಿಹರ್ಷದಲಿ ॥ ಪ್ರಾಣಭೀತಿಯ ನುಳದುರಣದೊಳು ।
ವಾನರರು ಯುದ್ಧವನೆಸಗಿಹರು । ನೀನುಸಂತಸವಡಿಸಿ ವರನೆನುತ ತ್ರಿಳು
ಹಿವನೊಲಿಸಿ ॥ ೫೨ ॥ ಮನುಕುಲೋತ್ತಮ ನಾಡಿದವಚನ । ವನತಿಭ
ಕ್ತಿಯೊಳ್ಳೆದೆ ಕೇಳುತ । ದನುಜನಾಥನು ನಲಿದುಮನ್ನಿಸು ತಖಿಳಕಪಿಗ
ಳನು ॥ ಧನಕನಕಮಣಿ ವಸ್ತ್ರವರ ವಾ । ಹನಗಳನು ತಾನಿತ್ತು ರಘು
ನಂ । ದನನು ಮುದವಡೆವಂತೆ ಮನೆಯೊಳು ಪೂಜಿಸಿದನೊಲಿದು ॥ ೫೩ ॥
ದಾನವಾಧಿಪ ನರ್ಚಿಸಿದಖಿಳ । ವಾನರವರರ ನೀಕ್ಷಿಸುತ್ತಾ । ಮಾನವೇಂ
ದ್ರನು ಪುಷ್ಪಕವರ ವಿಮಾನವನು ಭರದೆ ॥ ಜಾನಕೀ ಸೌಮಿತ್ರಿಗಳೊಡ
ನೆ । ತಾನುಹತ್ತಿದ ನಾಬಳಿಕ ರವಿ । ಸೂನುವನು ಕುರಿತಿಂತುಪೇಳದ ನಧಿ
ಕಹರ್ಷದಲಿ ॥ ೫೪ ॥ ಸಖನಕಾರ್ಯವ ನೆಲ್ಲಮಾಡಿದೆ । ಸಖನೆ ಕೇಳ್ನೀನಿ

ಷ್ಟ್ರ ಬಂದಂ । ತಖಿಳಕಪಿಗಳ ಸಹಿತಕಿಷ್ಕಿಂಧಾ ಪುರಿಗೆಪೋಗು ‖ ಸಕಲಕಪಿಗಳ ನಿಮ್ಮೆಡೆಗಳಿಗೆ । ಸುಖದೆಪೋಗಿರಿ ನಿನ್ನರಾಜ್ಯದೊ । ಳಖಿಳ ಸಂಪದದಿಂದೆ ನೀಂವಸಿಸೆಲೆ ವಿಭೀಷಣನೆ ‖ ೫೫ ‖ ದಿವಿಜವಲ್ಲಭ ನಾದಿಯಾಗಿಹ । ದಿವಿಷದರು ನಿನ್ನನುತಿರಸ್ಕರಿ । ಸುವುದಕಿಲ್ಲವು ನಿನಗೆಲಂಕಾ ರಾಜ್ಯವೆಲ್ಲವನು ‖ ಅವನಿಮಂಡಲ ದೊಳಗಶಶಿಗಳು । ರುವತನಕ ಕೊಟ್ಟೆರುವೆನಿವನುಪೊ । ರೆವುದು ನಾಂಪೋಗುವೆ ನಯೋಧ್ಯೆ ಗೆನುತ್ತ ಪೇಳದನು ‖ ೫೬ ‖ ಆನುಡಿಗಳನು ಕೇಳುತಸಕಲ । ವಾನರರು ಕೈ ಮುಗಿದು ಭಕ್ತಿಯೊ । ಳಾನರೇಂದ್ರಂಗಿಂತು ಬಿನ್ನವಿಸಿದರು ತಲೆವಾಗಿ ‖ ನೀನುನಮ್ಮಗ ಳೆಲ್ಲರನಯೋ । ಧ್ಯಾನಗರಿ ಗೊಡಗೊಂಡು ಪೋಗುವು । ದಾನಗರದೊಳು ನಾವು ವಿಹರಿಸುವೆವು ವನಂಗಳಲಿ ‖ ೫೭ ‖ ಸತಿಸಹಿತ ಪಟ್ಟಾಭಿಷೇಕವ । ಹಿತವೆತಾಳುತ ಭೂತಲವನಾ । ಳುತಿಹನಿನ್ನನು ಕಂಡು ಕೌಸಲ್ಯೆಯ ಚರಣಕೆರಗಿ ‖ ಅತಿಹರುಷ ದಿಂದೆಮ್ಮೆಡೆಗಳಿಗೆ । ನುತಿಸುತ್ತೈದುವೆ ವೆಂದುನುಡಿವರು । ವಿತತಭಕ್ತಿಯೊ ಳಾರಘುವರಂಗಖಿಳ ವಾನರರು ‖ ೫೮ ‖ ಭರದೆ ಸುಗ್ರೀವಾದಿ ವಾನರ । ವರರು ಬಿನ್ನಹಸ್ಯೆದ ನುಡಿಗಳ । ಪರಮ ಕರುಣಾತಿಶಯ ದಿಂದಾಲಿಸುತ ರಾಘವನು ‖ ತ್ವರಿತದೊಳು ನಿಮ್ಮೊಡ ನಯೋಧ್ಯಾ । ಪುರಿಗೆಪೋಗುವೆ ನೀವುಪೇಳದ । ತೆರದೊಳಾಗಬಹುದೆನು ತೆಂದನು ನೋಡುತೆಲ್ಲರನು ‖ ೫೯ ‖ ನಿಮ್ಮನೊಡಗೊಂಡೈದಿ ಯೆನ್ನಯ । ತಮ್ಮನನು ಸಂತವಿಸಿ ನಗರದೊ । ಳೆಮ್ಮಬಂಧುಗಳ ಸಹಿತಾನಂದವನು ಹೊಂದುವೆನು ‖ ನಿಮ್ಮ ಸಂತಸವೆನನಗಿಂದತಿ । ಸಮ್ಮತ ವೆನಿಪುದೆಂದು ಪೇಳುತ । ಹೊಮ್ಮಿ ದೊಲವಿಂದ ಸುರಪತಿಗಿಂತೆಂದ ನಾರಾಮ ‖ ೬೦ ‖ ಎಲೆವಿಭೀಷಣ ನಿನ್ನ ಸಚಿವರು । ಗಳೊಡವೆರಸಿ ವಿಮಾನವನು ಹ । ತ್ತೆಲೆ ರವಿತನಯ ನಿನ್ನಖಿಳ ವಾನರರ ಸಹಿತೀಗ ‖ ತಳುವ ದೇರುವು ದೀಸ್ಥಳವನೆನೆ । ಬಳಿಕಹತ್ತಿದ ನಧಿಕಸಂಮದ । ದೊಳಸುರೇಂದ್ರನು ನಾಲ್ಕುಜನ ಮಂತ್ರಿಗಳನೊಡವೆರಸಿ ‖ ೬೧ ‖ ತರಣಿಸಂಭವ ನೊಲಿದಖಿಳವಾ । ನರರ ನೊಡಗೊಂಡೇರಿದ ನಧಿಕ । ಹರುಷದಿಂದಾ ಪುಷ್ಪಕವಿಮಾನವನು ಜವದಿಂದೆ । ತ್ವರಿತದಿಂದಲೆ ಸಕಲ ವಾನರ । ವರರೊಲಿದೊಲಿದು ಕುಳಿತುಕೊಂಡರು । ಧರಣಿಪತಿ ರಾಘವನ ಪೊಗಳುತ್ತಧಿಕ ಭಕ್ತಿಯಲಿ ‖ ೬೨ ‖ ವರವಿಮಾನದೊಳಖಿಳ ಕಪಿಗಳು । ಹರುಷದಿಂದಲೆ ಕುಳಿತು ಕೊಳ್ಳು । ತ್ತಿರಲು ರಘುವರ ನಾಕುಬೇರನ ತೆರದೆರಂಜಿಸುತ ‖ ಭರದೊಳಂಬರ ಮಾರ್ಗದೊಳು ನೀಂ । ತೆರಳ

ಯೋಧ್ಯಾ ನಗರಿಗೆಂದೆನು । ತಿರದೆ ತಾನಾವ್ಯೋಮ ಯಾನಕೆ ಕೊಟ್ಟನ
ಪ್ಪಣೆಯ । ೬೩ ॥ ಪಡೆದುರಾಘವ ನಾಜ್ಞೆಯನು ತಾ । ನೊಡನೆಪುಷ್ಪಕ
ರ ಮಾರ್ಗಕ್ಕೈದಿತು । ಪೊಡವಿಯ ನುಳಿದು ವರವಿಮಾನವು ಬಹುಳಶೀ
ಘ್ರದಲಿ ॥ ನಡೆದುದಂಬರ ಪಥದೊಳನಿಲನ । ಹೊಡೆತದಿಂದೋಡುವ ಮು
ಗಿಲ್ಗಳ । ಪಡೆಯ ಮೇಲುತ್ತರದ ದಿಶೆಗಂದನಿಲ ವೇಗದಲಿ ॥ ೬೪ ॥ ಧರ
ಣಿಮಂಡಲ ವನೊಲಿದೀಕ್ಷಿಸು । ತಿರದೆ ಸೀತೆಯ ನಾರಘುವರನು । ಕುರಿ
ತುಪೇಳಿದ ನೆಲೆಮಹೀಸುತೆ ನೋಡು ಲಂಕೆಯನು ॥ ಮೆರೆವುದೀಪುರ ವೀ
ತ್ರಿಕೂಟ ಶಿ । ಖರದೊಳದನಾ ವಿಶ್ವಕರ್ಮನು । ವಿರಚಿಸಿರುವ ನಧಿಕಚ
ಮತ್ಕೃತಿಯಿಂದೆ ಪೂರ್ವದಲಿ ॥ ೬೫ ॥ ಕ್ಷೋಣಿಸುತೆ ರಣರಂಗವಿಲ್ಲಿ
ಯೆ । ಕಾಣಿಸುತ್ತಿದೆ ನೋಡಳಿದಿಹರು । ಪ್ರಾಣಗಳನುಳಿದೆಲ್ಲ ರಕ್ಕಸರೆ
ಮ್ಮಪಿಟ್ಟನಲಿ ॥ ಕಾಣುತಿದೆ ರಕ್ತಾಮಿಷಗಳೀ । ತಾಣದೊಳುನೆರೆನೆರೆದು
ನನ್ನಯ । ಬಾಣಗಳು ವಧಿಸಿದವು ನಿನ್ನನಿಮಿತ್ತದನುಜರನು ॥ ೬೬ ॥
ಇಲ್ಲಿರಾವಣನನ್ನು ವಧಿಸಿದೆ । ನಿಲ್ಲಿಕೊಂದೆನು ಕುಂಭಕರ್ಣನ । ನಿಲ್ಲಿ
ವಧಿಸಿದ ನಿಂದ್ರಜಿತುವನು ಮುಳಿದು ಲಕ್ಷ್ಮಣನು ॥ ಇಲ್ಲಿವಿಕಟನಕೊಂ
ದನಂಗದ । ನಿಲ್ಲಿನೀಲನು ಸಂಹರಿಸಿದನು । ಕಲ್ಲೆದೆಯ ಕಟ್ಟಾಳುವೆಂದೆ
ನಿಪ ಪ್ರಹಸ್ತನನು ॥ ೬೭ ॥ ಹನುಮನಿಂದೆ ಮಡಿದನು ಧೂಮ್ರಾ ।
ಕ್ಷನು ವಿರೂಪಾಕ್ಷನು ಮಹಾಪಾ । ರ್ಶ್ವನು ಮಹೋದರ ನಾಯಕಂ
ಪನನಾದಿದಾನವರು ॥ ತನುವನುಳಿದಿಹರಿಲ್ಲಿ ದಶಕಂ । ಠನ ಮರಣವನು
ಕಂಡು ಸಾವಿರ । ಜನ ಸಪತ್ನಿಯರೊಡನೆ ಮಂಡೋದರಿವಿಲಪಿಸಿದಳು ॥
॥ ೬೮ ॥ ಇದುವೆಸಾಗರತೀರ್ಥ ವೀತಾ । ಣದೊಳುಲಂಘಿಸಿ ಜಲಧಿಯನು
ವಸಿ । ಸಿದೆವು ನಾವಾರಾತ್ರಿ ಕೇಳೆಲೆಸೀತೆ ಪಡೆಯೊಡನೆ ॥ ಉದಧಿಯೊಳು
ಸೇತುವೆಯನು ವಿರಚಿ । ಸಿದೆನು ನಿನ್ನನಿಮಿತ್ತವಾಗಿಯೆ । ಮುದದೊ
ಳೀಕ್ಷಿಸು ದಕ್ಷಿಣಾಬ್ಧಿಯ ತೀರವನುನೀನು ॥ ೬೯ ॥ ಹನುಮನಾಯಾಸ
ಪರಿಹಾರ । ಕ್ಕೆನುತ ಮೈನಾಕಗಿರಿ ಮುನ್ನೀ । ವನಧಿ ಮಧ್ಯದೊಳು
ಪಚರಿಸಿದುದು ನಿಂದುಮೇಲುಗಡೆ ॥ ವನಿತೆ ನೀನಾಗಿರಿಯನೀಕ್ಷಿಸು । ವ
ನಧಿಯುದಕವು ಕಾಣಿಸುತ್ತಿದೆ । ವಿನುತಿವೆತ್ತಿದೆ ಸೇತುಬಿಂದುವೆನುತಿದು
ಮೂಜಗದೆ ॥ ೭೦ ॥ ಸೀತೆನೀಂ ಮನವೊಲಿದು ಕೇಳೀ । ಸೇತು ಪರಮ
ಪವಿತ್ರಮೆನಿಪುದು । ಪಾತಕಂಗಳನೆಲ್ಲ ನಾಶನಮಾಳ್ಪುದನುದಿನವು ॥ ಭೂ
ತಳದೊಳಿದು ವಿನುತಿವೆತ್ತಿಹು । ದೀತಟದೊಳಾ ಶಂಕರನು ಸಂ । ಪ್ರೀ
ತಿಯಿಂದೆನಗೆ ಪ್ರಸಾದವನಿತ್ತನಾದಿನದಿ ॥ ೭೧ ॥ ಭರದೊಳೈತಂದೆನ್ನನಿಲ್ಲಿ

ಯೆ । ಶರಣುಹೊಂದಿದನೀ ವಿಭೀಷಣ । ಪೊರೆವುದೆನುತ ವಿಚಿತ್ರವೆನಗೆಳ
ಸಾಂತು ಸಂತತವು ॥ ಮೆರೆವ ಕಿಷ್ಕಿಂಧಾಪುರವರವಿ । ದಿರೊಳದೋಕಾ
ಣುತಿದೆ ನೋಡಿದ । ಕರಸನಾಗಿಹ ಸೀರವಿಸುತನು ತಾಳ್ದಿಪಟ್ಟವನು
॥ ೭೦ ॥ ಮಾನಿನೀಮಣಿ ಕೇಳು ವಾಲಿಯು । ನೀನೆಗೆರದಹೊರಗಡೆಯಲ್ಲಿ
ಯೆ। ನಾನು ಕೊಂದೆನು ತೀಕ್ಷ್ಣಶರವೊಂದರಲಿಘಾತಿಸುತ ॥ ಸೀನಿದೆಲ್ಲವೆ
ಸರಿವುದೆಂದಾ । ಭಾನುವಂಶಲಲಾಮ ನುಡಿಯು । ಲ್ಕಾ ನೆಲದಣುಗಿ ಬಿನ್ನ
ವಿಸಿದಳು ನಮಿಸಿರಾಮನಿಗೆ ॥ ೭೩ ॥ ಅರಸಕೇಳ್ಕಪಿಕಾಂತೆಯರು ಮೊ
ಡ। ವೆರಸಿಬರ್ಕೆಮ ನಮ್ಮಯೋಧ್ಯಾ । ಪುರಿಗೆ ನಿಮ್ಮಯ ರಾಜ್ಯಪಟ್ಟದ
ಮಂಜುಳೋತ್ಸವವ ॥ ವರಮುಸಂಮದದಿಂದೆ ನೋಳ್ಪಮ । ನಿರುಕಿಸೆನ್ನ
ಯ ಬಿನ್ನಪವನೆಸಾ । ದರದೊಳೆನುತೆರಗಲ್ಕ ರಾಘವನಿನಜಗಿಂತೆಂದ ॥ ೭೪ ॥
ವಾನರೇಂದ್ರನೆ ಕೇಳುಕಿಷ್ಕಿಂ । ಧಾನಗರದೊಳು ವಾಸಮಾಡುವ । ವಾ
ನರರಪತ್ನಿಯರು ಬರುವಂತೆನ್ನಪಟ್ಟಣಕೆ ॥ ನೀನುತಾರೆಗೆ ತಿಳುಹಿಸೆಂ
ದನ । ಲಾ ನುಡಿಯನಾಲಿಸುತ ಬಂದನು । ಮಾನಿಸದೆ ಸುಗ್ರೀವನಿಂತೆಂ
ದರುಹಿದನು ಸತಿಗೆ ॥ ೭೫ ॥ ಸತಿಯೆಕೇಳು ಸಮಸ್ತಕಪಿಗಳ । ಸತಿಯ
ರನು ನೀಂ ಬರಿಸಿಕೊಂಡಾ । ಕ್ಷಿತಿಸುತೆಯೊಡನಯೋಧ್ಯೆಗೈತರಬೇಕೆ
ನುತರುಹಲು ॥ ಪತಿಯುಮಾತನು ಕೇಳ್ದಖಿಳಕಪಿ । ಸತಿಯುರವೆರಸಿ ಪು
ಷ್ಪಕದಬಳಿ । ಗತಿಭರದೊಳೈ ತಂದೆರಗಿದಳು ತಾರೆರಾಮನಿಗೆ ॥ ೭೬ ॥
ವೀರರಾಘವನಪ್ಪಣೆಯ ನಾಂ । ತಾ ರವಿಸುತನು ಸಂತಸದೊಳಂ । ದೇ
ರಲು ವರವಿಮಾನವನು ಕಪಿಪತ್ನಿಯರಸಹಿತ ॥ ಧಾರಿಣೀಸುತೆ ವೆರಸಿ
ಪೋಗುತ। ದಾರಿಯೊಳಗಾ ಋಷ್ಯಮೂಕವ । ನಾ ರಘುವರನು ತೋರಿ
ದನು ಕೈವೆರಲಸನ್ನೆಯಲಿ ॥೭೭॥ ಇಲ್ಲಿನಜನಿಂದಾಯ್ತು ಸಖತನ । ಮಿಲ್ಲಿ
ವಾಲಿಯನೊಂದುಶರದಿಂ । ಕೊಲ್ಲುವೆನೆನುತ ಭಾಷೆಕೊಟ್ಟೆನು ಮಾಡಿಶಪ
ಥವನು ॥ ಅಲ್ಲಿಪಂಪೆಯು ಕಾಣುತಿದೆ ನೋ । ಡಲ್ಲಿ ನಿನ್ನ ನಗಲಿದೆ ನಗೆ
ಮನ । ತಲ್ಲಣಿಸಿದುದು ಸೀತೆನಿನ್ನಯ ವಿರಹತಾಪದಲಿ ॥ ೭೮ ॥ ಅಲ್ಲಿಕಂಡೆ
ನು ಶಬರಿಯನು ನಾ । ನಲ್ಲಿವಧಿಸಿದೆ ನಾಕಬಂಧನ । ನಲ್ಲಿ ರಾವಣನಿಂದೆ
ಸತ್ತಜಟಾಯುವನು ಕಂಡೆ ॥ ಅಲ್ಲಿ ಖರದೂಷಣರ ವಧಿಸಿದೆ । ನಲ್ಲಿ
ನಾನಾತ್ರಿಶಿರನನಿರಿದೆ । ನಲ್ಲಿ ಕೆಡಹಿದೆನು ಹದಿನಾಲ್ಸಾಸಿರದದೈತ್ಯರನು ॥
॥ ೭೯ ॥ ಇದೆಜನಸ್ಥಾನವೆಲೆ ಜಾನಕಿ । ಮುದದೊಳದ ನೀಕ್ಷಿಸುವುದಲ್ಲಿ
ರು । ವುದದೆ ನಮ್ಮಯ ಪರ್ಣಶಾಲೆಯು ನಮಗೆಕಾಣುತಿದೆ ॥ ಹೆದರಿಸು
ತ ದಶಕಂಠನಂದೀ । ಸದನದೊಳ ಗಪಹರಿಸಿನಿನ್ನ ರ । ಥದೊಳುಕೂಡಿಸಿ

ಕೊಂಡು ಪೋದನು ಗಗನಮಾರ್ಗದಲಿ ‖ ೯೦ ‖ ಇದುವೆಗೋದಾವರಿಯು ಕಾಣಿಸು | ತಿದೆ ಅಗಸ್ತ್ಯಮುನೀಂದ್ರನಾಶ್ರಮ | ವೆದೆ ಸುತೀಕ್ಷ್ಣಮು ನಿವರನಾಶ್ರಮ ವಿಲ್ಲಿತೋರುತಿದೆ ‖ ಅದುವೆ ಶರಭಂಗಾಶ್ರಮವು ನೋ | ಡದರೆಡೆಗೆ ಬಂದಿದ್ದನಂದಾ | ತ್ರಿದಶಪತಿ ಸಂಭಾಷಿಸಲು ಶರಭಂಗಮುನಿ ಪನೊಳು ‖ ೯೧ ‖ ಅದೆವಿರಾಧನುಸತ್ತ ಕಾನನ | ವಿದಿರೊಳು ವಿರಾಜಿ ಸುತಿವೆ ತಪೋ | ನಿಧಿಗಳಾಶ್ರಮಗಳದೆ ಅತ್ರಿಮುನೀಂದ್ರನಾಶ್ರಮವು ‖ ಇದರೊಳಂದನುಸೂಯೆ ನಿನಗಾ | ಹದಿಬದೆಯರಾ ಧರ್ಮವನುಪೇ | ಳಿ ದಳು ನೋಡಾ ಚಿತ್ರಕೂಟಗಿರೀಂದ್ರವನು ನೀನು ‖ ೯೨ ‖ ಹಿಂದೆಭರ ತನು ಚಿತ್ರಕೂಟಕೆ | ಬಂದು ನನ್ನನಯೋಧ್ಯೆಗೈತಹು | ದೆಂದುಬೇ ಡಿದನರಸನಾಗೆನುತೆನ್ನ ಪದಕೆರಗಿ ‖ ಮುಂದೆ ಯಮುನಾನದಿಯು ಕಾ ಣ್ಬುದು | ಸುಂದರಾಂಗಿಯೆ ನೀನುನೋಡಾ | ನಂದವನು ತಾಳ್ದಾಭರ ದ್ವಾಜಾಶ್ರಮವನಲ್ಲಿ ‖ ೯೩ ‖ ಮುಂಗಡೆಯೊಳಗೆ ಕಾಣಿಸುತ್ತಿದೆ | ಗಂ ಗೆಯದೆನೋಡತ್ತ ನೀನಾ | ಶೃಂಗಿಬೇರಪುರವನು ಗುಹನೈತಂದುಪಚ ರಿಸಿದ ‖ ಅಂಗನಾಮಣಿಯೆ ಸರಯೂನದಿ | ಕಂಗೊಳಿಸುತಿಹುದಲ್ಲಿ ನ ಮ್ಮಯ | ಕಂಗಳಿಗವೋ ಕಾಣುತಿದೆನೀಂ ನೋಡಯೋಧ್ಯೆಯನು ‖ ‖ ೯೪ ‖ ವಿನುತ ಪುಷ್ಪಪರಿಮಳದಿಂದನು | ದಿನವುರಂಜಿಸಿ ಕಾಣಿಸುತ್ತಿ ಹ | ವನಗಳನು ತಾಳ್ದಿಸೆಯೋಧ್ಯಾಪುರವರಕೆ ನೀನು ‖ ಬಸವನುಳಿ ದಿಂದೆನ್ನೊಡವೆರಸಿ | ವಿನಯದಿಬರುತ ಮತ್ತೆನಮಿಸೆಂ | ದೆನುತ ಪೇಳಿ ದನಾ ಮಹೀಸುತೆಗಾ ರಘೂದ್ವಹನು ‖ ೯೫ ‖ ಇಂತರುಹುತಾ ಜನಕಸು ತೆಗ | ತ್ಯಂತ ಹರ್ಷದೊಳಂದು ರಾಘವ | ನಂತರಿಕ್ಷದೊಳಾ ಭರದ್ವಾ ಜಾಶ್ರಮದಬಳಿಗೆ ‖ ಚಿಂತೆಯುಳಿದೈತರಲು ವನವಾ | ಸಾಂತಮೆನಿಸಿದ ಪಂಚಮಿಯು ಬಲು | ಸಂತಸವನಾಗಿಸುತಿರದೆ ತಲೆದೋರ್ದುದಷ್ಟ ರೊಳು ‖ ೯೬ ‖ ಸತಿಸಹೋದರರೊಡನೆ ಸೈನ್ಯಸ | ಹಿತ ವಿಮಾನವ ನಿಳಿದು ರಾಘವ | ನತಿಭಕುತಿಯಿಂದಾ ಭರದ್ವಾಜಮುನಿಪನಪದಕೆ ‖ ಸತಿಸಹಿತ ತಾಂ ನಮಿಸಿ ತನ್ನ ಚ | ರಿತೆಯ ನಾತಂಗರುಹಿ ಪಡೆದನು | ಹಿತದ ಮುನಿವರ ನಿತ್ತಸತ್ಕೃತಿ ಗಳನು ಹರ್ಷದಲಿ ‖ ೯೭ ‖ ತಳೆದು ರಾ ಘವ ನಾಮುನೀಶ್ವರ | ನೊಲಿದು ಕೊಟ್ಟ ಸುಭೋಜನವನು ಸ | ಕಲ ಜನಸಹಿತ ಸೌಖ್ಯದಿಂದಾ ಪಂಚಮಿ ದಿನದೊಳು ‖ ಬಳಿಕಮುನಿವರ ನಿಂದೆರಡು ವರ | ಗಳನು ಪಡೆದಾಲೋಚಿಸುತ ಮನ | ದೊಳಗನಿಲ ಸಂಭವನ ಕರೆದಿಂತೆಂದು ಪೇಳಿದನು ‖ ೯೮ ‖ ಮರುತನಣುಗನೆ ಕೇಳು

ನೀನಿಂ | ದಿರದೆ ನಂದಿಗ್ರಾಮವನು ಸಾ | ರ್ದೆರಗಿ ಭರತಂ ಗರುಹುವು
ದು ನಾನಿತ್ತ ಲಿರ್ಪುದನು ‖ ಭರತನಿಗೆ ನೀನೆನ್ನ ಕುಶಲವ | ನರುಹುತಾ
ತನ ಚಿತ್ತದ ಪರಿಯ | ನರಿತು ಬಹುದೆಂದೆನುತ ತಮ್ಮನ ಬಳಿಗೆ ಕಳು
ಹಿದನು ‖ ೮೯ ‖ ಶಿರದೊಳಾಂತು ರಘುವರನಾಜ್ಞೆಯ | ನೆರಗಿ ಕೇಸರಿ
ತನಯನಂದತಿ | ಭರದೊಳಂಬರ ಪಥದೆ ನಂದಿ ಗ್ರಾಮಕ್ಕೈತಂದು ‖ ಪರ
ಜಟಾ ವಲ್ಕಲಗಳನು ತಾ | ಳ್ದಿರುವ ವಹ್ನಿಗೆ ಸುತ್ತುತಿರುವಾ | ಭರತ
ನನು ಕಂಡೆರಗಿ ಪೇಳ್ದನು ರಾಮನಾಗಮನ ‖ ೯೦ ‖ ನಿರಶನವ್ರತ ವ
ನುತಳೆದು ಸೋ | ದರನೊಡನೆ ರಾಮಾ ಗಮನವನು | ಪರಿಕಿಸುತವ
ಧಿಯಂತವನು ಕಂಡಗ್ನಿಕುಂಡವನು ‖ ಉರಿಸಿ ವಹ್ನಿಗೆ ಮೂರು ಸುತ್ತ
ನು | ತಿರುಗಿಬೀಳುವ ಯೋಚನೆಯೊಳಿಹ | ಭರತನಿಗೆ ರಾಮನಕುಶಲವ
ನು ಪೇಳ್ದನಾ ಹನುಮ ‖ ೯೧ ‖ ತಿಳಿದು ರಾಮನ ಸಂಗತಿಗಳನ | ನಿಲ
ಸುತನ ಮುಖ ದಿಂದೆ ಸಂತಸ | ದಳೆದುಮನ್ನಿಸಿ ಭರತನಾಪವ ಮಾನ
ಸೂನುವನು ‖ ತಲೆವಪವಿ ತಕ್ಕೈಸಿ ತನ್ನಯ | ಬಳಿಯೊಳುತ್ತಮ ಪೀಠ
ದೊಳು ತಾ | ನೊಲಿದು ಕೂಡಿಸಿ ಪೇಳ್ವನು ಶತ್ರುಘ್ನನಿಗೆ ಕೂಡೆ ‖ ೯೨ ‖
ಭರದೆ ಪುರವರವೆಲ್ಲವನು ಸಿಂ | ಗರಿಸಬೇಕೆಂದೆನುತ ತಮ್ಮನಿ | ಗರುಹಿ
ಶೀಘ್ರದೊಳಾಂಜನೇಯನ ಸಹಿತಪೊರವಂಟು ‖ ಭರತನೊಲಿದೈ ತಂದ
ನಾ ರಘು | ವರನ ಸನಿಹಕೆ ಭಕ್ತಿಭರದಿಂ | ದಿರದೆ ಪಾದುಕೆಗಳನು ಧರಿ
ಸುತ ತನ್ನ ತಲೆಯೊಳಗೆ ‖ ೯೩ ‖ ಮರುತನಣುಗನ ಕೂಡೆ ಪರಮಾ |
ದರದೆ ನಂದಿಗ್ರಾಮವನುಳಿದು | ಭರತನಾ ದಕ್ಷಿಣದಮಾರ್ಗದೊಳೈತ
ರುತಿದಿರಲಿ ‖ ವರವಿಮಾನದೊಳಖಿಳ ಕಪಿವೀ | ರರೊಡನೆ ಕುಳಿತುಕೊಂ
ಡು ಸತಿಸೋ | ದರರಸಹಿತೈತರುವ ರಾಮನ ನೀಕ್ಷಿಸಿದನಲ್ಲಿ ‖ ೯೪ ‖
ಒಡನೆ ಕರಗಳಜೋಡಿಸುತ ತ | ನ್ನೊಡಲನೀಡಿ ನಮಸ್ಕರಿಸಿದನು | ಕ
ಡುಬಕುತಿಯಿಂ ಭರತನಣ್ಣನ ಚರಣಪಂಕಜಕೆ ‖ ಪೊಡವಿಗಿಳಿಸುತಾ
ವಿಮಾನಕೆ | ನುಡಿದು ರಾಮನು ತಮ್ಮನಕರವ | ಪಿಡಿದು ಹತ್ತಿಸಿಕೊಂ
ಡನು ವಿಮಾನಕತಿಹರ್ಷದಲಿ ‖ ೯೫ ‖ ಪರಮ ಭಕ್ತಿಯನಾಂತು ಪ
ತ್ತಾ | ಭರತನಣ್ಣನಿಗೆರಗಿ ಸೀತೆಯ | ಚರಣಪಂಕಜಕೆರಗಿ ಸೌಮಿತ್ರಿ
ಯನು ಬಿಗಿದಪ್ಪಿ ‖ ತರಣಿಸಂಭವ ವರವಿಭೀಷಣ | ರಿರುವರನುಸಂತೈಸಿ
ಮಿಕ್ಕನಿ | ಬರನುಸಂತವಿಸಿದನು ಸವಿನಯ ಮಧುರ ವಚನದಲಿ ‖ ೯೬ ‖
ಆಲಿಸೈ ತಂದೆ ರಘುನಾಥನೆ | ತಾಳಿ ನಿನ್ನಾಜ್ಞೆಯ ನವನಿಯನು | ಪಾಲಿಸಿ
ದೆ ಹದಿನಾಲ್ಕುವರ್ಷಗಳಿಂದ ಮಿದುವರೆಗೆ ‖ ಹೇಳಲಾರೆನು ನನ್ನ ಸುಕ್ಕ

ತದ । ಲೀಲೆಯನು ಧನ್ಯನೆನಿಸಿದೆ ಜನ । ಪಾಲಕನೆ ಕಾಣುತ್ತ ನಿನ್ನಯ ಪಾದಪದ್ಮಗಳ ॥ ೯೭ ॥ ನೀನುಪಾಲಿಸು ರಾಜ್ಯವೆಲ್ಲವ । ನಾನುಭೂಮಿ ಯನಾಳಲಾರೆನು । ಮಾನವೇಂದ್ರನೆ ನನ್ನಚಿನ್ನಹವಾಲಿಸೆಂದೆನಲು ॥ ಆನುಡಿಗಳನು ಕೇಳ್ದು ಬಹುಸುಂ । ಮಾನದಿಂದಲೆ ಬಂದನು ವರವಿ । ಮಾನದೊಳು ಕೂಡುತ್ತ ನಂದಿಗ್ರಾಮಕಲ್ಲಿಂದ ॥ ೯೮ ॥ ಬಂದುನಂದಿ ಗ್ರಾಮಕಾ ರಘು । ನಂದನನು ಪುಷ್ಪಕವಿಮಾನವ । ನಂದಿಳದು ನೀನಾ ಕುಬೇರನಬಳಿಗೆ ಪೋಗೆನುತ ॥ ಚಂದದಿಂದದ ಕಪ್ಪಣೆಯನಿ । ತ್ತಂದು ಕಳುಹಿಸಿ ಬಳಿಕತಾನ್ಯೆ । ತಂದೆರಗಿದನು ಮುನಿವಸಿಷ್ಠನ ಪಾದಪಂಕಜ ಕೆ ॥ ೯೯ ॥ ಜನನಿಯರ್ಕಳಗೆಲ್ಲ ನಮಿಸುತ । ವಿನಯದಿಂದೆ ವಸಿಷ್ಠನಸ ಹಿತ । ಮನುಕುಲೋತ್ತಮ ನುತ್ತಮಾಸನದೊಳ್ಕುಳಿತುಕೊಂಡು ॥ ತನಗೆ ಕೈಮುಗಿದೆರಗುವ ಜನರ । ಮನಕೆ ಸಂತೋಷವನುಮಾಡುತ । ವಿನಯದಿಂದಲೆ ಕೇಳ್ದನೆಲ್ಲರ ಕುಶಲವನುಕೂಡೆ ॥ ೧೦೦ ॥

ಇಂತು ಇಪ್ಪತ್ತೊಂಭತ್ತನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೧೪೭೯.



## ಮೂವತ್ತನೆಯ ಅಧ್ಯಾಯ.

ಸೂಚನೆ ॥ ಪತಿಯೊಡನೆ ಪಟ್ಟಾಭಿಷೇಕವ ।
ನತಿಹರುಷದಿಂದಾಂತು ಧರಣೀ ।
ಸುತೆ ವಿತತಸೌಖ್ಯಂಗಳನು ಹೊಂದಿದಳಯೋಧ್ಯೆಯಲಿ ॥

ಶಿರದೊಳಂಜಲಿ ಬದ್ಧನಾಗುತ । ಲೆರಗಿ ಸತ್ಯಪರಾಕ್ರಮಿಯೆನಿಸಿ । ಧರೆಯೊಳುನ್ನತಿ ವೆತ್ತರಾಮನ ಚರಣಪಂಕಜಕೆ ॥ ಭರತನೆಂದೆನು ತಂ ದೆಕೇಳೀ । ಧರೆಯೊಡೆತನವ ನಂದೆನಗೆನೀಂ । ಕರುಣಿ ಸಿತ್ತಂತೀವೆನುನಿ ನಗೆ ಮತ್ತೆನಾನಿಂದು ॥ ೧ ॥ ಬಲಿತು ಕೊಬ್ಬಿದ ಯೆತ್ತಿನ ಹೆಗಲಿ । ನೊ ಳಿರಿಪಾಭಾರವನು ಮೇದಿನಿ । ತಲದೊಳೆಳಗರು ತಾನು ಪೊರಲಾರದ ವೊ ಲಾನಿಂದು ॥ ತಳೆಯಲಾರೆನು ರಾಜ್ಯಭಾರವ । ನೆಲೆಮಹಾತ್ಮನೆ ನೀನು ಕೈಕೊಂ । ಡೊಲಿದು ಪಾಲಿಸು ತಳೆದುಪಟ್ಟವ ನೀಮಹೀತಳವ ॥ ೨ ॥ ತುರಗಗಾರ್ದಭ ಗಳಗೆ ತಾನೆಂ । ತಿರುವುದಂತರ ವವನಿಯೊಳಗಾ । ಗರು

ಡವಾಯುಸ ಗಳಿಗೆ ತಾನೆಂತಿರುವು ದಂತರವು ‖ ಪರಿಕಿಸಲು ನಿಸಗೆನಗೆ ತೋರು । ತ್ತಿರುವು ಪಾತಕರ ದಂತರವುರಘು । ವರನೆನಾನನು ಸರಿಸಲಾರೆ ನು ನಿನ್ನ ಮಾರ್ಗವನು ‖ ೩ ‖ ವಾರಿವೇಗದೆ ಭಿನ್ನವಾಗುತ । ತೋ ರುವಾಸೇತುವೆಯು ತೆರದಿಂ । ದೀರಸೆಯೊಳತಿ ಕಷ್ಟ ಮಾಗಿಹುದೆನಗೆ ದೊರೆತನವು ‖ ವೀರರಾಘವ ಕೇಳು ರಾಜ್ಯದ । ಭಾರವನು ನೀಂ ವಹಿ ಸಿಪಾಲಿಸು । ಬೇರೆನುಡಿಯುದಿರೆಂದು ವಿಜ್ಞಾಪಿಸಿದ ನಾಭರತ ‖ ೪ ‖ ನಿನ್ನ ಪ್ರೊಲು ಭೂಮಿಯನು ಪೊರೆವುದ । ಕನ್ನಕೈಯೊಳ ಗಾಗುವದೆ ಕೇ । ಳಣ್ಣ ಸರ್ವ ವಿಧದೊಳೆನಗೆ ಬೇಡರಸುತನವಿನ್ನು ‖ ನನ್ನ ಬಿನ್ನಪ ವನವ ಧರಿಸುವು । ದಿನ್ನು ನಿನ್ನಯ ಚರಣ ಸೇವೆಗ । ಳನ್ನು ವಿರಚಿಸಿ ಕೊಂಡಿರುವೆ ನೆಂದೆಂದನಾಭರತ ‖ ೫ ‖ ಧರಣಿಮಂಡಲ ಮಿರ್ಪವರೆಗಂ । ತರಣಿಶಶಿಧರ ರಿರ್ಪವರೆಗಂ । ಗಿರಿನದಿನದಗ ಳಿರ್ಪವರೆಗಂ ಮೇದಿನೀತ ಲಕೆ ‖ ಅರಸನಾಗುತ ನೀನು ಪಾಲಿಸು । ಪುರದೊಳಗೆ ಪಟ್ಟಾಭಿಷೇಕವ । ನುರುತರದ ವೈಭವದೊಳಾಂತತಿ ಶಯುದಹರ್ಷದಲಿ ‖ ೬ ‖ ನನ್ನ ತಾಯಿ ಗೆ ಕೀರ್ತಿ ಬಂದುದು । ನಿನ್ನಧೀನವು ರಾಜ್ಯವೆಲ್ಲವು । ಮುನ್ನ ನೀಂ ನು ಡಿದಂತೆ ದೊರೆತನ ವನ್ನು ಕೈಕೊಂಡು ‖ ನಿನ್ನ ಸೇವಕ ನಾಗಿರುತ್ತಿಹ । ನ ನ್ನನುದ್ಧರಿ ಸೆಂದಡಿಗೆರಗಿ । ಬಿನ್ನವಿಸಿದನು ಭರತನಣ್ಣನಿಗತಿ ವಿನಯ ದಿಂದ ‖ ೭ ‖ ಭರತನಾಡಿದ ನುಡಿಗಳೆಲ್ಲವ । ನಿರದೆರಾಘವ ನಾಲಿಸುತಧಿಕ । ಹರುಷದಿಂದಾ ಭರತನನು ತಕ್ಕೈಸಿ ತಲೆದಡವಿ ‖ ಅರಸನಾಗುವೆ ನೆಂದುತ ಮ್ಮನಿ । ಗರುಹಿ ಸಮ್ಮತಿ ಪಡಿಸುತಾಗಳೆ । ಮೆರೆವ ಭದ್ರಾಸನದೊಳು ಕುಳಿತುಕೊಂಡ ನೊಲವಿಂದೆ ‖ ೮ ‖ ಭರತನಿಂಗಿತವನ್ನು ತಿಳಿದತಿ । ಹರುಷವನು ತಾನಾಂತು ನಾಯಿಂ । ದರನು ಕರೆಯಿಸಿ ತನ್ನೆಡೆಗೆ ಶತ್ರು ಘ್ನನೊಲಿಸುತ್ತ ‖ ಅರಿತತಿಚಮತ್ಕಾರ ದಿಂದಲೆ । ಧರಣಿಪತಿ ರಾಮನಿಗೆ ಭದ್ರಾ । ಕರಣವನು ಮಾಡುವುದೆನುತ ಪೇಳಿದನುಶೀಘ್ರದಲಿ ‖ ೯ ‖ ಅತಿವಿಶಾರದರೆನುತ ಜನಸಂ । ನುತಿವಡೆದ ನಾಯಿಂದರ್ರೈತಂ । ದತಿಭರದೆ ಶತ್ರುಘ್ನನಾಜ್ಞೆಯನಾಲಿಸುತ ಕೂಡೆ ‖ ವಿತತಸಾಧ್ಯವ ನಾಗಿಸುತ ಬ ಹು । ಹಿತವದಂ ಬಂದದೊಳು ರಾಜ ವಿ । ಹಿತಸುಪದ್ಧತಿಯಂತೆ ಭದ್ರಾ ಕರಣವೆಸಗಿದರು ‖ ೧೦ ‖ ಜಡೆಗಳೆಲ್ಲವನಾ ರಘುವರನು । ಬಿಡಿಸಿ ಶೋಧಿಸಿ ಕೊಳ್ಳುತಾಗಳೆ । ಸಡಗರದೊಳಭ್ಯಂಜನ ಸ್ನಾನವನು ತಾನೆ ಸಗಿ ‖ ಕಡುಬೆಲೆಯ ನಾಂತೊಪ್ಪಿರಂಜಿಸು । ವುಡಿಗೆ ತೊಡಿಗೆಗಳೆಲ್ಲವ ನು ತಾ । ಳ್ದಡಿಗಡಿಗೆ ಕಂಗೊಳಿಸಿದನು ಪೂಮಾಲೆಗಳನಾಂತು ‖ ೧೧ ‖

ಭರತ ಶತ್ರುಘ್ನರುಗಳಿಬ್ಬರು । ಹಿರಿದೊಳೆಣ್ಣೆಯನಿರಿಸಿ ಕೊಳ್ಳುತ । ಭ
ರವೊಳೊಲಿದಭ್ಯಂಜನ ಸ್ನಾನವನುಮಾಡಿದರು ॥ ತ್ವರಿತಗೊಳ್ಳುತ ಲ
ಕ್ಷ್ಮಣನೊಡನೆ । ತರಣಿನಂದನನಾ ವಿಭೀಷಣ । ರಿರುವರಾಚರಿಸಿದರು
ಮಂಗಳಮಜ್ಜನಂಗಳನು ॥ ೧೨ ॥ ಸ್ನಾನಗಳನಂದೆಸಗಿ ದೊಡನೆಯೆ ।
ವಾನರರು ಸಂತೋಷದಿಂದಲೆ । ಜಾನಕಿಗೆ ಯಭ್ಯಂಜನ ಸ್ನಾನವನು
ಮಾಡಿಸುತ ॥ ಕ್ಷೋಣಿತಲವಲ್ಲಿದು ಪೊಸತೆನೆಸಿ । ದಾನಿಸುತಲಂಕರಿಸಿದರಿ
ರಿಸಿ । ಜಾಣತನದೊಳು ಸಕಲ ವಸನಾಭರಣಗಳನೊಲಿದು ॥ ೧೩ ॥
ಪರಮ ಸಂಭ್ರಮದಿಂ ದಖಿಳನಾ । ನರರ ಪತ್ನಿಯರೆಲ್ಲರಿ ಗಲಂ । ಕರಿಸಿ
ದಳುಕೌಸಲ್ಯೆ ಬಹುವಿಧಯತ್ನದಲಿ ನಲಿದು ॥ ಭರತನಾಜ್ಞೆಯನಾಂ
ತೆರಗಿ ತಂ । ದಿರಿಸಿದರು ಸೇವಕರು ನಾಲ್ಕುಕು । ದುರೆಗಳಿಂದಲೆ ಕಂ
ಗೊಳಿಪ ರಥವನತಿಶೀಘ್ರದಲಿ ॥ ೧೪ ॥ ಸತಿಯೊಡನೆರಾಘವನು ಹತ್ತಿದ ।
ನತಿಪರುಷದಿಂದೆ ಸಲೆಕಂಗೊಳಿ । ಸುತಿಹನಾಲ್ಕುಕು ದುರೆಗಳಿಂದೆಸೆವಾ
ವರೂಥವನು ॥ ಜತನದಿಂದಾ ಸ್ಯಂದನವನು ಭ । ರತನುನಡಿಸಿದನಂದು
ಪಥದೊಳು । ಹಿತದೆ ಹಗ್ಗವಪಿಡಿದುಕೊಳ್ಳುತ ತನ್ನಕೈಗಳೊಳು ॥೧೫॥
ಭೇರಿಗಳನು ಹೊಡೆದರು ಮುಂಗಡೆ । ವಾರವನಿತೆಯರು ಕುಣಿದಾಡಿದ ।
ರಾರತಿಯನೆತ್ತಿದರು ಕನ್ಯೆಯರಿದಿರೊಳೈತಂದು ॥ ಸಾರಿ ಬಿರುದುಗಳೆಲ್ಲ
ವನು ಕೈ । ವಾರಿಸಿದರಡಿಗಡಿಗೆ ಭೂಪನೆ । ಬಾರಿಸಿದರಾ ಸಕಲವಿಧವಾ
ದ್ಯಂಗಳೆಲ್ಲವನು ॥ ೧೬ ॥ ಒಡನೆ ಶತ್ರುಘ್ನನು ಮೆರೆವ ಬಿಳು । ಗೊಡೆ
ಯನಿಟ್ಟನು ರಾಘವೇಂದ್ರಂ । ಗೆಡಬಲಂಗಳೊಳಾ ವಿಭೀಷಣ ತರಣಿಸಂ
ಭವರು ॥ ಪಿಡಿದು ಚಾಮರಗಳನು ಬೀಸಿದ । ರಿಡಿದಸಂತಸದಿಂದ ಹೊ
ಗಳ್ದ । ರಡಿಗಡಿಗೆ ರಾಮನನು ತಾಪಸರೆಲ್ಲ ಬಳಬಳಸಿ ॥ ೧೭ ॥ ಕಪಿ
ಗಳೆಲ್ಲರು ಮನುಜರೂಪವ । ಸಪರಿವಾರದೊಳಾಂತು ರಾಮನ । ನುಪ
ಚರಿಸು ತೊಂಬತ್ತು ಸಾವಿರ ಗಜಗಳನಡರ್ದು ॥ ಚಪಲಭಾವವನುಳಿದು
ರಾಮನ । ವಿಪುಲವೈಭವ ಕಬ್ಬರಿವಡೆದು । ಸುಪಥದೊಳಯೋಧ್ಯಾನ
ಗರಿಗೈತಂದರಾದಿನದಿ ॥ ೧೮ ॥ ಸರಸಿಜಾನನೆ ಜಾನಕಿಸಹಿತ । ತರಣಿ
ವಂಶಲಲಾಮ ರಾಘವ । ನುರೆ ಮೆರೆವ ಘನದಿವ್ಯರಥದೊಳು ಕುಳಿತು
ವೈಭವದಿ ॥ ಪರಿಪರಿಯ ನಿಜಸಿಬಿಕಸೇನೆಯು । ವರನೊಲಿಸು ತೈತಂದನು
ನಿಜನ । ಗರ ಮೆನಿಸಯೋಧ್ಯಾ ಪುರವರಕೆ ರಾಜತೇಜದಲಿ ॥ ೧೯ ॥
ಪರಮಭಕ್ತಿಯನಾಂತು ರಾಮನ । ಚರಣವನನೆದು ನಡೆಯಿಸಿದನಾ ।
ಭರತಹಗ್ಗವಪಿಡಿದು ಕೈಯೊಳು ವರವರೂಥವನು ॥ ಪುರದ ಮಾನವ

ರೆಲ್ಲ ರೊಡನತಿ । ಭರದೊಳಾ ರಾಘವನು ಬಂದನು । ಮೆರೆವಯೋಧ್ಯಾ
ಪಟ್ಟಣದ ಘನರಾಜವೀಧಿಯಲಿ ॥ ೨೦ ॥ ಬಂದುಹೊಕ್ಕನು ಪಟ್ಟಣಾ
ದೊಳತಿ । ಚಂದದಿಂದುರೆ ಮೆರೆವ ತನ್ನಯ । ತಂದೆಯ ಮನೆಯನಾ
ರಥವನಿಳಿಯುತ್ತ ರಾಘವನು ॥ ಸಂದಸಂತಸದಿಂದೆ ಭಾಸ್ಕರ । ನಂದನನ
ಮನ್ನಿಸುತ ತನ್ನಯ । ಮಂದಿರದೊಳಿಳಿಸಿದನು ಮನವೊಪ್ಪುವವೊಲು
ಪಚರಿಸಿ ॥ ೨೧ ॥ ಸಾರಿಸಿದರು ಸುವಾಸನೆಯ ಪ । ನ್ನೀರಿನಿಂದಲೆ ಪ
ಟ್ಟಣದೊಳಿಹ । ಕೇರಿಕೇರಿಗಳೆಲ್ಲವ ನಖಿಳಬೀದಿಗಳಸಹಿತ ॥ ತೋರಿ
ಸಿ ಚಮತ್ಕಾರವನು ಶೃಂ । ಗಾರಮಾಡಿದ ರಿಟ್ಟವರ ಕ । ರ್ಪೂರರಜ
ದಿಂದೆಸೆವ ರಂಗವಲಿಗಳನೆಲ್ಲೆಡೆಗೆ ॥ ೨೨ ॥ ವಾಸನೆಯನಾಗಿಪ ಸುಗಂ
ಧದ । ಕೇಸರಿಯಕೆಸರಿಂದೆ ರಚಿಸಿದ । ರಾ ಸಕಲ ವೀಧಿಗಳಗತಿಚಂದವಾನೆ
ಕಾರಣೆಯ ॥ ಬೀಸಿಮಾಡಿದ ಬಣ್ಣಪುಡಿಗಳ । ರಾಸಿಗಳನಾತುರದೆ ತಂದು
ಸು । ವಾಸಿನಿಯರು ತರತರದೊಳಾಕೃತಿಗಳನು ಲಿಖಿಸಿದರು ॥ ೨೩ ॥
ಕಳಸಕನ್ನಡಿ ಮಕರತೋರಣ । ತಳಿರತೋರಣ ಸಿಂಧಸೀಗುರಿ । ಜಳು
ಗೊಡೆ ಪತಾಕೆಗಳನಿರಿಸಿದರಲ್ಲಿ ಸಿಂಗರಿಸಿ ॥ ತಳುವದಾ ಪುರದಖಿಳ ಭವ
ನಂ । ಗಳಿಗೆ ಸುಣ್ಣವಬಳಿದು ಕಾರಣೆ । ಗಳನಿರಿಸಿ ಲೋವೆಗಳಿಗಿಟ್ಟರು
ಬಣ್ಣಪಟ್ಟೆಗಳ ॥ ೨೪ ॥ ಮಂದಿರಂಗಳಿಗೆಲ್ಲ ಕಟ್ಟಿದ । ರಂದು ಕದಳೀ
ಸ್ತಂಭಗಳ ನೊಲ । ವಿಂದೆ ಮಾವಿನತೋರಣಂಗಳ ನವಕೆಬಿಗಿಸಿದರು ॥
ಚಂದವೆನೆ ಕರುಮಾಡಗಳ ಮೇ । ಲಂದವಹ ಕೇತನಗಳನು ಭರ ।
ದಿಂದಿರಿಸಿದರು ಸಿಂಗರಂಗೊಳಿಸು ತ್ತಯೋಧ್ಯೆಯಲಿ ॥ ೨೫ ॥ ಅಲ್ಲಿಗ
ಲ್ಲಿಗೆ ಚಪ್ಪರಂಗಳ । ನಲ್ಲಿಗಲ್ಲಿಗೆ ಮಂಟಪಂಗಳ । ನಲ್ಲಿಗಲ್ಲಿಗೆ ರಚಿಸಿದರು
ಕೊಟ್ಟಾರಗಳನೊಲಿದು ॥ ಅಲ್ಲಿಗಲ್ಲಿಗೆ ಮೋಲ್ಬಿಡಾರವ । ನಲ್ಲಿಗಲ್ಲಿಗೆ ಯೆ
ಲೆಮನೆಗಳನು । ಮಲ್ಲಿಗಲ್ಲಿಗೆ ಮೇಲುಗೂಡಾರಗಳ ನೆಸಗಿದರು ॥ ೨೬ ।
ಹಿಂದೆ ಶಕ್ರಂ ಗಷ್ಟವಸುಗಳು । ಚಂದದಿಂದಭಿಷೇಕವ ನೆಸಗು । ವಂ
ದು ಸುರನಗರಿಯ ನಲಂಕರಿಸಿದ್ದರೀತಿಯಲಿ ॥ ಸಂದತಿ ಚಮತ್ಕಾರವನು
ನಲ । ವಿಂದಿರಿಸಿ ಸಿಂಗರಿಸಿದರು ರಘು । ನಂದನನ ಪಟ್ಟಾಭಿಷೇಕಕೆ ಪದೆ
ದಯೋಧ್ಯೆಯನು ॥ ೨೭ ॥ ಗುರುವಸಿಷ್ಠ ಮುನೀಂದ್ರನಾ ರಘು ॥
ವರನ ಘನಪಟ್ಟಾಭಿಷೇಕಕೆ । ವರಮುಹೂರ್ತವ ನಿರಿಸಿದನುಶುಭವಸ್ತು
ಗಳನೆಲ್ಲ ॥ ತ್ವರಿತದಿಂದಲೆ ಸಿದ್ಧಗೊಳಿಸುತ । ಭರತನೆಂದನು ಭಾನುಸು
ತನಿಗೆ । ತರಿಸು ನಾಲ್ಕುಸಮುದ್ರಗಳ ವಾರಿಯನು ನೀನೆನುತ ॥ ೨೮ ॥
ಅನುಡಿಯನಾಲಿಸುತ ಬಹುಸಂ । ಮಾನದೊಳು ಸುಗ್ರೀವನಾ ಪವ ।

ಮಾನನಂದನ ಮುಖ್ಯರಹ ಕಪಿವೀರರನು ಕರೆದು ॥ ಭಾನುಮೂಡದ ಮುನ್ನ ನೀವು ನಿ । ದಾನಿಸದೆ ತರಬೇಕು ಬಿಟ್ಟನು । ಮಾನವನು ಚತುರೋದಧಿ ಜಲವನೆಂದು ನೇಮಿಸಿದ ॥ ೧೯ ॥ ಒಡೆಯನಾಜ್ಞೆಯನಾಂತು ವಾನರ । ರೊಡನೆಪೋದರು ನಾಲ್ಕುದಿಕ್ಕಿನ । ಕಡಲುಗಳಿಗತಿ ಶೀಘ್ರದೊಳು ನೆಗೆದಂಬರಸ್ಥಳಕೆ ॥ ಪಿಡಿದಕಾಂಚನ ಕುಂಭಗಳೊಳಾ । ಜಡಧಿಗಳವಾರಿಯನು ತಂದರು । ಕಡುಜವದೊಳೈನೂರು ನದಿಗಳನೀರನೊಳಕೊಂಡು ॥ ೨೦ ॥ ನಲಿವುಕಪಿಗಳುತಂದಸಾಗರ । ಜಲವನಾ ಶತ್ರುಘ್ನ ನೀಕ್ಷಿಸಿ । ಕುಲಪುರೋಹಿತನಹ ವಸಿಷ್ಠಮುನೀಂದ್ರನಿಗೆ ನೀವು ॥ ತಿಳುಹುವುದೆನುತ ತನ್ನಮಿತ್ರರಿ । ಗೊಲಿದು ಪೇಳಲವರುಗಳಾ ಮುನಿ । ಕುಲಲಲಾಮಂಗೆರಗುತಾ ಸಂಗತಿಯ ನರುಹಿದರು ॥ ೨೧ ॥ ಮುನಿವಸಿಷ್ಠನು ಬಳಿಕ ವಿಪ್ರರೊ । ಡನತಿ ಸಂತೋಷವನು ತಾಳುತ । ವಿನುತವಂಗಳ ಮಂಟಪದ ಮಧ್ಯದೊಳು ಕಂಗೊಳಿಪ ॥ ವಿನುತ ನವರತ್ನಮಯ ಪೀಠದೆ । ಜನಕನಂದನೆಸಹಿತ ರಘುವೀ । ರನನು ಕುಳ್ಳಿರಿಸಿದನು ಪಠಿಸುತ ವೇದಮಂತ್ರಗಳ ॥ ೨೨ ॥ ಮುನಿವಸಿಷ್ಠ ಸುಯಜ್ಞಕಾತ್ಯಾ । ಯನ ವಿಜಯಜಾಬಾಲಿ ಕಾಶ್ಯಪ । ವಿನುತಗೌತಮ ವಾಮದೇವಾದಿ ಮುನಿಪೋತ್ತಮರು ॥ ಘನಸುಗಂಧದ ವಿಮಲಜಲದಿಂ । ದನುನಯದೊಳಭಿಷೇಕ ವೆಸಗಿದ । ರಿನಕುಲೇಂದ್ರನಿಗಾ ವಸುಗಳಿಂದ್ರನಿಗೆಸಗಿದಂತೆ ॥ ೨೩ ॥ ಪರಮಪಾವನ ರೆಂದೆನಿಸಿಕೊಂ । ಡಿರುವ ಋತ್ವಿಕ್ಕುಗಳು ಧರಣೀ । ಸುರರು ಕನ್ಯೆಯರಖಿಳ ಸೇನಾಧಿಪರು ಮಂತ್ರಿಗಳು ॥ ಹರುಷದಿಂದಭಿಷೇಕವನು ರಘು । ವರನಿಗೆಸಗಿದರಾ ಮುನಿಪತಿಗ । ಳೊರೆದ ಮಂತ್ರಂಗಳನು ಕೇಳುತ ವಿಧಿವಿಧಾನದಲಿ ॥ ೨೪ ॥ ವಿಮಲವಾರಿಯನಾಂತು ನಭದೊಳ । ಗಮರರಾ ದಿಕ್ಪಾಲಕರ ಸಹಿ । ತಮಲತರ ಸರ್ವೌಷಧಿ ರಸಗಳಿಂದೆರಾಮನಿಗೆ ॥ ವಿಮಲವರ ಶುಭಲಗ್ನದೊಳೊಡನೆ । ತಮುತಮಗೆ ಸಂತಸವತಳೆದಾ । ಗಮವಿಧಿ ವಿಧಾನದೊಳ ಗಭಿಷೇಕವನು ಮಾಡಿದರು ॥ ೨೫ ॥ ವನಜಸಂಭವನಿಂದ ನಿರ್ಮಿತ । ಮೆನಿಸಿ ರತ್ನಗಳಿಂದೆ ಶೋಭಿಪ । ಘನಕಿರೀಟವನಿಟ್ಟು ರಘುನಂದನನ ಮಸ್ತಕಕೆ ॥ ಮುನಿಗಳೆಲ್ಲರು ಮತ್ತೆ ಪೇಳುತ । ವಿನುತ ಮಂತ್ರಂಗಳನು ರಘುನಾ । ಥನಿಗೆ ಪದೆದಭಿಷೇಕವನು ಮಾಡಿದರು ಸಭೆಯೊಳಗೆ ॥ ೨೬ ॥ ಒಡನೆ ರಘುನಾಥಂಗೆಸೆವ ಬೆಳು । ಗೊಡೆಯನಾ ಶತ್ರುಘ್ನನಿರಿಸಿದ । ನೆಡಬಲಂಗಳೊಳಾ ವಿಭೀಷಣ ತರಣಿಸಂಭವರು ॥ ಪಿಡಿದು ಚಾಮರಗಳನು ಬೀಸಿದ ।

ರಡಿಗಡಿಗೆ ಬಿರುದಾವಳಿಯ ನತಿ | ಸಡಗರದೊಳಾ ವಂದಿಮಾಗಧರೈದೆ ಪೊಗಳಿದರು ‖ ೩೭ ‖ ಹೊಳೆವ ಶತಪುಷ್ಕರಗಳಿಂದುರೆ | ಥಳಥಳಿಪ ಕಾಂಚನದ ಹಾರವ | ನೊಲಿದಮರವರನಾ ಸಮೀರನಕೈಗೆ ಕೊಟ್ಟದನು ‖ ತಳುವದೀವುದು ರಾಮನಿಗೆನುತ | ಕಳುಹಲೈತಂದಿತ್ತ ನಾವುನು | ಕುಲಲಲಾಮಂಗತಿ ಭರದೊಳಾ ಗಂಧವಾಹನನು ‖ ೩೮ ‖ ದೇವದುಂದುಭಿಗಳು ಮೊಳಗಿದವು | ದೇವತೆಗಳೆಲ್ಲರು ನೆರೆನೆರೆದು | ಠೀವಿಯಿಂದಲೆ ಕುಸುಮವೃಷ್ಟಿಯನೊಲಿದು ಸುರಿಸಿದರು ‖ ದೇವಗಂಧರ್ವರುರೆ ಪಾಡಿದ | ರಾವಿಭುವಿನಭಿಷೇಕ ಕಾಲದೆ | ಸಾವಧಾನದೊಳಾಡಿದರು ನರ್ತನವನಪ್ಸರರು ‖ ೩೯ ‖ ಧರಣಿಮಂಡಲವೆಲ್ಲ ಹೊಳೆದುದು | ತರತರದ ಪೈರುಗಳನಾನುತ | ಮೆರೆದುದು ಫಲಗಳಿಂದೆ ವೃಕ್ಷಗಳೆಲ್ಲಶೀಘ್ರದಲಿ ‖ ಪರಿಪರಿಯ ಪುಷ್ಪಂಗಳೆಲ್ಲವು | ಪರಿಮಳಾತಿಶಯವನು ತಾಳುತ | ಮೆರೆದವಾ ಪಟ್ಟಾಭಿಷೇಕ ಮಹೋತ್ಸವಸಮಯದೆ ‖ ೪೦ ‖ ಒಂದುಲಕ್ಷದಘೋಟಕಂಗಳ | ನೊಂದುಲಕ್ಷದ ಗೋವುಗಳನಂ | ತೊಂದುಲಕ್ಷದ ಧೇನುಗಳನಾ ರವಿಕುಲೋತ್ತಮನು ‖ ಸಂದ ಸಂತಸದಿಂದೆ ಕೊಟ್ಟನು | ಬಂದ ಭೂಸುರರೆಲ್ಲರಿಗೆ ಮನ | ಬಂದರೀತಿಯೊಳಾಂತು ದಕ್ಷಿಣೆಗಳನು ಕೈಯೊಳಗೆ ‖ ೪೧ ‖ ವಿನಯಭಾವವನಾಂತು ರಘುನಂ | ದನನು ಧರಣೀಸುರರಿಗಿತ್ತನು | ಮನದಣಿಯೆ ಮೂವತ್ತುಕೋಟಿಯ ರಾಮಟಂಕಿಗಳ ‖ ಧನಮಣಿಕನಕ ವಸ್ತ್ರಗಳನಾ | ದಿನದೆ ಕೊಟ್ಟನು ಮತ್ತೆ ಭೂಸುರ | ಗಣಕೊಲಿದು ಪಟ್ಟಾಭಿಷೇಕ ಮಹೋತ್ಸವದೊಳಂದು ‖ ೪೨ ‖ ತರಣಿಕಿರಣಗಳಂತೆ ಸಂತತ | ಮೆರೆವಮಣಿಗಣದಿಂದೆ ಕಂಗೊಳಿ | ಪುರುತರದ ಕಾಂಚನದ ಹಾರವನಿತ್ತು ನಿನಸುತಗೆ ‖ ಸುರಪತಿಯಸುತ ನಂಗದನಿಗುರೆ | ಮೆರೆಯುವಂಗದಗಳನು ಕೊಟ್ಟನು | ಧರಣಿಪಾಲಕ ರಾಘವೇಶ್ವರ ನತಿವಿನೋದದಲಿ ‖ ೪೩ ‖ ವರಮಣಿಗಳಿಂದೆಸೆವ ಮೌಕ್ತಿಕ | ಸರವನಾ ರಾಘವನು ಕೊಟ್ಟನು | ಧರಣಿಜಾತೆಯಕೈಗೆ ಬಹು ಸಂತೋಷವನುತಾಳ್ದು ‖ ಕೊರಳೊಳಾ ಹಾರವನು ಜಾನಕಿ | ಧರಿಸುತೀಕ್ಷಿಸುತಿದ್ದಳಂದತಿ | ಹರುಷದಿಂದಾ ರಾಘವೇಂದ್ರನ ಮುಖವ ನಡಿಗಡಿಗೆ ‖ ೪೪ ‖ ಜನಕನಂದನೆ ಯಿಂಗಿತವನರಿ | ದಿನಕುಲೋತ್ತಮ ನೆಂದನೆಲೆ ಸತಿ | ನಿನಗದಾವಕಪೀಂದ್ರನಾಗಿಸಿದ ನತಿಹರ್ಷವನು ‖ ವಿನುತಪಾರುಷ ವಿಕ್ರಮಮತಿಗ | ಳನವರತವಾವಕಪಿವರನೊಳು | ವಿನುತಿವಡೆದಿಹು ದಾತಗೀವುದು ಸರವನೀನೆನುತ ‖ ೪೫ ‖ ಆ ನುಡಿಯನಾಲಿಸುತ ಬೇಗನೆ |

ಜಾನಕಿ ತೆಗೆದುಹಾರವನು ಪವ । ಮಾನಸುತನಿಗೆ ಕೊಟ್ಟಳತಿ ಸಂತೋ
ಷವನುತಾಳ್ದು ॥ ವಾನರೇಂದ್ರನ ಮನ್ನಿಸುತಲಾ । ಮಾನಿನೀಮಣಿ ಮನ
ದಣಿಯೆ ಸುಂ । ಮಾನವನುತಾಳುತ್ತ ಕೊಟ್ಟಳು ವಸ್ತ್ರಭೂಷಣವ
॥ ೪೬ ॥ ದ್ವಿವಿದಮೈಂದಗವಾಕ್ಷಕೇಸರಿ । ಗವಯಶತಬಲಿ ನೀಳನಳಜಾಂ ।
ಬವರು ಮೊದಲಾದಖಿಳ ವಾನರವರರಭೀಷ್ಟಗಳ ॥ ತವಕದಿಂದರಿದಿತ್ತ
ನಾ ರಾ । ಘವನು ಸಂತೋಷವನು ತಾಳ್ದವ । ರವರ ಮನವೊಪ್ಪು
ವವೊಲುತ್ತಮ ರತ್ನದೊಡವೆಗಳ ॥ ೪೭ ॥ ಸಕಲವಾನರವೀರರಾಂತು ।
ಪ್ರಕಟ ವಸ್ತ್ರಾಭರಣಗಳ ನತಿ । ಸುಖದೆ ಹೊಗಳುತ ನಡೆದರಾಗಳೆ ತ
ಮ್ಮನೆಲೆಗಳಿಗೆ ॥ ಸಕಲ ಮರ್ಯಾದೆಗಳ ನಾಂತತಿ । ಭಕುತಿಯಿಂದಾರಘು
ಪತಿಗೆರಗಿ । ಸುಖದೊಳಾ ಸುಗ್ರೀವನಾತನ ಪುರಕೆನಡೆತಂದ ॥ ೪೮ ॥ ಮ
ನುಕುಲೋತ್ತಮ ರಾಮಚಂದ್ರನ । ಘನವಿನುತ ಪಟ್ಟಾಭಿಷೇಕವ । ಮ
ನವೊಲಿದು ನೋಡುತ ವಿಭೀಷಣನಾಂತು ಮನ್ನಣೆಯನು ॥ ತನಗೆ ರಾಘ
ವನಿತ್ತ ನಿಜಕುಲ । ಧನವನಾಂತು ಸಚಿವರೊಡನೆ ರಾ । ಮನನುಹೊ
ಗಳುತ ಲಂಕೆಗೈತಂದನತಿ ವೇಗದಲಿ ॥ ೪೯ ॥ ಸತಿಸಹಿತ ಪಟ್ಟಾಭಿಷೇ
ಕವ । ಹಿತದೆ ರಾಘವನಾಂತು ಶತ್ರುರ । ಹಿತನೆನಿಸಿ ಕೊಂಡವನಿತಲವೆಲ್ಲ
ವನು ಪಾಲಿಸುತ ॥ ಅತಿಭರದೆ ಯುವರಾಜಪದದೆ ಭ । ರತನನಿರಿಸುತ ಸ
ಕಲತರದ । ಕ್ರತುಗಳನು ಮಾಡಿದನು ವಿಪ್ರರಿಗಿತ್ತು ದಕ್ಷಿಣೆಯ ॥ ೫೦ ॥
ಅವನಿಪತಿರಾಘವ ನಖಿಳ ಬಾಂ । ಧವರೊಡನೆ ಸಲಹಿದನು ನಲವಿಂ । ದ
ವನಿಯನು ಹನ್ನೊಂದುಸಾವಿರ ವರ್ಷಗಳತನಕ ॥ ದಿವಿಜರನು ಸಂತು
ಷ್ಟಿವಡಿಸುತ । ಸವಿನಯದೊಳಾಗಿಸಿದನು ಸಕಲ । ವಿಧದ ಪೌಂಡರಿಕಾ
ಶ್ವಮೇಧ ಸುವಾಜಿಪೇಯಗಳ ॥ ೫೧ ॥ ಭೂರಿದಕ್ಷಿಣೆಗಳನು ವಿಪ್ರರಿ ।
ಗಾ ರಘುವರನು ಕೊಡುತೆಸಗಿದನು । ನೂರು ಹಯಮೇಧಂಗಳ ನಡಿ
ಗಡಿಗತಿ ಹರ್ಷದಲಿ ॥ ಧಾರಿಣೀಸುತೆಯ ನೊಲಿಸುತ ರಘು । ವೀರನೀ ಧ
ರಣೀತಲವನು ವಿ । ಚಾರಿಸುತ ಸಲಹಿದನು ಸಂತಸವಡಿಸುತೆಲ್ಲರನು ॥
॥ ೫೨ ॥ ಉರಗಬಾಧೆಗಳಿಲ್ಲ ರೋಗ ನಿ । ಕರದಭೀತಿಗಳಿಲ್ಲ ಹೆಂಗಸ ।
ರರಿತು ತಿಳಿದವರಲ್ಲವು ಪತಿವಿಹೀನ ದುಃಖವನು ॥ ಧರೆಯೊಳೆಲ್ಲಿಯು
ಮಿಲ್ಲ ಕಳ್ಳಜ । ನರ ಭಯಗಳು ವಿಷಾದವನೆಸಗು । ತಿರುವ ಬಾಧೆಗಳಿ
ಲ್ಲ ರಾಮಸ್ವಾಮಿರಾಜ್ಯದಲಿ ॥ ೫೩ ॥ ಮನುಜರೊಳ ನರ್ಥಂಗಳೆಲ್ಲಿಯು ।
ಜನಿಸುತಿರಲಿಲ್ಲೆಂದಿಗು ಮರಿಯೆ । ಮನುಜನಾವನು ಪುಸಿಯಮಾತನು
ಪೇಳುತಿರಲಿಲ್ಲ ॥ ತನಯರಿಗೆ ಮಾಡುತಿರಲಿಲ್ಲವು । ಜನರಪರಕರ್ಮವನು

ಪರವಂ । ಚನೆಯ ಯೋಚನೆಯಿಲ್ಲ ರಾಮಸ್ವಾಮಿರಾಜ್ಯದಲಿ ॥ ೫೪ ॥
ಎಲ್ಲರುಂ ಸಂತೋಷದಿಂದಿಹ । ರೆಲ್ಲರುಂ ದುಃಖವನು ತೊರೆದಿಹ । ರೆಲ್ಲ
ರುಂ ಕ್ಷೇಮವನುಹೊಂ ದಿರುತಿದ್ದರನುದಿನವು ॥ ಎಲ್ಲರುಂ ಪರಹಿತವನೆ
ಸಗುವ । ರೆಲ್ಲರುಂ ಧರ್ಮನಿರತರೆನಿಪ । ರೆಲ್ಲಕಾಲದೊಳೈದೆ ರಾಮಸ್ವಾ
ಮಿ ರಾಜ್ಯದಲಿ ॥ ೫೫ ॥ ಪುತ್ರರನು ಪೌತ್ರರನು ಪಡೆದು ಕ । ಳತ್ರರಿಂ
ದೆ ನಲಿಯುತಖಿಳ ಸ । ನ್ಮಿತ್ರರೊಡನೆ ಸಹಸ್ರ ವತ್ಸರತನಕ ಮಾನ
ವರು ॥ ಸತ್ರಮಂಟಪ ವನಗಳನುಸ । ರ್ವತ್ರಕಟ್ಟಿಸಿ ಬಾಳುತಿದ್ದರು ।
ಮಿತ್ರಕುಲತಿಲಕನಹ ರಾಮಸ್ವಾಮಿರಾಜ್ಯದಲಿ ॥ ೫೬ ॥ ನಿತ್ಯಪುಷ್ಪಂ
ಗಳನು ಬಿಡುವುವು । ನಿತ್ಯಫಲಗಳ ನೀವುತಿರ್ಪುವು । ನಿತ್ಯವುಂ ಪಿರಿಪಿರಿ
ಯ ಶಾಖೆಗಳಾಂತು ವಿಟಪಿಗಳು ॥ ಭೃತ್ಯರಾಗುತ ರಾಮನಾಮವ । ನ
ತ್ಯಧಿಕಭಕ್ತಿಯೊಳು ನೆನೆವರು । ನಿತ್ಯವುಂ ಜನರೆಲ್ಲ ರಾಮಸ್ವಾಮಿ ರಾ
ಜ್ಯದಲಿ ॥ ೫೭ ॥ ರಾಮ ಕರುಣಾಧಾಮ ಸೀತಾ । ರಾಮ ಸುಜನಪ್ರೇ
ಮ ಶುಭಕರ । ನಾಮ ರವಿಕುಲದುಗ್ಧ ವಾರಿಧಿಸೋಮ ರಣಭೀಮ ॥
ಸೋಮಧರ ಕೋದಂಡ ದಳನೋ । ದ್ದಾಮ ಯನ್ನುತ ಪೊಗಳುತಿದ್ದ
ರು । ರಾಮನನು ಜನರೆಲ್ಲ ರಾಮಸ್ವಾಮಿರಾಜ್ಯದಲಿ ॥ ೫೮ ॥ ರಾಮಮ
ಯವಾಯ್ತು ಜಗವೆಲ್ಲವು । ಭೂಮಿಸುತೆಯೊಡನಾ ರಘೂತ್ತಮ । ನೀ
ಮಹೀತಲವೆಲ್ಲವನು ಸಲಹುತಿರೆಸಂತತವು ॥ ಕಾಮಲೋಭಾದಿಗಳತೊ
ರೆದು । ಪ್ರೇಮದಿಂ ದಿರುತಿದ್ದರೆಲ್ಲರು । ರಾಮನಂ ಜಾಸಿಸುತ ರಾಮ
ಸ್ವಾಮಿರಾಜ್ಯದಲಿ ॥ ೫೯ ॥ ಕಾಲಕಾಲಕೆ ಮಳೆಯುತಪ್ಪದೆ । ಬೀಳು
ತಿದ್ದುದು ಸೌಖ್ಯಕರವೆನೆ । ಗಾಳಿಬೀಸುತಲಿದ್ದುದತಿ ಸಂಮುದವನಾಗಿಸು
ತ ॥ ಶೀಲವನುಕೈಕೊಂಡು ರಘುಭೂ । ಪಾಲಕಥೆಯನು ಮನೆಮನೆಗ
ಳಲಿ । ಕೇಳುತಿದ್ದರು ಜನರು ರಾಮಸ್ವಾಮಿರಾಜ್ಯದಲಿ ॥ ೬೦ ॥ ಧರಣಿ
ಸುರರು ಕ್ಷತ್ರಿಯರು ವೈ । ಶ್ಯರು ಸಕಲಶೂದ್ರರು ಮೊದಲಹ ಜ । ನರು
ನಿರತರಾಗಿದ್ದರವರವರ ಸ್ವಕರ್ಮದಲಿ ॥ ಪರಿಪರಿಯ ಸದ್ಧರ್ಮಗಳನಾ ।
ಚರಿಸುತ ಮನುಜರೆಲ್ಲಪುಣ್ಯಾ । ತ್ಮರೆನಿಸಿದ್ದರನುದಿನ ರಾಮಸ್ವಾಮಿರಾ
ಜ್ಯದಲಿ ॥ ೬೧ ॥ ಈತಿಬಾಧೆಗಳನ್ನು ಕಾಣದೆ । ಭೂತಹಿತರೆಂದೆನಿಸಿ ನಿ
ತ್ಯವು । ನೀತಿಮಾರ್ಗದೆನಡೆಯುತಾ ಕುಲಧರ್ಮವನು ಬಿಡದೆ ॥ ಭೂತ
ಲದಜನರೆಲ್ಲ ರತಿಸು । ಪ್ರೀತಿಯಿಂದಲೆ ಪೊಗಳುತಿದ್ದರು । ಸೀತೆಯ
ನು ಸಂತತವು ರಾಮಸ್ವಾಮಿರಾಜ್ಯದಲಿ ॥ ೬೨ ॥ ಮಡದಿ ತಮ್ಮಂದಿರಸ
ಹಿತ ಜನ । ರೊಡೆಯ ರಘುನಾಥನು ಪೊರೆದನೀ । ಪೊಡವಿಯನು ಹ

ನ್ನೊಂದುಸಾವಿರ ವರ್ಷಪರಿಯಂತ ॥ ಪೊಡವಿಮಗಳಹ ಸೀತೆರಾಘವ । ನೊಡನೆ ಸಕಲವಿಧದ ಸುಖಂಗಳ । ನಡಿಗಡಿಗೆ ತಾನನುಭವಿಸುತಿದ್ದಳರ ಮನೆಯೊಳಗೆ ॥ ೬೩ ॥ ಆ ಕುಶಲವರಿಗೊಲಿದು ಮುನಿವಾ । ಲ್ಮೀಕಿಪೇ ಳಿರುವಾದಿಕಾವ್ಯದೊ । ಳೀ ಕಥೆಯು ಸಂಮಿಳಿತವಾಗಿಹುದು ಜನಜನಿತ ಮೆನೆ ॥ ಈ ಕಥೆ ಪರಮಪಾವನವೆನಿಸ್ಪು । ದೀಕಥೆ ದುರಿತಗಳನುಹರಿಸು ವು । ದೀಕಥೆಗೆ ಸರಿಯುಂಟೆ ಭೂತಲದೊಳಿತರಕಥೆಗಳು ॥ ೬೪ ॥ ಇದು ವಿಮಳ ಕೀರ್ತ್ತಿಕರವಾಗಿಹು । ದಿದುಮಹೀಪಾಲರಿಗೆ ವಿಜಯುವ । ನೊ ದಗಿಸುತ್ತಿಹುದಿದು ವಿವಿಧಸೌಖ್ಯಗಳನಾಗಿಪುದು ॥ ಇದುಜಗದೊಳತಿ ಧ ನ್ಯವೆನಿಸಿಹು । ದಿದುಸಕಲ ಸಂಪದಗಳ ನೆಸಗು । ವುದಿದು ಮುನಿವಾ ಲ್ಮೀಕಿಯಿಂದೆ ವಿರಚಿತವಾಗಿಹುದು ॥ ೬೫ ॥ ಮೇದಿನೀಬಾಲಕಿಯ ಚ ರಿತೆಯ । ನಾದರದೊಳನುದಿನವು ಮೆಡಬಿಡ । ದೋದಿದರೆಕೇಳದರೆ ಮಾ ನವನಾವನಾದೊಡೆಯು ॥ ಈ ಧರಣಿಯೊಳು ತನ್ನ ಕಿಲ್ಬಿಷ । ಬಾಧೆಗಳ ಪರಿಹರಿಸಿಕೊಳ್ಳುತ । ಸಾಧಿಸುವ ನವಸಾನದೊಳು ಕೈವಲ್ಯಪದವಿಯ ನು ॥ ೬೬ ॥ ಧನವಿಹೀನರು ಧನವಪಡೆವರು । ತನಯುರಿಲ್ಲದ ಜನರು ಸ ಜ್ಜನ । ರೆನಿಪಮಕ್ಕಳನೈದುವರು ಕೇಳುತ್ತಲೀಕಥೆಯು ॥ ಮನುಜಪಾ ಲಕನೀ ವಿಮಲಕಥೆ । ಯುನು ಮನವೊಲಿದು ಕೇಳದೊಡೆ ಮೇ । ದಿನಿ ಯುನಾಳುವನು ಚಿರಕಾಲವು ಜಯಿಸಿಹಗೆಗಳನು ॥ ೬೭ ॥ ಪುತ್ರರನು ಪೌತ್ರರನು ಹೊಂದಿ ಧ । ರಿತ್ರಿಯೊಳು ಸುಖಿಸಿದಪರೀ ಸುಚ । ರಿತ್ರಿ ಯುನು ಕೇಳದೊಡಬಲೆಯುರು ಭಕ್ತಿಭಾವದಲಿ ॥ ಶತ್ರುಗಳಗೊಳಗಾಗ ದೆ ಸ । ರ್ವತ್ರ ಸಂತೋಷಪಡುತಿಹನು ಪ । ವಿತ್ರಮೆಂದೆನಿಪೀ ಕಥೆ ಯುನಾಲಿಸುವ ಮಾನವನು ॥ ೬೮ ॥ ಪಿರಿಯ ದುರ್ಗಂಗಳನು ಕಳೆದು । ತ್ವರಿತದಿಂದೈದುವರು ತಮ್ಮ ನ । ಗರಿಗೆ ಸೀತಾಕಥೆಯುನಾಲಿಪ ಮಾನವ ರಿಳೆಯೊಳು ॥ ನರರು ಸದ್ಭಕ್ತಿಯುನು ತಾಳ್ದೀ । ಚರಿತೆಯುನುಕೇಳದೊ ಡೆ ಜೀವಿಸು । ವರು ಬಹುಳದಿನತನಕ ದೀರ್ಘಾಯುಷ್ಯವನುಪಡೆದು ॥ ॥ ೬೯ ॥ ಪುರಕೆಸುಖವಾಗಿ ನಡೆತಂದನ । ವರತ ತನ್ನಯುಮನೆಯೊಳಗೆ ನಂ । ಟರೊಳು ಸೇರುತ್ತಪ್ರವಾಸಿ ಹರುಷವನೈದುವನು ॥ ನರರುಮನ ದಿಷ್ಟಾರ್ಥಗಳ ಪಡೆ ॥ ವರಿಳೆಯೊಳು ದೇವತೆಗಳೆಲ್ಲರು । ಹರುಷವನು ಹೊಂದುವರು ಸೀತಾಚರಿತೆಯುನುಕೇಳ್ದು ॥ ೭೦ ॥ ಪರಮಭಕ್ತಿಯುನಾಂ ತು ಸೀತಾ । ಚರಿತೆಯುನು ಕೇಳದೊಡೆ ಸತ್ಪು । ತ್ರರನು ಹೊಂದುತಿಹರು ರಜಸ್ವಲೆಯುಪ್ಪವನಿತೆಯುರು ॥ ಧರೆಯೊಳು ಪುರಾತನವೆನಿಸಿ ದೀ । ಚ

ರಿತೆಯನು ಪೂಜಿಸಿಪಠಿಸಿ ತರ | ತರದ ಪಾಪಗಳಿಂದೆ ಬಿಡುಗಡೆಯಾಗು ವರು ಜನರು ॥ ೭೧ ॥ ಧರಣಿಪಾಲಕರೀ ಚರಿತ್ರೆಯೊ | ಳರು ವೆಮರ್ಮಂ ಗಳನು ಧರಣೀ | ಸುರರಗೆಶೆಯಿಂದರಿತು ಕೊಂಡರೆ ಬಹುವಿಶದವಾಗಿ ॥ ಅರಿಗಳನು ಜಯಿಸುತ್ತಪೊರೆವರು | ಧರಣಿಮಂಡಲವೆಲ್ಲವನು ನಂ | ಟ ರಸಹಿತಖಿಳ ಸಂಪದಂಗಳನಾಂತು ಸಂತತವು ॥ ೭೨ ॥ ಧರೆಯೊಳೀಕಥೆ ಯು ನೊಲಿದೋದುವ | ನರನನಾ ರಘುನಾಥನೀಕ್ಷಿಸಿ | ಹರುಷವನು ಹೊಂದುವನು ಸೀತಾಚರಿತೆಯೆಲ್ಲರಿಗೆ ॥ ವಿರಚಿಪುದು ಧನಧಾನ್ಯವೃದ್ಧಿ ಯು | ನುರುತರಕುಟುಂಬ ದಭಿವೃದ್ಧಿಯು | ನುರೆಮೆರೆವ ರಮಣಿಯರ ನುತ್ತಮತರದ ಸುಖಗಳನು ॥ ೭೩ ॥ ಹಿಂದೆನಡೆದಿಹುದಿಂತು ಧರಣೀ | ನಂದನೆಯಕಥೆ ಯಿದನಮಲಮತಿ | ಯಿಂದೆಪಠಿಸಿರಿ ನಿಮಗೆ ಮಂಗಳ ಗಳೊದಗುತ್ತಿಹವು ॥ ಮುಂದಿದನು ಸಲೆವಿಸ್ತರಿಸಿರಿ ಮು | ಕುಂದನಬ ಲವು ಹೆಚ್ಚಲಿನಿಮಗೆ | ಬಂದುಸೇರುವುವು ಸಕಲವಿಧದ ಭೋಗಭಾಗ್ಯ ಗಳು ॥ ೭೪ ॥ ದೇವತೆಗಳೀ ಕಥೆಯನಾಲಿಸಿ | ತಾವು ಸಂತೋಷವನು ತಾಳುವ | ರೀ ವಿಮಲತರಸಚ್ಚರಿತೆಯನು ಕೇಳ್ದುಪಿತೃಗಳು ॥ ಸಾವ ಧಾನದೆ ತುಷ್ಟಿವಡೆವರು | ದೇವಲೋಕದೊಳುವಸಿಸುವನೀ | ಪಾವನ ತರ ಕಥೆಯನುಬರೆಯುವ ಮನುಜನನವರತ ॥ ೭೫ ॥ ಆದಿಕಾವ್ಯವು ದೆನಿಸುತನು ದಿನ | ಮೇದಿನಿಯೊಳತ್ಯುನ್ನತಿ ವಡೆದು | ಸಾಧಕವೆನಿಸಿ ಕೊಂಡಿರುವ ರಾಮಾಯಣಕಥೆಯೊಳು ॥ ಮೇದಿನೀಸುತೆಯ ಕಥೆಯೆಲ್ಲ ವ | ನಾದಿಯಿಂದವಲೋಕಿಸುತತಿ ವಿ | ನೋದದಿಂದೆ ವಿರಚಿಸಿದನು ನರ ಸಿಂಹನೀವಿಧದೆ ॥ ೭೬ ॥ ಮುನ್ನ ಕುಶಲವರಿಬ್ಬರಿಗೆ ಸಂ | ಪನ್ನಮತಿ ವಾಲ್ಮೀಕಿ ಪೇಳಿದ | ಸನ್ನುತಿಯನಾಂತೆಸೆವ ರಾಮಾಯಣದಕಥೆಯೊಳ ಗೆ ॥ ಮನ್ನಣೆವಡೆದು ರಂಜಿಪೀಕಥೆ | ಯುನ್ನ ನರಸಿಂಹನು ರಚಿಸಿದ ನು | ಕನ್ನಡದೆ ವರಭಾಮಿನೀಷಟ್ಪದಿಯ ರೂಪದಲಿ ॥ ೭೭ ॥ ಇದು ನವೀನವೆನುತ ನಿರಾಕರಿ | ಸದೆ ಚಮತ್ಕೃತಿ ಲಕ್ಷಣ ರಸಗ | ಳದರೊ ಳಿಲ್ಲವೆನುತ್ತ ದೂಷಿಸದೆ ಸಲೆಕೋಪಿಸದೆ ॥ ಇದುಮಹೀಸುತೆಯ ಘನಕ ಥೆಯೆನು | ತಿದನು ನಿತ್ಯವುಮನವೊಲಿದು ಕೇ | ಳ್ವುದಿದರಲ್ಲಿ ವಿಚಾರವ ನಿಡದೆ ಸತತ ಸಜ್ಜನರು ... ... ॥ ೭೮ ॥

ಇಂತು ಮೂವತ್ತನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೧೬೧೨.



# ಮೂವತ್ತೊಂದನೆಯ ಅಧ್ಯಾಯ.



**ಸೂಚನೆ** ॥ ಸುರತರಂಗಿಣಿಯ ನೊಲಿದರ್ಚಿಸಿ ।
ಧರಣಿಸುತೆ ಪತಿಯೊಡನೆ ಯಾತ್ರೆಯ ।
ವಿರಚಿಸುತ ನಡೆತಂದಳಾಚ್ಯವನಮುನಿ ಯಾಶ್ರಮಕೆ ॥

ಬಂದುದಿನ ವೇಕಾಂತ ಭವನದೊ । ಳಿಂದುಮುಖಿ ಭೂಮಿಸುತೆ ಪತ್ರಿಗಿಂ । ತೆಂದು ನುಡಿದಳು ಚರಣಕಾನತಳಾಗಿ ಕೈಮುಗಿದು ॥ ಹಿಂದೆ ತಂದೆಯ ಮಾತ ನಾಲಿಸಿ । ಬಂಧು ಜಾಲವ ನುಳಿದು ಕಡುಜವ । ದಿಂದರಣ್ಯಕೆ ಪೋಗಿ ಗಂಗಾನದಿಯ ತೀರದೊಳು ॥ ೧ ॥ ನಾವೆ ಯೊಳು ಸತಿ ಸೋದರ ರೊಡನೆ । ನೀವು ಕುಳಿತಂದೈತರುತ್ತಿರೆ । ದೇವಗಂಗೆಯ ಮಧ್ಯಭಾಗದೊ ಳಂಜಿಕಂಪಿಸುತ ॥ ದೇವಿನಾಂ ವಂದಿಪೆನಿನಗೆ ನೀಂ । ಸಾವಕಾಶವ ನಾಗಿಸದೆ ಕರು । ಣಾವಲೋಕನ ದಿಂದೆ ಸೇರಿಸು ನಮ್ಮ ನಾಕಡೆಗೆ ॥ ೨ ॥ ವಿಪಿನ ವಾಸವನೆಲ್ಲ ಕಳೆಯುತ । ವಿಪುಲ ಸಂಮುದದಿಂದೆ ನಗರಕೆ । ಸುಪಥದೊಳು ಪತಿದೇವರರೊಡನೆ ಪೋಗಿ ನಾಂಮತ್ತೆ ॥ ಸಪರಿ ವಾರದೊಳಲ್ಲಿ ಗೈತಂ । ದುಪಚರಿಸಿ ಪೂಜಿಸುವೆ ನಿನ್ನನು । ಚಪಲವಿಲ್ಲದೆ ನಿನಗೆ ಮಾಂಸಾದಿಗಳ ನರ್ಪಿಸುತ ॥ ೩ ॥ ನಿನಗೆ ಸಂತೋಷವನು ಮಾಡುವೆ । ನೆನುತ ಗಂಗಾನದಿಗೆ ನಮಿಸುತ । ವಿನಯದೆ ಹರಸಿಕೊಂಡಿಪೆನು ಲಂಕಾ ನಗರ ದಿಂದ ॥ ಧನದನ ವಿಮಾನದೊಳು ನಾನಾ । ದಿನದೊಳೈತರುವಾಗ ನನ್ನಯ । ಮನಕೆ ಬಾರದೆ ಹೋಯ್ತು ನೆನಪಿಗೆ ಬಂದಿಹುದ ದಿಂದು ॥ ೪ ॥ ಮನುಜಪತಿ ಕೇಳೆನ್ನಭೀಷ್ಟವ । ಮನಕೆ ತಂದೀಡೇರಿಸಲು ಬೇ । ಕೆನುತ ಬೇಡುವೆ ನಿನ್ನ ಪದಪಂಕೇಜ ಕಾನೆರಗಿ ॥ ಜನನಿ ಸೋದರ ಬಂಧು ಸುಹೃ । ಜ್ಜನರ ನೊಡಗೊಂಡು ತೆರಳುವುದಾ । ವಿನುತ ಗಂಗಾ ಸರಯು ಸಂಗಮ ಕೆನುತ ಬೇಡಿದಳು ॥ ೫ ॥ ಸತಿಯ ಮಾತನು ಕೇಳ್ದು ರಾಘವ । ನತಿವಿನೋದವ ನಾಂತು ನಿನ್ನಭಿ । ಮತವ ನೀಡೇರಿಸುವೆ ನನ್ನುತ ಪೇಳ್ದು ಜಾನಕಿಗೆ ॥ ಅತಿ ಭರದೊಳಾ ಲಕ್ಷ್ಮಣಂಗತಿ । ಹಿತದೆಪೇಳ್ದನು ನಾಳೆ ಪುರದೊಳ । ರುತಿಪ ಜನಗಳ ಸಹಿತ ಯಾತ್ರೆಗೆ ಪೋಪೆ ನೆಂದೆನುತ ॥ ೬ ॥ ನೀನು ಬೇಕಾಗಿರ್ಪ ವುಗಳನು । ಸಾನು ನಯದಿಂದೊದಗಿ ಸುವುದು ನಿ । ದಾನ ಮಾಡದೆ ನಮ್ಮಪು

ರದ ಸಮಸ್ತಮಾನವರು ॥ ಸಾನುರಾಗದೆ ನಮ್ಮೊಡನೆ ಗಂ । ಗಾನದಿಯ ಬಳಿಗೆ ಬರುವೆಂದದೆ । ನೀನು ನೇಮಿಪುದೆಂದು ರಾಮನು ಪೇಳ್ದ ನನುಜನಿಗೆ ॥ ೭ ॥ ಅಣ್ಣ ನಾಜ್ಞೆಯ ನಾಂತು ಘನ ಸಂ । ಪನ್ನ ಮತಿ ಸೌಮಿತ್ರಿ ಬೇಗನೆ । ತನ್ನ ಮನ ಬಂದಂದದೆ ಸಕಲ ಪರಿಕರಂಗಳನು ॥ ಮುನ್ನ ಸಿದ್ಧ ಗೊಳಿಸಿಯೆ ಪುರಜನ । ರನ್ನು ಯಾತ್ರೆಗೆ ನಾಳೆ ಪೊರಡುವು । ದೆನ್ನುತ ತಿಳುಹಿ ಬಂದನಾರಘು ನಂದನನ ಬಳಿಗೆ ॥ ೮ ॥ ಚರಣಕಾನತ ನಾಗಿ ಲಕ್ಷ್ಮಣ । ನುರುತರದ ಭಕ್ತಿಯನು ತಾನಾಂ । ತರುಹಿದನು ಕೇಳಣ್ಣ ರಾಘವ ನೀನು ನುಡಿದಂತೆ ॥ ಪರಿಪರಿಯ ವಸ್ತುಗಳನಿಂದತಿ । ಭರದೊಳಣಿಮಾಡಿಸಿ ಸಮಸ್ತ ಜ । ನರನು ಯಾತ್ರೆಗೆ ನಾಳೆಬರುವಂತರುಹಿಸಿದೆನೆನುತ ॥ ೯ ॥ ಮರುದಿನದೆ ರಘುನಾಥನೆದ್ದಾ । ತರಣಿ ಮೂಡದ ಮುನ್ನ ನಿರ್ಮಲ । ತರದ ನೀರೆಳು ಮಿಂದು ವಿರಚಿಸಿ ನಿತ್ಯಕರ್ಮಗಳ ॥ ಪುರದೊಳಿರುವ ಸಮಸ್ತ ಜನರನು । ಕರೆಯಿಸಿ ಕೊಳುತಮೇಲೆನಿಪ ಶುಭ । ಕರ ವರ ಮುಹೂರ್ತ ದೊಳು ಯಾತ್ರೆಗೆ ಪೋಗಲನುವಾದ ॥ ೧೦ ॥ ಪುರದ ಕಾವಲಿ ಗಾಸುಮಂತ್ರನ । ನಿರಿಸಿ ನಗರದಮಾನವ ರೊಡನೆ । ವರವಿಮಾನದೊಳಾ ಜನನಿಯರ ನೆಲ್ಲಕುಳ್ಳಿರಿಸಿ ॥ ಕರಿಯ ಬೆನ್ನಿನ ಮೇಲೆ ಕೂಡಿಸಿ । ಧರಣಿ ಜೆಯನಾಬಳಿಕ ತಾನತಿ । ಭರದೊಳೇರಿದ ನೊಂದು ಮದಕುಂಜರವ ನಾರಾಮ ॥ ೧೧ ॥ ಪೊಡವಿ ಯಾಣ್ಮನಹ ರಘುಭೂವರ । ನೊಡನೆ ಗಂಗಾಸರಯು ನದಿಗಳ । ರಡರಸಂಗಮ ದೆಡೆಗೆ ಬಂದನು ರಾಜ ವಿಭವದಲಿ ॥ ಕಡು ಜವದೊಳಾ ಸೀತೆ ಪೊರಮ । ಟ್ಟಡಿಗಡಿಗೆ ವನಸಿರಿಯ ನೋಡುತ । ನಡೆದಳು ಸಖೀಜನಗಳ ಸಹಿತ ಯಾತ್ರೆ ಗೆಯ್ವುದಕೆ ॥ ೧೨ ॥ ನುಡಿದರು ಪಲತೆರದ ಬಿರುದುಗಳ । ನಡಿಗಡಿಗೆ ವಾದ್ಯಂಗಳೆಲ್ಲವ । ಹೊಡಿಸಿದರು ಹೊಗಳವರು ಮುಂಗಡೆ ವಂದಿ ಮಾಗಧರು ॥ ಒಡೆಯನಿಗೆ ಬೆಳುಗೊಡೆಯ ನಿಕ್ಕಿದ । ರೆಡಬಲಗಳೊಳು ಚಾಮರ ಗಳನು । ಪಿಡಿದು ಬೀಸಿದ ರಾಡಿದರು ಗಣಿಕೆಯರು ನಾಟ್ಯವನು ॥ ೧೩ ॥ ಬಂದು ಹೊಕ್ಕನು ಕಂಗೊಳಿಪ ವನ । ಮಂದಿರವನಾ ಸತಿಸಹಿತ ರಘು । ನಂದನನಖಿಳ ಮಾನವರ ನೊಲಿಸುತ್ತ ಶೀಘ್ರದಲಿ ॥ ಬಂದ ಭೂಸುರ ರನ್ನು ಭೋಜನ । ದಿಂದೆ ತುಷ್ಟಿ ಪಡಿಸುತ ಕೊಟ್ಟನು । ಚಂದನ ಕುಸುಮ ದಕ್ಷಿಣಾ ತಾಂಬೂಲ ಗಳ ನೊಲಿದು ॥ ೧೪ ॥ ಬಂಧು ಮಿತ್ರರ ಕೂಡೆ ಸಂತಸ । ದಿಂದೆಭೋಜನ ವನ್ನು ಮಾಡುತ । ಸುಂದರಾಂಗನೆ ಸೀತೆಸಹಿತಾ ರಾಘವೇಶ್ವರನು ॥ ಅಂದು

ವೇದ ಪುರಾಣ ಶಾಸ್ತ್ರಗ | ಳಂದವನು ಕೇಳುತ್ತ ಸಂಧ್ಯಾ | ವಂದನಾದಿ ಗಳೆಸಗಿ ಜಾನಕಿ ಸಹಿತ ನಿದ್ರಿಸಿದ ‖ ೧೫ ‖ ಹರುಷ ದಿಂದೆರಡನೆಯ ಜಿನ ವಿ೦ | ತಿರುತ ವನ ಮಂದಿರದೊಳಾ ರಘು | ವರನು ಬಳಿಕಾ ಮೂರ ನೆಯ ದಿನ ದುದಯ ಕಾಲದೊಳು ‖ ಪುರದ ಮಾನವ ರೆಲ್ಲರೊಡನತಿ| ಭ ರದೊಳಾ ವಿಪಿನದೊಳು ಬಂದನು | ಧರಣಿ ಜಾತೆಗೆ ತೋರಿಸುತ ಸಕಲ ವಿಭವಂಗಳನು ‖ ೧೬ ‖ ಮುಂದಕೆಬರುತ ಪುರದಮಾನವ | ರಿಂದೆರಾಘವ ನೊಂದು ತಾಣದೊ | ಳೊಂದು ದಿನ ವೊಂದೆಡೆಯೊ ಳೆರಡುದಿನಗಳು ವೊಂದುಕಡೆ ‖ ಚಂದದಿಂದಲೆ ಮೂರು ದಿನವಿರು | ತೊಂದು ತಿಂಗಳ ತನಕ ಪಯಣವ | ನಂದೆಸಗಿ ಮುದ್ಗಲ ಮುನಿಪ ನಾಶ್ರಮಕೆ ನಡೆತಂ ದ ‖೧೭ ‖ ಅರಸಿ ಯೊಡನಾ ಮುದ್ಗಲ ಮುನೀ | ಶ್ವರನಡಿಗೆರಗಿ ರಾಘವ ನು ಪರಿ | ಪರಿಯೊಳಾತನ ನೊಲಿದು ಪೂಜಿಸಿ ಕೂಡೆ ಮನ್ನಿಸುತ ‖ ಹ ರಿವ ಸರಯೂ ಜಾಹ್ನವಿಗಳಾ | ಚರಿತೆಯಾಲಿಸಿ ದದ್ರಿನಾಮಕ | ಪುರವ ಕಲ್ಪಿಸಿ ಮುನಿಗೆ ಕೊಟ್ಟನು ವಸಿಸಿನೀವೆನುತ ‖ ೧೮ ‖ ಕರೆದು ಸೀತೆಯ ನಿಂತು ರಘು ಭೂ | ವರನು ಪೇಳದ ನೆಲೆ ಮಹೀಸುತೆ | ಪುರದ ನಾರಿ ಯರೆಲ್ಲರ ನೊಲಿಸು ತತ್ತ್ಯರ ಕೂಡಿ ‖ ಪರಮ ಪಾವನ ವೃದ್ಧಗಂಗಾ | ಸರಯುಗಳ ಸಂಗಮಕೆ ಸಾದೀ | ಗುರು ಜನಂಗಳು ಪೇಳುವಂದದೆ ನೀನು ಪೂಜಿಸಿಬಾ ‖ ೧೯ ‖ ಬಳಿಕ ನೀನುಂನಾನು ಮಾಮು | ದ್ಗಲ ಮು ನಿಪ ನಾಶ್ರಮ ದೊಳುರೆ ಕಂ | ಗೊಳಿಸು ತಿರ್ಪಮರಾಪಗಾಸರ ಯುಗ ಳಸಂಗಮದೆ ‖ ನಲಿದು ಗಂಗೆಯ ನರ್ಚಿಸುವ ಕೇ | ಳೆಲೆ ಮಹೀಸುತೆ ಯೆನುತ ಪೇಳ್ದನ | ಕುಲ ಲಲಾಮನು ಕಳುಹಿ ಕೊಟ್ಟನು ಕೂಡೆ ಮ ಡದಿಯನು ‖ ೨೦ ‖ ಜನಕಸುತೆ ಪೂಜೋಪ ಕರಣ ಗ | ಳ ನಣಿಮಾಡಿ ಸಿಕೊಂಡು ರಂಜಿಸ | ಕನಕ ಪಾತ್ರೆಯೊಳರಿಸಿ ಕೊಳ್ಳುತ ಬಹುಳ ಶೀ ಘ್ರದಲಿ ‖ ಧನದನ ವಿಮಾನವ ನಡರಿದಳು | ವಿನಯ ದಿಂದತ್ತೆಯರ ಸಹಿ ತಿನ | ಯನ ಪದಕಮಲವನ್ನು ಜಾನಿಸಿ ತನ್ನಮನದೊಳಗೆ ‖ ೨೧ ‖ ನಿಮಿಷ ಮಾತ್ರದೊ ಳಾವಿಮಾನವು | ಸುಮನಸರಮಾರ್ಗ ದೊಳುನಡೆ ತಂ | ದಮಲ ಗಂಗಾಸರಯುಗಳ ಸಂಗಮಕೆ ಸರಿಯಾಗಿ ‖ ಕ್ರಮದೆ ೞ ಳಾಗಸ ದಿಂದಿಳಿಯುಲೊಡ | ನಮಿತಮೋದದೆ ಮಹಿಗಿಳಿದ ಳಾ | ಕ್ಷಮೆ ಯ ಸುತೆ ಯಿಕ್ಕೆಲದೆ ಕೈಗೊಡುತಿರಲು ಗೆಳತಿಯರು ‖ ೨೨ ‖ ಗಂ ಗೆಯಬಳಿಗೆ ಬಂದು ವಂದಿಸಿ | ಮಂಗಳಾಂಗನೆ ಸೀತೆಕೊಟ್ಟಳು | ಗಂ ಗೆಗಾಮೊರ ಬಾಯಿನಂಗಳ ನಧಿಕಭಕ್ತಿಯಲಿ ‖ ಕಂಗೊಳಿಪ ಗಂಗಾಸರ

ಯುಗಳ । ಸಂಗಮದೊಳು ಸ್ನಾನವ ನೆಸಗಿ । ಗಂಗೆಯನು ಪೂಜಿಸಿದ ಳು ಪುರೋಹಿತನ ನೇಮದಲಿ ॥ ೨೩ ॥ ಪರಿಪರಿಯ ಭಕ್ಷ್ಯಂಗಳನು ಪ ರಿ । ಪರಿಯ ಪಕ್ವಾನ್ನಂಗಳನು ಪರಿ । ಪರಿಯ ಮಾಂಸಂಗಳನು ಸಕ ಲವಿಧದ ಫಲಂಗಳನು ॥ ಪರಿಪರಿಯ ಮದ್ಯಂಗಳನು ತರ । ತೆರದಕುರಿ ಕೋಣಂಗಳನು ತರ । ತರದ ಚಿತ್ರಾನ್ನಗಳ ಬಲಿಗೊಟ್ಟರ್ಚಿಸಿದ ಳಾಕೆ ॥ ೨೪ ॥ ಪರಿಮಳ ಸುಗಂಧ ಕುಸುಮಂಗಳ । ನುರುತರದ ತಾಂಬೂಲಗಳ ನಾ । ವರಸುದಕ್ಷಿಣೆಗಳನು ನವರತ್ನಾ ಭರಣಗಳನು ॥ ತರತರದ ವಸ್ತ್ರಂಗಳನು ಶುಭ । ಕರದ ಮುಕ್ತಾ ಹಾರಗಳನಾ । ಧರಣಿಸುತೆ ಗಂಗಾನದಿಗೆ ಕೊಟ್ಟರ್ಚಿಸಿದ ಳೊಲಿದು ॥ ೨೫ ॥ ಪತಿ ಪರಾಯಣೆ ಯರೆನಿಸುವರುಂ । ಧತಿವೊದಲಹ ಸುವಾಸಿನಿ ಜನರ । ನತಿವಿನಯ ದಿಂದರ್ಚಿಸುತಧಿಕ ಭಕ್ತಿಭಾವದಲಿ ॥ ಕ್ಷಿತಿಸುತೆ ವಸಿ ಷ್ಠಾದಿ ಮುನಿಗಳ । ವಿತತಿಗಂದು ಸುಭೋಜ ನಂಗಳ । ಹಿತದೆತಾನಾ ಗಿಸಿದ ಳಾನಂದವನು ತಾಳುತ್ತ ॥ ೨೬ ॥ ಅಂದವೊನೆ ಮೃಷ್ಟಾನ್ನ ಪಾನಗ । ಳಂದೆ ವಿಪ್ರರ ನೆಲ್ಲ ದಣಿಸುತ । ಚಂದನ ಕುಸುಮ ದಕ್ಷಿಣಾ ತಾಂಬೂಲ ಗಳನಿತ್ತು ॥ ಬಂದ ಜನರನು ತೃಪ್ತಿ ಪಡಿಸುತ । ಬಂದಳು ಪವಾಸದೊಳ ಗಾರಘು । ನಂದನ ನೆಡೆಗೆ ಸೀತೆಕುಳತಾ ವರವಿಮಾನದ ಲಿ ॥ ೨೭ ॥ ಜನನಿ ಕೌಸಲ್ಯೆ ವೊದಲಾಗಿಹ । ವನಿತೆಯರ ಮಧ್ಯದೊಳು ಸತಿಸಹಿ । ತಿನಕುಲೋತ್ತಮನಾ ಪುರೋಹಿತ ರೊಡನೆ ಶೀಘ್ರದಲಿ ॥ ವಿನುತಿ ವಡೆದನ ವೀನಗಂಗಾ । ಘನಸರಯುು ಗಳ ಸಂಗಮಕೆ ಬಂ । ದನತಿವಿಭವದೊ ಳೆಲ್ಲರಿಗೆ ಸಂತಸವ ನಾಗಿಸುತ ॥ ೨೮ ॥ ಮಡದಿ ಮಾ ಡಿದ ಪೂಜೆಗಿಂತಲು । ಪೊಡವಿ ಯಾಣ್ಮನು ರಾಘವನು ನೂ । ರ್ಮಡಿ ಯಧಿಕ ವೆಂಬಂತೆ ಗಂಗೆಯ ನಧಿಕ ಭಕ್ತಿಯಲಿ ॥ ಒಡನೆ ಪೂಜಿಸಿ ನಲ ವಿ ನಿಂದಡಿ । ಗಡಿಗೆ ದಕ್ಷಿಣೆ ಸಹಿತ ಕೊಟ್ಟನು । ಸಡಗರದೆ ಗಜ ತುರಗ ಗೋರಥ ಗಳನು ವಿಪ್ರರಿಗೆ ॥ ೨೯ ॥ ನೆರೆದ ವಿಪ್ರೋತ್ತಮರಿ ಗಾರಘು । ವರನು ಸಾವಿರ ಗಟ್ಲೆ ಯಾಗಿಯೆ । ವರಸು ಭೋಜನ ಗಳ ನು ಮಾಡಿಸಿ ತನ್ನ ನಂಟರನು ॥ ಕರೆದು ಮನ್ನಿಸಿ ಹತ್ತಿರದೆ ಕು । ಳ್ಳಿರಿ ಸಿ ಕೊಂಡೂಟವನು ಮಾಡಿದ । ನರಸಿಯ ನೊಲಿಸು ತೊಡನೆ ಬಹು ಸಂ ತೋಷವನು ತಾಳ್ದು ॥ ೩೦ ॥ ಅಲ್ಲಿ ಒಂಬತ್ತು ದಿನ ತಾನಿರು । ತೆಲ್ಲರಿಂದೆ ರಘುವರನ ವನಿಯೊ । ಳೆಲ್ಲ ಯಾತ್ರೆಗಳನ್ನು ಮಾಡಲು ಬಗೆದು ಚಿತ್ತದ ಲಿ ॥ ಎಲ್ಲ ವಸ್ತುಗಳನು ನಗರದಿಂ । ದಲ್ಲಿಗೆ ತರಿಸಿ ಕೊಂಡು ಮನುಜರ ।

ನೆಲ್ಲ ಮನ್ನಿಸಿ ತನ್ನ ಸತಿಸಹಿತಲ್ಲಿ ಮಲಗಿದನು ‖ ೨೧ ‖ ಪಿರಿಯ ರೂಪ
ವ ತಾಳುವಂತೆಯು । ಕಿರಿಯ ರೂಪವ ನೈದುವಂತೆಯು । ವರವಿಮಾನ
ಕೆ ವರವನಿತ್ತನು ಮುದದೆ ರಾಘವನು ‖ ಧರಿಸಿತು ವಿಮಾನವು ಭರದೆ
ಹ । ನ್ನೆರಡು ಗಾವುದ ದುದ್ದವಾಗಿಯು । ಮೆರಡು ಗಾವುದ ದಗಲ ವಾ
ಗಿಯು ಮಿರ್ಪ ರೂಪವನು ‖ ೨೨ ‖ ಮಾನವೇಂದ್ರನು ಸೀತೆಸಹಿತ ವಿ ।
ಮಾನವನು ತಾನೇರಿದನು ಸುಂ । ಮಾನದಲಿ ಹಿತ ಬಂಧುಮಿತ್ರ ಪುರೋ
ಹಿತರ ಕೂಡಿ ‖ ಬಾನೆಡೆಯೊಳತಿ ಭರದೆ ಬರುತ ವಿ । ಮಾನ ವಾದಿನ ದ
ಲ್ಲಿ ಬಂದುದು । ಸಾನು ರಾಗದೊ ಳಾಪ್ರಯಾಗ ಕ್ಷೇತ್ರಕಲ್ಲಿಂದೆ ‖ ೨೩ ‖
ಇಳಿದು ಜಾನಕಿ ಯೊಡನೆ ಸಂತಸ । ದೊಳು ವಿಮಾನವ ನಾರಘು ವರ
ನು । ನಲಿದು ಸೇವಿಸುತಾಪ್ರಯಾಗ ಕ್ಷೇತ್ರ ವನು ಸಾದರ್ ‖ ಬಳಿಕವ
ರ ಗಂಗಾತ್ರಿವೇಣೀ । ಗಳರಡರ ಸಂಗಮಕೆ ಬಂದನು । ತಳುವದೈತ
ಹ ಸಕಲಬಾಂಧವ ಮಿತ್ರ ಜನಸಹಿತ ‖ ೨೪ ‖ ಸೇರಿಗಂಗಾ ವೇಣೀ ಸಂಗ
ಮ । ತೀರವನು ಪರಮಾ ದರದೊಳಾ । ಧಾರಿಣೀ ಸುತೆ ನಾರಿಕೇಳದ
ಬಾಯಿನಂಗಳನು ‖ ನೀರಿನೊಳ ಗರ್ಪಿಸುತ ಸಾಲಂ । ಕಾರ ಜಡೆಯೊ
ಳು ಕತ್ತರಿಸಿ ರಘು । ವೀರ ನಪ್ಪಣೆ ಯಿಂದ ಕೊಟ್ಟಳು ನಾಲ್ಕು ಬೆರಳ
ನಿತು ‖ ೨೫ ‖ ಅನುಜರೊಡನಾಬಳಿಕ ತಾನು ವ । ಪನವ ನಾಗಿಸಿಕೊಂ
ಡು ರಘುನಂ । ದನನು ಪೋಷ್ಯವಮಾಡಿ ಯಾದಿನ ಬಳಿಕ ಮಾರನೆ
ಯ ‖ ದಿನದಿ ತೀರ್ಥ ಶ್ರಾದ್ಧವ ನೆಸಗಿ । ಜನರ ನೊಲಿಸುತ ಮಾಘ ಮಾ
ಸದ । ಕೊನೆಯ ವರಿಗಿರು ತಷ್ಟ ತೀರ್ಥಂಗಳಿಗೆ ನಡೆತಂದ ‖ ೨೬ ‖ ಅ
ಲ್ಲಿ ದಕ್ಷಿಣೆ ಸಹಿತರಾಘವ । ನೆಲ್ಲದಾನಂಗಳನು ಕೊಟ್ಟು ಸ । ಮುಲ್ಲಸ
ದೊಳಕ್ಷಯುವ ಟಾವನಿಜ ದೆಡೆ ಗೈತಂದು ‖ ಎಲ್ಲ ರೊಡನಾ ಮರವ ಪೂ
ಜಿಸು । ತಲ್ಲಿಕಂಗೊಳಪ ವರವಸ್ತ್ರಗ । ಳೆಲ್ಲವನು ಕೊಟ್ಟಾತ್ರಿವೇಣಿಯ
ನೊಲಿದು ಪೂಜಿಸಿದ ‖ ೨೭ ‖ ಧನಕನಕ ವಸನಗಳ ನೀಯುತ । ಮಣಿ
ದುಪೂಜಿಸಿ ತೀರ್ಥ ವಾಸಿಗ । ಳೆನಿಪ ಪಾರೋ ಹಿತರ ನವರಾಜ್ಞೆಯ
ನು ತಾನಾಂತು ‖ ಘನ ವಿಮಾನದೊಳು ಕುಳಿತೆಲ್ಲಾ । ಜನಗಳೊಡನಾ
ರಾಘವೇಂದ್ರನು । ವಿನುತ ವಿಂಧ್ಯಾರಣ್ಯ ಕೈತಂದಿಳಿದ ನಲ್ಲಿಂದ ‖ ೨೮ ‖
ಬಂದು ದುರ್ಗಾ ಸನ್ನಿಧಿಗೆ ರಘು । ನಂದನನು ಸತಿಸಹಿತ ವಿಂದಾ । ನಂ
ದದಿಂದೆಸಗಿದ ನಖಿಳ ದಾನಂಗಳನು ಕೂಡೆ ‖ ಅಂದ ಮಾಗಿಹ ಕುಸುಮ
ಸಂಚಯ । ದಿಂದೆಪೂಜಿಸಿ ಶಾಂಭವಿಯನೈ । ತಂದನು ವಿಮಾನ ದೊಳು
ಕಾಶಿಗೆ ಬಂಧುಗಳಸಹಿತ ‖ ೨೯ ‖ ಮನುಕುಲೇಂದ್ರನು ಯಾತ್ರೆಗೆಂದ

ನು | ತಿನಿಯಳೊಡನೈತಂದುದ ನರಿತು | ವಿನಯ ದೊಳದಿರುಗೊಳಲು
ಬಂದನು ಹರನುರಾಘವನ || ತನಗಿದಿರುವಂದಾ ಶಿವನಕಂ | ಡಿನಕುಲೋ
ತ್ತಮನೆರಗಿ ಕೈಕೊಂ | ಡನು ಪದೆದುಶಂಕರನು ನೀಡಿದುಪಾಯನಂಗ
ಳನು || ೪೦ || ಹರನಪೂಜಿಸಿ ರಾಘವನು ಶಂ | ಕರನೊಡನೆ ನಡೆತಂದ
ನಂದಾ | ದರದೆ ಮಣಿಕರ್ಣಿಕೆಗೆ ಕಾಶೀಪುರವನೀಕ್ಷಿಸುತ || ಮೆರೆವಚ
ಕ್ರಾಭಿದ ಸುತೀರ್ಥದೊ | ಳರಸಿಯೊಡನಾ ಶ್ರೀಫಲವನಾ | ದರದೆಕೊ
ಟ್ಟವರೊಳು ಸಚೇಲಸ್ನಾನವನೆಸಗಿದ || ೪೧ || ರವಿಕುಲೇಂದ್ರನು ನಿತ್ಯ
ಯಾತ್ರೆಯು | ಜವದೊಳಂದೆಸಗುತ್ತ ಲುಪವಾ | ಸವನು ತಾನಾಗಿಸುತ
ತೀರ್ಥಶ್ರಾದ್ಧವನುಮಾಡಿ || ಅವನಿತಲದೊಳ ಗುನ್ನತಿವಡೆದ | ಸೆವ ವಿ
ನುತ ಕಾಶಿಯೊಳು ಕಂಗೊಳ | ಸುವ ಸಕಲಪುಣ್ಯಸ್ಥಳಂಗಳಗಾಗಿನಡೆ
ತಂದ || ೪೨ || ಮುನಿನುತಾಂತರ್ಗೃಹದಯಾತ್ರೆಯು | ಘನಮುಕ್ತಿಯಾತ್ರೆ
ಯಘನಾಶಕ | ಮೆನಿಪೆರಡು ಮಾನಸಿಕಯಾತ್ರೆಗಳನ್ನು ವಿರಚಿಸುತ ||
ಜನರದುರಿತಂಗಳನು ಪೋಗಿಪು | ದೆನಿಪನಾಲ್ವತ್ತೆರಡು ಲಿಂಗದ | ವಿನು
ತವರಯಾತ್ರೆಯನು ತಾನಾಚರಿಸಿನಡೆತಂದ || ೪೩ || ಅಷ್ಟಲಿಂಗದಯಾ
ತ್ರೆಯನು ತ | ನ್ನಿಷ್ಟಸತಿಸಹಿತಾಚರಿಸಿ ಯು | ತ್ಕೃಷ್ಟಷಟ್ಪಂಚಾ
ಶತು ಗಣಪತಿಗಳಯಾತ್ರೆಯನು || ಅಷ್ಟವಿಧ ಭಕ್ತಿಯೊಳು ಮಾಡು |
ತ್ತಷ್ಟಭೈರವಯಾತ್ರೆ ಸುಚತು | ಷ್ಷಷ್ಟಿಯೋಗಿನಿಯಾತ್ರೆಗಳನಾ
ರಾಮನೆಸಗಿದನು || ೪೪ || ಮೆರೆವನವದೇವೀಸುಯಾತ್ರೆಯು | ನುರೆ ವಿನು
ತಿವಡೆದಷ್ಟದಿಕ್ಪಾ | ಲರ ವಿಮಲಯಾತ್ರೆಯನು ನಲವಿಂವೆಸಗಿರಾಘವ
ನು || ವರ ನವಗ್ರಹಯಾತ್ರೆಯ ನೊಲಿದು | ವಿರಚಿಸುತ ಸತಿಯೊಡನೆ
ಬಂದನು | ಭರದೊಳಾಕ್ಷೇತ್ರ ಪ್ರದಕ್ಷಿಣಯಾತ್ರೆಗೆಂದೆನುತ || ೪೫ ||
ಬಂದು ಪಂಚಕ್ರೋಶಯಾತ್ರೆಯ | ನಂದುಮಾಡುತ ಸೀತೆಸಹಿತಾ |
ನಂದವನು ತಾಳ್ದಂತು ಹದಿನಾಲ್ಕುಬಗೆ ಯಾತ್ರೆಗಳ || ಚಂದದಿಂದಾಗಿ
ಸುತ ರಾಮನು | ಬಂದುವರುಣಾತೀರದೊಳು ನಲ | ವಿಂದರಾಮೇ
ಶ್ವರದಲಿಂಗವನು ಪ್ರತಿಷ್ಠಿಸಿದ || ೪೬ || ಮನುಕುಲೇಂದ್ರನು ತನ್ನ ಪೆಸ
ರೊಳು | ವಿನುತಕಾಶೀಪತ್ತನದ ಪಾ | ವನವೆನಿಪ ವಾಯುವ್ಯಭಾಗ
ದೊಳೊಂದು ತೀರ್ಥವನು || ವಿನುತಿವೆತ್ತೆಸೆವಂತೆನಿರ್ಮಿಸು | ವನಿತರೊಳ
ಗೈತಂದ ನಲ್ಲಿಗೆ | ಹನುಮನಾ ರಾಘವನುಬಂದುದನರಿತು ಸತಿಸಹಿತ ||
|| ೪೭ || ಬಂದು ಸೀತಾರಾಮರಿಬ್ಬರಿ | ಗಂದಧಿಕಭಕ್ತಿಯಲಿ ಮಾರುತ |
ನಂದನನೆರಗಿ ಚಂದ್ರಶೇಖರನನ್ನು ಪೂಜಿಸುತ || ಬಂದುತೀರ್ಥವನಲ್ಲಿಕ

ಲ್ಪಿಸು । ತೊಂದುಘಟ್ಟವ ಕಟ್ಟಿದನು ನಲ । ವಿಂದೆ ಹನುಮದ್ಘಟ್ಟವೆನಿಸು
ತವು ವಿನುತಿವೆತ್ತಿಹುದು ॥ ೪೮ ॥ ಅದಕೆ ಶಾಶ್ವತವಾಗಿರಲೆನುತ । ಪದೆ
ದುರಾಘವ ನೊಂದುವರವನೊ । ಲಿದುಕೊಡುತ ತಾನೊಂದುತೀರ್ಥವನ
ಲ್ಲಿ ಕಲ್ಪಿಸುತ ॥ ಸವಮಲವೆನಿಪ ಪಂಚಗಂಗೆಯೊ । ಳೊದವಿದ ಹರುಷ
ದಿಂದೆ ತಾನೆಸ । ಗಿದನು ಕಾರ್ತಿಕಮಾಸದ ಸ್ನಾನವನು ಸತಿಸಹಿತ ॥
॥ ೪೯ ॥ ಒಂದುವರ್ಷದವರೆಗು ಮಾರಘು । ನಂದನನು ಜಾನಕಿಸಹಿತ
ನಲ । ವಿಂದೆ ಕಾಶೀನಗರದೊಳು ವಾಸಿಸುತ ಭಕ್ತಿಯಲಿ ॥ ಒಂದುತೀರ್ಥ
ವರಚಿಸಿ ಮಹಪಾ । ನಂದವನು ತಾಳ್ದಲ್ಲಿಮಾಡಿದ । ನೊಂದುಳಿಯದಂತ
ಖಿಳ ಯಾತ್ರೆಗಳನ್ನು ನೇಮದಲಿ ॥ ೫೦ ॥ ಧನಕನಕ ಮಣಿಮೌಕ್ತಿಕಾ
ದಿಗ । ಳನಮಲಾಭರಣಂಗಳನು ಮೇ । ಲೆನಿಸಿತೋರುವ ತುರಗಕರಿರಥ
ಗೋಮಹಿಷಗಳನು ॥ ಘನತರದ ದಿವ್ಯವಸನಗಳನು । ವಿನುತ ನವಧಾ
ನ್ಯಂಗಳನು ಕೊ । ಟ್ಟನು ರಘುವರನು ತೀರ್ಥವಾಸಿಗಳೆನಿಪವಿಪ್ರರಿಗೆ ॥
॥ ೫೧ ॥ ಸವಿವಡೆದ ಷಡ್ರಸಗಳನುತಾ । ಳ್ದಿಸೆವ ವರಮೃಷ್ಟಾನ್ನಗಳ
ನಾ । ವಿವಿಧ ಭಕ್ಷ್ಯಂಗಳನು ಮಾಡಿಸಿ ದಿನದಿನಂಗಳಲಿ ॥ ಅವನಿದೇವತೆ
ಗಳನು ತಾಂ ಪ್ರತಿ । ದಿವಸ ತೃಪ್ತಿಪಡಿಸುತ ಕೊಟ್ಟನು । ವಿವಿಧ ಫಲ
ತಾಂಬೂಲಚಂದನ ಕುಸುಮಗಳನೊಲಿದು ॥ ೫೨ ॥ ಕಂಗೊಳಿಪಪರ್ಯಂ
ಕಗಳನುರೆ । ಸಿಂಗರವೆನಿಪ ವಸ್ತುಗಳನು । ತುಂಗದರ್ಪಣ ದೀಪಭ
ವನಂಗಳನುತಾ ನಿತ್ತು ॥ ಮಂಗಳಾಂಗನೆ ಸೀತೆಸಹಿತಶ್ರಿ । ಮಂಗಳಕರ
ವ್ರತಗಳನು ರಘು । ಪುಂಗವನೆಸಗಿ ತುಷ್ಟಿವಡಿಸಿವನಾ ಪುರಜನರನು
॥ ೫೩ ॥ ಪ್ರತಿದಿನವು ಭಿಕ್ಷೆಗಳನಾಗಿಸಿ । ಯತಿಗಳನು ಸಂತುಷ್ಟಿವಡಿ
ಸಿದ । ನತಿಶಯದ ಕೌಪೀನ ದಂಡಕಮಂಡಲಂಗಳನು ॥ ನುತಿವಡೆವ
ಕೃಷ್ಣಾಜಿನಗಳನು । ಹಿತವೊಳಿತ್ತು ರಘುವರನು ರೆಮೆರೆ । ವೃತಿಪಕಾ
ವೀ ಶಾಠಿ ಪಾದುಕೆಗಳನು ಕೊಡುತೊಲಿದು ॥ ೫೪ ॥ ಅವರಿಗೆ ಮಠಂ
ಗಳನು ಕಟ್ಟಿಸಿ । ರವಿಕುಲೇಂದ್ರನು ಸೀತಗಳನತಿ । ಜವದೊಳೀಯು
ತ ಭಿಕ್ಷುಕರ ಸೇವೆಯನು ಮಾಳ್ಪದಕೆ ॥ ತವಕದಿಂದಲೆ ನೇಮಿಸಿದ
ನಾ । ಸುವಿನಯವನಾಂತಿರುವ ಸೇವಕ । ನಿವಹವನು ವಿದ್ಯಾರ್ಥಿಗಳನಾ
ಯಾಮಠಂಗಳಲಿ ॥ ೫೫ ॥ ವಿನುತವಿದ್ಯಾಶಾಲೆಗಳನಾ । ಮನುಕುಲೇಂ
ದ್ರನು ಕಾಶಿಯೊಳು ತಾ । ನನುಗೊಳಿಸಿ ವರಪುಸ್ತಕದ ಭಂಡಾರಗಳನಿರಿ
ಸಿ ॥ ವಿನುತತರಹವೈದ್ಯರನು ನೇಮಿಸು । ತನುದಿನವು ಮನುಜರಿಗೆ ವರ
ಭೋ । ಜನವನಾಗಿಪ ಬಹುಳಸತ್ರಂಗಳನು ಕಲ್ಪಿಸಿದ ॥ ೫೬ ॥ ಒಂ

ದು ವತ್ಸರ ಕಾಶಿಯೊಳಿರುತ | ಬಂಧುಗಳೊಡನಪರಿಮಿತ ಬಕುತಿ | ಯಿಂದಖಿಳ ದೇವಾಲಯಂಗಳನಾ ರಘೂದ್ವಹನು ‖ ಅಂದು ಜೀರ್ಣೋ ದ್ಧಾರವಮಾಡಿಸಿ | ಕುಂದುನಿಂದೆಗಳೆಂದಿಗು ನಡೆಯ | ದಂದದಲಿ ಪೂಜೆಗ ಳ ನಾಗಿಸುವಂತೆಮಾಡಿವನು ‖ ೫೭ ‖ ಪರಮಪಾವನವೆನಿಪ ಕಾಶೀ | ಪುರದೊಳಾ ರಘುವರನು ನಿತ್ಯವು | ಹರನಪೂಜಿಸಿ ಬ್ರಹ್ಮಚರ್ಯ ವ್ರತ ವ ಕೈಕೊಂಡು ‖ ಸುರರುಮೆಚ್ಚುವ ಸತ್ಯಭಾಷಣ | ದುರುತರದನಿಯ ಮವನುಹೊಂದುತ | ವಿರಚಿಸಿದನಾ ತೀರ್ಥವಾಸವ್ರತವ ನತಿಹಿತದೆ ‖ ೫೮ ‖ ಪುರದಮಧ್ಯದೊಳೆಸೆವ ವಿಶ್ವೇ | ಶ್ವರನನರ್ಚಿಸಿ ಯನ್ನಪೂರ್ಣೆ ಯ | ಚರಣಕಾನತನಾಗಿ ಧುಂಡಿವಿನಾಯಕಂಗೆರಗಿ ‖ ಧರಣಿನಂದನೆಯೊ ಡನೆ ರಾಮನು | ನೆರೆವಿಲೋಕಿಸಿ ದಂಡಪಾಣಿಯ | ನುರುತರದ ವರಕಾ ಲಭೈರವನ ನೊಲಿವರ್ಚಿಸಿದ ‖ ೫೯ ‖ ಬಾರಿಬಾರಿಗೆ ನೋಡಿನೋಡುತ | ವಾರಣಾಸೀಪುರದೊಳಾ ರಘು | ವೀರನಾ ವಿಶ್ವೇಶ್ವರಸ್ವಾಮಿಯನು ಭ ಕ್ತಿಯಲಿ ‖ ಪಾರಮಾರ್ಥಿಕದಿಂದೆ ಪೂಜಿಸಿ | ಚಾರುಗಂಗಾನದಿಯ ದಕ್ಷಿ ಣ | ತೀರಕೆ ಸಕಲಬಾಂಧವರೊಡನೆ ಬಂದನಲ್ಲಿಂದ ‖ ೬೦ ‖ ಘನವಿಮಾ ನದೊಳಲ್ಲ ನಂಟರೊ | ಡನೆ ಕುಳಿತುಕೊಂಡಾ ರಘುವರನ | ವನಿಜೆಯ ನೊಲಿಸುತಂಬರಪಥದೊಳಂದು ಶೀಘ್ರದಲಿ ‖ ವಿನುತ ಗಂಗಾನದಿಯವರ ದ | ಕ್ಷಿಣಕೆಬರುತಾ ಕರ್ಮನಾಶನ | ವನು ನುತಿಸುತಾ ಚ್ಯವನಮುನಿ ಯಾಶ್ರಮಕೆನಡೆತಂದ ... ... ... ‖ ೬೧ ‖

ಇಂತು ಮೂವತ್ತೊಂದನೆಯ ಅಧ್ಯಾಯ ಸಂಪೂರ್ಣವು
ಪದ್ಯಗಳು ೧೬೬೮.

## ಮೂವತ್ತೆರಡನೆಯ ಅಧ್ಯಾಯ.

ಸೂಚನೆ ‖ ಧರಣಿಮಂಡಲದೊಳತಿ ಪಾವನ |
ತರವೆನಿಸಿಪ ಪುಣ್ಯಸ್ಥಳಗಳಿಗೆ |
ತೆರಳಿಜಾನಕಿ ಯಾತ್ರೆಯನುಮಾಡಿದಳು ಪತಿಸಹಿತ ‖

ಚ್ಯವನಮುನಿಯಾಶ್ರಮಕೆ ನಡೆತಂ | ದವನಿಜೆಯ ಸಹಿತಲ್ಲಿಮಿಂ ದಾ | ರವಿಕುಲೋತ್ತಮನಾ ಮುನೀಂದ್ರನಿಗೆರಗಿ ಭಕ್ತಿಯಲಿ ‖ ತವಕ ದಿಂದಲೆ ರಾಮತೀರ್ಥವ | ಸವೆದುವರ ರಾಮೇಶ್ವರನನಾ | ಭುವಿಯೊ

ಳು ಸ್ಥಾಪಿಸುತಖಿಳದಾನಗಳ ನೆಸಗಿದನು ‖ ೧ ‖ ಬಳಿಕಗಂಗಾಶೋಣಭ
ದ್ರಂ । ಗಳೆರಡರ ಸಂಗಮಕೆ ಬಂದವ । ರೊಳವನೀಸುತೆವೆರಸಿ ರಘು
ಭೂವರನು ಮಿಂದದರ ‖ ಬಳಿಯೊಳೆಲ್ಲರಸಹಿತ ಮೂರ್ದಿನ । ಗಳತನಕ
ತಾನಿದ್ದುಬಂದನು । ಬಳಿಕ ಗಂಗಾಗಂಡಕೀನದಿ ಸಂಗಮಸ್ಥಲಕೆ ‖ ೨ ‖
ಸ್ನಾನವನು ಸತಿಸಹಿತಮಾಡುತೆ । ಮಾನವೇಂದ್ರನು ಗಂಡಕಿಯೊಳು
ನಿ । ದಾನಿಸದೆ ನೇಪಾಳದೊಳಿರುವ ಪಶುಪತೀಶ್ವರನ ‖ ಸಾನುರಾಗದೊ
ಳರ್ಚಿಸುತ ಸುಂ । ಮಾನವನು ತಾಳ್ದೆಲ್ಲರೊಡನೆ ವಿ । ಮಾನದೊಳಗಾ
ಹರಿಹರಾಕ್ಷೇತ್ರಕ್ಕೆ ನಡೆತಂದ ‖ ೩ ‖ ಬಂದು ಜಲದೊಳುಮಿಂದು ಧರ
ಣೀ । ನಂದನೆವೆರಸಿ ರಾಮನುಭಕುತಿ । ಯಿಂದೆಪೂಜಿಸಿ ಹರಿಹರಸ್ವಾ
ಮಿಯನು ಕೈಮುಗಿದು ‖ ಅಂದು ಗಂಗೆಯದಕ್ಷಿಣದೊಳತಿ । ಸುಂದರ
ಮೆನಿಪ ಸಂಗಮಗಳಿಗೆ । ಬಂದು ಬಂದೀಕ್ಷಿಸುತ ವೈಕುಂಠಪುರಕೈತಂ
ದ ‖ ೪ ‖ ಈಕ್ಷಿಸಿ ಜರಾಸಂಧನಗರವ । ನಾಕ್ಷಿತಿಸುತೆಯೊಡನೆ ಸರಸಿಜ
ದ । ಳಾಕ್ಷನು ಸ್ನಾನವನೆಸಗಿ ವೈಕುಂಠತೀರ್ಥದೊಳು ‖ ಯಕ್ಷಪತಿಯು
ವಿಮಾನದೊಳು ಕುಳಿ । ತಾಕ್ಷಣದೊಳಲ್ಲಿಂದ ಬಂದನು । ಮೋಕ್ಷದಾ
ಯಕವಹ ಗಯಾಕ್ಷೇತ್ರಕತಿಹರ್ಷದಲಿ ‖ ೫ ‖ ವರಗಯಾಕ್ಷೇತ್ರಕ್ಕೆ ನ
ಡೆತಂ । ದರಸಿವೆರಸಿ ವಿಮಾನದಿಂದಿಳಿ । ದಿರದೆ ರಾಮನು ಫಲ್ಗುನದಿಯಾ
ಪೂರ್ವತೀರದಲಿ ‖ ನೆರೆಮೆರೆವ ವರವಿಷ್ಣುಪಾದದ । ಪರಮಪಾವನದೆಡೆಗೆ
ಬಂದತಿ । ಭರದೊಳಂದೆರಗಿದನು ಕೈಮುಗಿದತಿ ವಿನಯದಿಂದ ‖ ೬ ‖
ಮರುದಿವಸವಾ ಫಲ್ಗುವೊಳು ತ । ನ್ನರಸಿವೆರಸಿ ಸ್ನಾನಕೆನುತ್ತೈ । ತರ
ಲು ರಾಘವನನಿತರೊಳ್ಪಖಿಯರೊಡ ನವನಿಜೆಯು ‖ ಹರಿವ ಫಲ್ಗುನ
ದೀದಡಕೆ ಬಂ । ದೆರಗಿ ಮಿಂದದರೊಳು ಸುವಾಸಿನಿ । ಯರನು ಧನಕನ
ಕಾಂಬರಗಳಂ ದರ್ಚಿಸಿದಳೊಲಿದು ‖ ೭ ‖ ಮರಳದಿಬ್ಬಿಯಮೇಲೆ ಕುಳಿ
ತಾ । ಧರಣಿಜೆಯು ಗೌರಿಯನು ಪೂಜಿಸು । ತೆರಗುವೆ ನೆನುತ್ತೆಣಿಸಿಚಿತ್ತ
ದೊಳಂದು ಭಕ್ತಿಯಲಿ ‖ ಮರಳ ಮುದ್ದೆಗಳೈದರಿಂದಲೆ । ಪರಮಪಾವ
ನೆಯೆನಿಪ ಗಂಗಾ । ಧರನರಾಣಿಯನಾಗಿಪುದ ಕಾರಂಭಿಸಿದಳಲ್ಲಿ ‖ ೮ ‖
ನೆನೆದಸೈಕತವ ನೆಡೆಗೈಯೊಳು । ಜನಕನಂದನೆ ತೆಗೆದುಕೊಳ್ಳುತ । ದನು
ಬಲದಕೈಯಿಂದೆ ಮುದ್ದೆಯನೆಸಗಿ ಭೂಮಿಯಲಿ ‖ ಅನುಗೊಳಿಸುತ್ತಿಹು
ವಷ್ಟರೊಳಗಾ । ಮನುಕುಲೋತ್ತಮ ದಶರಥನರೇಂ । ದ್ರನು ಕರವ
ನೀಡಿರುವುದನು ನೋಡಿದಳುತಲೆವಾಗಿ ‖ ೯ ‖ ಧರಣಿಯೊಳು ವೈದೇಹಿ
ಮುದ್ದೆಯ । ನಿರಿಸಲಾದಶರಥನು ಕೊಂಡ । ಲ್ಲಿರದೆಹೋಗಿರುವುದನುಕಂ

ಹಳು ನದಿಯತೀರದಲಿ ॥ ಧರಣಿಜೆಯು ನೂರೆಂಟುಸಲ ವಿಂ । ತಿರಿಸಲಾ ಮುದ್ದೆಗಳನೆಲ್ಲದ । ಶರಥನುತೆಗೆದುಕೊಂಡು ಪೋದನುಕಣ್ಗೆಕಾಣಿಸದೆ ॥ ॥ ೧೦ ॥ ನೂರಮೇಲೆಂಟುಂಡೆ ಗಳರದೆ । ತೀರದಲ್ಲಿಯೆ ಮಾಯವಾಗಲು । ಧಾರಿಣೀಸುತೆ ಯಚ್ಚರಿಯನಾಂತಲ್ಲಿ ಮನದೊಳಗೆ ॥ ಗೌರಿಯನುಪೂಜಿ ಸಿವಿಮಾನವ । ನೇರಿಬಂದಳು ತನ್ನ ಮಂದಿರ । ಕಾರೊಡನೆ ತಾನೀರಹಸ್ಯ ವನರುಹದತಿಭರದೆ ॥ ೧೧ ॥ ಸ್ನಾನವನೆಸಗಿ ಪಂಚತೀರ್ಥದೊ । ಳಾನ ರೇಂದ್ರನು ಹತ್ತಿದನು ಸುಂ । ಮಾನದೊಳಗಾ ಪ್ರೇತಪರ್ವತವನತಿವೇ ಗದಲಿ ॥ ತಾನುಬೆರಳುಂಗುರವನು ತೆಗೆದು । ಸಾನುರಾಗವೆ ಮೂರುಗೆರೆ ಗಳ । ನಾನೆಲದೆಗೀಚಿದನು ದಕ್ಷಿಣದಿಕ್ಕಿಗಿದಿರಾಗಿ ॥ ೧೨ ॥ ರವಿಕುಲತಿಲ ಕ ರಾಮಚಂದ್ರನು । ತವಕಗೊಳುತಾ ದಶರಥಮಹೀ । ಧವನಿಗೆಪದೆದು ಪಿಂಡದಾನವನಾಗಿಸುವೆನೆಂದು ॥ ಅವನಿಯೊಳು ದರ್ಭೆಯನುಹಾಸುತ । ನವಸುಗೋಘೃತ ಮಧು ತಿಲೋದನ । ವಿವಿಧವಸ್ತುಗಳಿಂದೆ ಪಿಂಡಗಳ ನ್ನುಮಾಡಿದನು ॥ ೧೩ ॥ ರವಿಕುಲೇಂದ್ರನು ಕೈಯೊಳಗೆಪಿಂ । ಡವಪಿಡಿ ದುಕೊಂಡೆಷ್ಟು ನೋಡಿದ । ರವನಿಪತಿ ದಶರಥನು ಕೈಯನುನೀಡದಿರ ಲಾಗ ॥ ಅವನಿಸುರರೈದುತ್ತ ಲಾಶ್ಚ । ರ್ಯವನುರಾಘವನೊಡನೆಪೇಳ್ದರು । ಜವದೊಳೊಂದು ಮುಹೂರ್ತಪರಿಯಂತರವಿಲೋಕಿಸುತ ॥ ೧೪ ॥ ಜನ ಪಕೇಳೀ ಕ್ಷೇತ್ರದೊಳು ಪಾ । ವನ ಗಯಾಶ್ರಾದ್ಧವನು ಮಾಡುತ । ಜ ನರು ಪಿಂಡವನೀವಕಾಲದೊಳವರ ಪಿತೃಚಯವು ॥ ಮನವೊಲಿದು ಕೈ ನೀಡಿಪಿಂಡಗ । ಳನು ತೆಗೆದುಕೊಳ್ಳುವುದು ನಿನ್ನಪಿ । ತನು ಕರವನೀಡ ದಿಹನಿಲ್ಲಿಯದೇನು ಕಾರಣವೋ ॥ ೧೫ ॥ ತಿಳಿಯದೆಮಗೆಂದೆನುತ ವಿಪ್ರ ರು । ತಿಳುಹಲಾಶ್ಚರ್ಯವನು ತಾಳ್ದಿನ । ಕುಲಲಲಾಮನು ಲಕ್ಷ್ಮಣನ ಮುಖವನವಲೋಕಿಸುತ ॥ ತಿಳವುದೇನೈ ನಿನಗೆನುತಕೇ । ಳಲವನಾತ ನ ಚರಣಕಮಲಂ । ಗಳಗೆರಗಿ ಬಿನ್ನೈಸಿದನು ಕೈಮುಗಿದುತಲೆವಾಗಿ ॥ ॥ ೧೬ ॥ ಹಿಂದೆಗೋದಾವರಿಯ ತೀರದೊ । ಳಂದುತಂದೆಗೆ ಪಿಂಡಗಳ ನೊಲ । ವಿಂದೆನೀಂಕೊಡುವಾಗ ನೋಡಿದೆನಾತನಕರವನು ॥ ಇಂದುನನ ಗದರಂತೆ ಕಾಣಿಸ । ದೆಂದು ಪೇಳ್ದವನೀಸುತೆಯ ಕೇ । ಳೆಂದು ನುಡಿ ದನು ರಾಘವನಪದಕೆರಗಿ ಸೌಮಿತ್ರಿ ॥ ೧೭ ॥ ಆನುಡಿಯನಾಲಿಸುತ ರಾ ಮನು । ಜಾನಕಿಯನು ವಿಚಾರಿಸಲ್ಕಾ । ಮಾನಿನೀಮಣಿ ಬಹುಳಭೀ ತಿಯನೈದಿ ಕಂಪಿಸುತ ॥ ಪ್ರಾಣನಾಥನೆ ನೀನುಮನ್ನಿಸು । ನಾನುಮಾಡಿ ದ ತಪ್ಪಿತವನೆಂ । ದಾನರಪತಿಗೆ ಕೂಡೆಬಿನ್ನವಿಸಿದಳು ಕೈಮುಗಿದು ॥

॥ ೧೮ ॥ ಜನಕನಂದನೆ ಕೇಳುನೀಂ ಭಯ । ವೆನುಳಿದೆನ್ನೊಳು ಸತ್ಯವ
ನು ಪೇ । ಳೆನುತ ರಘುನಂದನನು ಕೇಳ್ದೊಡೆ ಸೀತೆಕೈಮುಗಿದು ॥
ವಿನುತಫಲ್ಗುನದಿಯೊಳು ಮಿಂದು ತು । ಹಿನಗಿರಿಸುತೆಯ ನರ್ಚಿಸುವೆ
ನೆಂ । ದೆನುತ ಸಾಂಮರಳುಂಡೆಗಳನಾ ಗೌರಿದೇವಿಯನು ॥ ೧೯ ॥ ಮಾ
ಡಲೆತ್ನಿಸಿ ಮರಳಮುದ್ದೆಯ । ಮಾಡಿರಿಸುವನಿತರೊಳು ಕೈಯನು ।
ನೀಡಿ ದಶರಥಭೂವರನವನು ಕೊಂಡುಪೋದುವನು ॥ ಕೂಡೆಕಾಣಿಸಿಮ
ರಳಿನುಂಡೆಗೆ । ನೀಡಿಕರವನು ಕೊಂಡುದನು ನಾಂ । ನೋಡಿದೆನು ನೂ
ರೆಂಟುಸಲ ಮಿಾತೆರದೊಳೀದಿವಸ ॥ ೨೦ ॥ ಗೌರಿಯರ್ಚನೆಯನು ಮು
ನದೆನೆರ । ವೇರಿಸಿ ಮನೆಗೆಬಂದೆನೆನುತಾ । ಧಾರಿಣೀಸುತೆ ಬಿನ್ನವಿಸಲಾ
ರಾಘವೇಂದ್ರನಿಗೆ ॥ ಆರಿದರಿದಕೆ ಸಾಕ್ಷಿಯೆನುತ ವಿ । ಚಾರಿಸಲು ಕಂಡಿ
ಹುದುಚತನು । ಹೀರುಜವೆನುತ ಪೇಳದಳು ರಾಘವನಿಗಾಸೀತೆ ॥
॥ ೨೧ ॥ ಅವನುಕೇಳಲು ರಾಘವನು ನನ । ಗದುತ್ತಿಳಿಯದೆಂದಾಮರವು
ಪೇ । ಳದೊಡೆ ಸಿನ್ನೊಳುಮುಳವ್ರಬೀಳಲಿ ವಿಫಲವಾಗೆನುತ ॥ ಸುದತಿಮಾ
ವಿನಮರಕೆ ಶಾಪವ । ನೊದವಿಸುತ ಫಲ್ಗುನದಿ ನೋಡಿರು । ವುದೆನುತ
ನುಡಿಮುತೋರಿದಳದನು ರಾಮಚಂದ್ರನಿಗೆ ॥ ೨೨ ॥ ನನಗೆತ್ತಿಳಿಯದೆನುತ್ತ
ಪೇಳಲು । ವಿನುತಫಲ್ಗುತಟಿನಿಯು ಜಾನಕಿ । ಮುನಿದುನೀಂ ನಿಜವ
ನ್ನು ಹೇಳದೆಹೋದೆಮುದರಿಂದ ॥ ಜನರರಿಯದಂತೊಳಗೆ ಹರಿಯುವು ।
ದೆನುತಶಾಪವನಿತ್ತು ವಿಪ್ರರಿ । ದನರಿತ್ತಿಹರೆಂದೆನುತ ತೋರ್ದಳವರನು
ಗಂಡನಿಗೆ ॥ ೨೩ ॥ ಅವರನಾರಘುವರನು ಕೇಳಲು । ರವಿಕುಲೋತ್ತ
ಮನಾವಿದನುತ್ತಿಳಿ । ಯೆವೆನುತಂನುಡಿಯಲ್ಕೆ ಜಾನಕಿಕುರಿತುವಿಪ್ರರನು ॥
ಅವನಿಯೊಳು ನಿಮಗೆಷ್ಟುದಕ್ಷಿಣೆ । ಸವನಿಸಿದೊಡಂ ತೃಪ್ತರಾಗದ । ನ
ವರತವು ದೇಶಗಳನುಚರಿಸಿರೆಂದು ಶಪಿಸಿದಳು ॥ ೨೪ ॥ ತಿಳದಿಹುದು
ಮಾರ್ಜಾಲಕೆಂದಾ । ನೆಲದಣುಗಿ ರಾಘವನೊಡನೆಪೇ । ಳಲದುನಾಂ
ಕಾಣೆನೆನುತ ನುಡಿದೊಡಾಬಿಡಾಲವನು ॥ ಮುಳಿದುನೋಡುತ ನಿನ್ನಬಾ
ಲವ । ನಿಳೆಯೊಳೊಬ್ಬರು ಮುಟ್ಟದಿರಲೆಂ । ದಲಸದಿತ್ತಳು ರಾಘವನಿದಿ
ರೊಳದಕೆ ಶಾಪವನು ॥ ೨೫ ॥ ಗೋವುಕಂಡಿಹುದೆಂದು ಹೇಳಲು । ಭೂ
ವರನೆ ನಾನಿವನರಿಯೆನೆಂ । ದಾವಸುಮತೀಶ್ವರನಿಗದು ಪೇಳಲದನೀಕ್ಷಿ
ಸುತ ॥ ಈವಸುಧೆಯೊಳು ನಿನ್ನವದನವು । ಪಾವನಮೆನಿಸದಿರಲೆನು
ತ್ತಾ । ಗೋವನುಶಪಿಸಿ ತೋರಿಸಿದಳಶ್ವತ್ಥವೃಕ್ಷವನು ॥ ೨೬ ॥ ಅದನು
ಕೇಳಲು ರಾಘವನು ನಾ । ನಿದನುಕಾಣೆನೆನುತ್ತ ಪೇಳಲು । ಸುದತಿಜಾ

ನಕೆ ನೀನಚಲದಳವಾಗೆನುತ ಕೊಡೆ ॥ ಅದಕೆಶಾಪವನಿತ್ತು ಭಾಸ್ಕರ । ನಿ
ವನು ಕಂಡಿಹನೆಂದು ಸಾಕ್ಷಿಯು । ನೋದವಿಸಲು ರಾಘವನು ಸೂರ್ಯನನಂ
ದು ಕೇಳಿದನು ॥ ೨೭ ॥ ತಂದೆಕೇಳೈ ನಿನ್ನಪಿತನ್ನೈ । ತಂದು ತೃಪ್ತಿಯ
ನೈದಿವನು ನಲ । ವಿಂದೆ ಜಾನಕಿಕೊಟ್ಟ ಮರಳಿನಪಿಂಡಗಳನುಂಡು ॥
ಎಂದು ಭಾಸ್ಕರನೆನ್ನುವಷ್ಟರೊ । ಳಂದು ದಶರಥಭೂವರನು ನಡೆ ।
ತಂದು ಬಿಗಿವಪ್ಪುತ್ತ ಸುತನಿಗೆ ನುಡಿದನಿಂತೆಂದು ॥ ೨೮ ॥ ಸುತನೆ ನನ್ನ
ನು ತಪ್ಪಿಸಿದೆನೀ । ನತಿಕಠಿನವೆಹ ನರಕದಿಂದೀ । ಕ್ಷಿತಿತನುಜೆ ಪದೆದಿತ್ತ
ಮರಳಿನಪಿಂಡದಿಂದೆನಗೆ ॥ ಅತಿಶಯದ ಸಂತುಷ್ಟಿಯಾದುದು । ಹಿತದೆ
ನೀನಿಂದಾಚರಿಸು ಜನ । ತತಿಗರಿವನೀಯಲು ಗಯಾಶ್ರಾದ್ಧವನು ಭಕ್ತಿ
ಯಲಿ ॥ ೨೯ ॥ ಎಂದುಪೇಳಿದ ಪಿತನವಚನವ । ನಂದು ಕೇಳುತ ಕೈ
ಮುಗಿದು ರಘು । ನಂದನನು ನೀನೇತಕಿಲ್ಲೀ ಮರಳವುಂಡೆಯೆನು ।
ಇಂದುಕೈಕೊಂಡಿಹೆ ಯದತಿಳು । ಹೆಂದುಬೇಡಲು ಕೊಡೆದಶರಥ ।
ನಂದನಾ ರಘುಭೂವರನನೊಲಿಸುತ್ತ ವೈದಪಿ ॥ ೩೦ ॥ ಈಗಯಾಶ್ರಾ
ದ್ಧವನು ವಿರಚಿಸು । ವಾಗ ಬಹುವಿಘ್ನಗಳು ಬಹುವದ । ಕಾಗಿ ನಾನಾ
ಪರಿಯೊಳತಿವೇಗವಲಿ ಕೈಕೊಂಡೆ ॥ ರಾಘವನೆಕೇಳೆನುತ ತಿಳುಹಿಸ । ರಾ
ಗದಿಂದಲೆ ಪೊರಟುಹೋದನು ॥ ಬೇಗನೆಸುತನುಕೊಟ್ಟ ಪಿಂಡವನುಂ
ಡು ತನ್ನೆಡೆಗೆ ॥ ೩೧ ॥ ಪ್ರೇತಗಿರಿಯಲಿ ಪಿಂಡದಾನವ । ನಾತರಣಿಕುಲ
ತಿಲಕನಿತ್ತಾ । ಪ್ರೇತಶಿಲೆಗೈತಂದು ಕಾಕಬಲಿಯನುತಾಕೊಟ್ಟು ॥ ಪಾತ
ಕಂಗಳಪೋಗಿಸುತವಿ । ಖ್ಯಾತಿವಡೆವಾ ಧರ್ಮವಿಪಿನ । ಕ್ಕಾತುರದೆ ನಡೆ
ತಂದಬಾಂಧವ ಭೃತ್ಯರೊಡವೆರಸಿ ॥ ೩೨ ॥ ಮೆರೆವಧರ್ಮಾರಣ್ಯದೊಳು
ರಘು । ವರನು ಪಾಯಸವಾಜ್ಯ ತಿಲಶ । ರ್ಕರೆಗಳನು ಸೇರಿಸುತಮಾಡಿ
ವ ಪಿಷ್ಟಪಿಂಡಗಳ ॥ ಪರಮಭಕ್ತಿಯನಾಂತು ಕೊಡುತಲೆ । ವಿರಚಿಸಿ
ವಟಶ್ರಾದ್ಧವನುಸಾ । ದರದೆ ಮೇಲೆಸಿಪಷ್ಟತೀರ್ಥಂಗಳನು ನಿರ್ಮಿಸಿದ ॥
॥ ೩೩ ॥ ಸ್ನಾನವಮಾಡಿ ತ್ರಿಸ್ಥಲದೊಳು ನಿ । ದಾನಿಸಖಿಳ ಕರ್ಮವನೆಸ
ಗಿ । ಮಾನವಾಧಿಪನಲ್ಲಿ ನೆರೆದ ಬ್ರಾಹ್ಮಣರಿಗೆಲ್ಲ ॥ ಸಾನುರಾಗದೊಳಂದ
ಖಿಳವಿಧ । ದಾನಗಳತಾನಿತ್ತು ಮನದೊಳು । ಜಾನಿಸುತ್ತ ಗದಾಧರಸ್ವಾ
ಮಿಯನುಪೂಜಿಸಿದ ॥ ೩೪ ॥ ಆದಿವಾಕರಕುಲ ಲಲಾಮನು । ಸಾದರ
ದೊಳಾವಿನ ಸಕೀಟಕ । ವಾದ ಮಾವಿನಮರವನು ಮುಳುಗಿಸಿದನು ನೀ
ರಿನಲಿ ॥ ವೇದವಿಧಿಯೊಳು ವಿಷ್ಣುಪಾದವ । ನಾದಿನವೆ ಪೂಜಿಸಿದನು ಬ
ಹುವಿ । ನೋದದಿಂದಲೆ ತೃಪ್ತಿಪಟ್ಟರು ಸಕಲಪಿತೃವರರು ॥ ೩೫ ॥ ವರ

ಗಯಾಕ್ಷೇತ್ರದೊಳು ಬಂಧುಜ । ಸರೊಡನಿದ್ದನು ಮೂರುತಿಂಗಳ ।
ವರೆಗೆ ರಾಘವನೊಂದು ಸುಕ್ಷೇತ್ರವನು ನಿರ್ಮಿಸುತ ॥ ಧರಣಿಯೊಳು ಈ
ಮಗಯೆಯೆಂಬ ಪೆ । ಸರಿನೊಳಾ ಸುಕ್ಷೇತ್ರವೆಸೆವುದು । ನರರದುರಿ
ತಂಗಳನು ಪರಿಹರಿಸುತ್ತ ನುತಿವಡೆದು ॥ ೩೬ ॥ ರಾಮತೀರ್ಥವನಲ್ಲಿ
ಕಲ್ಪಿಸಿ । ಭೂಮಿಪಾಲಕನಾ ಗಯೆಯೊಳಭಿ । ರಾಮ ರಾಮೇಶ್ವರನ
ಲಿಂಗವತಾಂ ಪ್ರತಿಷ್ಠಿಸುತ ॥ ತಾಮಸವನಾಗಿಸದೆ ಬಂದನು । ವಾಮ
ಲೋಚನೆ ಜಾನಕಿಯುಸಹಿ । ತಾಮಹಿತ ಫಲ್ಗುನದಿ ಗಂಗಾಸಂಗಮಸ್ಥ
ಳಕೆ ॥ ೩೭ ॥ ಬಂದು ಮೂಡಣದೆಸೆಗೆ ಪೃಥ್ವೀ । ನಂದನೆವೆರಸಿ ರಾಘವ
ನುನಲ । ವಿಂದೆ ಹೊಕ್ಕನು ಗಂಗೆಜಾಹ್ನವಿ ಯೆನಿಸುತುತ್ತರಕೆ ॥ ಚಂ
ದದಿಂದಲೆ ಹರಿವತಾಣದೊ । ಳಂದವಾಗಿಹ ಮುದ್ಗಲಮುನಿಪ । ನಿಂದೆ
ಸೆವ ಪುಣ್ಯಾಶ್ರಮವ ನತ್ಯಧಿಕಹರ್ಷದಲಿ ॥ ೩೮ ॥ ಅಲ್ಲಿಜಾನಕಿ ತನ್ನ
ತೇಜವ । ನಿಲ್ಲಿಸುತ್ತವನಿಯೊಳು ರಚಿಸಿದ । ಉಲ್ಲಸದೊಳತಿ ಪಾವನಪ್ರ
ದವೆನಿಪ ತೀರ್ಥವನು ॥ ಎಲ್ಲಬಾಂಧವರೊಡನೆ ಬಂದನು । ನಿಲ್ಲದಾರಘು
ವರನು ಸಾಗರ । ದಲ್ಲಿ ಗಂಗೆ ಸಹಸ್ರವಾಹಿನಿಯಾಗಿಬೀಳ್ವೆಡೆಗೆ ॥ ೩೯ ॥
ಮಿಂದು ಸಾಗರತೀರ್ಥದೊಳು ರಘು । ನಂದನನು ಸಾಗರದೆ ಯಮುನೆ
ಯು । ಬಂದು ಸಂಗಮವಾಗುವಲ್ಲಿಗೆ ಭರದೊಳೈತಂದು ॥ ಸುಂದರವೆ
ನಿಪ ಪುಣ್ಯದೆಡೆಗಳ । ನಂದದಿಂದೆ ವಿಲೋಕಿಸುತ ನಡೆ । ತಂದನಾ ಸತಿ
ಸಹಿತ ವರಪುರುಷೋತ್ತಮಸ್ಥಳಕೆ ॥ ೪೦ ॥ ಮಿಂದು ಪೂರ್ವಸಮುದ್ರ
ತೀರದೊ । ಳಿಂದುಮುಖಿ ಜಾನಕಿಯೊಡನೆ ನಲ । ವಿಂದೆ ಬಹುವಿಧ ದಾ
ನಧರ್ಮಂಗಳನುತಾನೆಸಗಿ ॥ ಬಂದುಗೋದಾವರಿಯತೀರಕೆ । ಚಂದದಿಂದಲೆ
ತನ್ನಪೆಸರಿನೊ । ಳೊಂದು ಬೆಟ್ಟವನಿರ್ಮಿಸಿದನಾ ರಾಘವೇಶ್ವರನು ॥ ೪೧ ॥
ಪರಮಪಾವನ ಸಪ್ತಗೋದಾ । ವರಿಯ ಸಂಗಮತೀರವೆನಿಪಾ । ಶರಧಿ
ಯೊಳು ಮಿಂದವನಿನಂದನೆವೆರಸಿ ರಾಘವನು ॥ ಹರುಷದಿಂದಲೆ ದಕ್ಷಿಣಾಶೆ
ಗೆ । ಬರುತ ಮೂಡಣದೆಸೆಯ ಯಾತ್ರೆಯ । ನಿರದೆಮುಗಿಸುತ್ತಂದು
ಬಂದನು ವರಮಹಾನದಿಗೆ ॥ ೪೨ ॥ ಸ್ನಾನವನುತಾಂ ಮಾಡಿ ರಘುಜ
ಮ । ಹಾನದಿಯೊಳಾದಿನ ಮುದದೊಳಾ । ಪಾನಕದ ನರಸಿಂಹಮೂರ್ತಿಗೆ
ನಮಿಸಿಭಕ್ತಿಯಲಿ ॥ ಜಾನಕಿಸಹಿತ ಸಾಗರಕೆ ಕೃ । ಷ್ಣಾನದಿಯು ಬೀ
ಳುವಡದೊಳು । ಸ್ನಾನವನೆಸಗಿ ಬಂದನು ಶ್ರೀಶೈಲಪರ್ವತಕೆ ॥ ೪೩ ॥
ನೀಲಗಂಗೆಯೊಳಾ ರಘುಪತಿ ವಿ । ಶಾಲಲೋಚನೆ ಯೊಡನೆಮಿಂದಯುತ ।
ಶೈಲದೊಳು ವರಮಲ್ಲಿಕಾರ್ಜುನನನ್ನು ಪೂಜಿಸುತ । ಮೇಲೆನಿಸುವ ಬ್ರ

ಸ್ತ್ರಕುಂಡದೊ | ಳೇಳಗೆವಡೆದ ಭೀಮಕುಂಡದೊ | ಳಾ ಲಕುಮಿನಾಯ
ಕನು ಮಿಂದನು ಭಕ್ತಿಭಾವದಲಿ ‖ ೪೪ ‖ ಮಂಗಳಾಕರವಹ ನಿವೃತ್ತಿ
ಯು | ಸಂಗಮದೊಳಾ ತುಂಗಭದ್ರಾ | ಸಂಗಮದೊಳಾ ವಿನುತಭವನಾ
ಶಿನಿಯೊಳಾತೆರದೆ ‖ ಅಂಗನಾಮಣಿಯ ನೊಲಿಸುತ ರಘು | ಪುಂಗವನು
ಸಂತೋಷದಿಂದಲೆ | ಕಂಗೊಳಿಸುವ ಮಹಾನದೀಸರದಲ್ಲಿ ಮುಳುಗಿದ
ನು ‖ ೪೫ ‖ ಬಳಿಕಹೋಬಿಲ ನಾರಸಿಂಹನ | ನೊಲಿದುಪೂಜಿಸಿ ಕಂಬ
ಕತ್ತಿಭರ | ದೊಳರದಾಗಿಸುತ ಪ್ರದಕ್ಷಣೆಗಳನು ಮೂರುಸಲ ‖ ತಳು
ವದಾಗಲೆ ಪುಷ್ಯಗಿರಿಯಾ | ಬಳಗೆ ನಡೆತಂದಾಪಿನಾಕಿನಿ | ಯೊಳು ಮು
ಳುಗಿ ಪುಣ್ಯಸ್ಥಳಗಳನು ನೋಡುತ್ತೈತಂದ ‖ ೪೬ ‖ ಈಕ್ಷಿಸಿ ಮಹಾಲಿಂಗ
ವನು ಕವ | ಲಾಕ್ಷನಾ ಪಂಪಾಸರೋವರ | ಕಾಕ್ಷಣಗೊಳ್ಳೈತಂದು ಕಿ
ಷ್ಕಿಂಧಾಪುರವಪಾದರ್ಗ ‖ ಋಕ್ಷವಾನರವೀರರನೊಲಿಸು | ತಾಕ್ಷಣವೆಸು
ಗ್ರೀವನನು ಪದೆ | ದೀಕ್ಷಿಸುತ ಮೆರೆವಾಪ್ರವರ್ಷಣಗಿರಿಗೆ ನಡೆತಂದ ‖
‖ ೪೭ ‖ ಭೀಮಕುಂಡದೊಳಂದು ವಿಾಯುತ | ಭೂಮಿಪಾಲಕನಾ
ಕುಮಾರ | ಸ್ವಾಮಿಯನು ಕಂಡರ್ಚಿಸುತ್ತಲಗಸ್ತ್ಯಕುಂಡದಲಿ ‖ ಆ
ಮಹೀಸುತೆಸಹಿತ ಮಿಂದಾ | ಹೇಮಗಿರಿಯೊಳು ಕಂಗೊಳಿಸುವಾ |
ಕೋಮಲತರದ ಶಂಭುದೇವನ ಪದವನರ್ಚಿಸಿದ ‖ ೪೮ ‖ ವೀರಭದ್ರನ
ನೀಕ್ಷಿಸುತ ರಘು | ವೀರನಾ ವೇಂಕಟಗಿರಿಗೆ ಸರ | ಸೀರುಹಾನನೆಯೊ
ಡನೆವಂದಿಸಿ ಬಂದುತಿರುಪತಿಗೆ ‖ ಚಾರುತರದಾಕೃತಿಯ ನಾಂತುರೆ |
ತೋರುತಿಹ ಗೋವಿಂದರಾಜನ | ಭೂರಿಪದಪಂಕೇಜಕೆರಗಿದ ನಧಿಕಭ
ಕ್ತಿಯಲಿ ‖ ೪೯ ‖ ಘನಕಪಿಲಧಾರೆಯೊಳು ಮಿಂದಾ | ಮನುಕುಲೇಂದ್ರ
ನು ತೀರ್ಥಕರ್ಮವೆ | ವಿನಯದೊಳೆಸಗಿ ಬಂದುಶೇಷಾಚಲಕೆಶೀಘ್ರದಲಿ ‖
ವಿನುತ ಪುಷ್ಕರಣಿಯಲಿ ಮುಳುಗುತ | ವನಿಜೆಯುಸಹಿತ ವೇಂಕಟೇ
ಶ್ವರ | ನನೊಲಿದರ್ಚಿಸಿ ಪಂಚತೀರ್ಥಕೆ ಬಂದನಲ್ಲಿಂದೆ ‖ ೫೦ ‖
ಅದರೊಳು ಸ್ನಾನವನುಮಾಡಿಮು | ಡದಿವೆರಸಿ ತಾಂಸ್ವರ್ಣಮುಖಿತೀ |
ರದಲಿಪೂಜಿಸಿ ಕಾಳಹಸ್ತೀಶ್ವರನ ಪದಗಳನು ‖ ಮುದದೆಕಾಂಚೀನಗರ
ಕೈತಂ | ದೊದಗಿದ ಹರುಷದಿಂದೆ ತಾಂಮುಳು | ಗಿದನು ಪಾವನಸರ್ವ
ತೀರ್ಥದೊಳಧಿಕಭಕ್ತಿಯಲಿ ‖ ೫೧ ‖ ತಳುವದೇಕಾಮ್ರೇಶ್ವರನ ಪದ |
ಗಳನು ಪೂಜಿಸಿರಾಮಚಂದ್ರನು | ಬಳಿಕ ಕಾಮಾಕ್ಷಿಯನು ಪೂಜಿಸಿ
ವೇಗವತಿಯೊಳಗೆ ‖ ಮುಳುಗಿತನ್ನಯ ಸತಿಸಹಿತ ಕಂ | ಗೊಳಿಸುವ
ವರದರಾಜನ ಪದಕ | ಮಲವಪೂಜಿಸಿ ಪಕ್ಷಿತೀರ್ಥಕೆಬಂದನಲ್ಲಿಂದ ‖

॥ ೫೨ ॥ ಮೆರೆವ ಪುಷ್ಪವಿಧಾತೃಗಳೆನಿಸು । ವೆರಡುಹಕ್ಕಿಗಳನ್ನು ತ
ಸ । ತ್ವರಿಸುತ ಕ್ಷೀರನದಿಯೊಳು ಮಿಂದೊಡನೆ ರಾಘವನು ॥ ಭರದೆ
ಣಿದೆರಗಿ ತ್ರಿವಿಕ್ರಮು । ನುರುಚರಣ ಕರುಣಾಚಲಕೆ ಬಂ । ದಿ
ಪೂಜೆಸಿದನರುಣಾಚಲ ಮೂರ್ತಿಯುನುನಲಿದು ॥ ೫೩ ॥ ಬಂದುವೃ
ಚಲಕೆ ಕಡುಜವ । ದಿಂದೆರಾಮನು ಪೂಜೆಸಿದನೊಲ । ವಿಂದೊಡನೆ
ದ್ಧಾಚಲೇಶ್ವರ ಚರಣಪಂಕಜವ ॥ ಇಂದುಮುಖಿ ಸಹಿತೊಡನೆ ತ
ನಡೆ । ತಂದು ವಟಪಾಲನಕೆಸಂತಸ । ದಿಂದೆ ವಟಪಾಲೇಶ್ವರಂಗೆರಗಿದ
ಪೂಜೆಸುತ ॥ ೫೪ ॥ ವಿನಯದೆ ಶ್ರೀಮುಷ್ಟಿಯೊಳು ಮೋ । ಲೆಸಿಪ
ಜ್ಞವರಾಹಮೂರ್ತಿಯ । ನಿನಕುಲೋತ್ತಮನರ್ಚಿಸಿ ಚಿದಂಬರವ
ಕ್ಷಿಸುತ ॥ ಜನಕಜೆಯೊಡನೆ ಬಂದುಮಿಂದನು । ಜನರದುರಿತವನೆಲ್ಲಕ
ಗಿಪ । ಮುನಿವಿನುತ ಕಾವೇರಿನದಿಯೊಳು ತಳೆದುಹರ್ಷವನು ॥ ೫
ಬಂದುಸಿಂಹಕ್ಷೇತ್ರಕಾ ರಘು । ನಂದನನು ಬ್ರಹ್ಮೇಶ್ವರನಿಗಾ । ನ
ದಿಂ ಮಣಿದಲ್ಲಿ ವೈದ್ಯೇಶ್ವರನನರ್ಚಿಸುತ ॥ ಬಂಧುಮಿತ್ರರನೊಲಿಸು
ತ । ವ್ಯಂದಿರಸಹಿತ ಮುದಪಥದೊಳ್ಳೆ । ತಂದನು ಶ್ವೇತಾಟವಿಗೆ ಬ
ಸಂತಸವನಾಂತು ॥ ೫೬ ॥ ಸ್ನಾನವನೆಸಗಿ ಶಂಖಮುಖ್ಯದೊ । ಳ
ರೇಂದ್ರನು ಪುಷ್ಪಕವರ ವಿ । ಮಾನದೊಳು ನಡೆತಂದುಭಾಯಾಮ
ನೀಕ್ಷಿಸುತ ॥ ಜಾನಕಿಯೊಡನೆ ತಾಳ್ದುಬಹುಸಂ । ಮಾನವನು ಗೌ
ಮಯೂರಕೆ । ಸಾನುರಾಗದೆಬಂದು ವೇದಾರಣ್ಯವನುಕಳೆದು ॥ ೫
ಎರಗಿಮಧ್ಯಾರ್ಜುನನ ಪದಪಂ । ಕರುಹಕರ್ಚಿಸಿ ಬಳಿಕಲಾರಘು ।
ರನು ಸನ್ನುತ ವೃದ್ಧಕಾವೇರಿಯೊಳು ಮಿಾಯುತ್ತ ॥ ಅರಸಿಯೊಡ
ಕುಂಭಕೋಣಕ್ಕೆ । ಬರುತಪೂಜಿಸಿ ಪದ್ಮನಾಭನ । ಚರಣವನೆಸೆವವ
ತ ಬೃಂದಾವನಕೆ ನಡೆತಂದ ॥ ೫೮ ॥ ಮನುಕುಲೇಂದ್ರನು ಸಾರನ
ಗೆ । ಮಣಿಯುತ ಶ್ರೀವಾಛನನು ಕಂ । ಡನುನಯದೆ ಪೂಜೆಸುತಕಂ
ಪ್ರಯಾಗಮಾಧವನ ॥ ಮುನಿನುತಾಭ್ರಶಿರಸ್ಥಳಕೆ ಬಂ । ದಿನಿಯ
ಸಹಿತ ಕಂಡುಪೂಜಿಸಿ । ದನೊಡನೆ ತ್ಯಾಗೇಶ್ವರನನಂದು ಕಮಲ
ಯದೆ ॥ ೫೯ ॥ ವರಗಯಾತೀರ್ಥದೊಳು ಮಿಂದು । ತ್ವರಿತದಿಂದ
ಜನಸಹಿತಾ । ಧರಣಿನಾಥನು ದಕ್ಷಿಣದ್ವಾರಕೆಗೆನಡೆತಂದು । ಮೆರೆವಗೆ
ವಿಂದ ನಡಿದಾವರೆ । ಗೆರಗಿ ಚೇಪಾಳಪುರದೊಳು ಶುಭ । ಕರನೆ
ಕೊಂಡು ಮೆರೆವ ಭವೇಶ್ವರನನರ್ಚಿಸಿದ ॥ ೬೦ ॥ ಮುನ್ನನೆಲೆಗೊ
ದ ವಿನಾಯಕ । ನನ್ನು ಪೂಜೆಸುತಲ್ಲಿ ರಾಮನು । ತನ್ನಬಂಧುಗಳೊ

ನೆ ನವಪಾಷಾಣದೊಳುಮಿಂದು ॥ ಮನ್ನಿಸುತಖಿಳ ಮನುಜರನುಸಲೆ ।
ಸನ್ನುತಿವಡೆದು ಧಾರಿಣಿತಲದೊ । ಳುನ್ನತಿಯನಾಂತೆಸೆವ ದೇವೀನಗರ
ಕೈತಂದ ॥ ೬೧ ॥ ಅಲ್ಲಿರುವ ವೇತಾಳತೀರ್ಥದೊ । ಳೆಲ್ಲರೊಡನೆ ಸ್ನಾ
ನವನೆಸಗಿ । ಯುಲ್ಲಸವನಾಂತಾ ಸಮುದ್ರೋದಕವ ಕಳೆಯುತ್ತ ॥
ಎಲ್ಲಪುಣ್ಯಸ್ಥಳಗಳನು ತಾ । ನಲ್ಲಿನೋಡುತ ಬಂದುಮುಂಗಡೆ । ಯಲ್ಲಿ
ಭೈರವತೀರ್ಥದೊಳು ಮುಳುಗಿದನು ರಾಘವನು ॥ ೬೨ ॥ ಬಳಿಕ ರಾ
ಮೇಶ್ವರಕೆ ನಡೆತಂ । ದಿಳಿದು ಪುಷ್ಪಕವರವಿಮಾನವ । ಮುಳುಗಿ ಲ
ಕ್ಷ್ಮಣಕುಂಡದೊಳಮಲ ರಾಮಕುಂಡದೊಳು ॥ ತಳುವದವರಂತಗ್ನಿ
ಕುಂಡದೊ । ಳೊಲಿದುಮಿಾಯುತ ದಕ್ಷಿಣದಡೆಸೆ । ಯೊಳೆಸೆವ ಧನು
ಷ್ಕೋಟಿಗೊಲಿದೈತಂದನಾರಾಮ ॥ ೬೩ ॥ ವರಧನುಷ್ಕೋಟಿಯೊಳುಮಿಂ
ದು ದ । ಶರಥಭೂಪಾಲಸುತ ನತ್ತಾ । ದರದೊಳು ಸ್ನಾನವನುಮಾಡಿ
ಜಟಾಯುತೀರ್ಥದೊಳು ॥ ಹರುಷದಿಂದಲೆ ಗಂಧಮಾದನ । ಗಿರಿಯನವ
ಲೋಕಿಸುತ ವಿಶ್ವೇ । ಶ್ವರನಪಾದವ ಪೂಜಿಸಿದನಾ ಜನಕಸುತೆಸಹಿತ ॥
॥ ೬೪ ॥ ಬಳಿಕರಾಮೇಶ್ವರನ ಪಾದಕ । ಮಲವನರ್ಚಿಸಿ ವಿನುತಗಂ
ಗಾ । ಜಲಗೊಳಭಿಷೇಕವನು ಸಂತಸದಿಂದೆ ತಾನೆಸಗಿ ॥ ಬಳಿಯುಮೊದ
ಲಾಪಾತ್ರಗಳೆಲ್ಲವ । ತಳುವದೆ ಧನುಷ್ಕೋಟಿಯೊಳು ಬಿ । ಟ್ಟೊಲವಿನಿಂ
ದಲೆ ಕೋಟಿತೀರ್ಥವನಲ್ಲಿ ಕಲ್ಪಿಸಿದ ॥ ೬೫ ॥ ಶ್ವೇತಮಾಧವ ದೇವರನು
ಸಂ । ಪ್ರೀತಿಯಿಂದಲೆಕಂಡು ರಾಮನು । ಸೀತೆಯನೊಲಿಸುತೊಂದು
ತಿಂಗಳವರೆಗಮಲ್ಲಿದ್ದು ॥ ಭೂತಪತಿಯು ನೊಲಿಸುತ ಸಂತೋ । ಷಾತಿ
ಶಯದಿಂದಖಿಳ ದಾನವ । ನಾತನೊಲಿದಿತ್ತನುಪಚರಿಸುತ ವಿಪ್ರರೆಲ್ಲರಿಗೆ ॥
॥ ೬೬ ॥ ಸ್ನಾನವನೆಸಗಿ ಕೋಟಿತೀರ್ಥದೊ । ಳಾನರೇಂದ್ರನು ಬಾಗಿ
ಲೊಳಿಹ ಗ । ಜಾನನಂಗಭಿನಮಿಸಿ ಸಾಗರಜಲವನುತ್ತರಿಸಿ ॥ ಸಾನು
ರಾಗವೊಳೊಲಿಸುತೆಲ್ಲರ । ನಾನಿಮಿಷವೊಳು ದರ್ಭಶಯನಕೆ । ತಾನು
ಬಂದು ಮುಳುಗಿದನಾ ನಿಕ್ಷೇಪಿಕಜಲದಲಿ ॥ ೬೭ ॥ ಬಂದುರಾಮನು ತಾ
ಮ್ರಪರ್ಣೀ । ಸಿಂಧುಸಂಗಮದಲ್ಲಿ ಮುಳುಗಿ । ಸ್ಕಂದಮೂರ್ತಿಯನ
ರ್ಚಿಸುತ ನವವೇಂಕಟೇಶನನು ॥ ಸಂದಸಂತಸದಿಂದೆ ಪೂಜಿಸಿ । ಮುಂ
ದೆಸೆವ ತೋತಾದ್ರಿಯನು ಕಂ । ಡಂದು ವರಕನ್ಯಾಕುಮಾರಿಗೆ ಬಂದನ
ಲ್ಲಿಂದೆ ॥ ೬೮ ॥ ಘನಸುಸೇಂದ್ರಕೆ ಪೋಗಿರಘುನಾ । ಥನು ಪಯೋಷ್ಣಿ
ಯೊಳು ಮುಳುಗಿದನಾ । ಜನಕಸುತೆಸಹಿತರ್ಚಿಸುತ್ತಲನಂತಮೂರ್ತಿ
ಯನು ॥ ವಿನುತಿವಡೆದೆಸೆವಾ ಅನಂತಶ । ಯನಕೆಬಂದು ಸ್ನಾನವನೆಸಗಿ ।

ವನಮಲ ಪದುಮತೀರ್ಥ ಶಂಖಸುತೀರ್ಥಗಳೊಳಲ್ಲಿ ||೧೯|| ಮತ್ತೆ ಮ
ತ್ಸ್ಯನದಿಯೊಳು ರಾಘವ | ನುತ್ತರದಿಶೆ ಗಭಿಮುಖನೆಂದೆನಿ | ಸುತ್ತ
ಮಿಂದನು ಜಾನಕಿಯೊಡನೆ ಸಂತಸವೆಸಾಂತು || ಉತ್ತಮೋತ್ತಮವಾಗಿ
ಕಂಗೊಳಿ | ಸುತ್ತವನಿ ಮಂಡಲದೊಳುನ್ನತಿ | ವೆತ್ತ ಧರ್ಮಾಧರ್ಮಸರಸಿ
ಯೊಳಲ್ಲಿಮುಳುಗಿದನು || ೨೦ || ವನಧಿತೀರದೊಳಿರುತಿಹ ಜನಾ | ರ್ದ
ನನ ಸುಕ್ಷೇತ್ರಕಿನಕುಲನಾ | ಥನು ಬರುತಮಾವಾಸ್ಯೆ ಪುಣ್ಣಿಮೆಯ
ದಿವಸಂಗಳಲಿ || ವಿನುತಗಂಗಾಧಾರ ಸಾಗರ | ಘನತರದಸಂಗಮದೊಳು
ಮುಳುಗಿ | ವಿನಯದಿಂದೆ ಜನಾರ್ದನಸ್ವಾಮಿಯನು ಪೂಜಿಸಿದ || ೨೧ ||
ಕಾಣುತ ಸ್ತ್ರೀರಾಜ್ಯವೆನುಬಲು | ಜಾಣತನದಿಂದಲ್ಲಿ ಹೋಗದೆ | ರಾಣಿ
ಯನೊಲಿಸುತಾ ರಘುವರನು ಬಹುವಿನೋದದಲಿ || ಕ್ಷೋಣಿಮಂಡಲ
ದಕ್ಷಿಣಾಗ್ರ | ಸ್ಥಾನದೊಳು ಘೃತಮಾಲಕ್ಕೃತ ಮಾ | ಲಾನದಿಗಳೊಳು
ಮಿಂದು ಸಿಂಧೂನದಿಗೆನಡೆತಂದ || ೨೨ || ಮಿಂದು ಸಿಂಧೂನದಿಯೊ
ಳು ಧರಾ | ನಂದನೆಯನೊಲಿಸುತ್ತ ಬಂದನು | ಸುಂದರತರ ಗಜೇಂದ್ರ
ಮೋಕ್ಷ ಕ್ಷೇತ್ರಕತಿಭರದೆ || ಚೆಂದಮೆನಿಪಾ ತಾಮ್ರಪರ್ಣಿಯೊ | ಳಂದ
ವಹ ವೈನಾಕತೀರ್ಥದೊ | ಳಂದುಮಿಂದನು ರಾಘವೇಂದ್ರನು ತನ್ನ
ಸತಿಸಹಿತ || ೨೩ || ಮೆರೆವ ಚಂದ್ರಕುಮಾರಗಿರಿಯನು | ಭರದೊಳೀ
ಕ್ಷಿಸಿ ರಾಘವೇಶ್ವರ | ನಿರದೆ ದಕ್ಷಿಣಕಾಶಿಗೈತಂದೊಲಿಸಿ ಶಂಭುವನು ||
ತ್ವರೆಪಡುತ ಚಂಪಕವನವ ಕಂ | ಡಿರದೆ ಚಿತ್ರದ್ಯುನದಿಜಲದೊಳು |
ಹರುಷದಿಂದಲೆಮುಳುಗಿ ಹರಿಹರರನೊಲಿದರ್ಚಿಸಿದ || ೨೪ || ಬಂದು ಮ
ಧುರೆಗೆ ವೇಗವತಿಯೊಳು | ಮಿಂದುವರ ಮೀನಾಕ್ಷಿಗೆನಮಿಸಿ | ಸುಂದರೇ
ಶ್ವರನನ್ನು ಪೂಜಿಸಿ ರಾಘವೇಶ್ವರನು || ವಂದಿಸಿ ದ್ರವಿಡಗಿರಿಯೊಳುಸಾ |
ನಂದದಿಂದಲೆ ವೆಂಕಟೇಶನಿ | ಗಂದುಬಂದನು ಭರದೊಳಾ ಶ್ರೀರಂಗಕತಿ
ಮುದದೆ || ೨೫ || ಹರಿವಕಾವೇರಿಯೊಳು ಮಿಾಯುತ | ಹರುಷದಿಂದಲೆ
ರಂಗನಾಥನ | ಚರಣಕೆನಮಿಸಿ ಜಂಬುಕೇಶ್ವರನಿಗವನತನಾಗಿ || ಕರವ
ಮುಗಿದಾ ಮಾತೃಭೂತೇ | ಶ್ವರನವಂದಿಸಿ ಮುದದೆರಾಮನು | ಭರ
ದೊಳವಿನಾಶಿಯನು ನೋಡುತಮುಂದಕೈತಂದ || ೨೬ || ರಾಮನಾ
ಶ್ರೀರಂಗಪಟ್ಟಣ | ಕಾ ಮಹೀಸುತೆಯ ನೊಲಿಸುತ್ತಾ | ವ್ಯೋಮಯಾ
ನದೆ ಕುಳಿತುಕೊಂಡೈತಂದು ಭಕ್ತಿಯಲಿ || ಹೈಮವತಿಯೊಳು ಮಿಂದು
ಸಾಲ | ಗ್ರಾಮವನು ಪೂಜಿಸುತಬಂದನು | ರಾಮನಾಥನಗರಿಗೆ ಬಂಧೂ
ಜನರನೊಲಿಸುತ್ತ || ೨೭ || ಅಲ್ಲಿಮೆರೆವ ಕುಮಾರಧಾರೆಯೊ | ಳೆಲ್ಲಮ

ನುಜರೊಡನೆ ಮುಳುಗಿ ಮ | ತ್ತೆಲ್ಲಿನಿಲ್ಲದೆ ಯುಡುಪಿಗೈತಂದಾ ರಘೂ ದ್ವಹನು || ಸಲ್ಲಲಿತ ವಸ್ತುಗಳನೊಪ್ಪಿಸಿ | ನಲ್ಲಳನೊಲಿಸು ತರ್ಚಿಸಿದ ಮನ | ದಲ್ಲಿ ಸುಬ್ರಹ್ಮಣ್ಯ ಕೃಷ್ಣಸ್ವಾಮಿಗಳನೆನೆದು || ೭೮ || ಬಂದು ಶೃಂಗಾಭ್ರಮಕೆ ಸಂತಸ | ದಿಂದೆ ತುಂಗಾನದಿಯೊಳು ಮುಳುಗಿ | ವಂದಿಸುತ ಶೃಂಗಗಿರಿಯೊಳು ಶಾರದೆಗೆಭಕ್ತಿಯಲಿ || ಬಂದುನೋಡುತ ಕುಂಭಕಾಶಿಯು | ನಂದುಕೋಟೀಶ್ವರಕೆ ತಾನೈ | ತಂದನಾ ರಘುವರನು ಸೀತೆಗೆಸಂತಸವನೆಸಗಿ || ೭೯ || ಹರನಪೂಜಿಸಿ ವೀರರಾಘವ | ನೆರಗಿ ಮೂಕಾಂಬಿಕೆಗೆ ವಂದಿಸಿ | ವರಗುಣವತೀಶ್ವರನಿಗೆ ಮಣಿದುಸುಂದರೇಶನಿಗೆ || ಮೆರೆವಧಾರೇಶ್ವರನ ಪಾದವ | ನಿರದೆಪೂಜಿಸಿ ವಿನುತಗೌರೀ | ಶ್ವರಗೆರಗಿ ಸರ್ಜೇಶ್ವರನನಾದರದೆ ಪೂಜಿಸಿದ || ೮೦ || ಬಳಿಕಗೋಕರ್ಣಕ್ಕೆ ಬಂದಿನ | ಕುಲತಿಲಕನು ಮಹಾಬಲೇಶ್ವರ | ದೊಳು ಮಹೇಶನಪದವನರ್ಚಿಸಿ ಹರಿಹರೇಶ್ವರಕೆ || ತಳುವದೈತಂದಖಿಳ ತೀರ್ಥಂ | ಗಳೊಳು ಮುಳುಗಿಮಹೇಂದ್ರಗಿರಿಗಾ | ಗಲೆ ನಡೆತರುತ ಪೂಜಿಸಿದನಾ ಪರಶುರಾಮನನು || ೮೧ || ಬಂದುಭೀಮೇಶ್ವರಕೆ ರಾಘವ | ನಂದು ಭೌಮಮಹಾಬಲನಿಗಾ | ನಂದದಿಂದೆರಗುತ್ತ ಕರವೀರಪುರಕೈತಂದು || ಮಿಂದು ಕೃಷ್ಣಾವೇಣಿಸಂಗಮ | ದಿಂದೆಸೆವತೀರದೊಳು ಸಂತಸ | ದಿಂದೆಬಂದನು ವರಗದಾಲಕ್ಷ್ಮೀಶ್ವರಕೆಕೂಡೆ || ೮೨ || ವರಘಟಪ್ರಭೆಯಲ್ಲಿ ಮಿಂದುರು | ತರದ ಮಲ್ಲಾರೀಶ್ವರನ ಪದ | ಕೆರಗಿ ರಾಘವನಾಘನಶರಾನದಿಯತೀರದಲಿ || ಮೆರೆವಪಾವನ ವಕ್ರತುಂಡನ | ಚರಣಕರ್ಚಿಸಿ ಮುಂದಕೆಬರುತ | ಹರಿವಸೀರಾನದಿಯೊಳು ಸ್ನಾನವನುಮಾಡಿದನು || || ೮೩ || ವಿನುತನರಸಿಂಹನನು ಪೂಜಿಸಿ | ತನುವನೀಡುತ ಪಾಂಡುರಂಗನಿ | ಗಿನಕುಲೇಂದ್ರನು ಚಂದ್ರಭಾಗಾನದಿಯೊಳಗೆ ಮಿಂದು || ಜನವಿನುತ ಭೀಮಾನದಿಯೊಳಾ | ದಿನವೆ ಮೀಯುತಬಂದು ಚಂದ | ಲ್ಲನು ತಳುವದೀಕ್ಷಿಸುತಲಾ ಪ್ರೇಮಪುರಕೈತಂದ || ೮೪ || ಎರಗಿ ಮಾತಾಂಡೇಶ್ವರನ ಪದ | ಕರಸಿಯುನೊಲಿಸುತಾ ರಘೂದ್ವಹ | ನಿರದೆ ನಳದುರ್ಗವನು ಕಾಣುತ್ತ ತಲಜಾಪುರಿಗೆ || ಬರುತ ಮಾಣಿಕ್ಯಾಂಬಿಕೆಗೆರಗಿ | ಗಿರಿಜೆಯನು ಪೂಜಿಸುತ ಲಂಬಾ | ಪುರಿಯೊಳು ವರಾಂಬೆಯನು ವಂದಿಸಿದನತಿಭಕ್ತಿಯಲಿ || ೮೫ || ಬಳಿಕಪೂಜಿಸಿ ವೈಜನಾಥನ | ನೊಲವಿನಿಂದಾರಾಘವೇಂದ್ರನು | ಲಲನೆಯುಸಹಿತವಂ ಜರಾಸಂಗಮಕೆನಡೆತಂದು || ತ್ರಿಳಮನಾಗೇಶ್ವರನ ಪಾವಕ | ಮಲವನರ್ಚಿಸಿ ಬಂಧುಗಳೊಡನೆ | ಕ

ಲೆತುಬಂಗನು ಹರಿವಪ್ರಾರ್ಣಾನದಿಯುಸಂಗವುಕೆ ॥ ೮೬ ॥ ಅಲ್ಲಿಗೋ
ದಾತಟನಿಗುತ್ತರ । ದಲ್ಲಿ ರಾಮನು ತನ್ನುಯುಪೆಸರಿ । ನಲ್ಲಿ ಸ್ಥಿರಪನಪೊಂ
ದನಿರ್ಮಿಸಿ ಮುದ್ಗಲಾಶ್ರಮಕೆ ॥ ಎಲ್ಲರೊಡನೈತಂದು ಮುಂಗಡೆ । ಯಲ್ಲಿ
ಫೇನಾ ಸಿಂಧುಸಂಗವು । ದಲ್ಲಿಮಿಂದನು ಬ್ರಹ್ಮತೀರ್ಥದೊಳಂತೆ ಮಾ
ಯುತ್ತ ॥ ೮೭ ॥ ಮೆರೆವಗೋದಾವರಿಯ ತೀರದ । ಸುರುಚಿರಾಬ್ಧಿಕ
ತೀರ್ಥದೊಳು ಮಿಂ । ದರಸಿಯೊಡನಾ ರಾಘವೇಂದ್ರನು ನಮಿಸುತಂಬಿ
ಕೆಗೆ ॥ ಭರದೊಳು ತ್ರಿವಿಕ್ರಮನ ನರ್ಚಿಸು । ತಿರದೆ ಚಂಡಿಕಯನ್ನು
ಪೂಜಿಸಿ । ಹರುಷದಿಂದರ್ಚಿಸಿದ ವಿಜ್ಞಾನೇಶ್ವರನ ನೆಲಿದು ॥ ೮೮ ॥
ಪೊತಮಡುತ ಲಕ್ಷ್ಮಿಯನು ಪೂಜಿಸಿ । ಕದುಜನದೆಬತಬಾಸು ಸಂಗ
ಮ । ಕೊಡನೆನಡೆತಂದಾ ಪ್ರತಿಷ್ಠ್ಯಾನವನು ಕಂಡಿರದ ॥ ನಡೆದುವೃದ್ಧೆ
ಲಾಖ್ಯ ಸಂಗವು । ದೆಡೆಯೊಳು ಸ್ನಾನವನೆಸಗಿ ಮುಂ । ಗಡೆಯೊಳಸವೆ
ಘನಶಿವನಂದಾ ಸಂಗಮಕೆಬಂದ ॥ ೮೯ ॥ ವೆರವನರಸಿಂಹನನು ಪೂಜಿ
ಸು । ತೆರಗಿಸಿದ್ಧೇಶ್ವರನ ನರ್ಚಿಸಿ । ಭರದೊಳಾಪ ವರಾನದೀ ಸಂಗವು
ದೆ ರಾಘವನು ॥ ಬರುತಲೆ ಸಿವಾಸಪುರಿನಗ್ರರ । ಪ್ರಗಳೆಡನು
ಕಂಡುಬಂದನು । ಪರಿಪ್ರಕದೂಸದಿಯ ಸಂಗವುಕಾ ಸತಿಸಹಿತ ॥ ೯೦ ॥
ಮಿಂದು ವಿನತಾಸಂಗವುಕೆ ನಡೆ । ತಂದುರಾಘವನಲ್ಲಿ ಮುಳುಗುತ ।
ಬ ದನುಜನಸ್ಥಾನಕೆ ಮಹೀಸುತೆಯನೊಡಗೊಂಡು ॥ ಬಂಧುಗಳಸಹಿ
ತಲ್ಲಿಕಾಣುವ । ಸುಂದರಸ್ಥಳಗಳನು ನೋಡುತ । ಬಂದನೆಸೆವ ತ್ರ್ಯಂ
ಬಕಕ್ಷೇತ್ರಕತಿ ಭರದಿಂದ ॥ ೯೧ ॥ ವೀರರಾಘವನಲ್ಲಿಮುಪದೊಳು ।
ಮೂರುದಿನಗಳತನಕ ವಾಸಿಸಿ । ಧಾರಿಣೀಸುತೆಸಹಿತ ಶಂಭುವನೊಲಿದು
ಪೂಜಿಸುತ ॥ ತೀರವಾಸಿಗಳನ್ನು ದಣಿಸುತ । ಬಾರಿಬಾರಿಗೆ ದಕ್ಷಿಣದೆಸೆ
ಯು । ಚಾರುತರಘನಯಾತ್ರೆಯನು ತಾಂಮುಗಿಸುತೈತಂದ ॥ ೯೨ ॥
ಮುಂಗಡೆಮೆರೆವ ಸಪ್ತಶೃಂಗಕೆ । ಮಂಗಳಾಂಗನೆ ಸತಿಸಹಿತರಘು । ಪುಂ
ಗವನು ನಡೆತಂದುಬಳಿಕಾ ಗಸ್ತ್ಯಮುನಿಗೆರಗಿ ॥ ಕಂಗೊಳಸುವಸುತೀ
ಕ್ಷ್ಣಮುನಿಪಾ । ಲಂಗೆರಗಿ ಯೇಲಾಖ್ಯಪುರಕೆ ಜ । ನಂಗಳೊಡನೈತಂ
ದುಘೃಷ್ಣೇಶ್ವರನನರ್ಚಿಸಿದ ॥ ೯೩ ॥ ಮುಳುಗಿ ಶಿವತೀರ್ಥದೊಳುಭಾ
ಸ್ಕರ । ಕುಲಲಲಾಮನು ದೇವಗಿರಿಯನು । ನಲವಿನಿಂದೀಕ್ಷಿಸುತ ವಿರ
ಜಾಕ್ಷೇತ್ರಕ್ಕೈತಂದು ॥ ತಳುವದರ್ಚಿಸಿ ಕಂಗೊಳಿಪ ಗುಡಿ । ಯೊಳಹ
ದೇವಿಯ ನಂದುಬಂದನು । ಬಳಿಕವುಂದಿಪದೇವವಾಟಕೆ ಬಂಧುಗಳಸ
ಹಿತ ॥ ೯೪ ॥ ನಮಿಸಿ ನರಸಿಂಹನಿಗೆರಾಮನು । ವಿಮಲಸುಪಯೋಷ್ಣಿ

ಯೊಳು ಕಂಗೊಳಿ | ಪವಮಲ ತಾಪೀನದಿಯುಪಮೂಲದೊಳೊಂದು ಬೆಟ್ಟ ವನು ‖ ಸವೆದುನಿರ್ಮ್ಮಿಸಿ ತನ್ನ ಪೆಸರೊಳು | ಕಮಲಲೋಚನೆ ಸಹಿತ ವಿಂದನು | ವಿಮಲ ಮನದೊಳು ಹರಿವರೇವಾನದಿಯು ಸೀರಿನಲಿ ‖ ‖ ೯೫ ‖ ಮುನಿನುತೋಂಕಾರವನು ಪೂಜಿಸಿ | ಮನುಜನಾಥನು ಬಹು ವಿಧವೆನಿಪ | ಘನತರದ ಪ್ರಣ್ಯಸ್ಥಳಂಗಳ ನೀಕ್ಷಿಸುತ್ತೊಲಿದು ‖ ಜನಕ ಜಾತೆಯುಸಹಿತ ಪಾವನ | ವೆನಿಪ ತಾಪೀನದಿಯೊಳು ಮುಳುಗಿ | ವಿ ನುತರೇವಾಸಂಗಮದೊಳು ಸ್ನಾನವಮಾಡಿದನು ‖ ೯೬ ‖ ಪರಮಹಾನದಿ ಯಲ್ಲಿ ಮಿಂದು ದ | ಶರಥಭೂಪಾಲಕನ ಸುತ ತ | ನ್ನರಸಿಯುನೊಲಿಸು ತಾಪ್ರಭಾಸಕ್ಷೇತ್ರಕ್ಕೈತಂದು ‖ ಸೆರೆವ ನಿರ್ಮ್ಮಲಜಲವನಾಂತತಿ | ಭರದೊ ಳು ಪ್ರವಹಿಸುವಪಾವನ | ತರದ ಪಂಚಸರಸ್ವತೀಸಂಗಮದೆ ಮುಳು ಗಿದನು ‖ ೯೭ ‖ ಬಂದುಸೌರಾಷ್ಟ್ರಕತಿ ಶೀಘ್ರದೊ | ಳಂದವಾಗಿಹ ಸೋಮನಾಥನ | ನಂದು ಪೂಜಿಸಿ ಸಾಭ್ರಮತಿನದಿಯಲ್ಲಿಮುಳುಗುತ್ತ ‖ ಬಂದು ಶಂಖೋದ್ಧಾರಕಕೆ ನಲ | ವಿಂದೆಗೋಮತಿನದಿಯೊಳು ಮು ಳುಗಿ | ಬಂದನುದ್ವಾರಾವತಿಗೆ ರಾಘವನುಸತಿಸಹಿತ ‖ ೯೮ ‖ ಧರಣಿ ಯೊಳೆಸೆವ ಸಪ್ತಮೋಕ್ಷದ ನ | ಗರಿಬಂದಾ ದ್ವಾರವತಿಯುನು | ನೆರೆವಿ ಲೋಕಿಸಿ ತೀರ್ಥವಿಧಿಗಳನೆಲ್ಲತಾನೆಸಗಿ ‖ ಮೆರೆವಖಿಳ ಪ್ರಣ್ಯಸ್ಥಳಂಗ ಳ | ನಿರದೆನೋಡುತ ಮುಗಿಸಿದನು ರಘು | ವರನು ಪಶ್ಚಿಮದಿಶೆಯಯಾ ತ್ರೆಯುನೆಲ್ಲಸಂತಸದೆ ‖ ೯೯ ‖ ಮುಂಪಬಡಗಣ ದೆಸೆಗೆಬರುತಲೆ | ಸಂದ ಸಂತಸದಿಂದೆ ರಾಘವೆ | ನಂಮುಪರ್ವತ ತೀರ್ಥಕ್ಕೈತಂದಪನಿಜೆಯುಸಹಿತ ‖ ಸುಂದರಜ್ವಾಲಾಮುಖಿಗೆ ನಡೆ | ತಂದದನು ಕಂಡಲ್ಲಿ ನಿಲ್ಲದೆ | ಬಂದನತಿಭ ರದಿಂದೆ ಮಣಿಕರ್ಣಿಕೆಗೆ ಹರ್ಷದಲಿ ‖ ೧೦೦ ‖ ಮಿಂದುಕರತೋಯಾ ನದಿಯೊಳಾ | ನಂದದೊಳು ದೇವಪ್ರಯಾಗಕೆ | ಬಂದುರಾಮನು ಸತಿ ಸಹಿತಲಕನಂದೆಯುದಡದಲಿ | ಅಂದವಡೆದಾ ಬದರಿಕಾಶ್ರಮ | ಕಂದು ನಡೆತಂದರ್ಚಿಸಿದನಾ | ನಂದದಿಂದೆರಗುತ್ತ ನರನಾರಾಯಣರನೊಲಿದು ‖ ‖ ೧೦೧ ‖ ಎರಗಿಕೇದಾರೇಶ್ವರನ ವರ | ಚರಣಕಾ ರಘುನಾಥನು ತು ಹಿನ | ಗಿರಿಯುನೀಕ್ಷಿಸಿಬಂದು ಮಾನಸಸರೋವರಕೆ ‖ ಭರದೊಳಲ್ಲಿ ಸ್ನಾನವನೆಸಗಿ | ಮೆರೆವ ಬಿಂದುಸರೋವರಕೆ ಬಂ | ದರಸಿವೆರಸಿಮು ಳುಗಿದನಾ ಕೊಳವಮಲತೀರ್ಥದಲಿ ‖ ೧೦೨ ‖ ಕನಕಗಿರಿಗೈತಂದು ರ ಘುನಂ | ದನನು ಬಳಿಕಲ್ಲಿರುವ ಕಮಲಾ | ಸನನ ಸಭೆಯುನುಕಂಡು ಬೊಮ್ಮನನಪ್ಪಿಕೊಂಡಿರದೆ ‖ ಮನವೊಲಿದು ಸತ್ಕರಿಸಲಬ್ಜಭ | ವನು

ರಘುವರಂಗೆರಗಿ ಪೂಜಿಸಿ । ದನೊಲಿದು ವಿನುತಕಾಮಧೇನುವನಿತ್ತು ಭ
ಕ್ತಿಯಲಿ ॥ ೧೦೩ ॥ ಅದನುಳಿದು ಕೈಲಾಸಶೈಲಕೆ । ಪದೆದುರಘುಭೂವರ
ನು ಬರುತಿರ । ಲಿದನು ತಿಳಿದಾಶಂಕರನು ಸತಿಸಹಿತಿದಿರುವಂದು ॥ ಸುದತಿ
ಸಹಿತವಿಮಾನವ ನಿಳಿದ । ಪದುಮನಾಭನ ನಪ್ಪಿಕೊಳ್ಳುತ । ಮುದದಪೂ
ಜಿಸಿದನತಿ ಭಕ್ತಿಯೊಳೆರಗಿ ಕೈಮುಗಿದು ॥ ೧೦೪ ॥ ಧರಣಿಜಾತೆಗೆಶೈಲ
ನಂದನೆ । ಕರಗಳನುಮುಗಿಯುತ್ತ ಮನ್ನಿಸಿ । ವರವಸನ ಧನಕ
ನಕನವ ರತ್ನಾಭರಣಗಳನು ॥ ತರತರದ ಪೀತಾಂಬರಂಗಳ । ನು
ರುತರದ ಗಂಧಕುಸುಮಂಗಳ । ನಿರದೆ ತಾಪದೆಯಿತ್ತು ಪೂಜಿಸಿದಳ
ತಿಹರ್ಷದಲಿ ॥ ೧೦೫ ॥ ಹರನುಮಾಡಿದ ಪೂಜೆಯನು ರಘು । ವರ
ನು ಕೈಕೊಂಡಲ್ಲಿನಿಲ್ಲದೆ । ಬರುತಮುಂದಕೆ ವರಹರಿದ್ವಾರವನು ನೆ
ರೆನೋಡಿ ॥ ಭರದೊಳು ಕುರುಕ್ಷೇತ್ರವನು ಕಂ । ಡಿರದೆ ಇಂದ್ರ
ಪ್ರಸ್ಥಪುರವನು । ನೆರೆವಿಲೋಕಿಸುತಾ ಮಧುವನಕೆಬಂದನಲ್ಲಿಂದ ॥
॥ ೧೦೬ ॥ ಅದನುಕಂಡಾ ರಘುವರನತಿ ಭ । ರದೊಳು ಬೃಂದಾವನ
ಕೆಬಂದು ಮು । ದದೊಳದನುನೋಡುತ್ತ ಬಳಿಕೈತಂದು ಗೋಕುಲಕೆ ॥
ಸುದತಿಸಹಿತೆಲ್ಲೆಡೆಗಳನು ಕಂ । ಡೊದಗಿದಾನಂದದೊಳು ಧರಣಿತ । ಲ
ದೊಳೆಸೆವ ಗೋವರ್ಧನಾದ್ರಿಗೆ ಬಂದನಾದಿವಸ ॥ ೧೦೭ ॥ ಬಳಿಕವಂ
ತೀಪುರಕೆ ಬಂದಿನ । ಕುಲಲಲಾಮನು ಪೂಜಿಸಿಭಕುತಿ । ಯೊಳುಮಹಾ
ಕಾಲನನು ನಡೆತಂದಾಪುರವನುಳಿದು ॥ ಹೊಳೆವ ಗರುಡಕ್ಷೇತ್ರವನುತಾ ।
ತಳುವದೀಕ್ಷಿಸಿ ಜಲಧಿಕೂಪವ । ಕಳೆದುಬಂದನು ನೈಮಿಶಾರಣ್ಯಕೆ ವಿ
ಮಾನದಲಿ ॥ ೧೦೮ ॥ ವಿನುತ ಗೋಮತಿತೀರ್ಥದೊಳು ತ । ನ್ನಿನಿ
ಯಳವೆರಸಿ ಮಿಂದು ರಘುನಂ । ದನನು ಬೇಗನೆಸೂತಶೌನಕರಾದಿಯಾ
ಗಿರುವ ॥ ಮುನಿಗಳೆಲ್ಲರಿಗೆರಗಿ ಬಹುವಿಧ । ಮನಿಪ ನೀತಿಗಳರಿತುಬಂ
ದನು । ವಿನುತಿವೆತ್ತಾ ಬ್ರಹ್ಮವೈವರ್ತದಸರೋವರಕೆ ॥ ೧೦೯ ॥ ಮು
ದದೆತಾನಾ ಬ್ರಹ್ಮವೈವ । ರ್ತದ ಸರೋವರದಲ್ಲಿ ಮಿಾಯುತ । ಸುದತಿ
ಸಹಿತೈತಂದು ತಮಸಾನದಿಗೆ ರಾಘವನು ॥ ಅದರೊಳು ಸ್ನಾನವೆಸಗಿ ವಿ
ಮಾ । ನದೊಳುಕೂಡುತ ಭರದೆಬಂದನು । ಮುದದೊಳಾಗಿಸಿಕೊಂಡ
ಯೋಧ್ಯಾಪುರಕೆ ಯಾತ್ರೆಯನು ॥ ೧೧೦ ॥ ಸತಿಸಹಿತಯಾತ್ರೆಯನು
ಪೂರೈ । ಸುತ ರಘುಕುಲೋತ್ತಮನು ಬಂದುದ । ನತಿಭರದೆ ಕೇಳ್ದಾ
ಸುಮಂತ್ರನಯೋಧ್ಯೆಯೆಲ್ಲವನು ॥ ವಿತತಸಂಮದದಿಂದ ಲಂಕರಿ । ಸುತ
ಸಕಲವಿಧ ವೈಭವದೊಳಾ । ಕ್ಷಿತಿಪತಿಗಿದಿರುವಂದು ಕೈಮುಗಿದೆರಗಿದನು

ನೆದಕೆ ॥ ೧೧೧ ॥ ವರಸುಮಂತ್ರನ ನೊಲಿದು ಮನ್ನಿಸಿ । ತರತರದ ಬಿರು
ದಾವಳಿಗಳಿಂ । ದುರೆಮೆರೆವಖಿಳ ರಾಜವಿಭವದೊಳಾ ರಘೋದ್ವಹನು ॥
ಬರುತಯೋಧ್ಯಾ ಪುರದ ಮಧ್ಯದೊ । ಳಿರುವ ತನ್ನರಮನೆಗೆ ಬಂದನು ।
ಹರುಷದಿಂದಲೆ ಪುರವನೀಕ್ಷಿಸುತಖಿಳ ಜನಸಹಿತ ॥ ೧೧೨ ॥ ತನ್ನ ಜತೆ
ಯೊಳು ಬಂದವಾನರ । ರನ್ನು ಮನ್ನಿಸುತಾ ರಘೂತ್ತಮ । ನುನ್ನತ
ಸತಾರಾವಳಿಗಳಿಂ ದೆಸೆವರಮನೆಯನು ॥ ಮುನ್ನ ಸೇರುತ ವಂದಿಸುವ
ಜನ । ರನ್ನು ಸಂತಸದಿಂದೆ ಕಾಣುತ । ಮನ್ನಿಸಿದನು ವಿಚಾರಿಸುತವರ
ಕುಶಲವಾರ್ತೆಗಳ ॥ ೧೧೩ ॥ ಒಡನೆ ಬಂದಿಪ್ಪ ನಾಲ್ಕು ದಿಕ್ಕಿನ । ಪೊಡವಿ
ಯರ್ಣ್ಣರಿಗಖಿಳ ಜನರಿಗೆ । ಕಡುಜವದೆ ಸುಗ್ರೀವನು ಮೊದಲೆನಿಸುವಕ
ಪಿಗಳಿಗೆ ॥ ಇಡಿದ ಸಂತಸದಿಂದೆ ರಾಘವ । ನಡಿಗಡಿಗೆ ಸುಖಭೋಜನಂಗ
ಳ । ನಿಡಿಸಿ ತುಷ್ಟಿವಡಿಸಿದ ನೈದುದಿನಗಳಪರಿಯಂತ ॥ ೧೧೪ ॥ ಐದು
ದಿವಸಂಗಳವರೆಗೆ ವಸು । ಧಾಧಿಪಸಿರಿಸಿಕೊಂಡು ವಾನರ । ರಾದಿಯಾಗಿ
ಹ ನಾಲ್ಕುದಿಕ್ಕಿನ ರಾಜರೆಲ್ಲರನು ॥ ಆದರಿಸಿ ಮನ್ನಿಸುತಖಿಳ ಮ । ರ್ಯಾ
ದೆಗಳನಾಗಿಸಿ ಕಳುಹಿದನು । ಮೇದಿನಿಯೊಳವರವರ ದೇಶಂಗಳಿಗೆ ಹರ್ಷ
ದಲಿ ॥ ೧೧೫ ॥ ಧರಣಿಸುತೆ ರಘುಭೂವರನೊಡನೆ । ಹರುಷದಿಂದೀ
ಭರತಖಂಡದೊ । ಳಿರುತಿಹ ಸಕಲಪುಣ್ಯತೀರ್ಥಂಗಳನು ಸೇವಿಸುತ ॥
ವರಮಹಾಯಾತ್ರೆಯನು ತಾನಾ । ಚರಿಸಿ ರಾಜಸುಖಂಗಳನುತ । ನ್ನ
ರಮನೆಯೊಳನುಭವಿಸುತಿರ್ದ್ದಳು ಬಹುವಿನೋದದಲಿ ॥ ೧೧೬ ॥ ಮನ
ವೊಲಿದು ವಾಲ್ಮೀಕಿ ಮುನಿನಾ । ಥನು ಕುಶಲವರಿಗಂದು ಪೇಳಿದ ।
ವಿನುತಿವೆತ್ತಾನಂದ ರಾಮಾಯಣದೊಳೀ ತೆರದೆ ॥ ಜನಕಸುತೆ ಪತಿ
ಸಹಿತಯಾತ್ರೆಗ । ಳನೆಸಗಿದ ಕಥೆ ಕಂಗೊಳಿಸುವುದು । ಜನರ ದುರಿ
ತಂಗಳನು ಪರಿಹರಿಸುತ್ತ ಸಂತತವು ॥ ೧೧೭ ॥ ಜನಕಸುತೆಯಾತ್ರೆ
ಯನು ಮಾಡಿದ । ವಿನುತಸತ್ಕಥೆಯ ನತಿಭಕ್ತಿಯೊ । ಳನುದಿನವು
ನೋದುತಿಹ ಮಾನವರೀಧರಣಿಯೊಳಗೆ । ಘನಕಠಿನ ದುರಿತಂಗಳನು ಕ
ಳೆ । ದನವರತ ತಾನನುಭವಿಸುವರು । ಧನಕನಕ ವಸ್ತ್ರಾಭರಣವೊದವ
ಲಾದ ಭಾಗ್ಯವನು ॥ ೧೧೮ ॥ ವಿನುತಯಾತ್ರಾಧ್ಯಾಯಗಳನನು । ದಿನವು
ತಪ್ಪದವನಿಯೊಳೋದುವ । ಜನರಿಗುಂಟಾಗುವುದು ಯಾತ್ರೆಯನಾಗಿಸಿದ
ಫಲವು ॥ ಮನವೊಲಿದು ಮೇದಿನಿಯೊಳೀ ಕಥೆ । ಯನು ಪಠಿಸುವಬರೆ
ಯುವ ಕೇಳುವ । ಮನುಜರ ಸಕಲಪಾಪಗಳು ನಾಶನವನೈದುವುವು ॥
॥ ೧೧೯ ॥ ಈ ಕಥೆಯನೋದುವಜನರಿಗಾ । ಲೋಕನಾಥನು ತಪ್ಪದೀವ

ನ । ನೇಕವಿಧ ಸೌಖ್ಯಂಗಳನು ಸಂಪ್ರೀತಿಯನುತಾಳ್ದು ॥ ಬೇಕುಬೇ
ಕಾದ ಸುಖಗಳನಿಹ । ಲೋಕದೊಳನುಭವಿಸಿ ಕೊನೆಗಮರ । ಲೋ
ಕದೊಳು ಸದ್ಗತಿಯನೈದುವರಿವನು ಪಠಿಸುವರು ... ॥ ೧೨೦ ॥

ಇಂತು ಮೂವತ್ತೆರಡನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೧೩೪೯.



## ಮೂವತ್ತೂರನೆಯ ಅಧ್ಯಾಯ.

ಸೂಚನೆ॥ ಧರಣಿಜಾತೆಯ ನೊಲಿಸುತಾ ರಘು ।
ವರನು ಹಯಮೇಧಾಧ್ವರಗಳನು ।
ವಿರಚಿಸಿದನು ವಸಿಷ್ಠಮುನಿಪಾಲಕ ನನುಜ್ಞೆಯಲಿ ॥

ಬಳಿಕರಾಘವನೊಂದುದಿನದೊಳು । ಕುಲಪುರೋಹಿತನನ್ನುತನ್ನ ಯ । ಬಳಿಗೆಬರಿಸಿ ಸಮುಚಿತಪೀಠವನಿತ್ತು ಕುಳ್ಳಿರಿಸಿ ॥ ತಳುವದಾತನಿ ಗರ್ಘ್ಯಪಾದ್ಯಂ । ಗಳನುಕೊಟ್ಟರ್ಚಿಸುತತಿ ವಿನಯ । ದೊಳು ತಿಳು ಹಿದನು ತನ್ನಭೀಷ್ಟವನಿಂತು ಕೈಮುಗಿದು ॥ ೧ ॥ ಮುನಿಪನಿಮ್ಮಾಜ್ಞೆ ಯೊಳು ಪಾವನ । ಮೆನಿಪ ವರಹಯಮೇಧ ಯಾಗವ । ಮನವೊಲಿದೆಸ ಗಬೇಕೆನುತಿರುವೆ ನಿದಕೆಬೇಕಾದ ॥ ವಿನುತಸಾಮಗ್ರಿಗಳನು ಜವದೊ । ಳನುಗೊಳಿಸು ವಂತರುಹುವುದು ಲ । ಕ್ಷ್ಮಣನಿಗೆನ್ನುತ ಪದಕೆರಗಿಪೇ ಳಿದನು ರಾಘವನು ॥ ೨ ॥ ಆಗಬಹುದೀ ನಿನ್ನಕೋರಿಕೆ । ಬೇಗನಸಫ ಲವಾಗುವುದಮಲ । ಯಾಗಗಳನೆಸಗುವುದು ನಿಮ್ಮನ್ವಯಕೆ ಸಹಜವ ಲಾ ॥ ಆಗಮ ವಿಧಾನಂಗಳಿಂದಿದ । ನಾಗಿಸುವೆನೆಂದಾ ವಸಿಷ್ಠನು । ರಾ ಘವಂಗರುಹುತ್ತಬಂದನು ತನ್ನಮನೆಗಾಗಿ ॥ ೩ ॥ ಕರೆದು ಲಕ್ಷ್ಮಣನ ನ್ನು ಶೀಘ್ರದೊ । ಳರದೆ ಮುನಿಪವಸಿಷ್ಠನೆಂದನು । ಕರುಣಿಸುತ್ತಲೆ ಲಕ್ಷ್ಮಣನೆ ನೀನತಿಭರದೊಳೀಗ ॥ ಧರಣಿಪತಿರಾಘವನು ಮಾಡುವ । ತುರಗಮೇಧಾಧ್ವರಕೆ ಬೇಕಾ । ಗಿರುವ ವಸ್ತುಗಳೆಲ್ಲವ ನನುಗೊಳಿಸು ವುದೆಂದೆನುತ ॥ ೪ ॥ ಮುನಿವಸಿಷ್ಠನ ಪದಸರೋಜಕೆ । ಮಣಿದು ವಂದಿಸಿ ಕರವಮುಗಿದತಿ । ವಿನಯದಿಂದಲೆ ಬಿನ್ನವಿಸಿದನು ನೀವುಪೇ ಳ್ದಂತೆ ॥ ವಿನುತಹಯಮೇಧಾಧ್ವರಕೆ ಮೇ । ದಿನಿಯೊಳುತ್ತಮ ಮೆಂದೆ

ನಿಪಪಾ । ವನ ಪದಾರ್ಥಗಳೆಲ್ಲವನು ತರಿಸುವೆನುಸಾನೆನುತ ॥ ೫ ॥ ಬ
ಳಿಕವಮುನಿಪೋತ್ತಮನು ಪೇಳಿದ । ಪೊಲಖಿಳ ಪದಾರ್ಥಗಳ ತರಿಸುತ ।
ಪಲವುತರದಾ ಸ್ವಕ್ಸ್ರುವಾದಿಗಳೆಲ್ಲವನುಕೂಡೆ ॥ ತಳುವದಾಗಿಸಿ ಲಕ್ಷ್ಮ
ಣನುಕಂ । ಗೊಳಿಪ ಪಾವನ ಯಜ್ಞಶಾಲೆಯ । ನೊಲಿದುನಿರ್ಮಿಸಿ ಬಿನ್ನ
ವಿಸಿದನು ರಾಘವೇಂದ್ರನಿಗೆ ॥ ೬ ॥ ಒಡನೆ ಹಯಮೇಧಾಧ್ವರಕೆ ಬಲು ।
ಸಡಗರದೊಳಂದೆಲ್ಲವನು ತಾ । ನಡಿಗಡಿಗೆ ಮುನಿಪೋತ್ತಮನ ನೇಮ
ದೊಳನುಗೊಳಿಸುತ ॥ ಒಡೆಯರಾಘವ ಬಂದುಹೊಕ್ಕನು । ಮಡದಿಕೈ
ಯನುಪಿಡಿದು ಬಾಂಧವ । ರೊಡವೆರಸಿ ಶುಭಲಗ್ನದೊಳಗಾ ಯಾಗಶಾ
ಲೆಯನು ॥ ೭ ॥ ಕುಲಪುರೋಹಿತ ನಾಜ್ಞೆಯಾಂತಿನ । ಕುಲನರೇಂದ್ರ
ನು ಕೊಟ್ಟುವರಣಂ । ಗಳನು ಹದಿನಾರುಜನ ಋತ್ವಿಕ್ಕುಗಳಿಗಾಬಳಿ
ಕ ॥ ಬಿಳಿಯವೊಡಲಿನ ಪೀತಪುಚ್ಛದ । ವಿಲಸದಂಘ್ರಿಯ ನೀಲಕರ್ಣದ ।
ಲಲಿತತುರಗವ ನರ್ಚಿಸಿದನಾ ವಿಧಿವಿಧಾನದಲಿ ॥ ೮ ॥ ಧರಣಿಪತಿ ರಾಘವ
ನಪಾವನ । ತುರಗಮೇಧಾಧ್ವರದ ಹಯಮಿದು । ಧರಣಿಯೊಳಗತ್ರಿಶೂರ
ರೆನಿಸುವ ಜನಪರೀಹಯವ ॥ ಭರದಿಕಟ್ಟುವುದವರ ಸೋಲಿಸಿ । ಧುರ
ದೊಳು ಬಿಡಿಸಿಕೊಂಬೆವೆನ್ನುತ । ಬರೆದಪಟ್ಟಿಕೆಯೊಂದನಾ ಹಯಮು
ಖದೆಕಟ್ಟಿಸಿದ ॥ ೯ ॥ ಹತ್ತುಸಾವಿರ ಸೈನ್ಯವನುಕೊಂ । ಡುತ್ತಮೆತ್ತು
ರಂಗವನು ನೀಂಸಲ । ಹುತ್ತದರ ಹಿಂಗಡೆಯೊಳೈದುವುದೆಂದು ರಾಘವ
ನು ॥ ಉತ್ತಮವಚನದೊಳು ಸುಮಂತ್ರನಿ । ಗತ್ತಮನ್ನಿಸಿ ನುಡಿದು
ಬಿಟ್ಟನು । ಬಿತ್ತರದವಿಭವದೊಳು ದೇಶದಮೇಲೆ ಕುದುರೆಯನು ॥
॥ ೧೦ ॥ ಸವನಶಾಲೆಗೆ ಕೋಟಿಸಂಖ್ಯೆಯೊ । ಳವರವರ ನಿಜಶಿಷ್ಯರೊ
ಡನತಿ । ಜವದೊಳೈತರುತಿದ್ದರಾ ಮುನಿವರರುದಿನದಿನದೆ ॥ ರವಿಕುಲೋ
ತ್ತಮ ನೆಲ್ಲರಿಗೆನಿ । ತ್ಯವು ಸಮಾರಾಧನೆಯನಾಗಿಸಿ । ಸವಿಯಭೋಜನ
ಗಳನು ಮಾಡಿಸುತಿದ್ದನುಪಚರಿಸಿ ॥ ೧೧ ॥ ಭರತಖಂಡದನಾಲ್ಕುಕಡೆ ಗ
ಳೊ । ಳಿರುವದೇಶಗಳೆಲ್ಲವನು ಸಂ । ಚರಿಸಿ ಯಜ್ಞದಕುದುರೆ ತಡೆಯ
ಲ್ಪಡದೆನೃಪರಿಂದ ॥ ಬರುವಕಾಪಿನ ಸೈನ್ಯಸಹಿತ । ತ್ವರಿತದಿಂದಲೆಮತ್ತೆ
ಬಂದುದು । ಮೆರೆವಯೋಧ್ಯಾಪುರವರಕೆರಡು ತಿಂಗಳೊಳಗಾಗಿ ॥ ೧೨ ॥
ಮನುಕುಲೋತ್ತಮ ರಾಘವೇಂದ್ರನು । ಜನಕಜೆಯು ನಾನಂದವಡಿಸು
ತ । ವಿನುತಿವಡೆದಾ ಚೈತ್ರಶುದ್ಧದ ಪಾಡ್ಯಮಿದಿನದಲಿ ॥ ಮುನಿಗಳಪ್ಪ
ಣೆಪಡೆದು ಮಾಡಿಸಿ । ದನತಿ ವೈಭವದಿಂದೆ ಪಾವನ । ಮೆನಿಪ ವರವಿನು
ತಧ್ವಜಾರೋಪಣೆಯ ಕರ್ಮವನು ॥ ೧೩ ॥ ಸತಿಸಹಿತನಂದೀಶ್ವರನವೋ ।

ಲತಿಮೊದವೊಳೀರುತ್ತ ತೊರೆದು ರ । ಜಿತಗಿರಿಯುನಾ ಸವೆನಶಾಲೆಗೆಬಂ
ದಗಿರಿಶನನು ॥ ಕ್ಷಿತಿಸುತೆಸಹಿತ ರಾಘವೇಶ್ವರ । ನತಿಭರದೊಳಂ ದಿದಿರು
ಗೊಳ್ಳುತ । ಹಿತದಿಕರೆತಂದುಚಿತ ಪೀಠವನಿತ್ತು ಪೂಜಿಸಿದ ॥ ೧೪ ॥ ಸರೆ
ದರಧ್ವರಶಾಲೆಯೊಳಖಿಳ । ಸುರರು ಧರಣೀಸುರರು ರಾಜರು । ವರವಿ
ಭೀಷಣ ಮುಖ್ಯರಾಕ್ಷಸರಖಿಳ ವಾನರರು ॥ ತರತರದ ಪಾತಾಳವಾಸಿಗ ।
ಳುರುತರದ ವೃಕ್ಷಾಭಿಮಾನದ । ಮರರುನಿತ್ಯವು ಬಂಧುಗಳನೊಡ
ಗೊಂಡು ನೆರೆನೆರೆದು ॥ ೧೫ ॥ ಬಂದವರುಗಳನೆಲ್ಲ ಸಂತಸ । ದಿಂದೆ
ಮನ್ನಿಸಿ ರಾಘವೇಶ್ವರ । ನಂದುಚಿತಪೀಠಂಗಳೊಳು ಕೂಡಿಸಿದನಾದರ
ದೆ ॥ ಬಂದುಕುಂಭೋದರನು ರಾಘವ । ನಿಂದೆಮನ್ನಣೆವಡೆದು ದಶರ
ಥ । ನಂದನನಪೊಗಳಿದನು ರಾಮಾಷ್ಟೋತ್ತರದೊಳಲ್ಲಿ ॥ ೧೬ ॥ ಮುನಿ
ವರರು ಚೈತ್ರಸಿತಪಂಚಮಿ । ದಿನದೆ ರಾಮನವಾಜಮೇಧಕೆ । ಘನಶುಭ
ಮುಹೂರ್ತದೊಳಗಾರಂಭವನು ಮಾಡುತ್ತ ॥ ವಿನುತ ಯೂಪಸ್ತಂಭ
ಕೆ ತುರಗ । ವನು ಬಿಗಿದುಕಟ್ಟುತ್ತ ಮಂತ್ರಗ । ಳನೊಲಿದುಚ್ಚರಿಸುತ
ಭಿಮಂತ್ರಿಸಿದರತಿಹರ್ಷದಲಿ ॥ ೧೭ ॥ ತುರಗವನುಛೇದಿಸುತ ತಾಪಸ ।
ವರರು ಗೋವಿನತುಪ್ಪದೊಳಗೆ ಕು । ದುರೆಯುದೇಹದ ಮಾಂಸಪಿಂಡ
ಗಳೆಲ್ಲವ ನೆನೆಯಿಸಿ ॥ ಹರುಷದಿಂದಲೆ ಹೋಮಮಾಡಿಸಿ । ದರು ವಿನೋ
ದವೆನಾಂತು ವಹ್ನಿಯೊ । ಳುರುತರದ ಸವೇದಮಂತ್ರಂಗಳನು ಪಠಿಸು
ತ್ತ ॥ ೧೮ ॥ ಕ್ಷಿತಿಸುತೆಯು ನೋಡುತಿರಲಾ ಮುನಿ । ಪತಿಗಳು ವಿಧಿ
ವಿಧಾನದಿಂದಲೆ । ಘೃತಚರುಪುರೋಡಾಶ ಪಾಯುಸಮಧುತಿಲಂಗಳನು ॥
ಮೃತುಕದ ಸಮಿತ್ಕುಶಗಳನುರಿವ । ಹುತವಹನೊಳರ್ಪಿಸುತ ಹೋ
ಮವ । ನತಿಭರದೊಳಗಿಸಿದರಾ ರಘುನಾಥನಿಂದೊಲಿದು ॥ ೧೯ ॥ ವೀರ
ರಾಘವನಿಂದಲೆ ವಸೋ । ರ್ಧಾರೆಯನು ಕೊಡಿಸಿದರು ವೇಗಂ । ಭೀ
ರಭಾವದೊಳಾ ಮುನಿಪತಿಗಳುರಿವ ವಹ್ನಿಯುಲಿ ॥ ವಿಾರಿದತಿಸಂತೋಷ
ದಿಂದಲೆ । ಧಾರಿಣೀಸುತೆಯಾ ಮನವೊಲಿಸ । ಬಾರಿಬಾರಿಗೆ ಹೋಮ
ವನುಮಾಡಿದನು ರಾಘವನು ॥ ೨೦ ॥ ಪ್ರತಿದಿನವುರಾಘವನು ಸೀತೆಸ ।
ಹಿತ ಬೆಳಗಿನಾಸಮಯದೊಳಗೇ । ಳುತ ನಮಿಸಿ ಮುನಿಗಳಿಗೆಸುರರಿಗೆ
ರಾಮತೀರ್ಥದೊಳು ॥ ಅತಿಹರುಷದೆಸ್ನಾನವರಚಿಸಿ । ಹಿತದೊಳಗನು
ಷ್ಠಾನವ ನೆಸಗಿ । ವಿತತಭಕ್ತಿಯೊಳರ್ಚಿಸುವನಾ ಶಂಭುವನುಪದೆದು ॥
॥ ೨೧ ॥ ಬಂದು ಋತ್ವಿಕ್ಕುಗಳು ಸಂತಸ । ದಿಂದೆ ಮಂತ್ರಂಗಳ
ನುಪೇಳುತ । ತಂದಿರಿಸಿದಾ ಹೋಮವಸ್ತುಗಳೆಲ್ಲವನು ಕೊಂಡು ॥

ಮುಂದುರಿವ ವಹ್ನಿಯೊಳುಹೋಮವ | ನಂದುಮಾಡಿಸಿ ಭೂಮಿಸುತೆರ
ಘು | ನಂದನರೊಡನೆತಂದರು ಪುರೋಡಾಶವನು ಪದೆದು || ೨೦ ||
ಉದಯ ಮಧ್ಯಾಹ್ನಾಸ್ತಮಯ ಕಾ | ಲದೊಳಗನುದಿನ ಮಿಂತುತಾಪ
ಸ | ರುದಿಸಿದಾನಂದದೊಳು ಹೋಮಂಗಳನು ಮಾಡಿಸುತ || ವಿದಿತ
ವಾಗಿಹ ಸಾಮಗಾನವ | ಪಮುವೇನ ಘನ ಮನಕೆಹರ್ಷವ | ನೊದವಿ
ಪಂದದೆ ಮಾಡುತಿದ್ದರು ಯಾಗಶಾಲೆಯಲಿ || ೨೩ || ಸುರರು ಬಂದಿದಿ
ರಲ್ಲಿ ನಿಂದೇ | ವರಹವಿರ್ಭಾಗಗಳನು ಸ್ವೀ | ಕರಿಸಿ ತಮ್ಮೆಡೆಗೈದುತಿ
ದ್ದರು ಬಹುಳಹರ್ಷದಲಿ || ನೆರೆದವಾನವರೆಲ್ಲ ಮುದದಿಂ | ದೆರಡುವೇಳೆ
ಯೊಳಧ್ವರವಿಧಿಯ | ನುರೆವಿಲೋಕಿಸುತಿದ್ದರಾ ವರಯಜ್ಞಶಾಲೆಯಲಿ ||
|| ೨೪ || ಬಂದುಸೇರಿದ ಜನರಿಗಾರಘು | ನಂದನನು ಮೃಷ್ಟಾನ್ನಭೋ
ಜನ | ದಿಂದ ಸಂತುಷ್ಟಿಯನು ಮಾಡಿಸುತೆರಡುವೇಳೆಯಲಿ || ಚಂದನ
ಕುಸುಮಗಳನು ಸಂತಸ | ದಿಂದಲೆಕೊಡಿಸಿ ಬಹುಳದಕ್ಷಿಣೆ | ಯಿಂದೆ
ಸೆವ ತಾಂಬೂಲಗಳನೆಲ್ಲರಿಗೆ ಕೊಡಿಸಿದನು || ೨೫ || ನೃತ್ತಗೀತಾದಿಗ
ಳನೀಕ್ಷಿಸಿ | ಯುತ್ತಮ ಪುರಾಣಂಗಳನು ಕೇ | ಳುತ್ತ ರಘುಭೂವರನು
ಹಗಲನುಕಳೆದು ಹರ್ಷದಲಿ || ಮತೆ ಸಾಯಂ ಸಂಧ್ಯೆಯನೆಸಗಿ | ಚಿತ್ತ
ರಮೆನಿಸುವಗ್ನಿ ಹೋತ್ರವ | ನುತ್ತರಕ್ಷಣದಲ್ಲಿ ತಾನೆಸಗಿದನುಸತಿಸಹಿತ ||
|| ೨೬ || ವಿನುತ ಸತ್ಕಥೆಗಳನು ಕೇಳುತ | ಮನುಕುಲೋತ್ತಮ ನೆರ
ಡುಜಾವಗ | ಳನುಕಳೆದು ನಿದ್ರಿಸುತಲಿದ್ದನು ರಾತ್ರಿಸತಿಸಹಿತ || ದಿನದಿನ
ದೊಳಂತೆಸಗಿ ಸೇರಿದ | ಮುನಿಗಳಿಗೆ ಸಂತಸವನಾಗಿಸಿ | ದನು ಕೊಡುತ
ಬೇಕಾದ ವಸ್ತುಗಳೆಲ್ಲವನುಕೂಡೆ || ೨೭ || ತುರಗಮೇಧವನಿಂತು ಮು
ಗಿಸುತ | ಧರಣಿಪತಿ ರಾಘವನು ಸಮನಂ | ತರದೊಳಾ ವರಚೈತ್ರಶುದ್ಧ
ನವಮಿಯುದಿವಸದಲಿ || ನೆರೆಮೆರೆವವರ ರಥದೊಳಂದಾ | ಧರಣಿನಂದನೆ
ಯೊಡನೆ ಕುಳಿತತಿ | ಭರದೆಬಂದನವಭೃತದಸ್ನಾನಕ್ಕೆ ವಿಭವದೊಳು ||
|| ೨೮ || ತನ್ನ ಮುಂಗಡೆ ಯಗ್ನಿಹೋತ್ರಗ | ಳನ್ನಿರಿಸಿ ಕೊಂಡಾರಥ
ದೆಸಂ | ಪನ್ನಮತಿ ರಾಘವನಖಿಳ ಋತ್ವಿಕ್ಕುಗಳಸಹಿತ || ಉನ್ನತ ವಿ
ಭವದಿಂದೆ ಬಂದನು | ಸನ್ನುತಿವಡೆದ ರಾಮತೀರ್ಥಕೆ | ಮನ್ನಿಸುತ ಜ
ನರೆಲ್ಲರ ನಧಿಕಹರ್ಷವನುತಾಳ್ದು || ೨೯ || ಮುನಿವರರ ಮಂತ್ರಗಳ
ನಾಲಿಸು | ತಿನಕುಲೇಂದ್ರನು ರಾಮತೀರ್ಥದೊ | ಳಸಿಯಳಸಹಿತವವ
ಭೃತದಸ್ನಾನವನುತಾನೆಸಗಿ || ಜನಗಳೆಲ್ಲರ ಮೇಲೆರಚಿ ಜಲ | ವನುಸು
ವಿಮಲಾಭರಣ ವಸ್ತ್ರಗ | ಳನುಧರಿಸಿಕೊಂಡಂದು ಬಂದನು ರಾಜಮಂ

ದಿರಕೆ ॥ ೩೦ ॥ ಕರಿತುರಗ ಗೋಮಹಿಷ ಕಾಂಚನ । ವರವರೂ
ವಸುಮತಿಮೊದಲಹ । ತರತ್ತರದ ದಾನಂಗಳನು ದಕ್ಷಿಣೆಗಳಿಂದೊಡನೆ
ನೆರೆದ ಋತ್ವಿಕ್ಕುಗಳಿಗಾ ರಘು । ವರನುಕೊಟ್ಟು ದಣಿಸಿದನತ್ತಾ । ದ
ದೊಳುರೆ ಮನ್ನಿಸುತಕೈಮುಗಿದತಿ ವಿನಯದಿಂದೆ ॥ ೩೧ ॥ ಮುನಿವ
ಷ್ಠನು ಜನಕನಂದನೆ । ಯನು ನನಗೆನೀಂ ದಾನವಾಡೆಂ । ದೆನುತ
ಘವನನ್ನು ಸಮನಂತರದೆಯಾಚಿಸಲು ॥ ಮನದೊಳಾಲೋಚಿಸದೆ
ಕ್ಷಿತೆ । ಯನು ತೆಗೆದುಕೊಂಡಾ ಮಹೀಸುತೆ । ಯನು ವಸಿಷ್ಠನಿಗ
ನುಚ್ಚರಿಸುತ್ತ ಮಂತ್ರವನು ॥ ೩೨ ॥ ಕೆಲರುನಿಂದಿಸಿದರು ವಸಿಷ್ಠನ
ನಿಳೆಪಾಲನನ್ಯಾಯ ಮೆನ್ನುತ । ಕೆಲರುಪೇಳ್ದರು ಕೆಲರುಬೈದರ
ರಾಘವೇಶ್ವರನ ॥ ಕೆಲರುಗೋಳಾಡಿದರು ದುಃಖದಿ । ಕೆಲರುಮನಬಂದ
ತೆ ನುಡಿದರು । ಕೆಲರು ಯಮನಂತಾ ಮುನಿವರನನಲ್ಲಿ ನೋಡಿದರು
॥ ೩೩ ॥ ಬಳಿಕರಾಘವನಂ ಕರೆದು ಮುನಿ । ಕುಲತಿಲಕನಿಂತೆಂದು ನು
ದನು । ನೆಲದಣಾಗಿ ಜಾನಕಿಯತೂಕಕೆ ಯೆಂಟರಷ್ಟೆನಿಪ ॥ ಹೊಳೆವ
ನ್ನವನಿತ್ತು ಸಂತಸ । ದೊಳೆನಗೆ ಮಹೀಸುತೆಯ ನೀಗಳೆ । ನಲಿದು
ಕೊಳ್ಳುವುದು ಹಿಂದಕೆ ಮತ್ತೆನೀನೆನುತ ॥ ೩೪ ॥ ಆಗಲಾ ನುಡಿಗೇಳ
ನೃಪತಿ ಸ । ರಾಗದಿಂದ ತನ್ನಸತಿಯನು । ತೂಗುವತ್ರಾಸಿ ನೆಡಭಾ
ದಬಟ್ಟಲಿನೊಳಿರಿಸಿ ॥ ಹಾಗೆತುಂಬಿಸಿ ಚಿನ್ನವನು ಬಲ । ಭಾಗದೊ
ಮುನಿಪತಿಗೆ ಕೊಟ್ಟನು । ತೂಗಿಸ ಸತಿಯತೂಕದೆಂಟು ಮಡಿಯ
ವರ್ಣವನು ॥ ೩೫ ॥ ಭೂಮಿಪಾಲಕನಿತ್ತ ಚಿನ್ನವ । ನಾಮುನೀಂ
ನು ತೆಗೆದುಕೊಳ್ಳುತ । ಭೂಮಿಸುತೆಯನು ಕೊಟ್ಟರಾಘವನಿಗತಿ ಶೀಘ್ರ
ದಲಿ ॥ ಕಾಮಧೇನು ವಿಮಾನ ಕೌಸ್ತುಭ । ಭೂಮಿಸುತೆ ಪುರರಾಷ್ಟ್ರ
ವರಚಿಂ । ತಾಮಣಿಗಳ ನದಾರ್ಗವಿೀಯದಿರೆಂದು ನೇಮಿಸಿದ ॥ ೩೬
ಯಾಗಶಾಲೆಗೆ ಮತ್ತೆಬಂದಾ । ರಾಘವನು ಮುನಿವರನ ನೇಮದೊ ।
ಗ ಯಜ್ಞದಪಾತ್ರಗಳನು ವಿಸರ್ಜಿಸುತಬಳಿಕ ॥ ಬೇಗದಕ್ಷಿಣೆಗಳ
ಕೊಟ್ಟನು । ರಾಗದಿಂದಲಿ ತೃಪ್ತಿಪಡಿಸಿದ । ನಾ ಗುರೂಕ್ತಿಯನಾಲಿಸು
ಋತ್ವಿಕ್ಕುಗಳನೊಲಿದು ॥ ೩೭ ॥ ನಿನ್ನೊಡನೆ ಋತ್ವಿಕ್ಕುಗಳನುರೆ ।
ನ್ನಿಸಿಕರೆದುಕೊಂಡು ಹೋಗಿ ಬಿ । ಡೆನ್ನ ಕೋಶಾಗಾರದೊಳವರು
ನಕೆಬಂದಷ್ಟು ॥ ಚಿನ್ನವತೆಗೆದು ಕೊಳ್ಳಲಿ ಬಳಿಕ । ದನ್ನು ಕಳುಹಿಸ
ರವರಸ್ಥಳ । ಕೆನ್ನುತಾ ರಘುವರನುಪೇಳ್ದನು ಲಕ್ಷ್ಮಣಂಗೊಲಿದು
॥ ೩೮ ॥ ಆತನಪ್ಪಣೆಯಂತೆ ಲಕ್ಷ್ಮಣ । ನಾತುರದೊಳಂ ತೆಸಗಿದಬ

ಕ । ಭೂತಳಾಧಿಪ ರಾಘವೇಶ್ವರನವರುಗಳಗೆಲ್ಲ ॥ ಖ್ಯಾತಿವಡೆದ ಸುಭೋ ಜನವ ಸಂ । ಪ್ರೀತಿಯಿಂದಾಗಿಸುತ ಸಂತೋ । ಷಾತಿಶಯದಿಂ ಕಳುಹಿ ಕೊಟ್ಟನವರವರೆಡೆಗಳಿಗೆ ॥ ೩೯ ॥ ಹೊಳೆವರತ್ನಾಭರಣವಸನಂ । ಗಳನು ರಾಘವನಿತ್ತು ಪೂಜಿಸಿ । ಕಳುಹಿಕೊಟ್ಟನು ಸಕಲದೇವತೆಗಳನುಶಂಭು ವನು ॥ ಬಳಿಕವಿಬುಧರು ಧಾರಿಣೀಪತಿ । ಗಳು ವಿಭವಕನುಸಾರವಾಗಿ ಯೆ । ನಲಿದುಕೊಟ್ಟರು ಕಾಣಿಕೆಗಳನು ರಾಘವೇಂದ್ರನಿಗೆ ॥ ೪೦ ॥ ಧರಣಿ ನಂದನೆಸಹಿತ ರಘುಭೂ । ವರನು ರಥದೊಳ್ಕುಳಿತು ಮುಂಗಡೆ । ನೆರೆ ಮೆರೆವವಿಮಲಾಗ್ನಿಹೋತ್ರಂ ಗಳನಿರಿಸಿಕೊಂಡು ॥ ನೆರೆದಮಾನವರೊ ಡನಯೋಧ್ಯಾ । ಪುರಿಗೆ ನಡೆತಂದಿಳಿದು ರಥದಿಂ । ದರಮನೆಯನತಿ ವಿಭ ವದಿಂದಲೆ ಹೊಕ್ಕನಾದಿನದೆ ॥ ೪೧ ॥ ಬಳಿಕಜಾನಕಿಯೊಡನೆ ಸಂತಸ । ದಳೆದು ರಘುನಂದನನು ತನ್ನಾಲಯ । ನಿಳಯದೊಳಗಂ ದಗ್ನಿಹೋತ್ರಂ ಗಳನುಶೀಘ್ರದಲಿ ॥ ನೆಲೆಗೊಳಿಸಿ ಸರ್ವೋತ್ತಮ ಸ್ಥಳ । ದೊಳಧಿಕ ವಿ ಭವದಿಂದೆ ಬಂದನು । ತಳುವದೆ ಸಭಾಸ್ಥಳಕೆ ಸೋದರರೊಡನೆ ಹರ್ಷ ದಲಿ ॥ ೪೨ ॥ ಗಿರಿಜನಾರಘುವರನ ಪೊಗಳುತ । ಹೊರಟುಹೋದನು ರ ಜತಶೈಲಕೆ । ಧರಣಿಪತಿ ರಾಘವನೆಸಗಿದರ್ಚನೆಯ ಕೈಕೊಂಡು ॥ ಹೊರ ಟುಹೋದರು ತಮ್ಮಡೆಗಳಿಗೆ । ಧರಣಿಪಾಲಕರೆಲ್ಲ ಬಳಿಕತಿ । ಹರುಷದಿಂ ದಲೆಕೈಮುಗಿದು ರಾಮಾಜ್ಞೆಯನುತಳೆದು ॥ ೪೩ ॥ ಸಕಲಋತ್ವಿಕ್ಕಾಗ ಳು ಬ್ರಂದಾ । ರಕರು ಮುನಿಗಳು ಬಂದುಸೇರ್ದರ । ಧಿಕಹರುಷದಿಂ ದವರವರ ಮನೆಗಳಿಗೆಶೀಘ್ರದಲಿ ॥ ಸಕಲ ರಾಜಸುಖಂಗಳನು ಜಾ । ನಕಿ ಯೊಡನನುಭವಿಸು ತಿನಕುಲತಿ । ಲಕನನವರತ ರಮಿಸುತಿದ್ದನು ಬಹು ವಿನೋದವಲಿ ॥ ೪೪ ॥ ಮನುಕುಲೋತ್ತಮ ರಾಘವೇಂದ್ರನ । ವನಿಜೆ ಯನು ಸಂತೋಷಪಡಿಸುತ । ಮುನಿಮತದೊಳಿಪ್ಪತ್ತು ಸಂವತ್ಸರಗ ಳೊಳಗಾಗಿ ॥ ಮನವಣಿಯೆ ತಾನಿಂತು ಪಾವನ । ಮೆನಿಸಿಪ ದಶಹಯ ಮೇಧಯಾಗಗ । ಳನೆಸಗಿದ ನತ್ಯಧಿಕದಕ್ಷಿಣೆಗಳನು ತಾನಿತ್ತು ॥ ೪೫ ॥ ಇಂತುಹಯಮೇಧ ಗಳನೆಸಗಿದ । ನಂತರದೊಳಾ ಜನಕಸುತೆ ಬಲು । ಸಂತಸವನಾಂತಾ ರಘುವರನ ಪದವಸೇವಿಸುತ ॥ ಅಂತಮಿಲ್ಲದ ಸೌಖ್ಯ ವನು ತಾ । ನಾಂತಯೋಧ್ಯಾ ಪುರದೊಳಿರುತಿಹ । ಕಾಂತೆಯುದನಾನಂ ದವಡಿಸುತ್ತಿದ್ದ ಳನುದಿನವು ॥ ೪೬ ॥ ಗಿರಿಜೆ ಕೈಲಾಸಾದ್ರಿಯೊಳುಶಂ । ಕರನೊಡನಖಿಳ ಸೌಖ್ಯಗಳ ನನ । ವರತ ತಾಳ್ದುರಮಿಸಿ ವಿನೋದವ ನೈದುವಂದದಲಿ ॥ ಧರಣಿಸುತೆ ಕಂಗೊಳಿಪ ನಿಜಮ್ನೆ । ದಿರದೊಳಾ ರಾ

ಮನೆಯೊಡನೆಲ್ಲಾ । ತೆರದಸೌಖ್ಯವನಾಂತು ರಮಿಸುತಲಿದ್ದಳನವರತ ॥ ೪೭ ॥
ಯಾಗಚರಿತೆಯು ನೀಮಹಿಯೊಳನು । ರಾಗದಿಂದಲೆ ಪಠಿಸುವಜನರು ।
ಬೇಗಪಡೆವರು ತುರಗಮೇಧವ ನೆಸಗಿದಫಲವನು ॥ ಭೋಗಭಾಗ್ಯಂಗಳ
ನು ಹೊಂದಿ ಸು । ಖಾಗಮನಗಳ ನೀಕ್ಷಿಸುತ್ತ ಸ । ರಾಗದಿಂದಲೆ ಬಾ
ಳುವರಖಿಳ ಬಾಂಧವರಸಹಿತ ... ... ॥ ೪೮ ॥

ಇಂತು ಮೂವತ್ತುಮೂರನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೧೮೩೭.

## ಮೂವತ್ತು ನಾಲ್ಕನೆಯ ಅಧ್ಯಾಯ.

**ಸೂಚನೆ** ॥ ಜನಕನಂದನೆ ಸಕಲಸೌಖ್ಯಗ ।
ಳನನುಭವಿಸುತ ರಾಘವೇಂದ್ರನೊ ।
ಡನಖಿಳವಿಲಾಸಗಳನೀಕ್ಷಿಸುತಿದ್ದಳಡಿಗಡಿಗೆ ॥

ಸತಿಸಹೋದರರೊಡನೆ ದಶರಥ । ಸುತ ನಧಿಕಸಂತೋಷವನು ತಾ । ಳ್ದತಿಕರುಣೆಯಿಂಪಾಲಿಸುತಖಿಳ ಜನಸಮೂಹವನು ॥ ವಿತತವೈಭವದಿಂದೆ ಕಂಗೊಳಿ । ಸುತಿಹ ತನ್ನರಮನೆಯೊಳವನೀ । ಸುತೆಸಹಿತಸುಖಿಸುತ್ತಲಿದ್ದನು ಪಲವುತೆರದಿಂದೆ ॥ ೧ ॥ ಹೊಳೆದುದಾರಾಜಗೃಹ ಸಲೆಕಂ । ಗೊಳಿಪ ವೈಕುಂಠಕ್ಕೆಣೆಯೆನಿಸಿ । ಥಳಥಳಿಪ ಶಯ್ಯಾಗೃಹವು ಚಂದಿರನವೊಲೆಸೆದುದು ॥ ನೆಲವು ಕಾಂಚನಮಯವೆನಿಸಿ ಕಂ । ಗಳಿಗೆ ತೋರಿದುದಿಂದ್ರನೀಲಂ । ಗಳನು ಕೆತ್ತಿದಮಧ್ಯಮಾರ್ಗವು ರಂಜಿಸಿದುದಲ್ಲಿ ॥ ೨ ॥ ಚಿನ್ನದಪುಡಿಯು ಗಾರೆಯನಿರಿಸಿ । ರನ್ನದಶಿಲೆಗಳಿಂದೆ ನಿರ್ಮಿಸಿ । ದುನ್ನತದಗೋಡೆಗಳು ಮೆರೆದವುನಾಲ್ಕುಕಡೆಗಳಲಿ ॥ ಸನ್ನುತಿವಡೆದ ಚಿತ್ರವಿಚಿತ್ರದ । ಕನ್ನಡಿಗಳಿಂದುರೆ ವಿರಾಜಿಸಿ । ಕಣ್ಣುಗಳಿಗಾನಂದವನು ಮಾಡಿದವುಗೋಡೆಗಳು ॥ ೩ ॥ ಅಲ್ಲಿಕಂಗೊಳಿಸಿದುವು ಪಚ್ಚೆಯ । ಕಲ್ಲಿನಾಕಂಬಗಳು ಪಟಿಕದ । ಕಲ್ಲಿನಾಕಂಬಗಳು ಶಯ್ಯಾಗೃಹದಮಧ್ಯದಲಿ ॥ ಎಲ್ಲಕಡೆಯೊಳು ನಾಲ್ಕುದಿಕ್ಕಿಗ । ಳಲ್ಲಿ ಮೇಲ್ಗಡೆಕಾಣುತಿದ್ದುವು । ಬಳ್ಳಿಮುತ್ತಿನಕುಚ್ಚುಗಳು ಮುತ್ತುಗಳಹಾರಗಳು ॥ ೪ ॥ ಪೊಳೆವ ಚಿನ್ನದಸರಿಗೆ ಜವನಿಕೆ । ಗಳು ವಿರಾಜಿಸುತಿದ್ದವು ಕನಕ । ಕಲಶಗಳು

ಕಂಗೊಳಿಸುತ್ತಿದ್ದುವು ಸರ್ವಕಾಲದಲಿ ॥ ಬೆಳಗುತ್ತಿದ್ದುವು ರತ್ನದೀಪಂ ।
ಗಳತಿ ಹರ್ಷವನಾಗಿಸುತ ನೆರೆ । ಪೊಳೆವುರಂಜಿಸುತ್ತಿದ್ದುವು ಕನಕಮ
ಯದಮಂಚಗಳು ॥ ೫ ॥ ಮೆರೆವವಾ ಮಂಚಂಗಳೆಗಲಂ । ಕರಿಸಿವಸರಿ
ಗೆವಸ್ತ್ರಗಳು ತರ । ತರದ ಮುತ್ತಿನಕುಚ್ಚುಗಳು ಮೇಲುಗಡೆತೋರಿದ
ವು ॥ ಉರಿವ ರತ್ನದದೀಪಗಳು ಹಗ । ಲಿರುಳು ಕಂಗೊಳಿಸಿದುವು ಚಿ
ನ್ನದ । ಪಿರಿಯಮಂಚದ ನಾಲ್ಕುಮೂಲೆಗಳಲ್ಲಿ ಸಂತತವು ॥ ೬ ॥
ಪೊಳೆಯುತಿದ್ದುವು ಬೀಸಣಿಗೆಗಳು । ಬಿಳಿಯಚಾಮರಗಳು ಸುವರ್ಣ
ದ । ಪಲವುಬಟ್ಟಲುಗಳು ವಿಮಲತಾಂಬೂಲಪಾತ್ರೆಗಳು ॥ ಬೆಳದಸಂತ
ಸದಂದ ಚಾಮರ । ಗಳನುಬೀಸುತಲಿದ್ದರು ಹಗಲಿ । ರುಳುಗಳಲಿ ರಂ
ಭೆಗೆಣೆಯೆನಿಸಿಪಾ ಸೇವಕೀಜನರು ॥ ೭ ॥ ಕಲಕಲಧ್ವನಿಗಳನು ಮಾಡು ।
ತ್ತಲೆಸೆಯುವು ಶಯ್ಯಾಗೃಹದೊಳು ಸ । ಕಲವಿಧವೆನಿಪ ಕೇಕಿಶುಕಪಿಕ
ಶಾರಿಕಾಂಗಳು ॥ ನಳಿನಲೋಚನೆ ಸೀತೆ ರವಿಕುಲ । ತಿಲಕನಿಗೆ ಸಂ
ತೋಷವನೆಸಗಿ । ದಳು ಪಲವುತೆರದಾಟಕೂಟಗಳಿಂದೆ ಗೋಷ್ಯವಲಿ ॥
॥ ೮ ॥ ಇಂತಿನಿತ ವಿಭವಂಗಳಿಂದೆ ನಿ । ರಂತರವೆಸೆವ ಸೆಜ್ಜೆಮನೆಯೊ
ಳ । ಗಂತವಿಲ್ಲದ ಸಂತಸವನಾಂತಾ ರಘೂತ್ತಮನು ॥ ಅಂತರಂಗದೊ
ಳೀಕ್ಷಿಸುತ ನಿಜ । ಕಾಂತೆಯನು ಮನಬಂದತೆರದೊಳ । ಗಿಂತು ಪಲತೆ
ರದಿಂದೆ ಹೊಗಳ್ದನತಿ ವಿನೋದದಲಿ ॥ ೯ ॥ ಜನಕಸುತೆ ಕೇಳ್ಮರುಲೋ
ಕವೆ । ನಿನಗೆ ಸಮನೆಂದೆನಿಪ ಲಲನಾ । ಮಣಿಯರಿಲ್ಲವು ಶುಕ್ಲಪಕ್ಷದ
ಪೂರ್ಣಶಶಿಯೊಳು ॥ ಅನವರತ ಕಂಗೊಳಿಸುತಿರ್ದವು । ವನಿತೆ ನಿನ್ನ
ನಖಗಳು ಮೆರೆವುವು । ವಿನುತನಖಮಧ್ಯಗಳು ದಾಡಿಮಬೀಜಗಳತೆರದಿ ॥
॥ ೧೦ ॥ ವರಶುಭಂಗಳ ನಾವಗಂ ಸಕ । ಲರಿಗೆ ತೋರಿಸುವಂತೆ ಮಂ
ಗಳ । ಕರವೆನಿಸುವ ಸ್ವಸ್ತಿಕಧ್ವಜಪದ್ಮವೊದಲಾದ ॥ ಪರಿಪರಿಬಗೆಯ
ದಿವ್ಯರೇಖೆಗ । ಳುರುಬೆಯಿಂದಿರೆ ರಂಜಿಪವು ನಿ । ನ್ನೆರಡು ಅಂಗಾಲು
ಗಳಬುಜದಳಮಧ್ಯಭಾಗದೊಲು ॥ ೧೧ ॥ ಎರಡು ಪೊಳಕಾಲುಗಳು
ಗುಂಡಾ । ಗಿರುತಿಹವು ಮಾದಳದಫಲದಂ । ತರಸಿ ಕೇಳ್ಯಂಡಾಲಕೆಣೆ
ಯುಹ ನಿನ್ನಯುತೊಡೆಗಳು ॥ ಪರಮಸೌಖ್ಯವನಾಗಿಸುತೆನಗೆ । ನೆರೆವಿ
ರಾಜಿಸುತಿಹವು ಮಂಜುಳ । ಹರಿತವರ್ಣವನಾಂತು ರೋಮರಹಿತಗಳೆಂ
ದೆನಿಸಿ ॥ ೧೨ ॥ ಬಲಿತು ಗುಂಡಾಗಿರುವ ಜಘನಂ । ಗಳು ಕರಿಯಕುಂ
ಭಗಳಂತಿರೆ । ಪೊಳೆಯುತಿಹವಾ ರೋಮರಹಿತಂಗಳೆನಿಸಿಸತತವು ॥
ನಳಿನಲೋಚನೆ ನಿನ್ನನಾಭಿಯುಂ । ಸಲೆವಿರಾಜಿಪವು ದಾಳವೆನಿಸಿ ಬ । ಹು

ಳಸೊಗಸಿನಿಂದೆಸೆದು ಪೆರ್ಚುಳವಾಗಿಕಾಣಿಸುತ ‖ ೧೩ ‖ ಅಂಗನಾಮ
ಣಿಸೀತೆ ಕೇಳ್ನಿ । ನ್ನಂಗದೊಳಿರುವ ಮೂರುವಳಿಗಳು । ಕಂಗೊಳಿಸು
ವುವು ಪಾವನವೆನಿಸುವಾ ತ್ರಿವೇಣಿಯೊಲು ‖ ಸಿಂಗದನಡುವಿಗೆ ಸಮನಾ
ಗಿಹ । ಸಿಂಗರವೆನಿಸಿ ತೋರ್ಪುದು ಜನರ । ಕಂಗಳಿಗೆಸಂತತವು ನಿನ್ನ
ಯ ಸೊಂಟಕಿರಿದೆನಿಸಿ ‖ ೧೪ ‖ ಪಳದಿಬಣ್ಣವನಾಂತ ದೇಹವು । ಸಲೆಮ
ನೋಹರವೆನಿಸಿ ನಿತ್ಯವು । ಹೊಳೆವುದತಿಮೃದುವಾಗಿ ಪ್ರತ್ಯೋದಯುವ
ಸೂಚಿಸುತ ‖ ಬಲಿತಬೆನ್ನೆಲುಬೆಸೆ ವುದತಿಕೋ । ಮಲವೆನಿಪ ಕಂಬದ
ತೆರದೆಮಂ । ಜುಳವೆನಿಸಿ ಕೊಂಡುದ್ದವೆನಿಸುತ ಬಹುನಯವನಾಂತು ‖
‖ ೧೫ ‖ ಬಲಿತುಚೆನ್ನಾಗಿರುತಿಹವು ಕೂ । ದಲುಗಳಿಲ್ಲದೆ ಪಕ್ಕೆಗಳು
ಮಂ । ಜುಳವೆನಿಸುವುದು ನಿನ್ನ ಕುಕ್ಷಿಯು ಹಸಿರುಬಣ್ಣವನು ‖ ತಳೆ
ದು ಎತ್ತರವಾಗಿಕಾಣುತ । ಜಲಜನೇತ್ರಿಯೆ ನಿನ್ನೆರಡುಭುಜ । ಗಳುರೆ
ರಂಜಿಸುತಿಹವು ವೃಕ್ಷದಶಾಖೆಗಳತೆರದೆ ‖ ೧೬ ‖ ನನಗೆ ಸೌಖ್ಯವನುಂಟು
ಮಾಡುತ । ಕನಕವರ್ಣವನಾಂತು ಮಂಜುಳ । ಮೆನಿಸಿಕೊಂಡಿದೆ ನಿ
ನ್ನೆದೆಯು ಬಹುಳೋನ್ನತಿಯನಾಂತು ‖ ಜನಕನಂದನೆ ಕೇಳುಕುಚಗ
ಳು । ಕನಕಕುಂಭಗಳಂತೆ ಸುಂದರ । ಮೆನಿಸಿತೋರ್ಪುವು ಬಲಿತು
ಗುಂಡಾಗಿರುತ ಪಿರಿದೆನಿಸಿ ‖ ೧೭ ‖ ಜಲಜಲೋಚನೆ ಕೇಳುನಿನ್ನ ಬೆ ।
ರಳುಗಳತಿ ಮೃದುವಾಗಿರುತ ಕಂ । ಗೊಳಿಸುವೆವು ಸಂತತವುನುಣ್ಣಗೆ
ಬಹುಳಸುಖವಾಗಿ ‖ ಹೊಳೆವಮತ್ಸ್ಯಪತಾಕೆ ಶಂಖವೊ । ದಲಹರೇಖೆ
ಗಳಿಂದೆ ಸಲೆಘಳ । ಥಳಿಸುವುವು ಕೆಂಪಾಗಿನಿನ್ನಂಗೈಗಳನುದಿನವು ‖
‖ ೧೮ ‖ ನಿನ್ನಕುತ್ತಿಗೆ ಶಂಖದಂತಿದೆ । ನಿನ್ನ ಗಡ್ಡವು ನಿನ್ನಸೊಂಟವು ।
ನುಣ್ಣಗಿಹವತಿ ಲಲಿತವೆಂದೆನಿಸುತ್ತ ಗುಂಡಾಗಿ ‖ ನಿನ್ನತುಟಿಗಳಸೆವುವು
ತೊಂಡೆಯು । ಹಣ್ಣಿನಂದದೆ ಕಂಗೊಳಿಸುವುವು । ನಿನ್ನ ಪಲ್ಗಳು ಕುಂದ
ಕುಟ್ಮಲದಂತೆ ಸೊಗಸಾಗಿ ‖ ೧೯ ‖ ಮಂಗಳಾಂಗಿಯೆ ಕೇಳುಜೆಂಕೆಯ ।
ಕಂಗಳಂತುರೆ ಮೆರೆವನಿನ್ನಯ । ಕಂಗಳು ಕಮಲಪತ್ರದಂತೆ ವಿಶಾಲ
ಮೆನಿಸುತ್ತ ‖ ಅಂಗಜನಶರದಂತೆ ನೋಳ್ಪಜ । ನಂಗಳಿಗೆ ಹೆಚ್ಚಿಸುತ
ಮದವನು । ಕಂಗೊಳಿಸುವುವು ಬಹುಳಸಂತೋಷವನು ವಿರಚಿಸುತ ‖
‖ ೨೦ ‖ ಸನ್ನುತಾಂಗಿಯೆ ಕೇಳು ನಿನ್ನಯ । ಕೆನ್ನೆಗಳು ಸೊಗಸಾಗಿ
ರುತಿಹವು । ಕನ್ನಡಿಗಳಂತೆತ್ತರ ಮೆನಿಸಿನಿರ್ಮಲತೆಯನಾಂತು ‖ ನಿನ್ನ
ಕೂದಲು ಕೋಮಲವೆನಿಸಿ । ಚಿನ್ನದಸರಿಗೆಯಂತೆ ರಂಜಿಪು । ದುನ್ನತಿ
ಯನಾಂತತಿ ಮನೋಹರವಾಗಿ ಕಾಣಿಸುತ ‖ ೨೧ ‖ ಹೊಳೆಯುತಿರ್ಪು

ದು ನಿನ್ನ ಹಣೆಯಾಂ । ಸಲಗಳಿಂದೆ ವಿಶಾಲವೆನಿಸುತ । ತಲೆಯುಗುಂಡಾ
ಗಿಹುದು ಮಂಗಳಕರವೆನಿಸಿಕೊಂಡು ॥ ಲಲನೆಕೇಳ್ನಿನ್ನಜಡೆ ಜಘನಂ ।
ಗಳವರೆವಿಗೆ ವ್ಯಾಪಿಸುತ ಕಂ । ಗೊಳಿಸುತಿದೆ ಕನಕಾಭರಣಗಳನಾಂ
ತು ಸೊಗಸಾಗಿ ॥ ೨೦ ॥ ನಿನ್ನಲಂಕಾರ ವನುದಿನದೊಳು । ಚಿನ್ನದ
ಕುಸುಮದಂತೆ ರಂಜಿಪು । ದೆನ್ನಚಿತ್ತಕೆ ಕೊಡುತ ಸುಖರಾಗವನು
ಸೊಂಪೆನಲು ॥ ಸನ್ನುತಾಂಗಿಯೆ ಕೇಳು ಸಂತತ । ಮೆನ್ನ ಕಣ್ಗಳಿಗಧಿಕ
ಸಂಮುದ । ವನ್ನುಮಾಡುತ ಕನಕಪುತ್ಥಳಿಯಂತೆ ಕಾಣಿಸುವೆ ॥ ೨೩ ॥
ವನಜನೇತ್ರಿಯೆ ಕೇಳು ನಿನ್ನವ । ದನಪನೀಕ್ಷಿಸಿ ಸಣ್ಣಗಾದ ನ । ವನಿ
ತಳದೊಳಾ ಚಂದ್ರನು ಕ್ಷಯರೋಗವನುತಾಳ್ದು ॥ ವನದೊಳೋಡು
ತ್ತಿಹವು ಹರಿಣಗ । ಳನುದಿನವು ನಿನ್ನೆರಡುಕಣ್ಣುಗ । ಳನವಲೋಕಿಸಿ
ಸೋತು ಪುರದೊಳುನಿಂತು ವಾಸಿಸದೆ ॥ ೨೪ ॥ ವನಜಮುಖಿಕೇಳ್ನಿನ್ನ
ಕಂಗಳೊ । ಡನೆಬೆರತು ಹೋರಾಡಲಾರದೆ । ಧನುಸುಭಂಗವನೈದಿತೆ
ನ್ನಿಂದೆರಡು ತುಂಡಾಗಿ ॥ ಜನಗಳೆಲ್ಲರು ನಿನ್ನಕಣ್ಣುಗ । ಳನು ವಿಲೋ
ಕಿಸುತೊಡನೆ ಪಂಚಶ । ರನ ಶರಹತಿಗೆಸಿಕ್ಕಿ ತತ್ತರಗೊಳ್ಳುವರು ಮನ
ದೆ ॥ ೨೫ ॥ ಧರಣಿಸುತೆಕೇಳ್ನಿನ್ನ ಕಂಗಳೊ । ಳಿರುವಚಾಂಚಲ್ಯವು ಸ
ಲಿಲದೊಳ । ಗಿರುವ ಮತ್ಸ್ಯಂಗಳಿಗೆ ಲಜ್ಜೆಯನಾಗಿಸುತಲಿಹುದು ॥
ಮೆರೆವಮೂಗನು ಕಂಡುಗಿಳಿಗಳು । ಕೊರಗುತಿರ್ಪವು ಮನದಿನಿತ್ಯವು ।
ಭರದೆನಿಂದಿಸಿ ಕೊಳ್ಳುತವುಗಳ ಮೂಗಿನಂದವನು ॥ ೨೬ ॥ ಅಂದವಾ
ಗಿಪ ನಿನ್ನತುಟಿಗಳ । ಚಂದವನುಕಾಣುತ್ತ ಮೋವಿನ । ಕೆಂದಳಿರುಳಿದು
ಕೆಂಪುಬಣ್ಣವ ಬಹುಳಶೀಘ್ರದಲಿ ॥ ಹೊಂದಿತು ಹಸಿರುಬಣ್ಣವನು ಕೇ ।
ಳಿಂದುಮುಖಿ ಮೇಘಗಳು ನಿನ್ನಯ । ಸುಂದರವಕಂಡಂಜಿ ಗಗನದೊ
ಳೋಡಿಪೋಗುತ್ತಿವೆ ॥ ೨೭ ॥ ಇಂತುಬಣ್ಣಿಪ ಗಂಡನನು ಬಹು । ಸಂ
ತಸದೊಳೀಕ್ಷಿಸುತ ಜಾನಕಿ । ಅಂತವಿಲ್ಲದ ನಾಚಿಕೆಯನಾಂತೊಡನೆ
ತಲೆವಾಗಿ ॥ ಸಂತಸದೆ ರಘುನಂದನನ ನೇ । ಕಾಂತಭವನದೆ ತಾನೊಲಿ
ಸುತ । ತ್ಯಂತ ಸೌಖ್ಯವನೈದುತಿದ್ದಳು ಪಲವುತೆರದಿಂದೆ ॥ ೨೮ ॥ ಒಂ
ದುದಿನ ಮೇಕಾಂತಭವನದೊ । ಳಿಂದುಮುಖಿ ವೈದೇಹಿಸಂತಸ । ದಿಂದೆ
ರಘುನಂದನನ ಪದಪಂಕೇಜಗಳಿಗೆರಗಿ ॥ ಇಂದು ವೇದಪುರಾಣಸಮ್ಮತ ।
ಮೆಂದೆನಿಪ ಸಂಜ್ಞಾನವ ನೆನಗೆ । ಚಂದದಿಂದುಪದೇಶಿಸೆನ್ನುತ ನಿಂದು
ಬೇಡಿದಳು ॥ ೨೯ ॥ ಆಗಲೆಂದೆನುತಾ ರಘೊತ್ತಮ । ನಾಗಜಾನಕಿಯೊ
ಡನೆಪೇಳ್ದ ಸ । ರಾಗದಿಂದಲೆವೇದಶಾಸ್ತ್ರ ಪುರಾಣತತ್ವವನು ॥ ಬೇಗನೆ

ನೆನೆದು ಕರುಣಿಸುತ್ತನು । ಲಾಗದಿಂದುಪದೇಶ ಮಾಡಿದ । ನಾಗ ಸ್ವಜ್ಞಾ
ಪೇಟಕೆಯುಸಾ ಜನಕನಂದನೆಗೆ ॥ ೩೦ ॥ ವಿನುತಗೂಢಾರ್ಥವನು ತಾಳ್ದ
ನು । ದಿನವು ಆತ್ಮಜ್ಞಾನದಾಯಕ । ಮನಿಸಿನ ಜ್ಞಾನವನುಪ್ರೋಕ್ಷಿಪ ಸಂ
ಜ್ಞಾಪೇಟಿಕೆಯು ॥ ಸಿನಗೆಶ್ರೀಶಾಂತಿ ಸೀಂಪಿವರಿಸುತ । ನನಗದನುತ್ರಿಳು
ಹೆಂದು ರಘುನಂ । ದನನು ಜಾನಕಿಯುನ್ನು ಕೇಳಿದನತಿವಿನೋದದಲಿ ॥
॥ ೩೧ ॥ ಪತ್ರಿಯುನಾತನು ಕೇಳ್ದು ಜಾನಕಿ । ವಿತತ್ರಸಂಮದದಿಂದಪೇ
ಳ್ದಳು । ಜತನದಿಂದಾ ರಾಘವೇಂದ್ರನ ಪದಕೆಮಣಿದರಗಿ ॥ ಪತಿಯೆಕೇ
ಳ್ವಿಷ್ಣುವೆನಿಸಿಕೊಳ್ಳುತ । ಸತತವಾವನು ಜೀವತತಿಯೊಳ । ರಂತಿಪಾತ
ನೆ ಸಚ್ಚಿದಾನಂದಮಯ ನಾಗಿಹನು ॥ ೩೨ ॥ ಆವನೆಸಾಗರನೆನಿಸಿಕೊಂ
ಡಿಹ । ನವನ ಭೂಭಾರಹರಣೇಚ್ಛೆಯೆ । ತಾಕದಿಂದೆ ಚಲಿಪತ್ತರಂಗವ
ದೆನಿಸಿಕೊಳ್ಳುವುದು ॥ ಆವನವೆಸಿಯಿಂ ಪೊರಗಡೆಹೊರಟ । ರುವನಭೋ
ಬಿಂದುವೆ ಸಕಲರೊಳ । ರುವ ಪಿನುತಜೇವಾತ್ಮನಾಗಿಹ ರಾಮನೆನಿಸುವ
ನು ॥ ೩೩ ॥ ಅವನತಾಯಿಯೆ ಬುದ್ಧಿಯೆಂದೆನಿ । ಸುವುದದನು ಕೌಸಲ್ಯೆ
ಯೆನುತ ಕ । ರೆವರು ತತ್ತ್ವಜ್ಞಾನವೇದಿಗಳೀ ಧರಣಿತಲದೆ ॥ ಆವನತಂದೆ
ಯೆನಿಸ ದಶರಥನೆ । ಅವನಿಮಂಡಲದೊಳು ನುತಿವಡೆವ । ರುವನುಪಾವ
ನಶುದ್ಧ ಸತ್ವಾಂತಃಕರಣವೆನಿಸಿ ॥ ೩೪ ॥ ಮನುಜಪಾಲಕ ಕೇಳು ರಾ
ಘವ । ನೆನಿಸ ವಿಷ್ಣುವಿನಾತ್ಮಭೇದಗ । ಳನೆ ಭರತಶತ್ರುಘ್ನ ಲಕ್ಷ್ಮಣರೆ
ನುತ ಭೂಮಿಯಲಿ ॥ ಮುನಿಗಳೆಲ್ಲರು ಪೇಳುತಿರುವರು । ವಿನುತಿವೆತ್ತಿ
ಹನೀನು ಪಾವನ । ಘನತುರೀಯಾವಸ್ಥೆಯನು ಭವದೀಪ್ತಿಯಿಂದನಿಸಿ ॥
॥ ೩೫ ॥ ವಿನುತಜಾಗ್ರದವಸ್ಥೆ ಲಕ್ಷ್ಮಣ । ನೆನಿಸುವುದು ಕೇಳ್ಸ್ವಪ್ನನಿ
ದ್ರೆಗ । ಳೆನಿಸಿಕೊಂಬವೆ ಭರತಶತ್ರುಘ್ನರೆನಿಸುತ್ತಿಹವು ॥ ವನಜನಾಭ
ನೆ ನಿನ್ನಹೃದಯಗ । ಗನವೆನಿಸ್ಪುದೆ ವೇದಿನಿತಲದೆ । ವಿನುತಿವಡೆದೊ
ಪ್ಪಿಹು ದಯೋಧ್ಯಾನಗರವೆನ್ನಿಸುತ ॥ ೩೬ ॥ ಘನತರ ಮನೋಯೋಗ
ವೆಂಬುದೆ । ಮುನಿಪಗಾಧಿಜ ನವನಮುಖಪಾ । ಲನೆಗೆ ನಿನ್ನನು ಕರೆದು
ಕೊಂಡೈದಿರುವುದೆನಿಸುವುದು ॥ ಮನವದುವೃತ್ತಿಯು ವಿನಾಶವೆ । ದನುಜೆ
ತಾಟಕಿಯುನ್ನು ಕೊಲ್ಲುವು । ದೆನಿಪ್ಪುದು ಮನೋವೇಗಭಂಗವೆ ಚಾಪಖಂ
ಡನವು ॥ ೩೭ ॥ ಬಲಿತ ಮಾಯಾಯೋಗ ವೆಂಬುದೆ । ನೆಲದೊಳೆನ್ನ ವಿವಾ
ಹವೆನಿಪುದು । ಕಲಿತನದೊಳಾ ಪರಶುರಾಮನನಂದು ಜಯಿಸಿದುದೆ ॥
ಕಳೆದಖಿಳ ಜನ್ಮಾಂತರಂಗಳ । ಪಲತೆರದ ಸಂಸ್ಕಾರಗಳನೀ । ನೆಲದೆನೀಂ
ನಿಗ್ರಹಿಸುವಿಕೆ ಯೆಂದೆನಿಸಿಕೊಂಡಿಹುದು ॥ ೩೮ ॥ ಸಂದಸಂಸ್ಕಾರಾಟವಿ

ಯೊಳಾ । ನಂದವನು ನೀನಾಂತು ಬಹುಸುಖ । ದಿಂದೆ ಸಂಚರಿಸಿದುದೆ ವನಸಂಚಾರವೆನಿಸುವುದು ॥ ಬಂದುನಿಂದ ವಿರಾಧನನು ನೀಂ । ಕೊಂದುದೆಂಬುದೆ ದಂಭನಿಗ್ರಹ । ವೆಂದೆನಿಸುವುದು ದೇವದೇವನೆ ಕೇಳು ಬಿನ್ನವಿಪೆ ॥ ೩೯ ॥ ಸಕಲಜೀವಿಗಳಾ ಹೃದಯದೊಳು । ಸುಖಿಸುವಾತ್ಮನ ಪಂಚಭೂತಾ । ತ್ಮಕದ ಸುಸ್ಥಿರವೃತ್ತಿಯೆಂಬುದೆ ಪರ್ಣಶಾಲೆಯದು ॥ ಪ್ರಕಟತರವೆಂದೆನಿಪ ದೇಹವೆ । ವಿಕಟಪಕ್ಷಿ ಸಮೂಹಕನುದಿನ । ಸುಖವನಾಗಿಪ ಪಂಚವಟಿಯು ಕ್ಷೇತ್ರವಾಗಿಹುದು ॥ ೪೦ ॥ ಖರನುಸತ್ತುದೆ ಕಾಮನಾಶನ । ದುರುಳದೂಷಣ ನಳಿದನೆಂಬುದೆ । ಪಿರಿದೆನಿಸುವಾ ಕ್ರೋಧವಿಧ್ವಂಸನ ವೆನಿಸುತಿಹುದು ॥ ಧುರದೊಳಂದಾ ತ್ರಿಶಿರ ನಳಿದುದ । ನರಿಯೆ ಲೋಭವಿನಾಶ ವೆನ್ನುತ । ಕರೆವರು ವಿಚಾರಿಸುತ ತತ್ವವಿಚಾರವಿದ್ಯೆಯನು ॥ ೪೧ ॥ ದನುಜಪತಿ ರಾವಣನಸೋದರಿ । ಯೆನಿಪ ಶೂರ್ಪನಖಿಯ ಸುನಾಸಿಕ । ದನುವಕೆಡಿಸಿದು ದಿಳೆಯೊಳಾಶಾನಾಶವೆನಿಸುವುದು ॥ ವನದೆ ಮಾಯಾಮೃಗದ ವೇಷದೊ । ಳನಗೆ ವಂಚನೆಗೈದ ಮಾರೀ । ಚನನು ಕೊಂದುದೆ ಮೋಹನಿಗ್ರಹವೆನಿಸಿಕೊಳ್ಳುವುದು ॥ ೪೨ ॥ ಪತಿಯೆ ಕೇಳ್ಮಾಯಾಶ್ರಯವೆನಿಪ । ವಿತತ ದಂಡಕಕಾನನದೊಳತಿ । ಹಿತದೆವೆಸಿಸಿದ ಸತ್ವರೂಪವನಾಂತ ನನ್ನನ್ನು ॥ ಸತತವಾ ಮಾಂಗದೊಳು ನೀನತಿ । ಕುತುಕಿಯಾಗುತ ಹೊಂದಿದುದನೀ । ಕ್ಷಿತಿಯೊಳಗೆ ಸಾತ್ವಿಕದಮಾಯೆ ಯೆನುತ್ತ ಪೇಳುವರು ॥ ೪೩ ॥ ಇನಯುಕೇಳಾ ರಾಜಸಾಕೃತಿ । ಯೆನಿಪ ಮಾಯೆಯು ಜಠರವಹ್ನಿಯೊ । ಳನವರತ ಸೇರುವುದೆನುತ ಪೇಳ್ವುದನೆರಾಜಸದ ॥ ಜನಕನಂದನೆ ಜಂಕಿಯೊಳಗತಿ । ವಿನಯದಿಂದಲೆ ಬೀಳ್ವುದೆನ್ನುತ । ವಿನುತಿವೆತ್ತ ವಿಬುಧರುಪೇಳ್ವರ್ಗ್ರ ತಿಳಿದುಯೋಚಿಸುತ ॥ ೪೪ ॥ ಮನುಜಪಾಲಕ ಕೇಳು ತಾಮಸಿ । ಯೆನಿಪ ಮಾಯೆಗು ಮಾತ್ಮನಿಗು ಮೋ । ದಿನಿತಳದೊಳು ವಿಯೋಗವಾಗುವುದೆನುತ ಪೇಳ್ವುದನೆ ॥ ಘನ ತಮೋಗುಣರೂಪಿಣಿ ಯೆನಿಪ । ಜನಕಜೆಯನಾ ದಶಶಿರನು ಕಾ । ನನದೊಳಪಹರಿ ಸಿರ್ಪುದೆನ್ನುತ ಬುಧರುಪೇಳುವರು ॥ ೪೫ ॥ ಅಂದು ವಿಪಿನದೊಳೆನ್ನಯ ವಿರಹ । ದಿಂದೆ ನಿನಗೊದಗಿರ್ದ ತಾಪವೆ । ಸಂದತಿಸುಖಾಲಂಭನ ಮಹಾಕ್ಲೇಶವೆನಿಸುವುದು ॥ ಬಂದುಬಾಣದೊಳಾ ಕಬಂಧನು । ನೊಂದುಸತ್ತುದೆ ಶೋಕಭಂಗವು । ಸುಂದರ ವಿವೇಕಾಶ್ರಯವೆ ಸುಗ್ರೀವನಾಶ್ರಯವು ॥ ೪೬ ॥ ನಿನಗೆ ಮಾರುತಿಯಿಂದು ದೊರೆತುದೆ । ವಿನುತ ಭಕ್ತ್ಯುದ್ರೇಕ ಲಾಭವು । ದೆನಿಸಿ

ಕೊಂಬುದು ವಾಲಿವಧೆಯು ವಿವೇಕನಾಶನವು || ವನಧಿತೀರದೊಳಾ ವರವಿ
ಭೀ | ಷಣನು ನಿನ್ನನು ಶರಣುಹೊಕ್ಕುದೆ | ಜನಿಸಿದ ಮಹೋತ್ಸಾಹ
ಸಾಂಗತ್ಯ ವೆನಿಸುತ್ತಿಹುದು || ೪೭ || ಜಲನಿಧಿಗೆ ಸೇತುವನೆಸಗಿದುದೆ |
ನೆಲದೊಳಜ್ಞಾನವನು ದಾಟುವ | ಲಲಿತಯುಕ್ತಿ ಯೆನಿಸುವುದಾ ತ್ರಿಗು
ಣಾಶ್ರಯದ ತನುವೆ || ಸಲೆವಿರಾಜಿಸುವಾ ತ್ರಿಕೂಟಾ | ಚಲವೆನಿಸುವು
ದು ಲಿಂಗದೇಹವೆ | ಹೊಳವ ಲಂಕಾನಗರವೆನ್ನುತ ವಿನುತಿವಡೆದಿಹು
ದು || ೪೮ || ಮದವಿನಾಶವೆ ಕುಂಭಕರ್ಣನ | ವಧೆಯು ಮಾತ್ಸರ್ಯವನು
ಭಂಗಿಸಿ | ದುದೆ ಸುರೇಂದ್ರಜಿತುವಿನ ಸಂಹಾರವೆನಿಸುತ್ತಿಹುದು ||
ಕದನವೊಳು ದಶಕಂಧರನು ಸ | ತ್ತುದೆ ಯಹಂಕಾರವನು ಖಂಡಿಸು |
ವುದೆನುತಾಂ ತಿಳಿದಿಹೆನು ಯೋಗವಿಚಾರದೃಷ್ಟಿಯಲಿ || ೪೯ || ಲಿಂಗದೇ
ಹನಿವಾರಣೆಯೆ ನೀ | ನಂಗನಾಮಣಿಸಹಿತ ರಾಕ್ಷಸ | ಪುಂಗವನ ಲಂಕೆ
ಯು ನುಳಿದುಬಂದುದೆನಿಸುತ್ತಿಹುದು || ಅಂಗನೆಯೊಡನೆ ನೀನುಸೇರ್ದು
ದೆ | ಕಂಗೊಳಿಸುವಾ ತ್ರಿಗುಣಮಾಯೆಯಾ | ಸಂಗವೆನ್ನಿಸಿ ಕೊಂಡಿರುತ್ತಿ
ಹುದು ತಿಳಿದುನೋಡಿಸಲು || ೫೦ || ಮೆರೆವಯೋಧ್ಯೆಗೆ ಸಕಲಕಪಿವೀ |
ರರಸಹಿತ ನೀನಂದು ಬಂದುದೆ | ಸುರುಚಿರದಹೃದಯು ಗಗನಗಮನ
ವೆಂದೆನಿಸುತಿಹುದು || ಪರಮಸಂತೋಷೈಕ ಸುಖವನು | ಧರಣಿಯೊ
ಳು ಹೊಂದಿದುದೆ ಮಂಜುಳ | ತರವೆನಿಪಖಿಳ ರಾಜ್ಯಭೋಗವದೆನಿಸಿ
ಕೊಂಡಿಹುದು || ೫೧ || ಚಲಿಪ ಮಾಯಾತ್ಯಾಗವೆಂಬುದೆ | ನೀದೊಳಿ
ನ್ನಿಂ ಕೆಲವುದಿನಗಳ | ಬಳಿಕ ವಾಲ್ಮೀಕ್ಯಾಶ್ರಮಕೆ ನೀನೆನ್ನಕಳುಹು
ವಿಕೆ | ತಳುವದೆನ್ನನು ಮತ್ತೆ ಹೊಂದುವು | ದಿಳೆಯೊಳಗೆ ಸತ್ವಗುಣವೆ
ನು ಕೈ | ಕೊಳುವುದೆನ್ನುತ ತಿಳಿದುಕೊಂಡಿರುತಿಹೆನು ಚಿತ್ತದಲಿ ||
|| ೫೨ || ಪರಮಸಾತ್ವಿಕ ಮಾಯೆಸಲೆಸೇ | ರಿರುವಿಕೆಯೆ ನನ್ನೊಡನೆನಿ
ನ್ನರು | ತರದ ಯತ್ನವೆನಿಪು ದಯೋಧ್ಯಾಪುರದ ಮನುಜರನು || ಭರ
ದೊಳಾ ವೈಕುಂಠನಗರಕೆ | ಕರೆದುಕೊಂಡೈದುವುದೆ ಹೃದಯಾಂ | ಬ
ರವನು ಮಹಾಕಾಶದೊಡನೆ ಬೆರಸುವುದೆನಿಸುವುದು || ೫೩ || ಮನುಕು
ಲೋತ್ತಮ ಕೇಳವನಿಯೊಳು | ಮನುಜರೂಪವನುಳಿದು ಪಾವನ |
ವೆನಿಪಘನತರ ಸಚ್ಚಿದಾನಂದಮಯ ಸಂಜ್ಞೆಯಲಿ | ವಿನುತಿವಡೆದಾ ವಿ
ಷ್ಣುರೂಪವ | ಜನಕೆ ತೋರಿಸುವಿಕೆಯೆ ನೀನಾ | ವನಧಿಮಧ್ಯವೆ ಮು
ಳುಗುವುದೆನುತ ತಿಳಿದುಕೊಂಡಿಹೆನು || ೫೪ || ನೀನುನುಡಿದೀ ತತ್ವವೆ
ಸಕಲ | ಮಾನವರಿ ಗೈಹಿಕಸುಖಂಗಳ | ನೀನೆಲದೊಳನುಗೊಳಿಸಿ ಘನ

ಸಾಯುಜ್ಯಪದವಿಯನು ॥ ತಾನು ಕೊಡುವುದು ಕೊನೆಗೆಕೇಳನು । ಮಾ
ನಿಸದೆ ಧರಿಸಿಹೆನು ಕೊರಳೊಳು । ನಾನು ಮಂಗಳದೇಹ ರಾಮಾಯಣ
ಸುಹಾರವನು ॥ ೫೫ ॥ ಇದನು ಜಾನಿಪಮನುಜರು ಪರಮ । ಪದವೆನಿ
ಪ ಜೀವನ್ಮುಕುತಿಯನು । ಮುದದೆ ಹೊಂದುವರೆನಗೆ ನೀನೊಲಿದಿಂದು
ತಿಳಿಸಿರುವೆ ॥ ಇದುವರೆವಿಗೀ ನೆಲದೊಳಾವನು । ವಿದನು ಪೇಳಿರಲಿಲ್ಲಮುಂ
ದೆ ನ; ಲಿದಿದನಾವನು ಪೇಳಲಾರನು ಗೋಪ್ಯಮೆನಿಪ್ಪುದಿದು ॥ ೫೬ ॥
ಇದತಿ ರಮ್ಯಮೆನಿಸುವು ದೂಹೆಗ । ಸದಳಮೆಂದೆನಿಸಿಹುದು ಭೂಮಿ
ಯೊ । ಳಿದು ಸಕಲವಿಧ ದುಷ್ಕೃತಗಳನು ಪರಿಹರಿಸುತಿಹುದು ॥ ಇದು
ವಿಮಲ ಸುಜ್ಞಾನವನು ಕೊಡು । ವುದಿದು ಬಹುಸೂಕ್ಷ್ಮ ಮೆನಿಸಿರುತಿ
ಹು । ದಿದು ಸಕಲಸೌಖ್ಯಂಗಳನು ವಿರಚಿಸುವುದೆಲ್ಲರಿಗೆ ॥ ೫೭ ॥ ಎಂದು
ರಾಘವನೊಡನೆ ಸಂತಸ । ದಿಂದೆ ಜಾನಕಿಪೇಳಲಾ ರಘು । ನಂದನನು
ನಲವಿಂದೆ ಸೀತೆಯ ಮುಖವನೀಕ್ಷಿಸುತ । ಸುಂದರಾಂಗಿಯೆ ಕೇಳುವು
ಹದಾ । ನಂದದಿಂದಲೆ ತಿಳಿದುಕೊಂಡಿಹೆ । ಬಂಧುರಮೆನಿಪ ದೇಹರಾಮಾ
ಯಣವನೀನಿಂದು ॥ ೫೮ ॥ ನೀನುಧನ್ಯಳು ನಿನಗಮಾತ್ರವೆ । ನಾನು
ಪೇಳಿದೆನಿದನು ಕೇಳಲೆ । ಜಾನಕಿಯೆ ಕೊಡುವುದಿದು ಭಕ್ತಿ ಸುಭುಕ್ತಿ
ಮುಕ್ತಿಗಳ ॥ ನೀನು ಪೇಳದಿರವನಿಯೊಳಿತರ । ಮಾನವರಿಗಿದನೆಂದೆ
ನುತ ಸುಂ । ಮಾನದಿಂದರುಹುತ್ತ ಮಲಗಿದನಂದುರಾಘವನು ॥ ೫೯ ॥
ಅರಸಿಯನು ಸಂತವಿಸುತಾ ರಘು । ವರನು ದಿವ್ಯಮಣಿಗಣದಿಂದುರೆ ।
ಮೆರೆವ ಪರ್ಯಂಕದೊಳು ಸುಖನಿದ್ರೆಯನುಮಾಡಿದನು ॥ ತರಣಿ ಮೂಡ
ದಮುನ್ನ ನಡೆತಂ । ದಿರದೆ ಬಿರುದಾವಳಿಗಳಿಂದಾ । ಧರಣಿಪಾಲನನೆಬ್ಬಿಸಿ
ದರಾ ವಂದಿಮಾಗಧರು ॥ ೬೦ ॥ ಮೊದಲುಜಾನಕಿ ಬಳಿಕರಾಘವ । ನು
ದಯಕಾಲದೊಳೆದ್ದು ಸಕಲವಿ । ಬುಧಸಮೂಹಕೆ ಭಕ್ತಿಯಿಂದಲೆನಮಿ
ಸುತಾ ಬಳಿಕ ॥ ಸದನದೊಳು ಮಿಾಯುತ್ತ ರಾಮನು । ವಿಧಿವಿಧಾನದೊ
ಳೊಡನೆ ತಾನೆಸ । ಗಿದನು ಸಂಧ್ಯಾವಂದನಾದಿ ಸಮಸ್ತಕರ್ಮಗಳ ॥ ೬೧ ॥
ಧರಣಿಸುತೆ ಯಷ್ಟರೊಳು ಮಿಂದತಿ । ಭರದೊಳಾ ಗಿರಿಸುತೆಯನರ್ಚಿ
ಸಿ । ಹರುಷದಿಂದಾ ಕಾಮಧೇನುವನೊಲಿದು ಪೂಜಿಸುತ ॥ ಸುರಭಿಕೊ
ಟ್ಟಾಹಾರದ ಪಲವು । ತೆರದ ವಸ್ತುಗಳೆಲ್ಲವನು ತುಂ । ಬಿರಿಸಿದಳುನಲ
ವಿಂದೆ ಚಿನ್ನದಪಾತ್ರೆಗಳೊಳಂದು ॥ ೬೨ ॥ ಅನಿತರೊಳು ರಾಘವನರಾ
ಜಭ । ವನಕೆ ಬಂದರು ಕೋಟಿಸಂಖ್ಯೆಯ । ಮುನಿವರರು ಭೋಜನಕೆ
ತಮ್ಮಯ ಶಿಷ್ಯರೊಡವೆರಸಿ ॥ ಕನಕಪೀಠಂಗಳೊಳು ರಘುನಂ । ದನ

ನು ಮುನಿಗಳನೆಲ್ಲ ಕೂಡಿಸಿ | ಜನಕಸುತೆಗಾಜ್ಞಾಪಿಸಿದ ನೂಟಕ್ಕೆ ಬಡಿಸೆನುತ ‖ ೬೩ ‖ ಪತಿಯುಮಾತನು ಕೇಳ್ದು ಜಾನಕಿ | ವಿತತವಸ್ತ್ರೋತ್ತ್ಕರವನೆಂದತಿ | ಜತನದಿಂದೆ ಬಡಿಸುತಭಿಘರಿಸಯುನ್ನು ತಾನೆಸಗೆ ‖ ವಿತತಸಂತೋಷವನು ತಾಳ್ದು | ಕ್ಷಿತಿಸುರರು ರಾಘವನನಂಂತಿ | ಹಿತ್ತದೆಹೊಗಳುತ ಮನದಣಿಯೆ ಭೋಜನವಮಾಡಿದರು ‖ ೬೪ ‖ ತಂಗಿಯರನು ಸಖಿಯರನೊಲಿಸು | ತಂಗನಾಮಣಿ ಸೀತೆರಂಜಿಪ | ಮಂಗಳಾಸನದೊಳುಕುಳಿತು ಭೋಜನವತಾನೆಸಗಿ ‖ ಕಂಗೊಳಿಪ ವೀಳೆಯುವನವಿಯುತ | ಶೃಂಗರಿಸಿಕೊಂಡೊಡನೆ ಬಂದಳು | ಹಿಂಗಡೆಯೊಳುದೆ ಮೆರೆವನಂದನವನಕೆ ಹರ್ಷದಲಿ ‖ ೬೫ ‖ ಮುಗಿಸಿಕೊಂಡು ರಘುವರನೋಡ್ಡೋ |ಲಗವನಾ ವೃಪವನಕೆಬರಲಿದಿ | ರುಗೊಳುತಾ ಭೂಮಿಸುತೆ ಯಾರತಿಯನು ನಿವಾಳಿಸಲು ‖ ಸೊಗಸಿನಿಂದಿಸೆವಾ ಸನದೊಳಾ | ರಘುವರೇಣ್ಯನು ಕುಳಿತು ಜಲವನು | ಸೊಗದೊಳಿಂಟುತ ಬಂದನಾವಿನುತ ಜಲವಾಟಿಕೆಗೆ ‖ ೬೬ ‖ ಬಡನೆ ಸೀತಾರಾಘವರ ನಡಿ | ಗಡಿಗೆ ದಾಸೀಜನವುಸೇವಿಸ | ಲಿಡಿವಸಂತಸದಿಂದೆ ರಾಘವನೆಲ್ಲರನು ಕಳುಹಿ ‖ ಪ್ರೊಢವಿಯುಣುಗಿಯುನೊಲಿಸಿ ಕರವನು | ಪಿಡಿದು ತಾನೇಕಾಂತವಾಗಿಯೆ | ಕಡುವಿನೋದವನಾಂತು ಜಲಕೇಳಿಗಳನಾಡಿದನು ‖ ೬೭ ‖ ಜನಕನಂದನೆ ರಾಮಚಂದ್ರನ | ಮನವು ಸಂತುಷ್ಟಿವಡೆವಂದದೆ | ಮನವೊಲಿದು ಬಹುಕಾಲ ಜಲಕೇಳಿಯನು ತಾನೆಸಗಿ ‖ ವನವನುಳಿದ್ಯೆ ತಂದಳರಾ | ಮನಸಹಿತ ಸಂತೋಷದೊಳು ಭೋ | ಜನದಶಾಲೆಗೆ ಕೂಡೆಸೇವಾಜನ ರೊಲಿಸುತ್ತಿರಲು ‖ ೬೮ ‖ ಧರಣಿಪತಿ ರಾಘವನು ಸಮನಂ | ತರದ ಸುಖಭೋಜನವನಾಗಿಸಿ | ಮೆರೆವ ತಾಂಬೂಲವನು ಮೆದ್ದು ಪುರಾಣಗಳನೆಲ್ಲ ‖ ಪರಮಭಕ್ತಿಯೊಳೊಲಿದು ಕೇಳು | ತ್ತಿರಲು ಭೋಜನವನ್ನು ವಿರಚಿಸಿ | ಧರಣಿಸುತೆ ಶಯ್ಯಾಗೃಹಕೆ ಬಂದಳತಿಹರ್ಷದಲಿ ‖ ೬೯ ‖ ಮೆರೆವಶಯ್ಯಾಗೃಹದೊಳಾ ರಘು | ವರನಬರವನೆ ನೋಡುತಿದ್ದಳು | ಧರಣಿಸುತೆಯು ಷ್ಟರೊಳು ರಾಘವನೆಲ್ಲರನು ಕಳುಹಿ ‖ ಬರಲು ನಿದ್ರಾಶಾಲೆಗತ್ಯಾ | ತುರದೊಳಾ ಜನಕಸುತೆ ರಾಮನಿ | ಗೆರಗಿ ಕುಳ್ಳಿರಿಸಿದಳು ಕರಲಾಘವವನಿತ್ತೊಲಿದು ‖ ೭೦ ‖ ಕನಕಮಣಿ ಪರ್ಯಂಕದೊಳು ರಾ | ಮನನು ಕೂಡಿಸಿ ಮೇದಿನೀಸುತೆ | ಘನವಿಮಲ ಪಾನೀಯವನು ತಾನಿತ್ತು ಕಂಗೊಳಿಪ ‖ ವಿನುತ ತಾಂಬೂಲವನು ಕೊಟ್ಟತಿ | ವಿನಯದಿಗೆ ಸ್ವಾನಂದವನಿದ್ರೆಯು | ನನುಭವಿಸಿದಳು ಬಹುವಿನೋದವನಾಂತು ರಮಿಸುತ್ತ ‖ ೭೧ ‖ ಉದ

ಬೆಂಕಾಲದೊಳಿದ್ದು ಗಂಡನ | ಪದಕೆರಗಿ ಭೂಮಿಸುತೆ ಕೊಟ್ಟಳು |
ಸವಮಲ ಸುಪೂಗೀಯು ತಾಂಬೂಲಂಗಳನು ಪತಿಗೆ || ಸುದತಿಸೀತೆಯು
ಕೈವಿಡಿದುಕೊಂ | ಡೊಲವಗಿದಾನಂದದೊಳು ಬಂದನು | ಸದನದ ದ್ರಾಕ್ಷಾ
ಲತಾ ಮಂಟಪದವಹತ್ತಿರಕೆ || ೨೦ || ಕುಳಿತ್ತು ದಿವ್ಯಾಸನದೊಳಾ ರಘು |
ಕುಲಲಲಾಮನು ಜಾನಕಿಯೊಡನೆ | ಪಲವುಬಗೆ ಯಾಟಗಳನಾಡುತ
ಪಂಜರಂಗಳೊಳು || ನಲಿದುಕೂಗುವ ಪಕ್ಷಿಗಳನಂ | ದೊಲಿದುಪಿಡಿದಾ
ಡಿಸುತ ಮುಂಗಡೆ | ಯೊಳಗೆಕಂಡನು ಸೂರ್ಯರ ನಾಟ್ಯಂಗಳನುಕೂ
ಡೆ || ೨೩ || ಇರುತರಾಮನ ಚರಣಪಂಕಜ | ಕೆರಗಿ ಬೇಡಿದಳಾಮಹೀ
ಸುತೆ | ಪುರದೊಳಂಗಡಿಗಳ ವಿನೋದವ ನೀಕ್ಷಿಸುವನೆನುತ || ಭರದೊ
ಳಾಕರುಮಾಡವನು ತ | ನ್ನರಸಿಯೊಡನೇರುತ್ತ ತೋರ್ದನು | ಬರಳ
ನೀಡುತ ಕುಳಿತುಕೊಂಡು ಸಮುಚಿತಪೀಠದಲಿ || ೨೪ || ಬೆರಳತೋರಿಸಿ
ರಾಘವನು ತ | ನ್ನರಸಿ ಗಂಗಡಿಗಳೊಳು ನಡೆಯು | ತ್ತಿರುವ ಸಕಲವಿ
ನೋದಗಳ ಸಲೆತೋರಿಸುತ್ತಿಬಳು | ಧರಣಿಸುತೆ ಯುಷ್ಟರೊಳುರತ್ನಾ |
ಭರಣಮಿಲ್ಲದೆ ಬೀದಿಯೊಳು ಸಂ | ಚರಿಸುತಿಹ ಬಡಹೆಣ್ಣನೋರ್ವಳ
ನಂದುನೋಡಿದಳು || ೨೫ || ಕಳುಹಿ ದಾಸೀಜನರ ನಾಕೆಯು | ಬಳಿಗೆ
ಜಾನಕಿಕೂಡೆ ತನ್ನಯು | ಬಳಿಗೆ ಕರೆಯಿಸಿಕೊಳ್ಳುತಾ ಬಡಹೆಂಗಸನು
ಕುರಿತು || ಎಲೆವನಿತೆ ನೀನೇಕೆಪರ್ಷದ | ನ್ನುಳಿದು ಬೀದಿಗಳಲ್ಲಿತಿರುಗು
ವೆ | ತಿಳುಹುನಿನ್ನ ವಿಚಾರವನ್ನೆನುತ ಪದೆದುಕೇಳಿದಳು || ೨೬ || ಜನನಿ
ಕೇಳೆನ್ನಪತಿ ಪೋಗಿರು | ವನುಪಿನೀಶಕೆ ಯಾತ್ರೆಗಾಗಿ ಪಿ | ತನಳಿದಿಹ
ನೆನಗಾರು ರಕ್ಷಕರಿಲ್ಲದುದರಿಂದ || ದಿನದಿನವು ಭಿಕ್ಷವನುಬೇಡುತ | ವಿನ
ಯದಿಂದೀ ಮಗುವಿನೊಡನೆಯು | ಮನದೆದುಃಖಿಸಿ ತಿರುಗುತಿಹೆನೀತೆರದೆ
ಯಾಚಿಸುತ || ೨೭ || ಎನುತಪೇಳಿದ ಮಾತುಗಳನಾ | ಜನಕಸುತೆಕೇ
ಳುತ್ತ ಮನ್ನಿಸಿ || ಮನದಣಿಯು ತನ್ನಡಿಗೆತೊಡಿಗೆಗಳೆಲ್ಲವನು ತೆಗೆದು ||
ವನಿತೆಗಿತ್ತುಪಚರಿಸಿ ಕೊಡಿಸಿದ | ಳನಯುನಿದಿರೊಳು ಲಕ್ಷವರಹಗ | ಳ
ನುಸುಮಿತ್ರಾಸುತನ ಕಡೆಯಿಂದಾ ನಿತಂಬಿನಿಗೆ || ೨೮ || ಆವನಿನಂದನೆ
ತನ್ನದೇಶದೆ | ನಿವಸಿಸುವ ಬಡಬಗ್ಗರನುತಾಂ | ತವೆ ವಿಚಾರಿಸಿಕರೆಯಿ
ಸುತ ನಿಜಮಂದಿರದ ಪೊರೆಗೆ || ಸವಿನುಡಿಗಳಿಂ ದುಪಚರಿಸುತೊಡ |
ನವರಮನದಣಿವಂತೆ ಮನ್ನಿಸಿ | ಜವದೆ ಕೊಡುವಳನುದಿನ ಧನಕನಕ
ವಸನಂಗಳನು || ೨೯ || ಇಂತನೇಕ ಸುಖಂಗಳನು ಬಲು | ಸಂತಸದೊ
ಳಾ ಮೇದಿನೀಸುತೆ | ಸಂತತವನುಭವಿಸುತ ವಿವಿಧವಿನೋದಗಳನೆಲ್ಲ ||

ಸ್ವಂತ ಭವನದೊಳೀಕ್ಷಿಸುತ ಸಮ । ನಂತರದೊಳು ವಿಹರಿಸುತ್ತಿದ್ದಳು । ಚಿಂತೆಯಿಲ್ಲದೆ ಪತಿಯೊಡನೆ ಸಿಂಗರಬನಂಗಳಲಿ ॥ ೯೦ ॥ ಅಂಗಳದಬೆಳ ದಿಂಗಳಲ್ಲಿಯು । ರಂಗಶಾಲೆಗಳಲ್ಲಿಯು ಮೆರೆವ । ಮಂಗಳಕರದ ಚಂದ್ರ ಶಾಲೆಗಳಲ್ಲಿಯು ಚರಿಸುತ ॥ ಕಂಗೊಳಿಸುವೇಕಾಂತ ಘನಸದ । ನಂಗ ಳಲ್ಲಿಯು ದಾರುಪರ್ಯಂ । ಕಂಗಳಲ್ಲಿಯು ವಿಹರಿಸಿದಳಾ ರಘುವರನಸಹಿ ತ ॥ ೯೧ ॥ ಕಂಗೊಳಿಸುತಿಹ ಸುಂದರತರವ । ನಂಗಳಲ್ಲಿಯು ಮೆರೆವ ಕರುಮಾ । ಡಂಗಳ ಕೊನೆಗಳಲ್ಲಿಯು ಸ್ಫಟಿಕಸ್ಥಳಂಗಳೊಳು ॥ ಕಂಗ ಳಗೆಸೆವ ವಿಮಲಜಲಯು । ತ್ರಂಗಳೆಡೆಯೊಳು ಚರಿಸುತ್ತಿದ್ದಳು । ಮಂ ಗಳಾಂಗನೆಸೀತೆ ದಶರಥನಂದನನ ಸಹಿತೆ ॥ ೯೨ ॥ ಮೆರೆವಕಾಂಚನ ದೆ ಡೆಗಳೊಳು ಸು । ದರವೆನಿಪ ಪುಷ್ಪಕವಿಮಾನದೊ । ಳುರೆಮೆರೆವ ಹೂವಿನವನೆಗಳೊಳು ತುಲಸಿವನಗಳೊಳು ॥ ತರತರದ ಮಂಚಂಗ ಳೊಳು ಮೇ । ಣ್ದೊರೆವಡೆದ ಸರಗಳೊಳು ಬಾಳೆಹೊ । ದರುಗ ಳೊಳು ಸಂಚರಿಸುತಿದ್ದಳು ಸೀತೆಪತಿಸಹಿತ ॥ ೯೩ ॥ ಹೊಳೆವುತಿಹ ಲಾ ಮಂಚದತಡಿಕೆ । ಗಳ ಬಳಗದಿಂದೆಸೆವಮಂಟಪ । ಗಳೊಳು ವರದೇವಾಲಯಂಗಳ ಮಧ್ಯಭಾಗದೊಳು ॥ ಹೊಳೆದುರಂಜಿಪ ಚಿತ್ರ ಶಾಲೆಗ । ಳೊಳು ವಿರಾಜಿಪ ಪುಷ್ಪವಾಟಿಕೆ । ಗಳೊಳು ಸೀತೆ ವಿಹರಿಸುತ್ತಿದ್ದಳು ರಾಘವನಸಹಿತ ॥ ೯೪ ॥ ಬೆಳೆದಿಹ ದ್ರಾಕ್ಷಾಲ ತಾಳಿಯ । ನೆಳಲಿನೊಳು ಸ್ವತತವುಮಂದಾ । ನಿಲನು ಸಂಚರಿಪತಿ ಮನೋಹರಸುಸ್ಥಳಂಗಳೊಳು ॥ ಹೊಳೆವ ಪರ್ಯಂಕಂಗಳೊಳು ಥ ಳ । ಥಳಿಪತರುಗಳಮೇಲೆ ಸಲೆಕಂ । ಗೊಳಿಪ ಕೇಳೀಗೃಹಗಳೊಳು ವಿಹರಿಸಿದಳಾಸೀತೆ ॥ ೯೫ ॥ ವರಸಭಾಮಧ್ಯದೊಳು ನಿಜಮಂ । ದಿರ ದದೇಹಳಿಗಳೊಳು ಸುಂದರ । ತರವೆನಿಪ ಬೃಂದಾವನಸ್ಥಳಗಳ ಸಮಾ ಪದೊಳು ॥ ಉರುತರದ್ವಾರೋರ್ಧ್ವ ಸಾಧನಿ । ಕರಗಳೊಳು ರಘುವೀ ರನೊಡನೆ ವಿ । ಹರಿಸುತ್ತಿದ್ದಳು ಸೀತೆ ಬಹುಸಂತೋಷವನುತಾಳ್ದು ॥ ॥ ೯೬ ॥ ಬಂದು ಕಂಬದಮೇಲೆಕಟ್ಟಿದ । ಸುಂದರತರದ ಮಂದಿರದೊ ಳಾ । ಸುಂದರಾಂಗನೆ ಸೀತೆರಾಘವನೊಡನೆ ವಿಹರಿಸುತ ॥ ಚಂದದಿಂದೆಸೆ ವೆಲ್ಲಕಡೆಗಳೊ । ಳಂದವಾಗಿಹ ವಸ್ತುಗಳನಾ । ನಂದದಿಂದೀಕ್ಷಿಸುತಲಿ ದ್ದಳು ಗಂಡನನೊಲಿಸುತ ॥ ೯೭ ॥ ಪಲವು ದಿನದಗಳಿಂದ ರಾಮನ । ನೊಲಿಸುತಿಂತಿರಲಾ ಮಹೀಸುತೆ । ಬಳಿಕವೇದವ್ಯಾಸ ಮುನಿಯೊಂದು ದಿನರಾಘವನ ॥ ಬಳಿಗೆಬರಲಾ ಮುನಿಪತಿಗೆರಗಿ । ನಲಿದುರಾಘವನರ್ಘ್ಯ

ಂದ್ಯಂ | ಗಳನುಕೊಟ್ಟುಪಚರಿಸಿ ಕುಳ್ಳಿರಿಸಿದನು ಪೀಠದಲಿ || ೮೮ ||
ುನಿಕುಲೇಂದ್ರನ ಪದಕೆಜಾನಕಿ | ವಿನಯದೊಳೆರಗಿ ದಿವ್ಯವರಭೋ |
ನವನಾಗಿಸಲಾ ರಘುವರನು ತಾಪಸೇಂದ್ರನಿಗೆ || ವಿನುತದಕ್ಷಿಣೆಗಳ
ರಿಸಿ ಮೇ | ಲೆನಿಪ ತಾಂಬೂಲವನು ಕೊಟ್ಟತಿ | ವಿನಯದಿಂದುಪಚ
ಸಿದನು ಬೀಸುತಿರಲವನಿಜೆಯು || ೮೯ || ತನ್ನ ಕುಶಲವನಾ ಮು
ೀಂದ್ರನು | ಮುನ್ನಪೇಳ್ದು ರಘುವರನ ಕುಶಲ | ವನ್ನುಕೇಳ್ದತಿ ಹ
ಷದಿಂದಲೆ ರಾಮಚಂದ್ರನನು || ತನ್ನಹತ್ತಿರ ಕುಳ್ಳಿರಿಸಿಕೊಂ | ಡು
ತಾಸನದೊಳು ಪಲತೆರದೆ | ಮನ್ನಿಸುತಲಿಂತೆಂದು ನುಡಿದನುಸಭೆಯ
ಧ್ಯದಲಿ || ೯೦ || ಧರಣಿಪಾಲಕಕೇಳು ಶಾಸ್ತ್ರನಿ | ಕರದೊಳುನ್ನತಿ
ಡೆದು ಪಾವನ | ತರಮೆನಿಸುತಿರ್ಪೇಕ ಪತ್ನೀವ್ರತವೆ ನೀಯುಗದೆ ||
ರಮಭಕ್ತಿಯುಸಾಂತು ನೀನಾ | ಚರಿಪೆ ಮುಂದೆ ದ್ವಾಪರಯುಗದೆ |
ುತಸುಖಿಸುವೆ ಬಹುವನಿತೆಯರೊಳದರ ಫಲದಿಂದ || ೯೧ || ಕ್ಷಿತಿಸುತೆ
ತೂಕಕ್ಕೆ ಸಮಮೆನಿ | ಸುತಿಹ ಚಿನ್ನದೊಳೊಂದದಂತೆ | ಪ್ರತಿಮೆ
ಳು ಹದಿನಾರನಾಗಿಸಿ ದಕ್ಷಿಣೆಯುಸಹಿತ || ಕ್ಷಿತಿಸುರರ್ಗವ ನೀವುದೆಲೆ
ಭೂ | ಪತಿಯೆ ಕೇಳ್ಹದಿನಾರುಸಾವಿರ | ಸತಿಯರಿಂದೆ ಸುಖಿಸುವೆಮುಂ
ನಯುಗದೊಳಗನರಿಂದ || ೯೨ || ಎನುತಪೇಳ್ದಾ ಮುನಿವಚನಗಳ |
ನುನಯದೊಳಾಲಿಸುತ ರಘುನಂ | ದನನು ಸಂತಸದಿಂದೆ ಹದಿನಾರು
್ರತಿಮೆಗಳನು || ಕನಕದಿಂದಲೆ ಮಾಡಿಸಿ ಬ್ರಾ | ಹ್ಮಣರಿಗಿತ್ತನು ದ
ಣೆಸಹಿತ | ವಿನುತಸರಯೂನದಿಯ ತೀರದೊಳಧಿಕಭಕ್ತಿಯಲಿ ||
೯೩ || ತೆರಳದನು ಬಂದಂತೆತಾಪಸ | ವರನು ರಾಘವನಿಂದೆ ಪಡೆದು
| ತರದ ಮನ್ನಣೆಗಳನುಪರಸುತ ತನ್ನಯಾಶ್ರಮಕೆ || ಇರಲುಬ
ಕೊಂದುದಿನ ನಿದ್ರಿಸು | ತಿರಲು ಜಾನಕಿಸಹಿತ ರಾಘವ | ನಿರದೆಬಂದ
ಪಿಂಗಳೆಯೆನಿಪ ಗಣಿಕೆಶೀಘ್ರದಲಿ || ೯೪ || ದ್ವಾರಪಾಲಕರನ್ನು ವಂ
ಸು | ತಾರಮಣಿ ಬಂದೊಳಹೊಗುತ್ತಾ | ಧಾರಿಣೀಸುತೆ ತೀಯದಂದದೆ
ಂದುರಾತ್ರಿಯಲಿ || ಮೀರಿದಾನಂದವನು ತಾಳುತ | ವೀರರಾಮನಪದ
ನೊತ್ತಿದೊ | ಡಾ ರಘುಕುಲಲಲಾಮ ನೆಚ್ಚರುಗೊಂಡನತಿಜವದೆ ||
೯೫ || ಭರದೊಳೀಕ್ಷಿಸಿ ಪಿಂಗಳೆಯನಾ | ಧರಣಿಪಾಲಕ ನಚ್ಚರಿಯ
ಂ | ತಿರದೆ ನೀನೇತಕ್ಕೆಬಂದೆಯೆನುತ ವಿಚಾರಿಸಲು || ಶಿರವಬಾಗಿಸಿ
ಡಿದಳು ರಘು | ವರನ ಪದಪಂಕೇಜಯುಗಳ | ಕ್ಕೆರಗಿ ನೀಂ ರಮಿ
ನ್ನೊಡನೆನುತ ಕೂಡೆಬಿನ್ನವಿಸಿ || ೯೬ || ಬರುತಿಹದ್ವಾಪರಯುಗದೊ

೪೮ | ಧರಣಿಯೊಳು ನಿಃಶಂಕುಜ್ಞ್ಯಯಾಗವ | ತಲಿಸಿ ನನ್ನನು ವರಿಸೆನುತ
ವಳನೊಪ್ಪಿಸಿ ಕಳುಹಿಸಿ || ಧರಣಿಸುತೆಗೀ ವರ್ತಮಾನವ | ನರುಹಲಾ
ರಘುವರನು ಸಮನಂ | ತರದೊಳಾ ಭೂಮಿಸುತೆ ತಾಳಿದಳಧಿಕಕೋಪ
ವನು || ೯೭ || ಇಳಿಮುನ್ನಂಚವನಾ ಮಹೀಸುತೆ | ಮುಳಿದುಗಂಡನನೀ
ಕ್ಷಿಸುತೆನಗೆ | ತಿಳಿದಿಹುದು ನಿನ್ನೇಕಪತ್ನೀವ್ರತವು ಗೋಪ್ಯದಲಿ ||
ನಲಿದುಪಿಂಗಳೆಯೊಡನೆ ರವಿಸುತ | ವಳನು ನೀಂ ಕಳುಹಿಸಿಕೊಡು
ತ್ತಾ | ಬಳಿಕ ನನ್ನನ್ನಟ್ಟಿಸಿದೆ ಸಾಕರ್ಧರಾತ್ರಿಯಲಿ || ೯೮ || ಅವಳು
ಬಂದಿರುವಾಗ ಳೀತಕ | ಭವದೊಳಿಟ್ಟಿಸಲಿಲ್ಲ ನನ್ನನು | ಸವಿಸಯುಂದೂ
ಳಾ ವ್ಯಾಸಮುನಿವೊಸಲಾದ ಜನರೊಡನೆ || ಅವನಿಜಾತೆಯು ನುಡಿದುಜಗ
ದೊಳ್ | ರುವಮೆಸಿತ್ರಯುರು ಜನಸಿಗೆಣಿಯನಿ | ಸುವರೆನುತಲಾ ನೇಕಪ
ತ್ನೀ ವ್ರತನೆನುತಲೊರೆವ || ೯೯ || ಅನುದಿನದೆನೀ ನನ್ನ ಹವಾಡುವೆ |
ವಿನುತಮೊನಿಮಾ ವ್ರತವದೇನಾ | ಯ್ತೆನಗೆ ಪೇಳಿವನುಡಿಗಳಿಂದೇನಾ
ಯ್ತು ನಾಸೀಗ || ತನುವನೀಗುವ ಕೇಳು ರಘುನಂ | ದನನೆನೋಕುವ
ಳಲ್ಲ ಮಾರಾಂ | ಗನೆಯುಮುಂಗಿದ ಹಾಸಿಗೆಯನೆಡಗಾಲಿನೊಳು ನಾನು ||
|| ೧೦೦ || ನಾನೃವದಮೇಲೆ ಸುಖಿಸುತ್ತಿರು | ನೀನು ಬೇಕಾದವಳೊಡನೆ
ಕೇ | ಳೀನೆಲದೊಳಗೆ ಸೂಳೆಗಾರಿಕೆನ್ನವ ರಾಜನಿಗ || ಮಾನವುಳಿಯದು
ರಾಜ್ಯವಿಲ್ಲದು | ಹಾನಿಬರುದೆನು ತೊರೆದೊಡನೆ ಸರ | ಯೂನದಿಗೆಹೊ
ರಟಳು ನಿರಾಕರಿಸುತ್ತ ಗಂಡನನು || ೧೦೧ || ಭರದೊಳೋಡಿ ಬರುತ್ತ
ರಾಮನು | ಮರಳಗುಡ್ಡೆಯೊಳವನಿಜಾತೆಯು | ಕರವಪಿಡಿದಿಂತೆಂದು
ನುಡಿದನು ಶಾಂತಕೇಳೆಂದು || ಮರುಳುಗೊಂಡಾ ಪಿಂಗಳೆಯೊಡನೆ |
ನೆರೆದುದಿಲ್ಲವು ಕೇಳ್ವ ಪ್ರಮಾಣವ | ವಿರಚಿಸುತ ಪೇಳುವೆನು ಸಂದೇಹವ
ನುಬಿಡುನೀನು || ೧೦೨ || ಎಂದುಪಲತೆರದಿಂದ ಸೀತೆಯು | ನಂದುಬೇ
ಡಿಕೊಳುತಿರಲಾ ರಘು | ನಂದನನು ಧರಣೀಸುತೆ ವಸಿಷ್ಠರಪದವಪಿಡಿ
ದು || ಇಂದುನೀಂ ಪೇಳಿದೊಡೆ ನಂಬುವೆ | ನೆಂದುರೋದಿಸಿ ಪೇಳ
ಲತಿಜವ | ದಿಂದೆಲಕ್ಷ್ಮಣನನ್ನು ಕಳುಹಿಕರೆಯಿಸಿದನು ಮುನಿಯು ||
|| ೧೦೩ || ಸತಿಯುರುಂಧತಿ ಸಹಿತವಶರಥ | ಸುತನಹತ್ತಿರಕಾ ವಸಿ
ಷ್ಠನು | ಹಿತದೊಳ್ಳೆತರ ಲಾತನಚರಣ ಪಂಕಜಕ್ಕೆರಗಿ || ವಿತತ
ಭಕ್ತಿಯೊಳರುಹಲಿಸ್ಸಂ | ಗತಿಯುನಾತನ ಪದವಪಿಡಿದಾ | ಕ್ಷಿತಿ
ಸುತೆಗೆ ಪರಿಹಾರವಾಯಿತು ಮನದಸಂಶಯವು || ೧೦೪ || ಬಳಿಕ
ರುಂಧತಿಗಾ ಮಹೀಸುತೆ | ಬೆಲೆವಡೆದ ವಸ್ತ್ರಾಭರಣಗಳ | ನೊ

ಲಿಪುಕೊಟ್ಟಳು ವಿನಯದಿಂದುಪಚರಿಸಿ ಪದಕೆರಗಿ ॥ ತಳುವದಾಕುಲ ಗುರುವಿನಪದಕ । ಮಣಿಕೆರಗಿ ರಾಘವನು ಮನ್ನಿಸಿ । ಕಳುಹಿಸಿಕೊಡುತ ಸಿದ್ಧಮಾಡಿದನರ್ಧ ರಾತ್ರಿಯಲಿ ॥ ೧೦೫ ॥ ಒಂದುಸಲ ಸತಿಸೋದರರೊಡನೆ । ಬಂಧುಜನಗಳ ಸಹಿತದಶರಥ । ನಂದನನುಸೂರ್ಯಗ್ರಹಣದ ಸ್ನಾನಕೆಂದೆನುತ ॥ ಬಂದಿರೆ ಕುರುಕ್ಷೇತ್ರಕಾದಿನ । ಬಂದರಲ್ಲಿಗೆ ಮುನಿಗಳೆಲ್ಲರು । ಸಂದಸಂತಸದಿಂದೆ ತಮ್ಮಯಶಿಷ್ಯರೊಡವೆರಸಿ ॥ ೧೦೬ ॥ ಸ್ನಾನಮಾಡುತ ರಾಘವನಖಿಳ । ದಾನಗಳ ನೆಸಗಿದನು ವಿಪ್ರರಿ । ಗಾನೆಲವಣಾಗಿ ಬಂದಖಿಳ ಮುನಿಪತ್ನಿಯರಿಗೆಲ್ಲ ॥ ಸಾನುರಾಗದಿ ಮನ್ನಿಸುತಸುಂ । ಮಾನದೊಳು ಕೊಟ್ಟಳಡಿಗಡಿಗೆ ನಿ । ದಾನಿಸದೆ ಮೇಲೆನಿಪವರವಸ್ತ್ರಾಭರಣಗಳನು ॥ ೧೦೭ ॥ ಬಳಿಕಲೋಪಾಮುದ್ರೆ ರಾಮನ । ಲಲನೆಯನು ನೋಡುತ್ತ ಸಂತಸ । ವಳಿದು ಕೇಳಿದಳೆಲೆ ಮಹೀಸುತೆ ಹಿಂದೆರಾಘವನು ॥ ಜಲನಿಧಿಗೆ ಸೇತುವ ನೆಸಗುವಂ । ದೊಲಿದಗಸ್ತ್ಯಮುನಿಯನು ಬರಿಸದೆ । ತೊಳಲಿದನದೇತಕ್ಕೆನಗೆ ನೀಂ ತಿಳಿಹಿಸವನೆನುತ । ॥ ೧೦೮ ॥ ಜನನಿಕೇಳ್ಪೂರ್ವದೊಳಗಸ್ತ್ಯರು । ವನಧಿವಾರಿಯ ನೀಂಟಿಬಿಟ್ಟರು । ಘನತೆಯೊಳದನು ಮತ್ತೆ ಮೂತ್ರದ ರೂಪಿನೊಳು ನೆಲದೆ ॥ ವನಧಿಜಲವದರಿಂದ ಲುಪ್ಪಿಂ । ದೆನಿಸಿಹುದದನು ಕುಡಿವುದೆಂತವ । ರೆನುತ ಯೋಚಿಸಿ ಕರಿಸಲಿಲ್ಲವು ಕುಂಭಸಂಭವನ ॥ ೧೦೯ ॥ ತನಗೆ ಮುಷ್ಯಕೀರ್ತಿ ಬಹುದೆನ್ನುತ । ಮುನಿಕುಲೋತ್ತಮನ ಕರೆಯಿಸಲಿ । ಲ್ಲಿನಕುಲೇಂದ್ರನು ಸೇತುವನೆಸಗುವಂದು ಯೋಚಿಸುತ ॥ ಜನನಿಕೇಳಾ ಮುನಿವರೇಣ್ಯನ । ಘನತರವಕೃಪೆಯಿಂದೆ ರಘುನಂ । ದನನಿಗಿಂತು ಪರಾಕ್ರಮವೊದಗಿತೆನುತ ಪೇಳಿದಳು ॥ ೧೧೦ ॥ ಮುನಿಪನಾಶೀರ್ವಾದಬಲದಿಂ । ದಿನಕುಲೇಂದ್ರನಿ ಗೊದಗಿಹುದುಮೇ । ಲೆನಿಪಭುಜಬಲವಿಾತೆರದೊಳೆಂದೆನುತ ಲಾಕೆಯನು ॥ ಜನಕನಂದನೆ ಕಳುಹಿಕೊಟ್ಟಳು । ಮುನಿವರನಡೆಗೆ ಮನ್ನಿಸುತ್ತಲೆ । ವಿನುತ ಮಂಗಳವಸ್ತುಗಳ ನೊಲಿದಿತ್ತು ಪದಕೆರಗಿ ॥ ೧೧೧ ॥ ಬಂಧುಮಿತ್ರರಸಹಿ ತಯೋಧ್ಯೆಗೆ । ಬಂದು ನಿಜಮಂದಿರದೊಳಾ ರಘು । ನಂದನನು ಸತಿಸಹಿತಪಡೆದನು ಬಹಳಸೌಖ್ಯವನು ॥ ಇಂದುಮುಖಿ ಪತಿಯೊಡನೆ ಮಹದಾ । ನಂದದಿಂದೆ ವಿಹರಿಸುತಿದ್ದಳು । ಮಂದಿರದೊಳಾಶ್ಚರ್ಯದ ವಿನೋದಗಳನೀಕ್ಷಿಸುತ ॥ ೧೧೨ ॥

ಇಂತು ಮೂವತ್ತುನಾಲ್ಕನೆಯ ಅಧ್ಯಾಯವು ಸಂಪೂರ್ಣವು

ಪದ್ಯಗಳು ೧೯೪೮.

# ಮೂವತ್ತೈದನೆಯ ಅಧ್ಯಾಯ.

ಸೂಚನೆ॥ ಧರಣಿಸುತೆ ಗರ್ಭವನು ಪಡೆದಾ ।
ಪುರದೊಳೆಲ್ಲರ ನೊಲಿಸುತ ಪಲವು ।
ತೆರದೊಳಾ ರಘುವರನಿಗಾನಂದವನು ಮಾಡಿದಳು ॥

ಇರಲಿರಲು ಬಳಿಕೊಂದುದಿನ ರಘು । ವರನು ಸೇವಕಿವಚನದಿಂ ದಲೆ । ಧರಣಿಸುತೆ ಗರ್ಭಿಣಿಯೆನಿಪ ಸಂಗತಿಯನಾಲಿಸುತ ॥ ಪರಮಸಂ ಮದದಿಂದೆ ಧರಣೀ । ಸುರರಕರೆಯಿಸಿ ಕೊಟ್ಟನಡಿಗಡಿ । ಗಿರದೆ ಮನ್ನಿ ಸಿ ದಕ್ಷಿಣೆಸಹಿತ ಸಕಲದಾನಗಳ ॥ ೧ ॥ ದಿನದಿನವು ಲಕ್ಷೋಪಲಕ್ಷದ । ಮುನಿವರರಿಗಾ ನಂದದಿಂದಲೆ । ಮನುಕುಲೋತ್ತಮ ನೊಲಿದುಸಂತರ್ಪ ಣೆಯನಾಗಿಸುತ ॥ ಜನಕಜಾತೆಗೆ ತರಿಸಿಕೊಟ್ಟನು । ಕನಕ ಪೀತಾಂಬ ರಗಳನು ಮೇ । ಲೆನಿಪ ಬಹುವಿಧಗಳಹ ಸರಿಗೆಯಕುಪ್ಪಸಂಗಳನು ॥ ॥ ೨ ॥ ಎರಡನೆಯ ತಿಂಗಳೊಳಯೋಧ್ಯೆಗೆ । ಕರೆಯಿಸಿ ಸುಮೇಧಾ ಜನಕರನು । ಧರಣಿಪಾಲಕನಾ ಗುರುವಸಿಷ್ಠಮುನಿಮೊದಲಾದ ॥ ವರ ಮುನಿಗಳಿಂದಾ ಗಿಸಿದನತಿ । ಹರುಷದಿಂದಲೆ ಪುಂಸವನಮಂ । ಬುರುತರ ಮಹೋತ್ಸವವನಾ ಧರಣೀಸುತೆಗೆನಲಿದು ॥ ೩ ॥ ಸತಿಸಹಿತ ಪುಂಸವನ ಕರ್ಮವ । ನತಿಹರುಷದಿಂ ದೀಕ್ಷಿಸಿಜನಕ । ಪತಿ ಪದೆದುರತ್ನಾಭರಣಚೀ ನಾಂಬರಾದಿಗಳ ॥ ಸುತೆಗೆತಾನಿ ತ್ತಳಿಯನಹ ರಘು । ಪತಿಗೆಕೊಟ್ಟನು ಮೇಲೆನಿಪ ಘನ । ರಥಗಜತುರಗ ವಸ್ತ್ರರತ್ನಾಭರಣಗಳ ನೊಲಿದು ॥ ॥ ೪ ॥ ಅಳಿಯನನು ಸಂತೋಷಪಡಿಸುತ । ಲಲನೆಯೊಡ ನಡಿಗಡಿಗೆಮ ನ್ನಣೆ । ಗಳನುಪಡೆದು ಮಿಥಿಳೆಗೆಬಂದನು ಜನಕಭೂವರನು ॥ ಬಳಿಕ ಜಾನಕಿಯೊಂದುದಿನ ಪತಿ । ಬಳಿಗೆಬಂದೀ ಪುರದುಪವನಂ । ಗಳೊಳು ವಿಹರಿಸಬೇಕು ನಿನ್ನೊಡನೆಂದು ಬೇಡಿದಳು ॥ ೫ ॥ ಮಡದಿಪೇಳ್ದ ಮಾತನಾಲಿಸಿ । ಸಡಗರದೆ ರಾಘವನುಪೇಳ್ದನು । ಮಡದಿಕೇಳ್ನೀಂ ಪೇ ಳವಂತಾಗಿಸುವೆ ನೆಂದೊಲಿಸಿ ॥ ಒಡನೆಲಕ್ಷ್ಮಣ ಗಂದುನುಡಿದನು । ಕ ಡುಜವದೊ ಳುದ್ಯಾನವನಕಾಂ । ನಡೆತರುವೆನೆಂದೀಗ ಸಾರಿಸುಪಟ್ಟಣ ದೊಳೆನುತ ॥ ೬ ॥ ಶಿರದೊಳಾಂತು ರಘುವರನಾಜ್ಞೆಯ । ನಿರದೆಲಕ್ಷ್ಮ

ಣನಾಗ ಕಂಚುಕಿ । ಯರನುಬರೆಯಿಸಿ ತನ್ನೆಡೆಗೆನೀ ವಿಳವಸ್ತುಗಳ । ಇರಿಸಿಯುದ್ಯಾನ ವನದೊಳಲಂ । ಕರಿಸಿಬರಬೇಕೆನುತ ಪೇಳ್ದತಿ । ಭರದೊಳಂತಾಗಿಸುತ ಬಿನ್ನವಿಸಿದನು ರಾಮನಿಗೆ ॥೭॥ ಕುಳಿತುರಾಘವ ನೊಂದುದಂಡಿಗೆ । ಯೊಳುಪವನಕ್ಕೆತಂದನು ಬರುವ । ಗಳನು ಕೇಳುತವೈಭವದೊಳಾ ರಾಜಮಾರ್ಗದಲಿ ॥ ನೆಲದಣುಗಿ ಮತ್ತೊಂದುದಂಡಿಗೆ । ಯೊಳು ಕುಳಿತುಕೊಳ್ಳುತ್ತ ಬಂದಳು । ತಳುವದಾರಘುವರನ ಹಿಂಗಡೆ ಪುರವನೀಕ್ಷಿಸುತ ॥ ೮ ॥ ತೆಂಗುನೇರಿಳೆ ಮಾವುಮಾದಳ । ಹೊಂಗೆಕಿತ್ತಿಳೆ ಬಾಳೆದಾಡಿಮ । ಕಾಂಗುಪೇರಿಳೆ ಹಲಸುನೆಲ್ಲಿಯು ಸೀಬೆ ಶೀತಾಳ ॥ ಹಿಂಗುಯಳಚಿ ಚಕೋತಬೇಲ ಲ । ವಂಗ ಬೇವುಮೊದಲಹ ಫಲವೃಕ್ಷಂಗಳಿಂಪೆಸೆವಾ ವನಕೆ ನಡೆತಂದಳಾಸೀತೆ ॥ ೯ ॥ ಬಕುಳಪಾದರಿ ಪಾರಿಜಾತತತಿ । ಲಕುಚಮುಚಕರವೀರ ಕುರವಕ । ವಿಕಸಿತ ಸುಮಂದಾರಕೇತಕಿ ಜಾಜಿಬಂಧೂಕ ॥ ಪ್ರಕಟನಂದ್ಯಾವರ್ತ ಪರಚಂ । ಪಕಶಿರೀಷ ರಸಾಲವೊದಲಹ । ಸಕಲ ಪುಷ್ಪಂಗಳನು ಜಾನಕಿಕಂಡಳಾವನದೆ ॥೧೦॥ ಗರುಡಸಾರಸ ಕೇಕಿಶುಕ ತಿ । ತ್ತಿರಿ ಬಕಭರದ್ವಾಜ ಶಾರಿಕ । ಸುರುಚಿರ ಕಪೋತಪಿಕವಾಯಸ ಶಕುನಿವೊದಲಾದ ॥ ಮೆರೆವಸುಂದರ ಪಕ್ಷಿಗಣದಿಂ । ದುರೆವಿರಾಜಿಪ ವನವಹೊಕ್ಕಳು । ಧರಣಿಸುತೆರಾಘವನ ನೊಲಿಸುತ್ತಧಿಕ ಹರ್ಷದಲಿ ॥೧೧॥ ಮಾವಿನಾಮರಗಳ ತಳದೊಳಾ । ಪೂವಿನಾ ತೋಟಂಗಳಲ್ಲಿಯು । ಬಾವಿಗಳ ದಡದಲ್ಲಿಯು ಮರಳದಿಬ್ಬಗಳಡೆಯೊಳು ॥ ಆವನಿತೆ ಗೂಡಾರಗಳೊಳಂ । ತಾವನದ ತೋಟಂಗಳೊಳೆಸೆವ । ತೀವಿಮುಪ್ಪರಿಗೆಗಳೊಳು ಕ್ರೀಡಿಸಿದಳಡಿಗಡಿಗೆ ॥ ೧೨ ॥ ವರನದೀತೀರದೊಳು ರಂಜಿಪ । ತರತರದ ಜಲಯಂತ್ರಗಳ ಹ । ತ್ತಿರದೊಳಹ ಪೀಠಗಳಮೇಲ್ಪಡೆಗಳೊಳು ಸಂತತವು ॥ ಹರಿವಸರಯೂ ನದಿಯದಡದಲ್ಲಿರುವ ದೋಣಿಗಳಲ್ಲಿಯು ಸಲೆವಿ । ಹರಿಸುತಿದ್ದಳು ಪತಿಯೊಡನೆಜಾನಕಿ ವಿನೋದದಲಿ ॥ ೧೩ ॥ ಘನತಟಾಕಂಗಳೊಳಿರುವ ಮೋ । ಲೆನಿಪ ನಾವೆಗಳಲ್ಲಿಯು ಮರದ । ಕೊನೆಯೊಳಿಹ ಮಂದಿರಗಳಲ್ಲಿಯು ಕದಳಿವನಗಳೊಳು ॥ ಇನಕುಲೇಂದ್ರನ ಸಹಿತಜಾನಕಿ । ಬಿನದದಿಂದೆ ವಿಹರಿಸುತಿದ್ದಳು । ಮನವೊಲಿದು ಹಗಲಿರುಳು ಜಲಕೇಳಿಗಳನಾಗಿಸುತ ॥ ೧೪ ॥ ಪುಷ್ಪಸದನಂಗಳೊಳು ಜಾನಕಿ । ಪುಷ್ಪಕವಿಮಾನದೊಳು ಕೇತಕಿ । ಪುಷ್ಪ ಭವನಂಗಳೊಳು ಕೃತ್ರಿಮ ಮಂದಿರಂಗಳೊಳು ॥ ಪುಷ್ಪಫಲಕಿಸಲಯುವ ನಾಂತಚ । ತುಷ್ಪಥಂಗಳೊಳನಿಯನಸಹಿತ । ನಿಷ್ಫ

ಲವೆನಿಸದಂದು ವಿಹರಿಸುತಿದ್ದಳಾವನದೆ ॥ ೧೫ ॥ ಹೊಳೆವ ಕಂಬದ ಮ
ನೆಗಳೊಳು ಕಂ । ಗೊಳಿಪ ದ್ರೋಣಿಯುಮೇಲಿಪ ಮಹಡಿ । ಗಳೊಳು
ವಿಬುಧರು ಹೊಗಳುವಂತಾ ಮೇದಿನೀಸುತೆಯು ॥ ಥಳಥಳಿಸುತಿಹ ಚಿ
ತ್ರಶಾಲೆಗ । ಳೊಳು ಮರಳದಿಬ್ಬಗಳೊಳಾ ರವಿ । ಕುಲಲಲಾಮನ
ಕೂಡೆ ವಿಹರಿಸುತಿದ್ದಳತಿಹಿತದೆ ॥ ೧೬ ॥ ಬಂದು ಕಂಬದ ಮೇಲೆ ಕಟ್ಟಿ
ದ । ಸುಂದರವೆನಿಪ ಸೌಧಗಳೊಳತಿ । ಚಂದವಾಗಿಹ ದಾಡಿಮವನಂಗ
ಳೊಳು ಶೋಭಿಸುತ ॥ ಅಂದವಡೆದಿಹ ಮಂಚಗಳೊಳಂ । ನಂದದಿಂದ
ವಿಹರಿಸುತಿದ್ದಳು । ಬಂದು ಜಾನಕಿ ರಾಮನೊಡನಾ ವನದ ಮಧ್ಯದಲಿ ॥
॥ ೧೭ ॥ ಎಳೆದಳಿರ ಮಧ್ಯದೊಳವಿತು ಕೋಂ । ತಿಳಿಯುನಂದನೆ ಪತ್ರಿಯು
ಚಿತ್ತಕೆ । ತಳುವದೆ ವ್ಯಾಕುಲವನಾಗಿಸುವಳತಿ ಶೀಘ್ರದಲಿ ॥ ತಿಳಿದು
ತನ್ನನು ರಾಘವನು ಪಿಡಿ । ಯುಲು ಮಹೀಸುತೆಮತ್ತೆ ಪತಿಯುಕೊ । ರ
ಳನು ಪಿಡಿದಾಲಂಗಿಸುತ ಸಂತಸವನಾಗಿಪಳು ॥ ೧೮ ॥ ಜನಕಸುತೆ ಸೂ
ಳೆಯರನರ್ತನ । ವನವಲೋಕಿಸುತತಿ ಮನೋಹರ । ಮೆನಿಪವಾದ್ಯಂ
ಗಳನು ಕೇಳುತಬಹುಳಹರ್ಷದಲಿ ॥ ಘನವಿನೋದಕರ ಮೆನಿಪ ಕಥೆಗ ।
ಳನೊಲಿದಾಲಿಸು ತಿದ್ದಳಾರಾ । ಮನೊಡನಾ ರಾಮದನಡುವೆ ಸಂಭ್ರಮ
ವಿಲಾಸದಲಿ ॥ ೧೯ ॥ ಧರಣಿಸುತೆ ಸೂತ್ರಂಗಳಿಂದಲೆ । ನರರು ಕಟ್ಟಿರಿಸಿದ
ತಿಘನತರ । ಕರಚಮತ್ಕಾರಗಳ ನೀಕ್ಷಿಸುತಧಿಕ ಹರ್ಷದಲಿ ॥ ತಂತರದ
ವಿಸ್ಮಯವನೆಲ್ಲ ಜ । ನರಿಗೆ ತೋರಿಸಿ ನಗಿಸುತಿಹ ನ್ರೊಂ । ಬರಮೇಲೆನಿ
ಪಾಟಗಳ ನೊಲಿದಂದುನೋಡಿದಳು ॥ ೨೦ ॥ ವನದ ಮಧ್ಯದೊಳಾ ಮ
ಹೀಸುತೆ । ವಿನುತಿವಡೆದ ದಶಾವತಾರಗ । ಳನು ವಿಲೋಕಿಸುತಿಂದ್ರಜಾ
ಲ ಮಹೇಂದ್ರಜಾಲಗಳ ॥ ಮನುಕುಲೇಂದ್ರನ ಸಹಿತನೋಡುತ । ಘನ
ವಿಭವದಿಂದೊಂದು ತಿಂಗಳ । ತನಕ ವಿಹರಿಸುತಿದ್ದು ಬಂದಯೋಧ್ಯ
ಗಾಬಳಿಕ ॥ ೨೧ ॥ ವಾತೆ ಧರಣೀಜಾತೆ ಸುಗುಣ । ವ್ರಾತೆ ಮಂಗಳ
ಭೂತೆ ವಂಶಪ್ರ । ನೀತೆ ಜನಸಂಪ್ರೀತೆ ಭೂತಲದೊಳತ್ರಿಪಖ್ಯಾತೆ ॥ ನೀ
ತಿತತಿವಿಖ್ಯಾತೆ ದಾನವ । ಭೀತೆ ಸುಗುಣಾತೀತೆ ಕರುಣಾ । ಸ್ರೋತೆ
ಗರ್ಭವಧರಿಸಿದಳು ಸುವಿನೀತೆಯಾಸೀತೆ ॥ ೨೨ ॥ ಬಡನಡುಬಳೆದುದು
ತಿವಳಿಗಳೊಳ । ಗಡಗಿಕೊಂಡವು ಸುಂದರಮುಖದೊ । ಳೊಡನೆಬಿಳು
ಪೇರಿದುದು ಕಪ್ಪೆನಿಸಿದುದು ಚೂಚುಕವು ॥ ಪೊಡವಿಯುಣ್ಣುಗಿಗೆ ಪ್ರಿಯೊ
ಳಲಸಿಕೆ । ಯುಡಿಗಡಿಗೆ ಸಂಜನಿಸಿತಾಕೆಯು । ನಡಿಗೆ ಮಂದತೆಯಾಂತು
ದಾಗರ್ಭವೊಡಲೊಳಿರುತಿರೆ ॥ ೨೩ ॥ ಅಡಿಗಡಿಗೆ ಮೈದೋರೆ ಬಳಲಿಕೆ ।

ಬೆಳಗಿನೊಳಗೆ ಬಿಳುಪೇರೆ ಕುಚಗಳೂ । ಒಡಿದುವಾಲ್ಪಲೆದೋರೆ ದೇಹ
ದೊಳಲ್ಲಪಿವುರೇರೆ ॥ ನಡೆನುಡಿಗಳು ನಿದಾನವೆನಿಸಿರ । ಬೊಡವೆಯೊ
ಳುದಾಸೀನ ವಾಗಿರೆ । ಪೊಡವಿಯಣುಗಿಗೆ ಹೆಚ್ಚಿದುವುಬಸಿರಿನಲಿಬಯಕೆ
ಗಳು ॥ ೨೪ ॥ ನೆಲದೊಳುತ್ತಮ ವೆನಿಸಿಕೊಂಡಿಹ । ಪಲತೆರದ ವಸ್ತು
ಗಳು ಮಂದಿರ । ದೊಳ್ನಿತಿದೆರ್ಡವಮಾ ಬಯಕೆಗೊಳಗಾಗಿ ಜಾನಕಿ
ಯು ॥ ಬೆಳೆದಸಂತಸದಿಂದೆನಿತ್ಯವು । ಲಲಿತವ್ಯದುವೆನು ತಿನ್ನುತಿದ್ದಳು ।
ತಿಳಿಯದಂತೊಬ್ಬರಿಗೆ ಗರ್ಭವೊಡಲೊಳು ಹೆಚ್ಚುತಿರೆ ॥ ೨೫ ॥ ತಡೆಯ
ಲಾರದೆ ಸೀತೆಭಾರವ । ನೊಡಲೊಳು ಧರಿಸದಿದ್ದಳುತ್ತಮ । ದೊಡವೆ
ಗಳನಾವರದೆ ಬಲುತೆಳುವೆನಿಸಿಕೊಂಡಿರ್ದ ॥ ಉಡಿಗೆತೊಡಿಗೆಗಳನ್ನು
ಮಾಡಿಸಿ । ತೊಡುವಳು ಸಖೀಜನರಸಂಗಡ । ನುಡಿಯುತಿದ್ದಳು ಮನದ
ಕೋರಿಕೆಗಳನು ಬಯಕೆಯೊಳು ॥ ೨೬ ॥ ಪಲ್ಲವಾಧರೆ ಭೃಂಗಕುಂತ
ಲೆ । ಮಲ್ಲಿಕಾಸ್ಮಿತರುಚಿರೆ ಕೋಮಲ । ಸಲ್ಲಲಿತಶುಭಗಾತ್ರೆ ಶುಕಪಿಕ
ಶಾರಿಕಾಲಾಪೆ ॥ ಫುಲ್ಲಲೋಚನೆ ಪಂಕಜಾನನೆ । ಸಲ್ಲನಮನಕದೊಂದು
ಬಸಿಯ ಸ । ಮುಲ್ಲಸವನೆಸಗುತ್ತೆ ಮೆರೆದಳು ಧರಿಸಿಗರ್ಭವನು ॥
॥ ೨೭ ॥ ಕುಂದಕುಟ್ಮಲ ರದನೆ ಮಂಜುಳ । ಮಂದಗಮನೆ ತಿಲಸುಮ
ನಾಸಿಕೆ । ಚಂದನವರಸುಗಂಧಿ ಕಿಸಲಯಪಾಣಿ ಶುಕವಾಣೀ ॥ ಸುಂದರ
ಘನಪಯೋಧರ ಯುಗಳೆ । ಚಂದದಿಂದೆ ವಿರಾಜಿಸಿದಳಾ । ನಂದವನು
ಮಾಡುತ್ತ ಪ್ರೊಸತೆರದಿಂದೆ ಬಸಿರಿನೊಳು ॥ ೨೮ ॥ ಒಂದುದಿನದೊಳು
ಕೈಕೆಸಂತಸ । ದಿಂದೆ ತನ್ನರಮನೆಗೆ ಧರಣೀ । ನಂದನೆಯನು ಕರೆಯಿ
ಸಿಸವಿನುಡಿಯಿಂದೆ ಮನ್ನಿಸುತ ॥ ಇಂದುಮುಖಿ ರಾವಣನರೂಪವ ।
ನಂದುನೀಂ ಕಂಡಂತೆ ಗೋಡೆಯೊ । ಳಂದುಚಿತ್ರಿಸಿ ನನಗೆತೋರಿಸೆನುತ್ತ
ಕೇಳಿದಳು ॥ ೨೯ ॥ ಮನದೊಳಾಶ್ಚರ್ಯವನು ತಾಳುತ । ಜನಕಸುತೆ ಕೈ
ಕೇಯಿನುಡಿಗಳ । ವಿನಯದಿಂದಾಲಿಸುತ ಲಾಕೆಯಪದಕೆ ಮಣಿದೆರಗಿ ॥
ದನುಜಪತಿ ಯಂಗುಷ್ಟವನು ನಾಂ । ವನದೊಳೀಕ್ಷಿಸಿ ರುತಿಹೆನಲ್ಲದ ।
ವನ ಮೊಗವನೋಡಿದವಳಲ್ಲ ವೆನುತ್ತಪೇಳಿದಳು ॥ ೩೦ ॥ ಆದನೆನೀನೀ
ಗೋಡೆಯೊಳು ಬರೆ । ವುದೆನುತ ಮಹೀಸುತೆಯನು ಬಹುಳ । ವಿಧ
ದೊಳರದಾಕೈಕೆ ಪೀಡಿಸಲಾಸತೀಮಣಿಯು ॥ ಚದುರತನದಿಂದೊಡನೆ
ಬಹುಪ । ಷ್ಟದೊಳು ಬರೆದಳುಮುನ್ನತಾಂ ನೋ । ಡಿದವೊಲಾ ದಶ
ಶಿರನ ಹೆಬ್ಬೆರಳನ್ನು ಗೋಡೆಯಲಿ ॥ ೩೧ ॥ ನೆರೆವಿಲೋಕಿಸಿ ಕೈಕೆದಶ
ಕಂ । ಧರನ ಪದದಂಗುಷ್ಟವನ್ನು । ಚ್ಚರಿಯನಾಂ ತವನೀಸುತೆಯನು

ಕೆಹೊಗಳತಕ್ಕೈದಿಸಿ || ಪರಮಸಂಮದದಿಂದೆ ಮನ್ನಿಸಿ | ಭರದೊ
ದಿನ ಕಳುಹಿಕೊಟ್ಟಳು | ಮೆರೆವರತ್ನಾಭರಣ ವಸ್ತ್ರಂಗಳನುತಾನಿತ್ತು
|| ೩೨ || ಕಳುಹಿಕೊಟ್ಟು ಮಹೀಸುತೆಯುನಾ | ಬಳಿಕಸದನಕೆ ಕೈ
ನಡೆತಂ | ದೊಲಿದು ದಶಕಂಧರನ ಹೆಬ್ಬೆರಳನುವಿಲೋಕಿಸುತ || ಬ
ಡಸಂತಸದಿಂದೆ ಬರೆದಳು | ಬಳನರೂಪವನೆಲ್ಲ ತಾಂಮನ | ದೊಳ
ಯೋಚಿಸಿ ತನ್ನಬುದ್ಧಿ ಕುಶಲತೆಯಿಂದೊಡನೆ || ೩೩ || ಧರಣಿಸುತೆ
ರನೆಯುತಿಂಗಳು | ನೆರೆಯುಲಾ ರಘುವರನಯೋಧ್ಯಾ | ಪುರಿಗೆ ಮಿಥ
ನಗರದಿಂದೆ ಸುಮೇಧೆಜನಕರನು || ಕರೆಯಿಸಿಕೊಳುತ ವೈಭವದ
ಳಾ | ಗುರುವಸಿಷ್ಠನ ಮಾತನಾಲಿಸು | ತರಸಿಗಂದು ವಿರಚಿಸಿದನು ?
ಮಂತಕರ್ಮವನು || ೩೪ || ಸುತೆಯುಸೀಮಂತವನು ಪಡೆದತಿ | ಹಿತ
ನೋಡುತ ಜನಕಭೂಪತಿ | ಸತಿಸಹಿತ ಸೀತಾರಘುವರರ ನೊಲಿದು
ನ್ನಿಸುತ || ವಿತತನವರತ್ನಾ ಭರಣಗಳ | ನತಿಮುದದೆ ಕೊಟ್ಟುಪ
ಸಿದನು | ಜತನದಿಂದಲೆ ದಿವ್ಯವಸ್ತ್ರಂಗಳನುಪಡೆದಿತ್ತು || ೩೫ ||
ಯನಿಂದಲೆ ಪಲವುಮನ್ನಣೆ | ಗಳನು ತಾಳ್ದಾಜನಕಭೂಪನು | ತಳ
ದೈತಂದನು ಸತಿಸಹಿತ ತನ್ನ ಪಟ್ಟಣಕೆ || ಬಳಿದಸಂತಸದಿಂದೆ ರವಿಕು
ತಿಲಕನನುಪೂಜಿಸಿ ನಿಜನಿಳಯ | ಗಳಿಗೆಪೋದರು ಸಕಲರಾಜರು ಬ
ತೆರದಿಂದೆ || ೩೬ || ಪುರದಮಾನವರೆಲ್ಲ ರತ್ನಾ | ದರದೆ ಸೀತಾರಾಘವ
ತಿ | ಹರುಷದಿಂ ತಂತಮ್ಮಮನೆಗಳಗಿರದೆ ಕರೆತಂದು || ವರಸುಭೋ
ದಿಂದೆ ದಣಿಸುತ | ಮೆರೆವಘನದಿವ್ಯ 'ನವರತ್ನಾ | ಭರಣವಸನಂಗಳ
ಕೊಟ್ಟುಕಳುಹುವರಾತನನು || ೩೭ || ಬಂದುಸೀತಾರಾಮರಿಗನ
ವಿಂದೆವಂದಿಸಿ ತಮ್ಮನಗರಗ | ಳಿಂದೆತಂದಿಹ ಕಾಣಿಕೆಗಳನುಕೊಟ್ಟು
ಮನಿಗೆ || ಸುಂದರಮೆನಿಪ ದಿವ್ಯವಸ್ತುಗ | ಳಿಂದೆ ಸಂತಸವಡಿಸಿಬೇಗ
ಹಿಂದಕೆಬರುತಲಿದ್ದರು ಸಕಲದೇಶದಾನೃಪರು || ೩೮ || ಮೆರೆವಯೆ
ಧ್ಯಾಪುರಕೆ ನಡೆತಂ | ದೆರಗಿ ರಾಜಾಂಗನೆಯರೆಲ್ಲರು | ಧರಣಿನಂದನೆ
ತ್ತಮ ಮೆನಿಪವಸ್ತುಗಳನಿತ್ತು || ಪರಿಪರಿಯೊಳಂ ದೈದೆಮನ್ನಿಸಿ |
ರೆಯಲಂಕರಿಸಿಬರುತಿದ್ದರು | ಪರಮಸಂಮದದಿಂದೈತಮ್ಮಯಪುರಕೆ
ಘ್ರದಲಿ || ೩೯ || ಇಂತಿರುತಿರಲು ಜನಕನಂದನೆ | ಸಂತಸವನಾಂತೊ
ದಿನಮೇ | ಕಾಂತಭವನದೆ ರಾಘವೇಂದ್ರನಕೂಡೆ ವಿಹರಿಸುತ || ಕಾ
ಕೇಳ್ದಾಂ ವಿಪಿನದೊಳು ಮುನಿ | ಕಾಂತೆಯರಬಳಿ ವಸಿಸಿಬಂದಪೆ |
ತು ಮನದೊಳುಬಯಕೆ ಯುಂಟಾಗಿಹುದುನನಗಿಂದು || ೪೦ ||

ಕೆನನ್ನನುಕಳುಹು ತಾಪಸ । ವನಿತೆಯರ ಸತ್ಸಂಗದೊಳುನಾಂ । ಮನ
ದಬೇಸರ ನೀಗಿಬರುವೆನು ಶೀಘ್ರದೊಳೆನುತ್ತ ॥ ಜನಕಸುತೆರಾಘವನ
ಚರಣಕ । ವನತಳಾಗಿಯೆ ಪೇಳ್ದಳಂದತಿ । ವಿನಯದೊಳರಿಯದಂತೆ
ಜನರೋರ್ವರಾರುರಹಸ್ಯದಲಿ ॥ ೪೭ ॥ ಆಗಲೆನುತಾ ಸತಿಯನೊಪ್ಪಿಸಿ ।
ರಾಘವನು ಸವಿನುಡಿಗಳಿಂದಲೆ । ಬೇಗನೆಮಹೀಸುತೆಯ ಚಿತ್ತಕೆಮುದ
ವನಾಗಿಸುತ ॥ ರಾಗರಸದಿಂದನುದಿನವು ಮದ । ನಾಗಮೋಹಿತ ವಿಧಾನದೊ
ಳು ಬಹು ।ಭೋಗಭಾಗ್ಯವ ನೈದುತಿದ್ದನು ತನ್ನಸತಿಸಹಿತ ॥ ೪೨ ॥

ಇಂತು ಮೂವತ್ತೈದನೆಯ ಅಧ್ಯಾಯ ಸಂಪೂರ್ಣವು
ಪದ್ಯಗಳು ೧೯೯೦.



## ಮೂವತ್ತಾರನೆಯ ಅಧ್ಯಾಯ.

ಸೂಚನೆ ॥ ಧರಣಿಸುತೆ ಪತಿತೊರೆದನೆಂಬುದ ।
ನರಿತರಣ್ಯದೊಳೈದೆ ದುಃಖಿಸು ।
ತಿರದೆಬಂದಳು ತಿಳಿದು ಮುನಿವಾಲ್ಮೀಕಿಯಾಶ್ರಮಕೆ ॥

ಇರಲಿರಲು ಬಳಿಕೊಂದುದಿನ ರಘು । ವರನು ಜಾನಕಿಯೊಡನೆನಿ
ದ್ರಿಸು । ತಿರುಳು ಮೂರನೆಜಾವದೊಳ ಗೊಂದುಕನಸನುಕಂಡು ॥
ತರಣಿಮೂಡದಮುನ್ನ ತಾನತಿ । ಭರದೊಳೆದ್ದು ವಸಿಷ್ಠಮುನಿಯಂ ।
ಬರಿಸಿಬಿನ್ನೈಸಿದನು ಕಂಡಕನಸಿನಸಂಗತಿಯ ॥ ೧ ॥ ಮುನಿಪಕೇಳೀ
ಜನಕಸುತೆ ಪಾ । ವನಸುರತರಂಗಿಣಿಯ ಲಂಘಿಸಿ । ವನದೆ ಭೀತಿಯ
ನಾಂತು ದೆಸೆಗಳನೆಲ್ಲ ತಿರುತಿರುಗಿ ॥ ಘನಮನೋವ್ಯಥೆಯಿಂದೆ ನೊಂ
ದಂ । ತೆನಗೆಕಾಣಿಸಿ ತೊಂದುಕನಸಿದು । ಮನಕೆಲೇಸಾಗಿಹುದೆ ಪೇಳೆಂ
ದೆನುತಬೆಸಗೊಂಡ ॥ ೨ ॥ ಎನಲುಕೇಳ್ದು ವಸಿಷ್ಠಮುನಿ ಮೇ । ಲೆ
ನಿಸದೀ ಸ್ವಪ್ನವೆನುತನುಡಿದು । ಮನುಕುಲೋತ್ತಮನಿಂದೆ ಶಾಂತಿಯ
ನದಕೆಮಾಡಿಸುತ ॥ ಮನೆಗೆಬಂದನು ರಾಘವೇಂದ್ರನ । ಮನವನೊಪ್ಪಿಸಿ
ಪಲತೆರದ ಮ । ನ್ನಣೆಗಳನು ತಾನಾಂತುಶೀಘ್ರದೆ ಶಿಷ್ಯರೊಡವೆರಸಿ ॥
॥ ೩ ॥ ಆದನೆಯೋಚಿಸುತಾ ರಘುವರನು । ಮೊದಲಿನಂತೆ ಮನುಜರ
ನಾರೈ । ವುದನುಳಿದು ಚಿಂತೆಯನುತಾಳ್ದರೆ ಕುಂದಿಕೊರಗುತ್ತ ॥ ಒದ
ಗಿದಮನಃಖೇದ ದಿಂದಲೆ । ಕುದಿದು ಪುರಶೋಧನೆಯ ಚರನಂ । ಸದನಕೆ

ಕರೆಯಿಸುತ್ತ್ತಿ ರಹಸ್ಯದೊಳಗಿಂತೆಂದ || ೪ || ವಿಜಯಕೇಳತಿ ಗುಪ್ತ ದಿಂದಿ | ರಜನಿಯೊಳು ನಿನ್ನನ್ನು ಪುರದವ | ನುಜರುನೋಡದವರಾಗೆ ಬೀದಿಗಳಲ್ಲಿ ಸಂಚರಿಸಿ || ನಿಜನಿವಾಸನೆ ಜನರು ನನ್ನನು | ಭಜಿಸುವರೊ ಪೂಜಿಸರೊ ಜರೆವರೊ | ನಿಜವೆನಿಸಸಂಗತಿಯ ತಿಳಿದರುಹೆಂದು ನೇಮಿಸಿದ || ೫ || ಅರಸನಾಜ್ಞೆಯ ನಾಲಿಸುತ್ತ್ತಿ | ಭರದೊಳಾರಘು ನಾಥನ ಚರಣ | ಕೆರಗಿ ದೇವದೇವನೀಂ ನುಡಿದಂತೆನಾನಿಂದು || ಪುರದಬೀದಿಗಳಲ್ಲಿ ನನ್ನನು | ಚರರೊಡನೆ ಸಂಚರಿಸಿಕೇಳದ | ಪರಿಯನೆಲ್ಲ ವತಿಳುಪುವೆನೆನುತ ನಡೆದನಾವಿಜಯ || ೬ || ಪುರದಶೋಧನೆ ಜನರಸಹಿತಾ | ಪುರದಬೀದಿಗಳಲ್ಲಿ ನಿಶಿಯೊಳು | ಚರಿಸಿವಿಜಯನು ತನ್ನನೊಬ್ಬರಲಿಯದತೆರದಿಂದೆ || ಪರಿಪರಿಯ ರಾಘವನಪಾವನ | ಚರಿತೆಗಳನಾಲಿಸುತಕೇಳ್ದನು | ಭರದೊಳೊಂದೆಡೆ ರಜಕನಾಡಿದ ನಿಷ್ಠುರೋಕ್ತಿಗಳ || ೭ || ತುದೆಯಮನೆಯೊಳಿದ್ದು ಮನೆಸ್ತ್ರೀ | ತಂದ ಮಡದಿಯನೀಕ್ಷಿಸಿ ರಜಕ | ನೆಂದು ಬಹುಕೋಪವನು ತಾಳ್ದುರೆಬೈದುಗರ್ಜಿಸುತ || ನೊಂದುಕೊಳ್ಳದೆ ತನ್ನಚಿತ್ತ್ತಕೆ | ಬುವತೆರದಿಂದುರೆ ಜರೆದುನಿಜ | ಮಂದಿರದೊಳಿಂತೆಂದು ನುಡಿದನು ಹೊಡೆದುಪೆಂಡತಿಯನು || ೮ || ದನುಜಪತಿರಾವಣನ ರಾಜಭ | ವನದೊಳಿದ್ದ ಮಹೀಸುತೆಯನುಸ | ದನದೊಳಗಿರಿಸಿಕೊಂಡ ರಾಘವನಂತೆನಲಿದಿಂದು || ಮನೆಗೆನಿನ್ನನು ಸೇರಿಸೆನು ನಾ | ನೆನುತ ಗರ್ಜಿಸಿಪೇಳ್ದಗಸನ ವ | ಚನವನಾಲಿಸಿ ಮನೆಗೆಬಂದನು ವಿಜಯನಲ್ಲಿಂದ || ೯ || ಮಲಗಿನಿದ್ದೆಯುಮಾಡದೆ ರಜನಿ | ಯೊಳಗರಿದ ಸಂಗತಿಯನೇ ಮನ | ದೊಳಗೆಯೋಚಿಸು ತುದಯಕಾಲದೊಳೆದ್ದುಶೀಘ್ರದಲಿ || ಪಲವುಜನ ರೊಡವೆರಸುತಾರಘು ಕುಲಲಲಾಮನ ಸಭೆಗೆನಡೆತಂ | ದೊಲಿದೆರಗಿ ಕೈಮುಗಿದುನಿಂದ ನವನಿಯನೀಕ್ಷಿಸುತ || ೧೦ || ಪ್ರಾತರಾಹ್ನಿಕವನು ರಚಿಸಿಸಹ | ಜಾತರಿಂದೊಡ್ಡೋಲಗವ ನಿ | ತ್ತಾತಪೋನಿಧಿಗಳವಲಾಶೀರ್ವಾದಗಳನಾಂತು || ಭೂತಳಾಧಿಪ ನೆಲ್ಲರಸುಖವ | ತಾತಿಳಿದುಕೇಳುತ್ತ ನಿಜಸಂ | ಕೇತಭವನಕೆ ವಿಜಯನೊಡನೈತಂದನತಿಭರದೆ || ೧೧ || ಪುರದಸಂಗತಿಯೇನು ತಿಳಿದಂ | ತರುಹುನೀನೆನುತಾ ರಘುವರನು | ಭರದೊಳಾವಿಜಯನನು ಕೇಳಲವನತಿವಿನಯದಲಿ || ಶಿರವಬಾಗಿಸಿ ಕೈಮುಗಿದುರಘು | ವರನ ಮುಂಗಡೆನಿಂದು ಪೇಳ್ದನು | ಭರದೆರಾತ್ರಿಯೊಳಾ ರಜಕನಾಡಿದ ವಚನಗಳನು || ೧೨ || ಅರಸಕೇಳೀ ಪುರದೊಳೆಲ್ಲರು | ಪರಿಪರಿವಿಧಗಳಿಂದೆ ನಿನ್ನನು | ನಿರುತ

ಜಾನಿಸುತಿಹರು ಹಗಲಿರುಳಧಿಕಭಕ್ತಿಯಲಿ ॥ ತರತರದನಿನ್ನ ಚರಿತಂ
ಗಳ । ನಿರದೆಸಂತಸದಿಂದೆ ಪಠಿಸುತ್ತಿ । ಹರವನೀಶನೆ ನೀನುಕೇಳೆನ್ನೊಂ
ದುವಾರ್ತೆಯನು ॥ ೧೩ ॥ ತಂದೆಯುಮನೆಯೊಳದ್ದು ಮನೆಗೈ । ತಂದತ
ನ್ನಮಡದಿಯ ನೀಕ್ಷಿಸಿ । ಮಂಡಮತಿಯೆನಿ ಪಗಸನೊಬ್ಬನುಬ್ಬೈದು ಕ
ಡುಮುಳಿದು ॥ ಹಿಂದೆರಾಘವನಾ ದಶಶಿರನ । ಮಂದಿರದೊಳಿರುತಿದ್ದ ಸತಿ
ಯನು । ತಂದಿರಿಸಿಕೊಂಡು ತಿರಿಸಿಕೊಳ್ಳುವನುನಾನಲ್ಲ ॥ ೧೪ ॥ ಎನುತ
ಹೆಂಡತಿಯನತಿ ಕಠಿನವ । ಚನಗಳಿಂದುರೆ ನಿಂದಿಸಿದರಜ । ಕನ ನುಡಿ
ಯುಸಾಲಿಸುತ ಕಿವಿಗಳವುಚ್ಚಿಕೊಂಡಿರದೆ ॥ ಮನವೊಳತಿ ಖೇದವನು
ತಾಳ್ದು ಸ । ದನಕೆಬಂದೆನು ಸಿನ್ನನಾಮವ । ನೆನೆದು ಚಿತ್ತದೊಳೆನುತ
ಬಿನ್ನವಿಸಿದನು ಶಿರಬಾಗಿ ॥ ೧೫ ॥ ಆನುಡಿಯುಸಾಲಿಸುತ ಹಾ ನನ ।
ಗೀನೆಲದೊಳಿಂತು ನೆಲೆಗೊಂಡುದೆ । ಹೀನವೊಂದಪವಾದ ಮೆನ್ನುತಕೊ
ರಗಿ ಚಿತ್ತದೊಳು ॥ ಮಾನವಾಧೀಶ ನುರೆದುಃಖಿಸಿ । ದೀನನಾಗುತ ಶಿರವ
ಬಾಗಿಸಿ । ಮೌನದಿಂದೈತಂದ ನಂತಃಪುರಕೆಬಿಸುಸುಯ್ದು ॥ ೧೬ ॥ ಅನಿ
ತರೊಳುಕೈಕೆ ರಘುನಾಥನ । ಮನೆಗೆಬಂದತಿ ಗುಪ್ತದಿಂದಾ । ತನನು
ತನ್ನಯುಸದನಕೆ ಕರೆದುಕೊಂಡು ಬಂದೊಲಿಸಿ ॥ ವಿನುತಮಣಿಪೀಠದೊ
ಳು ಕೂಡಿಸಿ । ಮನವೊಲಿದು ಮನ್ನಿಸುತ ತೋರಿಸಿ । ದನುಜಪತಿ ರಾ
ವಣನರೂಪವನಿಂತು ಪೇಳಿದಳು ॥ ೧೭ ॥ ತರುಣಕೇಳೈ ಜಾನಕಿಗೆ
ದಶ । ಶಿರನೊಳುಂಟಾಗಿರುವ ಮನಮಿದು । ಪೆರೆಗೆಬಿಟ್ಟಿಲ್ಲವನ ರೂಪವ
ನೆಲ್ಲಗೋಡೆಯೊಳು ॥ ಬರೆದಿಹಳು ಹೆಂಗಸರಚಿತ್ತವ । ನರುಹಲೆಂತಹ
ದು ನಿನಗೇನೆಂ । ದರುಹಲೆನ್ನುತ ಕೈಕೆಪೇಳ್ದಳು ರಾಮಭದ್ರನಿಗೆ ॥
॥ ೧೮ ॥ ಅದನುಕಂಡಾ ರಘುವರನು ಚಿ । ತ್ತದೊಳು ಕೋಪವನಾಂತು
ನನ್ನಮ । ಡದಿಯನಟ್ಟುವೆ ನಡವಿಗೆಂದಾಕೆಯನು ಸಮ್ಮತಿಸಿ ॥ ಒದಗಿದ
ಮನಃಖೇದದಿಂದಲೆ । ಸದನಕೈತಂದನತಿ ಭರದೊಳು । ಪದಕೆರಗಿನಿಂದ
ವರನೋಡದೆ ಪೂರ್ವದಂದದಲಿ ॥ ೧೯ ॥ ವನಕೆಪೋಗುವಳಾ ಮಹೀ
ಸುತೆ । ಮನುಜಪತಿ ರಾಘವನು ಸಾಯುವ । ನಿನಿಯಳನುಬಿಟ್ಟಿರದೆ ಭ
ರತಂಗರಸುತನವಹುದು ॥ ಘನವಿಭವದಿಂ ದಿರುತಿಹೆನುನಾ । ನೆನುತಸಂ
ತಸದಳೆದು ತನ್ನಯ । ಮನದೆ ಸಖಿಯರೊಡನೆ ವಿನೋದಿಸುತಿದ್ದಳಾ
ಕೈಕೆ ॥ ೨೦ ॥ ಓಲಗಂಗೊಡ ದಖಿಳಧರಣೀ । ಪಾಲಕರನು ವಿಲೋಕಿ
ಸದೆಚಿಂ । ತಾಲತಾಂಗಿಯ ಧೀನಕೊಳಗಾಗಿಯೆ ವಿಷಾದಿಸುತ ॥ ನೀಲ
ಮೇಘಶ್ಯಾಮ ನಿರತಾ । ವಾಲಿಸುತ್ತೀ ವರ್ತಮಾನವ । ನಾಲಕುಮಣಾ

ಧಿಗಳು ಹೊಕ್ಕರು ಬೇಗನೆರಮನೆಯ ॥ ೨೧ ॥ ಬಂದು ರಘುನಂದನನ ಮುಂಗಡೆ । ನಿಂದು ಪದಪಂಕೇಜಯುಗ ಕೊಲ । ವಿಂದೆಲಕ್ಷ್ಮಣಭರತ ಶತ್ರುಘ್ನರು ನಮಿಸುತಿರಲು ॥ ಬಂದಸೋದರರನ್ನು ತನ್ನಯ । ಮುಂದೆ ಕೂಡಿಸಿಕೊಂಡು ಬಳಿಕಿಂ । ತೆಂದುನುಡಿದನು ತನಗೆಬಂದಪಕೀರ್ತಿಯು ನುರಾವು ॥ ೨೨ ॥ ಧರಣಿಜಾತೆ ಯುಶುದ್ಧಳನ್ನುತ । ಪುರದಜನರಾಡು ತ್ತಿಹರೆನ್ನನು । ಪರಿಪರಿವಿಧಗಳಿಂದೆ ಮನಬಂದಂತೆ ದೂಷಿಪರು ॥ ನರರ ನಿಂದೆಗೆ ಸಿಕ್ಕಿನಾನೀ । ಧರೆಯೊಳಿದ್ದೇಂ ಫಲವುಸಹಜಾ । ತರೆ ಮಹೀ ಸುತೆಯುನ್ನು ಬಿಡುವೆನೆನುತ್ತ ಪೇಳಿದನು ॥ ೨೩ ॥ ಇವಳಯೋನಿಜೆ ಮಂಗಳವುಹೋ । ತ್ತವೆ ಸುಗುಣಸಂಪನ್ನೆ ಹದಿಬದೆ । ಭುವನಪಾವ ನೆ ಪುಣ್ಯಚರಿತೆ ಸುಶೀಲರೂಪವತಿ ॥ ರವಿಕುಲದೊಳತಿ ಪೂಜ್ಯಳೆಂದೆಂ । ಬುವುದನಾಂ ತಿಳಿದಿರುವೆ ನಾದೊಡ । ಮಿವಳನುಳಿವೆಂ ನಿಂದೆಗೊಳಗಾಗಿ ಬದುಕುವನಲ್ಲ ॥ ೨೪ ॥ ಜನಕಸುತೆಯುಂ ಬಿಟ್ಟೆನಿದುನಿಜ । ವೆನುತ ರಾಘವನೆನಲು ಸೋದರ । ರಿನಕುಲೇಂದ್ರನಿಗೆರಗಿ ಜೀಯರಜಕನನುಡಿ ಗಾಗಿ ॥ ಅನಲಮುಖದಿಂ ದಂದುಜಾನಕಿ । ಯನು ಪರೀಕ್ಷಿಸಿತಿಳಿಯುದವ ನಂ । ತಿನಿಯಳನದೆಂತುಳಿವೆ ನೀನಿಂದೆನುತಪೇಳಿದರು ॥ ೨೫ ॥ ಅವರ ಮಾತನು ಮನಕೆತಾರದೆ । ತವಕದೊಳು ಸೌಮಿತ್ರಿಯುಂ ಕರೆ । ದವನಿ ಜಾತೆಯುನೀಗ ರಥದೊಳುಕುಳ್ಳಿರಿಸಿಕೊಂಡು ॥ ಜವದೆ ಗಂಗಾನದಿಯು ದಾಟುತ । ಡವಿಯೊಳಗೆನೀಂ ಬಿಟ್ಟುವಳೆಡಭು । ಜವನು ಖಂಡಿಸಿತರು ವುದೆನ್ನುತ ಪೇಳ್ದನಾರಾಮ ॥ ೨೬ ॥ ಅಣ್ಣನಾಡಿದ ಮಾತನಾಲಿಸಿ । ಪ ಣ್ಣಿದರಥವ ತರಿಸುತಾನೆಲ । ವೆಣ್ಣುಮಗಳರಮನೆಗೆ ಬಂದತಿದೂರದೊಳು ನಿಂದು ॥ ಕಣ್ಣೊಳೀಕ್ಷಿಸ ದಳುತಳುತನಿ । ರ್ವಿಣ್ಣಭಾವದೊಳಂದು ಸೀ ತೆಗೆ । ಬಿನ್ನವಿಸಿದನು ಕೈಮುಗಿದು ಸೌಮಿತ್ರಿತಲೆವಾಗಿ ॥ ೨೭ ॥ ತಾಯೆ ನಿನ್ನನುಕಾನನಕೆ ರಘು । ರಾಯನಿಂದು ಕಳುಹಿಬಹುದೆನುತ । ಛಾಯೆ ಗಾಣಿಸ ನನಗೆನೇಮಿಸಿರುವನು ಗುಪ್ತದಲಿ ॥ ಪ್ರೀಯುಮುಳ್ಳೊಡೆ ರಾಘ ವೆನಭಿ । ಪ್ರಾಯದಂತೆ ವಿಪಿನಕೆಬಿಜಯಂ । ಗೈಯುವುದೆನುತ ಲಕ್ಷ್ಮಣ ನೆರಗಿಪೇಳ್ದನತ್ತಿಗೆಗೆ ॥ ೨೮ ॥ ಮನದಕೋರಿಕೆ ಫಲಿಸಿತೆಂದಾ । ಜನಕ ಸುತೆಬೇಕಾದ ವಸ್ತುಗ । ಳನು ವರೂಥದೊಳಿರಿಸಿ ಕೊಂಡತ್ತಯರಕಾ ಲ್ಗೆರಗಿ ॥ ಮನುಕುಲೇಂದ್ರನ ಪಾದುಕೆಗಳೆರ । ಡನು ತರಿಸಿಕೊಂಡೇರಿ ದಳುರಥ । ವನತಿಶೀಘ್ರದೊಳಂದು ನಿಜಮಂದಿನುತನಿಶ್ವಸಿಸಿ ॥ ೨೯ ॥ ಅತ್ತಿಗೆಯು ಸಂತಸವನೀಕ್ಷಿಸಿ । ಚಿತ್ತದಳಲನು ನಿಗ್ರಹಿಸಿಕೊಂ । ಡುತ್ತ

ರಕ್ಷಣದಲ್ಲಿ ಲಕ್ಷ್ಮಣನಾಗಸಾರಥಿಗೆ ॥ ಇತ್ತ ಕಡೆನಿಂ ರಥವನುನಡಿಸಿ । ಸುತ್ತ ಸೂಚಿಸಲತಿ ಜವದೊಳಾ । ಹೊತ್ತಿನೊಳು ದಕ್ಷಿಣದದಿಶೆಗಾ ರಥವ ನಡೆಯಿಸಿದ ॥ ೨೦ ॥ ಒಡನೆಬಲಗಣ್ಣದಿರಿ ತಂದಾ । ಪೊಡವಿಯಮಗಳಿಗೆ ಮುಂದೆಚಿತ್ತದೊ । ಆಡಿಗಡಿಗೆ ಬಹುಭೀತಿಯಾದುದು ತನ್ನ ಮುಂದುಗಡೆ॥ ಅಡವಿಯೊಳುಮಲಗಿದ್ದ ಮೃಗವು । ದೊಡ್ಡದನೆಭಯವನುವಿರಚಿಸಿದುದಾ । ಕಡೆಯೊಳತಿ ಘೋರತರವಾಗಿರುತಿರ್ದುದಾವನವು ॥ ೨೧ ॥ ಚಿತ್ತದೊಳು ಕೊರಗುತ್ತ ಲಕ್ಷ್ಮಣ । ನತ್ತಿಗೆಸಹಿತ ರಥದೊಳುಕುಳಿತು । ಮತ್ತದು ತ್ತನಗರದವರ ನೀಕ್ಷಿಸುತ ಪೊರಮಟ್ಟು ॥ ಸುತ್ತಸುಳಿವಾ ಮೃಗಗಳನು ನೋ । ಡುತ್ತ ಗಂಗಾನದಿಯತೀರದ । ಹತ್ತಿರಕೆಬಂದನತಿ ಭೀಕರವಾ ದರಣ್ಯದಲಿ ॥ ೨೨ ॥ ತೆರತೆರದ ಕಲ್ಲೋಲಮಾಲೆಯ । ಪರಿಪರಿಯಜಲ ಬಿಂದುಗಳ ತಿರು । ತಿರುಗಿ ಕಾಣಿಸುತಿರ್ಪ ಭೀಕರಜಂತು ವಿತತಿಗಳ ॥ ಚರಿಪಹಂಸಾಳಿಗಳ ಬಳಗದಿ । ನುರುತರದ ಬೊಬ್ಬುಳಿಗಳಿಂದುರೆ । ಮೆರೆವ ಗಂಗಾನದಿಯ ನವಲೋಕಿಸಿದಳಾಸೀತೆ ॥ ೨೩ ॥ ಇಳಿದುರಥದಿಂ ದೆರಗಿ ಜಾನಕಿ । ಬಳಿಕನಾವಿಕರಿಂದೆ ನದಿಯಂ । ಕಳೆದು ತೆಂಕಣದಡಕೆನಡೆತಂ ದೊಂದುನಾವೆಯೊಳು ॥ ಹೊಳೆವಗಂಗಾನದಿಯ ನಿರ್ಮಲ । ಜಲದೊಳು ಸ್ನಾನವನೆಸಗಿ ಬಂ । ದಳು ಸುಮಿತ್ರಾಸುತನ ಸಹಿತಾವನದಮಧ್ಯದಲಿ ॥ ೨೪ ॥ ಹುಲಿಕರಡಿ ಕಾಡಾನೆಕೋಡಗ । ಮೊಲಕಿರುಬನರಿ ಹಂದಿಸಿಂಗ ವೊ । ದಲಹ ಭೀಕರವನಮೃಗಂಗಳ ರವವನಾಲಿಸುತ ॥ ಪಲತೆರದ ಪ ಕ್ಷಿಗಳಶಬ್ದಂ । ಗಳನುಕೇಳುತ ರಾಮನಾಮಂ । ಗಳನು ನೆನೆನೆನೆದೈತ ರುತಲಿಂತೆಂದು ಪೇಳಿದಳು ॥ ೨೫ ॥ ಎಲ್ಲಿಋಷಿಗಳ ಪರ್ಣಶಾಲೆಗ । ಳೆಲ್ಲಿ ಕಂಗೊಳಿಪಗ್ನಿಹೋತ್ರಗ । ಳೆಲ್ಲಿ ವೇದಪುರಾಣ ಶಾಸ್ತ್ರಧ್ವನಿಸಮೂಹ ಗಳು ॥ ಎಲ್ಲಿಪಾವನ ಪುಣ್ಯತೀರ್ಥಗ । ಳೆಲ್ಲಿಪರಿಚಿತ ಹೋಮಧೂಮಗ । ಳಲ್ಲಿಗೇಕೈತಂದೆ ತಂದೆಯೆನುತ್ತ ಕೇಳಿದಳು ॥ ೨೬ ॥ ತಾಯೆಕರುಣಿಸು ನಿನ್ನನಾರಘು । ರಾಯನೀವನದಲ್ಲಿ ಬಿಟ್ಟು ಸ । ಹಾಯಮಾಡದೆ ನಿನ್ನಭು ಜವನು ಕತ್ತರಿಸಿಕೊಂಡು ॥ ಬಾಯೆನುತೆನಗೆ ಪೇಳ್ದ್ದಕಳುಹಿದ । ನೀ ಯರಣ್ಯದೊಳೆಂತು ಬಿಡುವೆನು । ಹಾಯೆನುತಬಿಸುಸುಯ್ದು ಬಿನ್ನವಿಸಿ ದನು ರೋದಿಸುತ ॥ ೨೭ ॥ ಸುಳಿವಜಂಝಾಮಾರುತಕೆ ಮುರಿ । ದಿಳಗೆ ಬೀಳುವ ಬಾಳೆಗಿಡದಂ । ತಿಳೆಯಮಗಳು ಲಕ್ಷ್ಮಣನವಚನವ ನಾಲಿಸು ತ್ತೊಡನೆ ॥ ನೆಲಕೆಬಿದ್ದಳು ಮೂರ್ಛೆಹೋಗುತ । ಲೆಳೆಗಳಿಂದಲೆಕೊಡೆ ವಿಡಿದು ನೀ । ರ್ದಳೆದು ಸೆರಗಿಂದಡಿಗಡಿಗೆ ಬೀಸಿದನುಸೌಮಿತ್ರಿ ॥ ೨೮ ॥

ಚೇತರಿಸಿಕೊಂಡೊಡನೆ ಜಾನಕಿ । ಭೀತಿಯಿಂದುರೆ ಕಂಪಿಸುತಸರ । ನಾಥನೆನ್ನನುಳಿದನೆ ಹಾಸೌಮಿತ್ರಿನನಗಿಂದು ॥ ಭೂತಲದೊಳುಂಟಾದುದೆ ಅಪ । ಖ್ಯಾತಿ ಕೊಲ್ಲದೆನನ್ನಯ ಭುಜವ । ನೇತಕೆತರುವುದೆಂದು ಪೇಳ್ದನುರಾಘವೇಶ್ವರನು ॥ ೩೯ ॥ ನನಗೆಬಂದುದೆನಿಂದೆ ರಘುನಂ । ದನನು ಕೊಟ್ಟನೆನೇಮವನು ಕಾ । ನನದೊಳೆನ್ನನು ಬಿಟ್ಟುಬಹುದೆಂದೆನುತ ನಿನಗಕಟಾ ॥ ವನದೊಳೆಂತು ಪಿಶಾಚಿಯಂತಿಹೆ । ನೆನಗೆಬಾರದೆಪೋದು ದೆಮರಣ । ವನದೊಳೆನ್ನನು ಬಿಟ್ಟುನೀನೆಂತೈದುತಿಹೆಮನೆಗೆ ॥ ೪೦ ॥ ಅಂದು ವನದೊಳುಪಚರಿಸಿದೆ ರಘು । ನಂದನನ ಹಿಂದಡವಿಗಾದಿನ । ಬಂದೆ ನಿದ್ರಾಹಾರಮಿಲ್ಲದೆ ಸಲಹಿಕೊಂಡಿದ್ದೆ ॥ ಕೊಂದೆರಣದೊಳು ದೈತ್ಯರನು ನಲ । ಏಂದೆ ನಮ್ಮನುಸೇವಿಸಿದೆ ಮೊದ । ಲಿಂದೆನೀಂ ಮಾಡಿದುಪಕಾರವ ನೆಂತುಮರೆಯುವೆನು ॥ ೪೧ ॥ ರಾಮನಂ ರಣಭೀಮನಂ ಗುಣ । ಧಾಮನಂ ವರನೀಲಮೇಘ । ಶ್ಯಾಮನಂ ಜಿತಕಾಮನಂ ಶರಣಜನಸಾಗರದ ॥ ಸೋಮನಂ ಕಾಕುತ್ಸ್ಥವಂಶಲ । ಲಾಮನಂ ಮನದಣಿಯೆ ರಮಿಸದೆ । ಭೂಮಿಯೊಳ್ನಾನೆಂತು ಬದುಕುವೆನೆಂದು ಮರುಗಿದಳು ॥ ॥ ೪೨ ॥ ರಮಣನಂತೊರೆದೀ ವನದೊಳಾಂ । ಗಮಿಸುತೆಂತು ವಸಿಸುವೆ ಕೊಳದೊಳು । ದುಮುಕಿಸಾಯುವೆನೆನಲು ಗರ್ಭವಿರುತಿಹುದೊಡಲಿನೊಳು ॥ ಅಮಮನನ ಗಿನ್ನೇನುಗತಿ ಹಾ । ರಮಣನ ಸನಿಹಕೆಂತು ಪೋಗುವೆ । ಸುಮತಿನನ್ನನುಬಿಟ್ಟು ಪೇಳೆನುತತ್ತಳಾಸೀತೆ ॥ ೪೩ ॥ ಇಂತುರೋದಿಸಿ ಪತಿಯಗುಣಗಳ । ಚಿಂತಿಸುತ ಬಿಸುಸುಯ್ದುಮೂರ್ಛೆಯ । ನಾಂತಿರದೆ ಚೇತರಿಸಿಕೊಂಡಡಿಗಡಿಗೆ ದುಃಖಿಸುವ ॥ ಕಾಂತೆಯನುಕಂಡೆಲೆ ಜನನಿನಾ । ನಂತುನಿನ್ನನು ಬಿಟ್ಟುಪೋಗಲಿ । ಯೆಂತಿರಲಿ ಹಿಂದಿರುಗದಿಲ್ಲೆಂದೆನುತ ರೋದಿಸಿಗ ॥ ೪೪ ॥ ತಂದೆಲಕ್ಷ್ಮಣ ಹೋಗುನೀಂರಘು । ನಂದನನ ಬಳಗೆನ್ನಸನಿಹದೆ । ಹಿಂದಣಂದದೊಳಲ್ಲಿರಲು ಕೋಪಿಸುವನಗ್ರಜನು ॥ ವಂದಿಸಿದೆನೆಂದತ್ತೆಯರ್ಗಾರು । ಹೆಂದುಜಾನಕಿಪೇಳ್ದು ಬಳಲಿದ । ಳಂದು ಪಾಪಿಗಿದಣುಗಿಯಂದದೆ ಹೊರಳುತವನಿಯೊಳು ॥ ೪೫ ॥ ಏತಕಿಲ್ಲಿಹೆ ಪೋಗುಲಕ್ಷ್ಮಣ । ನೀತಳುವಿದೊಡೆ ಮುಳಿವನಣ್ಣನು । ನೀತಿಯುಲ್ಲಿದು ನಿನಗೆಮಂಗಳವಾಗಲಿ ಪಥದೊಳು ॥ ಭೂತಳಾಧಿಪ ರಾಘವೇಂದ್ರನೆ । ಭೀತಿಯಿಲ್ಲದ ಪ್ರೋಲ್ಪೊರೆವನೆಂ । ದಾತರುಣಿಪೇಳ್ದಳು ಲಕ್ಷ್ಮಣನೊಡನೆ ರೋದಿಸುತ ॥ ೪೬ ॥ ವನಜಸಂಭವನಾಜ್ಞೆಯನು ತಾ । ಳ್ದನಿತರೊಳು ವರವಿಶ್ವಕರ್ಮನು । ಜನಕಸುತೆಲಕ್ಷ್ಮ

ಣರ ಬಳಿಗೈತಂದು ನಮಿಸುತ್ತ ॥ ಘನಜಕಮತ್ಕೃತಿಯಿಂದೆ ಸೀತೆಯ ।
ವಿನುತಭುಜವಂತೆಸೆವ ಭುಜಪೂಂ । ದನುನಲಿಮುಕೊಟ್ಟಲ್ಲಿ ಕಾಣದೆ
ಹೋದನಾಕ್ಷಣವಿ ॥ ೪೭ ॥ ಭುಜವನೀಕ್ಷಿಸಿ ವಿಸ್ಮಯಬಡುತ । ಭುಜಗ
ವೇಣಿಯನಲ್ಲಿ ಬಿಟ್ಟ । ಗ್ರ್ಯಜಸಪತ್ತಿರಕೆ ಬರಲಾರದೆ ಬಳಿಕಲಕ್ಷ್ಮಣನು ॥
ವಿಜನವಾದೀ ವನದೊಳೆಂತಿಹೆ । ರುಜೆಯೊಳೆಂದಾನೆಂತು ಪೋಗಲಿ ।
ನಿಜನಗರಿಗೆಂದಳುತ ಕೈಮುಗಿದಿಂತು ಪೇಳಿದನು ॥೪೮॥ ಎಲೆವನಸ್ಥಳಿ
ಗಳಿರ ವೃಕ್ಷಂ । ಗಳಿರ ಕೀಟಕ್ರಿಮಿಗಳಿರ ಲತೆ । ಗಳಿರ ಪಶುಪಕ್ಷಿಗಳಿರ
ಸಲಹಿಕೊಂಬುದೀಕೆಯನು ॥ ಎಲೆ ಜನನಿ ಭೂದೇವಿ ಜಾಹ್ನವಿ ।
ಸಲಹಿಕೊಳ್ಳುದು ನಿಮ್ಮ ಮಗಳನು । ಸಲಹಿಕೊಂಬುದು ಪಂಚಭೂ
ತಂಗಳೆನುತೆರಗಿದನು ॥ ೪೯ ॥ ಪೋಗಲಾರೆನು ವನದೊಳಿರ್ಪೊಡೆ ।
ರಾಘವನ ನೇಮವನು ತೊರೆವಂ । ತಾಗುವುದೆನುತ ಜಾನಕಿಯ ಕಾಲ್ಗೆ
ರಗಿ ಲಕ್ಷ್ಮಣನು ॥ ಬೇಗನೆ ಬರುತ ಮತ್ತೆ ಹಿಂದಕೆ । ಪೋಗಿಹೊರಳುವ
ಜಾನಕಿಯನುಬ್ಬೇ । ಗಾಗಿ ತಾನೈತಂದು ಬಿಸುಸುಯ್ದುತ್ತ ನಡಿಗಡಿಗೆ ॥೫೦॥
ಬಳಲಿ ಬಾಯಾರಿ ಬಿಸುಸುಯ್ಯುತ । ತೊಳಲಿಸಲೆ ಕಂಗೆಟ್ಟು ಭಯವ
ನು । ತಳೆದು ನೆಲದೊಳು ಬಿದ್ದಳುವ ಭೂಜಾತೆಯನು ಕಂಡು ॥ ಅಳು
ತ ಲಕ್ಷ್ಮಣ ನಲ್ಲಿನಿಲ್ಲದೆ । ಚಲಿಸ ಬೆಂಡಾಗಿ ಬರಲಾರದೆ । ಬಳಿಕ ಬಂ
ದನು ತಿರುಗಿನೋಡುತ ಹಿಂದ ಕಡಿಗಡಿಗೆ ॥೫೧॥ ತಾಯ ನೆಳಗರುಬಿಟ್ಟು
ಬರುವೆಂ । ತಾಯತಾಂಬಕಿಯನು ತೊರೆದು ತಾ । ನಾಯಸದೊಳಂ
ದವುರನದಿಯಂ । ದಾಟ ಲಕ್ಷ್ಮಣನು ॥ ರಾಯರಾಘವ ನೆಡೆಗೆ ನಡೆತಂ ।
ದಾಯವನಿಜೆಯ ಭುಜವನಿರಿಸಿಯ ಹಾ ಯೆನುತ ಬಿನ್ನವಿಸಿ ಪೇಳ್ದನು ಜಾ
ನಕಿಯತೆರನ ॥ ೫೨ ॥ ಧರಣಿಸುತೆಯಂ ಬಳಸಿ ನಿಂದುರೆ । ಕೊರಗುತಿ
ದ್ದವು ಪಕ್ಷಿ ಮೃಗಗಳು । ತೊರೆದು ನಿಜವೈರವನುಳಿದು ಪ್ರಲ್ಮೇವುಗಳ
ನಲ್ಲಿ ॥ ತರುಲತಾವಿಗಳೆಲ್ಲ ಬಾಡಿವ । ವಿರದೆ ಶಿಲೆಗಳ್ಕರಗುತ್ತಿದ್ದವು । ಧರೆ
ಯೊಳುಂಟೆ ಸುಜನರ ಕಷ್ಟವ ಕಂಡು ಸೈರಿಪರು ॥ ೫೩ ॥ ಮೊರೆಯ
ಲೊಲ್ಲವು ದುಂಬಿಗಳು ಮೇ । ಣ್ಬೆರೆಯಲೊಲ್ಲವು ಕೋಕಗಳು ಸಲೆ ।
ಮೊರೆಯಲೊಲ್ಲವು ಹರಿಗಳು ನುಡಿಯಲಿಲ್ಲವು ಗಿಳಿಗಳು ॥ ಪೋದಿಯ
ಲೊಲ್ಲವು ಚಮರಿ ಮೃಗಗಳು । ಚರಿಸಲೊಲ್ಲವು ವಾರಣಂಗಳು ।
ಧರಣಿಜೆಯ ದುಃಖವನೆ ತಮ್ಮಯ ದುಃಖವೆಂದರಿದು ॥ ೫೪ ॥ ತಳಿ
ರತಲ್ಪವ ನೆಸಗಿದುವು ಕರಿ । ಗಳು ಸಲಿಲದೊಳ್ಕಂದು ತುಂತುರು ।
ಗಳನು ಸುರ್ಚಿದವಲ್ಲಿ ಕಲಹಂ ಸಂಗಳಡಿಗಡಿಗೆ ॥ ಜಲಜನೇತ್ರೆಗೆ ಬಿಸ

ಲು ತಾಗದ । ವ್ರೋಲುಕೊಡೆಯು ನಿಕ್ಕಿದವು ನವಿಲುಗ । ಳೋಲಿದು ಚಾಮರಗ ಳನು ಬೀಸಿದವಲ್ಲಿ ಚವುರಿಗಳು ‖ ೫೫ ‖ ಪಸದ ದುಷ್ಟ್ರವ್ಯಾಗಂಗಳನು ಮೇ । ದಿನಿಯೊಳಾಗಿ ನೋಡುತ್ತ ಭೀಕರ । ಮೆನಿಪ ಹಾವುಗಳಿಗೆ ಪೆದ ರುತಾ ಪಥದೊಳಡಿಗಡಿಗೆ ‖ ಮನದೊಳತಿ ಭೀತಿಯನು ತಾಳುತ । ವನ ದೆ ಸಾಯುವ ಕಾಣದೆಯೆ ಹಾ । ಯೆನುತ ಮೂರ್ಛೆಯನ್ನೈದಿದಳು ವನ ಮಧ್ಯದೊಳುಬಿದ್ದು ‖ ೫೬ ‖ ಮೆಲ್ಲನೆ ಬಳಿಕ ಚೇತರಿಸಿಕೊಂ । ಡಲ್ಲಿ ನಿಲ್ಲದೆ ಸೀತೆ ಪಥದೊಳು । ಕಲ್ಲುಮುಳ್ಳುಗಳನು ತುಳಿದು ಹಾಯೆಂದು ರೋದಿಸುತ ‖ ಚುಳ್ಳೆನುತ ಸುರಿವ ಬಿಸುನೆತ್ತರ । ನೆಲ್ಲ ಸೆರಗಿಂ ದಡಿಗ ಡಿಗೊರಸಿ । ಕೊಳ್ಳುತಂದೈತಂದ ಳಾವನದೊಳಗೆ ಕಂಗೆಟ್ಟು ‖ ೫೭ ‖ ಮುಂದೆ ನನಗಿನ್ನೇನುಗತಿ ಹಾ । ಯೆಂದು ಜಾನಕಿ ದುಃಖಿಸುತ ಮನ । ನೊಂದು ಬಿಸುಸುಯ್ದಳುತ ಕಣ್ದೆರದೊಡನೆ ಮುಚ್ಚುತ್ತ ‖ ಇಂದು ಕೊಳದೊಳು ಬಿದ್ದು ಸಾಯುವೆ । ನೆಂದೊಡಹುದು ಭ್ರೂಣಹತ್ಯ ಮ । ದೆಂದೆನುತ ಕೊರಗಿದಳು ಕಲ್ಮರಗಳು ಕರಗುವಂತೆ ‖ ೫೮ ‖ ಧರೆಯೊಳುದಿಸುತ ಜನಕಭೂಮಿಾ । ಶ್ವರನ ನಂದನೆಯಾಗಿ ರಘುಭೂ । ವರನಿಗೆ ಮಡದಿಯಾಗಿ ದಶರಥನೃಪನ ಸೊಸೆಯಾಗಿ ‖ ನೆರವ ಕಾಣದೆ ಕಟ್ಟಡವಿಯೊಳು । ಮರಗುವಂತಾಯ್ತು ಮಮ ನಾನೀ । ತೆರದೆ ಮುಂ ದಿಂನೆಂತು ಜೀವಿಸಲೆಂದು ಹಲುಬಿದಳು ‖ ೫೯ ‖ ಏನಮಾಡಲ ವೆಲ್ಲಿಪೋ ಗಲಿ । ಕಾನನದೊಳಾರ್ಸಲಹುವರು ಮುಂ । ದೇನುಗತಿ ನನಗೆಂದೆನು ತ ಬಿಸುಸುಯ್ದು ಬೆಂಡಾಗಿ ‖ ದೀನಳಾಗುತ ರಾಮನಾಮವ । ಜಾನಿಸು ತ ನಡೆತಂದಳಡವಿಯೊ । ಳಾ ನೆಲದಣಾಗಿ ಬಸಿವಬಿಸುನೆತ್ತರೊನಲಿ ಡುವಂತೆ ‖ ೬೦ ‖ ಅಷ್ಟರೊಳು ವಾಲ್ಮೀಕಿಮುನಿ ತ । ನ್ನಿಷ್ಟ ಶಿಷ್ಯರ ವೆರಸಿ ಮುಖಕು । ತ್ಕೃಷ್ಟನೊಗಿಹ ಯೂಪವ ನರಸುತಾ ವನಕೆ ಬಂದು ‖ ಕಷ್ಟದಿಂ ದಡಿಗಡಿಗೆ ರೋದಿಸು । ತಿಷ್ಟಜನರನು ಕಾಣದೆ ಹೊರಳ । ನಷ್ಟ ಸತ್ವಳೆನಿಸಿದ ಸೀತೆಯನಲ್ಲಿ ನೋಡಿದನು ‖ ೬೧ ‖ ಅರಿವಳದೇತಕೆರುತಿಹ ಳೀ । ಘೋರಕಾನನ ಮಧ್ಯದೊಳು ನಾ । ನೀ ರಮಣಿಯುಂ ಕೇಳಿ ತಿಳಿಯುವೆನೆಂದು ನಡೆತಂದು ‖ ಆರು ನೀನೆಲೆ ತಾಯೆ ನಿನ್ನ ವಿ । ಚಾರವರುಹೌ ನೋಡಿದಂತಿಹು । ದಾರು ನಾಂ ವಾಲ್ಮೀಕಿ ಮುನ್ನನೆ ಪೋಪನಲ್ಲೆಂದ ‖ ೬೨ ‖ ಘೋರಕಾನನಕೆಂತು ಬಂದೆ ಕ । ಠೋರವರ್ಮಾದೊಳೆಂತು ನೀಂ ಸಂ । ಚಾರಮಾಡುವೆ ಗಂಡನಾವನು ನೆಲೆಯುವೆಲ್ಲಿಹುದು । ಘೋರಿಶೋಕಾರ್ತರನು ಕಂಡು ವಿ । ಚಾರಿಸದೆ ನಾಂ

ಹಿಂದಕೆ ನಡೆಯ | ಲಾರೆ ನೆಂದವನೀಸುತೆಗೆ ಪೇಳಿದನು ವಾಲ್ಮೀಕಿ ||೬೩||
ಹರುಷಮುಬ್ಬಿದು ದವನಿಜಾತೆಗೆ | ಭರದೊಳಮ್ಮೆಡಿಸಿದುದು ಶೋಕವು |
ಬೆರಸಿದುದು ನೋಡುತ್ತ ಮುನಿಯನು ಲಜ್ಜೆಶೀಘ್ರದಲಿ || ಧರಣಿಪತಿ
ರಾಘವನಸುಳಿದ ನಂ | ದಿರಿಸಿ ಪೋದನು ಲಕ್ಷ್ಮಣನೆನುತ | ತಿರವ ಬಾಗಿ
ಸಿ ಪೇಳಿದಳು ಪದಕೆರಗಿ ವೈದೇಹಿ || ೬೪ || ಧರೆಯೊಳಪವಾದ ಕೊಳ
ಗಾಗದ | ಪರಮಸಾಧ್ವಿಯೆನಿಸಿದ ನನ್ನನು | ತೊರೆದನಾರವಿವಂಶ ಸಂ
ಭವ ನಕಟವುಂದಿನ್ನು || ಪೊರೆವರಾರಿಹ ರಳವೆನೆಂದೊಡು | ದರದೊಳ
ಪುರ್ದು ಗರ್ಭವೊಂದೆನು | ತೆರಗಿ ಬಿನ್ನೈಸಿದಳು ಜಾನಕಿ ಮುನಿಗೆ
ರೋದಿಸುತ || ೬೫ || ದೇವಿ ಬಿಡು ದುಃಖವನು ಚಿತ್ತದೊ | ಳಾವಯೋ
ಚನೆ ಗೈಯದಿರು ನೀಂ | ಹೇವರಿಸದೆಮ್ಮಾಶ್ರಮಕೆ ನಡೆತಂದು ಸುಖ
ದೊಳಿರು || ನೋವೆ ನಾನದೆ ಪುತ್ರಯುಗವಂ | ತೀವಿದತಿಶಯದಿಂದೆ
ಪೊಂದುವೆ | ದೇವದೇವನ ಕರುಣೆಯಿಂದಲೆ ಶುಭಮುಹೂರ್ತದಲಿ
|| ೬೬ || ಮಗಳೆ ಸಂದೇಹವನುಬಿಡು ತಂ | ದೆಗೆ ಹೊಸಬರೇನಲ್ಲ ನಾ
ವು ಮ | ರುಗದೆ ನಮ್ಮಾಶ್ರಮದೊಳಿರು ಬೇಕಾದ ಬಯಕೆಯನು ||
ಬಗೆದ ಭಕ್ತಿಯೊಳಾಗಿಸುತ ನಾಂ | ಹಗಲಿರುಳು ಪಾಲಿಸುವೆ ನೆಂದಾ |
ರಘುವರನರಾಣಿಯ ನೊಲಿಸಿ ಕರೆತಂದನಾ ಮುನಿಪ || ೬೭ || ಬಳಿಕ
ಸೀತೆಗೆ ಪರ್ಣಶಾಲೆಯ | ನೊಲಿದು ಕಟ್ಟಿಸಿ ಕೊಟ್ಟನತಿ ಭರ | ದೊಳು
ಬಹುವಿನೋದವ ನೆಸಗುವಂತಾಕೆ ಗನುದಿನವು || ತಳೆದು ತಾಪಸ ಪತ್ನಿ
ಯರೊಡನೆ | ಕೆಳೆತನವನಾಂತಿರುತ ಲಿದ್ದಳು | ನೆಲದೊಳುತ್ತಮ ಚರಿತ
ರಿಗೆ ವಿಪರೀತವಾವಪುದೇಂ || ೬೮ || ತಂದೆ ಮನೆಯೊಳಗಿರ್ದ ತೆರ
ದಿಂ | ದೊಂದು ಯೋಚನೆ ಯಿಲ್ಲದಾರಘು | ನಂದನನರಸಿ ತಾಪಸೋ
ತ್ತಮ ನಾಶ್ರಮದೊಳಿರುತ || ಬಂದು ಸೇವಿಸುವಾ ಮುನಿವಧುಗ | ಳಿಂ
ದೆ ಸಂತಸದಳೆದು ದಶರಥ | ನಂದನನ ನಾಮವನು ಜಾನಿಸುತಿದ್ದಳನು
ದಿನವು || ೬೯ || ಜಾತಿವೈರವ ನುಳಿದ ಖಗಮೃಗ | ಜಾತದಿಂ ಋತು
ಭೇದವಿಲ್ಲದೆ | ಪೂತು ಪುಷ್ಪಫಲಗಳ ನೀಯುವ ತರುಲತೆಗಳಿಂದ ||
ಪ್ರೀತಿಯಿಂದಾದರಿಪ ವಟುಸಂ | ಘಾತದಿಂದನುದಿನವು ಕಂಗೊಳಿ | ಪಾ
ತಪೋವನದೊಳಿರುತಿದ್ದಳು ಸೀತೆ ಚಿಂತಿಸದೆ || ೭೦ ||

ಇಂತು ಮೂವತ್ತಾರನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೨೦೬೦

# ಮೂವತ್ತೇಳನೆಯ ಅಧ್ಯಾಯ.



ಸೂಚನೆ ॥ ತನಯರಂ ಪಡೆದಾ ಮಹೀಸುತೆ ।
ಮುನಿಪನಾಶ್ರಮದೊಳಿರೆ ಹರ್ಷದೆ ।
ಮುನಿಕುಶಲವರಿಗಖಿಳ ವಿದ್ಯೆಗಳ ನುಪದೇಶಿಸಿದ ॥

ಮುನಿವಟುಗಳೆಡೆಯಾಡಿ ಪರಿಚಯ । ವನೆಸಗುವರಿಸಿದಾವ ವ
ಸ್ತ್ರಗ । ಳನು ಕೊಡುವರಾದರಿಸಿ ಮುನಿಪತ್ನಿಗಳು ಜಾನಕಿಗೆ ॥ ದಿನದಿನ
ಪ್ರ ಬೇಕಾದ ಬಯಕೆ । ಗಳನು ಸಲಿಸುವನು ಸಾದರದೊಳಾ । ಮುನಿಪವ
ರ ವಾಲ್ಮೀಕಿ ಸೀತೆಯ ಮನವು ದಣಿವಂತೆ ॥ ೧ ॥ ಮರೆದವಿಳ ಪಿಥರಾಜ
ಸುಖವ । ಸ್ಮರಿಸುತ್ತಿನಯನ ಪಾದಪದ್ಮವ । ನೆರಡುವೇಳೆಯೊಳಾ ಮ
ಹೀಸುತೆ ತನ್ನ ಮನದೊಳಗೆ ॥ ನೆರವಿಲೋಕಿಸುತ್ತಿದ್ದಳು ಚಿರಂ ।
ತರವು ಪುತ್ರೋತ್ಸವದ ಕಾಲವ । ನಿರುತ ವಾಲ್ಮೀಕಿ ಮುನಿಪಾಲಕ
ನಾಶ್ರಮಾಂತರದಿ ॥ ೨ ॥ ಜನನಿಯಂ ಪೂರ್ವದಂತೆ ಜಾನಕಿ । ಯನತಿ
ಭಕ್ತಿಯೊಳೋಲೈವುತಿರಲಾ । ಮುನಿವರನು ಬೇಕಾದ ಕೋರಿಕೆಗಳನು
ಸಲಿಸುತ್ತ । ಮನದೊಳಾನಂದವನು ತಾಳ್ದಿರ । ಮನೆಯ ವಿಭವಂಗಳ
ನು ಮನದೊಳು । ನೆನೆಯದಿದ್ದಳು ಸೀತೆ ಮುನಿವಾಲ್ಮೀಕಿ ವನದೊಳಗೆ
॥ ೩ ॥ ಜನಕಜೆಯ ಗರ್ಭಕ್ಕೆ ತುಂಬಿತು । ವನದೊಳಾನವ ಮಾಸಗಳವ
ಸಥ । ವಿನುತವೆಂದೆನಿಪೊಂದುದಿನ ರಾತ್ರಿ ಶುಭಲಗ್ನದಲಿ । ಇನಶಶಿಗ
ಳಂತುರೆ ವಿರಾಜಿಪ । ತನಯರಿಬ್ಬರ ನಲ್ಲಿ ಹೆತ್ತಳು । ಮುನಿವಟುಗಳಿ
ವನರುಹಿವರು ವಾಲ್ಮೀಕಿ ಮುನಿಪತಿಗೆ ॥ ೪ ॥ ಜವದೊಳಾಮುನಿಪೋತ್ತ
ಮನು ಬಂ । ದವನಿಜಾತೆಯ ಸುತರನೀಕ್ಷಿಸಿ । ಸುವಿಮಲಮುಹೂರ್ತ
ದೊಳು ಕಲಶೋದಕವ ಕೈಕೊಂಡು ॥ ಅವಳ ಮಕ್ಕಳ ಸಾದರದೆ ಕು
ಶ । ಲವಗಳಿಂದೆ ಪ್ರೋಕ್ಷಿಸಿಯೆ ಕುಶ । ಲವರೆನುತ ಪೆಸರಿಟ್ಟು ನಾಮ
ಕರಣವನಾಗಿಸಿದ ॥ ೫ ॥ ದೆಸೆಗಳತಿ ನಿರ್ಮಲತೆಯಿಂದೊಪ । ನೆಸೆದುವು
ನಭೋಮಂಡಲದೊಳುಡು । ವಿಸರವೆಸೆದುದು ಗಾಳಿಪೊಸಕಂಪಿಂದೆ
ಚರಿಸಿದುದು ॥ ವಸುಧೆ ನಲಿದುದು ಜಲಧಿ ಪೆರ್ಚಿತು । ಪಸರಿಸಿ ನದಿಗ
ಳೆಲ್ಲ ಹರಿದವು । ಶಶಿರವಿಗಳಂತೆಸೆವ ಲವಕುಶರುದಯಕಾಲದೊಳು ॥ ೬ ॥
ಮತ್ತೆ ಮುನಿವಾಲ್ಮೀಕಿ ಜಾನಕಿ । ಹೆತ್ತ ಮಕ್ಕಳ ಬಳಿಗೆ ನಡೆತಂ ।
ದುತ್ತಮವೆನಿಸಿರ ರಾಮ ರಕ್ಷಾಮಂತ್ರವನು ಪೇಳ್ದು । ಚಿತ್ತಶುದ್ಧಿಯೊ

ಳಾ ಕುಮಾರರ । ನೆತ್ತಿಯೊಳು ಭಸ್ಮವ ನಿರಿಸಿ ಸವ । ರುತ್ತ ಕೈಯೊಳು ರಾಮರಕ್ಷೆಯನಿಟ್ಟ ನಾದರದೆ ॥ ೭ ॥ ಬಾಲರೊಷ್ಪವಯ ನಿಟ್ಟು ನೋಡುವ । ಬಾಲಲೀಲೆಯ ನಾಲಿಸಿ ನಲಿವ । ಬಾಲಕರಿಗಿಸಿದಾದ ವಸ್ತುಗಳೆಲ್ಲವನು ಕೊಟ್ಟು ॥ ಲಾಲಿಸುವ ನಾ ಜಪತಪಂಗಳ । ಕಾಲವನು ತಾಂ ಬಗೆಯದಾಮುನಿ । ಪಾಲ ನವನೀಸುತೆಯ ಮಕ್ಕಳ ನೊಲಿದು ವರ್ಧಿಸುತ ॥ ೮ ॥ ಧರಣಿಪಾಲಕ ರಾಯ ದಶರಥ । ನರಮನೆಯೊಳಭಿವರ್ಧಿಯಾಗುವ । ತರುಣರಿಗೆ ವನವಾಸವೆತ್ತಣದೆಂದು ಚಿತ್ತದೊಳು ॥ ಮರುಗನಂತವನೀಸುತೆ ಕುಶಲ । ವರನು ರಕ್ಷಿಸುತಿದ್ದ ನಾ ಮುನಿ । ವರನತಿ ವಿಭವದಿಂದೆ ಬೇಕಾದುದನು ತಾನಿತ್ತು ॥ ೯ ॥ ತೊಟ್ಟಿಲೊಳು ನಲಿವ ನೆವವಿಲ್ಲದೆ । ಥಟ್ಟನೆ ನಗುವ ತಮ್ಮ ಬಾಯೊಳು । ಬೆಟ್ಟುಗಳನಿರಿಸುತ್ತ ಪೀರ್ವ ಪಸಿದರೆ ಸಲೆಚೀರ್ವ ॥ ದಟ್ಟಡಿಯಿಡುವ ನಿಲ್ವ ಬೇಡುವ । ಬಟ್ಟೆಯೊಳು ಬಹ ತೊದಳುನುಡಿವಾ । ಪುಟ್ಟಮಕ್ಕಳ ಸೇವರು ಜಾನಕಿಗಿತ್ತು ಸಂತಸವ ॥ ೧೦ ॥ ಒಮ್ಮೆ ತಾಪಸ ವರನ ನೊಲಿಸುವ । ರೊಮ್ಮೆ ಜನನಿಗೆ ಹರ್ಷವೆಸಗುವ । ರೊಮ್ಮೆ ಬೀದಿಯೊಳಾಡುವರೆಳೆಯಮಕ್ಕಳೊಡವೆರಸಿ ॥ ಒಮ್ಮೆ ನಗಿಸುವ ರೆಲ್ಲರನು ಮ । ತ್ತೊಮ್ಮೆ ವಿಸ್ಮಯವೆಸಗುತಿರ್ಪರು । ತಮ್ಮ ಚರ್ಯಗಳಿಂದೆ ಕುಶಲವರೆಂದು ಮುನಿವನದಿ ॥೧೧॥ ಇನಶಶಿಗಳಂತೆಸೆವ ರಾಮನ । ತನಯರಿಗೆ ವಾಲ್ಮೀಕಿಮುನಿ ಮೂ । ರನೆಯ ಸಂವತ್ಸರದೊಳೊಂದುದಿನ ಶುಭಲಗ್ನ ವಲಿ ॥ ಘನತರ ವಿಭವದಿಂದೆ ಸೀತೆಯ । ಮನಕೆ ಸಂತಸ ಮೊದಗುವಂದದೆ । ವಿನುತ ಚೌಲವನಾಗಿಸಿದನತಿ ವೈಭವಂಗಳಲಿ ॥ ೧೨ ॥ ಐದನೆಯ ಸಂವತ್ಸರದೊಳಾ । ಮೇದಿನೀಸುತೆ ನಂದನರಿಗ । ಕ್ಷ್ಯಾವರದೆ ನಲಿವಕ್ಷರಾಭ್ಯಾಸವನು ಮಾಡಿಸುತ ॥ ಆದಿನವೆ ಮೊದಲುಗೊಂಡು ಮುನಿವರ । ನೋದು ಬರಹಂಗಳನು ನಿತ್ಯವು । ಬೋಧಿಸುತ್ತಲಿ ಕಲಿಸಿಕೊಟ್ಟನು ಬಹಳಹರ್ಷದಲಿ ॥ ೧೩ ॥ ರಾಮಚಂದ್ರನ ರಾಮಣೀಯಕ । ಕೋಮಲತರದ ರೂಪವನು ವರ । ಕಾಮ ಜನಕನ ಕಾಮನೀಯಸು ಮೋಹನಾಂಗವನು ॥ ಶ್ರೀ ಮುಕುಂದನ ಮಂಜುಳತರದ । ಕೋಮಲಾಕೃತಿಗಳನು ತಾಳ್ದು । ಭೂಮಿಜೆಯ ಸುತರೆಸೆದರಾ ಮನ್ಮಥವಸಂತರೊಲು ॥ ೧೪ ॥ ದ್ವಾದಶಾಬ್ದದಮೇಲೆ ಮುನಿವರ । ನಾ ಧರಣಿನಂದನೆಯ ಸುತರಿಗೆ । ವೇದವಿಹಿತ ವಿಧಾನದಿಂದುಪನಯನಗಳ ನೆಸಗಿ ॥ ಮೇದಿನೀಸುರರು ಮುನಿಗಳು ಮೊದ । ಲಾದ ಜನರಿಗೆ ಭೋಜನಂಗಳ । ನಾದರದೊಳಾಗಿಸಿದ

ಬಹುವಿಧ ಭಕ್ಷ್ಯ ಭೋಜ್ಯದಲಿ ॥ ೧೫ ॥ ವಿವಿಧ ಕರ್ಮಂಗಳ ವಿಧಿವಿಧಾ । ನವನು ವೇದಪುರಾಣ ಶಾಸ್ತ್ರಗ । ಳವಧಿಯನು ವರರಾಜ ನೀತಿಯು ನಿಶ್ಚಯಂಗಳನು ॥ ವಿವಿಧವಾಗಿರು ವಸ್ತ್ರ ಶಸ್ತ್ರ ವಿ । ಧವನು ಕಾರ್ಮುಕ ವಿದ್ಯೆಗಳ ನಾ । ಲವಕುಶರಿಗಾ ತಾಪಸೋತ್ತಮ ನೊಲಿದು ಕಲಿಸಿದನು ॥ ೧೬ ॥ ಸಕಲ ಧರ್ಮಂಗಳನು ಬೋಧಿಸಿ । ಸಕಲ ಮರ್ಮಂಗಳನು ತಿಳಿಸುತ । ಸಕಲ ನೀತಿಗಳನ್ನು ಕಲಿಸಿದ ನಧಿಕ ಹರ್ಷದಲಿ ॥ ಸಕಲ ತತ್ವಂಗಳ ನರುಹುತ । ಪ್ರಕಟಮತಿ ಯುಪದೇಶಿಸಿದನತಿ । ಸುಖದೊಳು ಕುಶಲವರ್ಗೆ ರಾಮಾಯಣವ ನಾಬಳಿಕ ॥ ೧೭ ॥ ಜಾಣರಂತಲೆ ವಾಗಿಸುತೆರಡು । ವೀಣೆಗಳ ನಾಂತಾ ಕುಶಲವ । ಜಾರ್ಣತನದಿಂ ಸ್ವರಲಯ ಶ್ರುತಿತಾಳಗತಿಗಳನು ॥ ಕಾಣಿಸುತ ಮಂಜುಳತರವೆನಿಪ । ವಾಣಿಯಿಂದಲೆ ಪಾಡಿದರು ಗೀ । ರ್ವಾಣಭಾಷೆಯೊಳೆಸೆವ ರಾಮಾಯಣದ ಸತ್ಕಥೆಯು ॥ ೧೮ ॥ ಜನನಿಯನು ಸಂತೋಷಪಡಿಸುತ । ಮುನಿಪ ವಾಲ್ಮೀಕಿಯನು ಮೆಚ್ಚಿಸಿ । ಮುನಿ ಸಮೂಹಕೆ ಬಹುಳವಿಸ್ಮಯಗಳನುವಿರಚಿಸುತ ॥ ಮನುಕುಲೋತ್ತಮ ರಾಮಸುಚರಿತೆ । ಯೆನಿಪ ರಾಮಾಯಣದ ಸತ್ಕಥೆ । ಯನೊಲಿದು ಪಠಿಸುತ್ತಿದ್ದರಾ ಕುಶಲವರನುದಿನದೊಳು ॥ ೧೯ ॥ ಸಕಲ ವಿದ್ಯಾನಿಪುಣರೆನಿಸಿ । ಪ್ರಕಟಮತಿಲವಕುಶರು ಮುನಿಪತಿ । ಗಖಿಳ ವಿಧದಾಬಾಲ ಲೀಲೆಗಳನ್ನು ತೋರಿಸುತ ॥ ಪ್ರಕಟತರವೆಂದೆನಿಪ ಶಸ್ತ್ರ । ಪ್ರಕರಣಂಗಳ ನಭ್ಯಸಿಸಿದರು ಸಕಲ ಮುನಿಪಾಲಕರ ಚಿತ್ತಕೆ ಮಾಡುತಚ್ಚರಿಯ ॥ ೨೦ ॥ ಸುತರ ವಿದ್ಯಾಭ್ಯಾಸವನು ಭೂ । ಸುತೆ ವಿಲೋಕಿಸಿ ತನ್ನ ಮನದೊಳು । ವಿತತ ಸಂತೋಷವನು ತಾಳ್ದತಿ ವಿಸ್ಮಯವನಾಂತು ॥ ಕ್ಷಿತಿಯೊಳಾರುಂಟೀತೆರದ ಪರಿ । ಣತರು ಕಾಣೆನೆನುತ್ತ ತಾಂ ಸಂ । ತತಮುಳುಗಿ ತೇಲಾಡುತ್ತಿದ್ದಳು ಸುಖಸಮುದ್ರದಲಿ ॥ ೨೧ ॥ ಮುನಿವಟುಗಳೆಲ್ಲರನು ಸೋಲಿಸಿ । ಘನತರದ ವಿದ್ಯಾಮಹಿಮೆಯಿಂ । ದಿನಶಶಿಗಳಂತೆಸೆವ ಕುಶಲವರಾವನಾಂತರದಿ ॥ ದಿನದಿನದೊಳೈತಂದಖಿಳ ಮುನಿ । ಜನರ ಕಣ್ಮನಕಧಿಕಸಂಮುದ । ವನೊದವಿಸುತ್ತಿದ್ದರು ವಿನಯ ವಿದ್ಯಾವಿಭವದಿಂದ ॥ ೨೨ ॥ ಮುನಿಗಳೆಲ್ಲರು ಭರದ ಬಂದಾ । ವನಕೆ ಶಿಷ್ಯರಸಹಿತ ರಘುನಂ । ದನನ ಮಕ್ಕಳ ಪರಸುವಿದ್ಯಾಕೌಶಲಂಗಳನು ॥ ಮನದಣಿಯೆ ಕಾಣುತ್ತತಿವಿಸ್ಮಯ । ವನು ತಳೆದು ಕೊಂಡಾಡಿಕೊಟ್ಟರು । ವಿನುತವಾಗಿಹವಸ್ತುಗಳ ನಾ ಕುಶಲವರುಗಳಿಗೆ ॥ ೨೩ ॥ ಒಬ್ಬಮುನಿ ಮೃದುವಾದವಿತ್ತನ ।

ರವ । ದೊಬ್ಬಮುನಿ ಜಪಸರವ ಕೊಟ್ಟನ । ದೊಬ್ಬಮುನಿ ತಾಪ
ನುಕೊಟ್ಟನು ವರಕಮಂಡಲವ ॥ ಒಬ್ಬನಿತ್ತನು ದಂಡವನು ಮ ।
ಬ್ಬನಿತ್ತನು ಹರಿಣ ಚರ್ಮವ । ನೊಬ್ಬನಿತ್ತನು ಪಾರುಪಡಿಗಳ ನಾ
ಶಲವರಿಗೆ ॥ ೨೮ ॥ ಒರ್ವನಿತ್ತನು ಪೀತವನು ಮ । ತ್ತೊರ್ವನಿ
ತ್ತನು ವರದುಕೂಲವ । ನೊರ್ವಮುನಿ ಕೌಪೀನವಿತ್ತನು ಬಹಳಹ
ರ್ಷದಲಿ ॥ ಒರ್ವಮುನಿವರನವರುಗಳಿಗಾ । ಶೀರ್ವದಿಸಿದನು ಪೇಳ್ದನೊ
ಪ್ಪನು । ಸಾರ್ವಭೌಮನ ಸುತರಿಗಾಯುಷ್ಯಾಭಿವೃದ್ಧಿಯನು ॥ ೨೫ ॥
ನನಿಗಾನಂದವ ನೆಸಗುತಾ । ಮುನಿವರನ ಮನಕಧಿಕ ವಿಸ್ಮಯ ।
ನೊದವಿಸುತ ಸಮಸ್ತ ವಿದ್ಯೆಗಳನ್ನು ತೋರಿಸುತ ॥ ದಿನದಿನದೊಳ
ವೃದ್ಧಿಯಾಗುತ । ಮನುಕುಲೋತ್ತಮ ರಾಘವನ ಪದ । ವ ನವಲೋ
ಸಬೇಕೆನುತ ಕುಶಲವರು ಬಯಸಿದರು ॥ ೨೬ ॥ ಒಂದುದಿನ ಮುನಿಪದಕೆ
ಜಾನಕಿ । ವಂದಿಸಿ ತಪೋನಿಧಿಯೆ ವರರಘು । ನಂದನನೊಡನೆನಗೆಸಮಾ
ಮ ಪಾಗುವಂದದಲಿ ॥ ಒಂದುನೇಮವ ತಿಳುಹಿಸಿರಿ ನೀ । ವೆಂದು
ತಲು ಮಣಿದೆರಗಿ ನಲ । ವಿಂದೆ ಮುನಿವಾಲ್ಮೀಕಿ ಪೇಳ್ದನು ಬಳಿಕ
ಜಾನಕಿಗೆ ॥ ೨೭ ॥ ಧರಣಿಸುತೆ ಕೇಳೊಂದು ನೇಮವ । ನರುಹುವೆ
ನಾನಿಂದು ನೀನಾ । ಚರಿಸು ಮೇಲಹ ಶುಕ್ಲಪಕ್ಷದ ಪಾಡ್ಯಮಿಯು
ದಲು ॥ ಪರಮಭಕ್ತಿಯನಾಂತು ಸಮನಂ । ತರದೊಳೈತಹ ಶುದ್ಧ
ನವಮಿಯು । ವರೆಗಮದ ನಾಚರಿಸಬೇಕೊಂಬತ್ತು ದಿವಸಗಳು ॥ ೨೮ ॥
ನಕದಿಂದಲೆ ರಚಿಸಿ ರಘುನಂ । ದನನ ಪಾದುಕೆಗಳೆರಡನು ಮೊದ ।
ನೆಯ ದಿನವೊಂಬತ್ತು ಕಮಲಂಗಳನು ಪೂಜಿಸುತ ॥ ವಿನಯದಿಂದ
ಮಂತ್ರಪುಷ್ಪಗ । ಳ ನೊಲಿದರ್ಪಿಸಿ ಜನ್ಮಕಾಂಡವ । ಮನವೊಲಿ
ಕೇಳುವುದು ಸುತನಿಂದೊಂದುಸಲ ನೀನು ॥ ೨೯ ॥ ಎರಡನೆಯದಿನ
ದುಕೆಗಳನು । ಪರಮಭಕ್ತಿಯೊಳರ್ಚಿಸುತ ನೀ । ನಿರದೆ ಹದಿನೆಂ
ಕಮಲಂಗಳನೊಲಿದು ಪೂಜಿಸುತ ॥ ಉರುತರದ ಪುಷ್ಪಾಂಜಲಿಯ
। ತ್ತೆರಗಿ ತಪ್ಪದೆ ಜನ್ಮಕಾಂಡವ । ನೆರಡುಸಲ ನಿಜತನಯನಿಂದೊಲಿ
ಲಿಪುದು ನೀನು ॥ ೩೦ ॥ ಮೂದದೊಳಿಪ್ಪತ್ತೇಳು ಘನಕಮ । ಲದ
ಸುಮಗಳ ನರ್ಚಿಸುತ ದಡು । ಕದೆಯೆ ಕೇಳ್ವುದು ಮೂರುಸಲ
ರಜನ್ಮಕಾಂಡವನು ॥ ಪದಕೆ ನಾಲ್ಕನೆಯದಿನ ಪೂಜೆಸಿ । ಪಡೆದು ಮೂ
ತ್ತಾರ್ಕಮಲಗಳ । ಮುದದೆ ಕೇಳ್ವುದು ಜನ್ಮಕಾಂಡವ ನೊಲಿದು
ನಾಲ್ಕುಸಲ ॥ ೩೧ ॥ ಐದನೆಯದಿನದಲ್ಲಿ ನಲವ । ತ್ತೈದು ಕಮಲಂಗ

ಳನು ಪೂಜಿಸಿ । ಪಾದುಕೆಗಳಿಗೆ ಮಂತ್ರಪುಷ್ಪವನಿತ್ತು ಭಕ್ತಿಯಲಿ । ಸಾವರದೊಳಾ ಜನ್ಮಕಾಂಡವ । ನೈದುಸಲ ನಿಜ ತನಯನಿಂದಲೆ । ಯೋದಿಸುತ ನೀನಾಲಿಪುದು ಸಂತೋಷವನು ತಾಳ್ದು ॥ ೩೨ ॥ ಆರನೆ ಯದಿನ ಪಾದುಕೆಗಳಿಗೆ । ಮಾರಿದತ್ರಿಭಕ್ತಿಯೊಳು ವರಪಂ । ಕೇರುಹಗ ಳೈವತ್ತುನಾಲ್ಕನು ನೀನು ಪೂಜಿಸುತ ॥ ಆರುಸಲ ಕೇಳುವುದು ನಿನ್ನ ಕು । ವಾರನಿಂವಳೆ ಜನ್ಮಕಾಂಡವ । ನಾರಘುವರನ ಪಾದಪದ್ಮವನೆನೆದು ಚಿತ್ತದಲಿ ॥ ೩೩ ॥ ಕೇಳೆಲೆ ಮಹೀಸುತೆ ಬಳಿಕ ನೀ । ನೇಳನೆಯದಿನ ಮಿಂದು ಬೆಳಗಿನ । ಕಾಲದೊಳಗರವತ್ತು ಮೂರ್ಕಮಲಗಳ ನರ್ಚಿಸುತ ॥ ಏಳುಸಲವರ ಜನ್ಮಕಾಂಡವ । ನಾಲಿಸ್ವದು ಪುಷ್ಪಾಂಜಲಿಯನಿ । ತ್ತಾಲಯದೊಳಾಬಳಿಕ ನಿನ್ನಯ ತನಯನಿಂದೊಲಿದು ॥ ೩೪ ॥ ಭರದೊಳೆಂಟನೆಯದಿನ ಮೆಪ್ಪ । ತ್ತೆರಡು ಕಮಲಂಗಳನು ಪೂಜಿಸು । ತೆರಗಿ ಪಾದುಕೆಗಳಿಗೆ ಪುಷ್ಪಾಂಜಲಿಯ ನರ್ಪಿಸುತ ॥ ತ್ವರಿತಗೊಳ್ಳುತ ಲೆಂಟುಸಾರಿ ಕು । ವರನ ಮುಖದಿಂದಾಲಿಸ್ವದವಲ । ತರ ಮೆಸಿಪ ವರಜನ್ಮಕಾಂಡವ ನಧಿಕಭಕ್ತಿಯಲಿ ॥೩೫॥ ಜನಕಸುತೆ ಕೇಳ್ಬಳಿಕ ನವಮಿಾ । ದಿನದೊಳೆಂಬತ್ತೊಂದು ಕಮಲಗ । ಳನೊಲಿದರ್ಚಿಸಿ ಪಾದುಕೆಗಳಿಗೆ ಮಂತ್ರಪುಷ್ಪವನು ॥ ವಿನಯದಿಂದೆ ಸಮರ್ಪಿಸುತ ಪಾ । ವನತರಮೆನಿಸ ಜನ್ಮಕಾಂಡವ । ತನಯನಿಂದೊಲಿ ದಾಲಿಸುವುದೊಂಬತ್ತುಸಲ ನೀನು ॥ ೩೬ ॥ ಅರುಣಕಾಲದೊಳೆದ್ದು ಮರುದಿನ । ತರಣಿಮೂಡವ ಮುನ್ನ ಮಂಗಳ । ಕರವೆನಿಸುವಭ್ಯಂಗನಸ್ನಾನವನು ನೀನೆಸಗಿ ॥ ಮೆರೆವ ವಸ್ತ್ರಾಭರಣಗಳ ನಿ । ತ್ತೆರಗಿ ಸತ್ಕರಿಸುವುದು ಪರವಾ । ದರದೊಳೆಂಬತ್ತೊಂದು ದಂಪತಿಗಳಿಗೆ ವಿಪ್ರರಲಿ ॥ ೩೭ ॥ ತರತರದ ಭಕ್ಷ್ಯಗಳ ನಾಗಿಸಿ । ಕರೆದು ವಿಪ್ರೋತ್ತಮರ ನತ್ಯಾ । ದರದೆ ವರಮೃಷ್ಟಾನ್ನ ಭೋಜನಗಳನು ಮಾಡಿಸುತ ॥ ವರಸುಚಂದನ ಪುಷ್ಪಗಳ ನಿ । ತ್ತೆರಗಿ ಫಲತಾಂಬೂಲಗಳ ನಾ । ದರಿಸಿ ಕೊಡುವುದು ದಕ್ಷಿಣೆಸಹಿತ ತೃಪ್ತಿಯಪ್ಪಂತೆ ॥ ೩೮ ॥ ಮಗಳೆ ಕೇಳೀ ಜನ್ಮಕಾಂಡವ । ನೊಗೆವತಿ ಬಕುತಿಯಿಂದೆ ಕೇಳ್ದೊಡೆ । ರಘುವರನೊಡನೆ ನೀನು ಸೇರುವೆಯೆನುತೊರೆದುಕೊಡೆ ॥ ಮಿಗಿಲು ಸಂತಸವನ್ನುತಾಳುತ । ಸುಗುಣನಿಧಿ ವಾಲ್ಮೀಕಿ ಭೂಮಿಸು । ತೆಗೆ ವಿರಚಿಸಿದನಾಕೆಯಿಂದಾ ವ್ರತವನಾದರದೆ ... ... ॥ ೩೯ ॥

ಇಂತು ಮೂವತ್ತೇಳನೆಯ ಅಧ್ಯಾಯ ಸಂಪೂರ್ಣವು ಪದ್ಯಗಳು ೨೦೯

# ಮೂವತ್ತೆಂಟನೆಯ ಅಧ್ಯಾಯ

ಸೂಚನೆ ॥ ಲವನುರಾಘವ ಸಧ್ವರದತುರ ।
ಗವನು ಕಟ್ಟಲಘಟಿತವೆನಿಸಿತು ।
ಬವರದೊಳ್ಶತ್ರುಘ್ನ ಲಕ್ಷ್ಮಣರಿಗೆ ಬಿಡಿಸಿಕೊಳಲು ॥

ಜನಕಜಾತೆಯು ಸೇವೆಗೈಯ್ಯುತ । ಮುನಿಯೆಚಿತ್ತಕೆ ಬಹುಳ ಸಂತಸ । ವನು ವಿರಚಿಸುತ ಕಾಕಪಕ್ಷವನಾಂತು ಕುಶಲವರು ॥ ಮುನಿಪನಾಶ್ರಮದೊಳಿರೆ ಮುನಿಕೊ । ಟ್ಟನು ಶರಶರಾಸನಗಳನು ಮೇ । ಲೆನಿಸ ಕವಚಕಿರೀಟ ತೂಣೀರಗಳನವದಿರಿಗೆ ॥ ೧ ॥ ಇತ್ತಲಿಂತಿರುತಿರಲು ರಾಘವ । ನತ್ತಯೋಧ್ಯಾನಗರದೊಳು ಸಲ । ಹುತ್ತ ಸಕಲ ಮಹೀತಲವ ನಮರೇಂದ್ರನಂದದಲಿ ॥ ಚಿತ್ತದೊಳು ಯೋಚಿಸಿದ ಶಾಸ್ತ್ರನ । ಕತ್ತರಿಸಿದಾ ಬ್ರಹ್ಮಹತ್ಯಸಿ । ಮಿತ್ತಕೋಸುಗ ತುರಗಮೇಧಾಧ್ವರ ಕೆಯತ್ನಿಸಿದ ॥ ೨ ॥ ಮುನಿವಸಿಷ್ಠ ಸುಯಜ್ಞಕಶ್ಯಪ । ವಿನುತಗೌತಮ ನತ್ರಿಕಾತ್ಯಾ । ಯನವಿಜಯ ಜಾಬಾಲಿ ವಿಶ್ವಾಮಿತ್ರ ಮೊದಲಾದ । ಮುನಿಗಳಂಬರಿಸಿ ಹಯಮೇಧನ । ವನವನಾಗಿಪೆ ನೆಂದು ರಘುವೀ । ರನರುಹಲವರು ಪೇಳದರು ನಿಜಪತ್ನಿ ಬೇಕೆನುತ ॥ ೩ ॥ ಹೇಮಮಯಸೀತೆಯನಿರಿಸಿಕೊಂ । ಡೀ ಮಹಾಕ್ರತುವ ನೆಸಗುವೆನೆಂ । ದಾ ಮುನಿಗಳನೊಡಂಬಡಿಸಿ ಮಖಶಾಲೆಯನು ಗೈಸಿ ॥ ರಾಮನಾಗಳೆ ದೀಕ್ಷಿತಳೆದಾ । ಕೋಮಲಾಶ್ವವ ನರ್ಚಿಸಿ ಪಣೆಗೆ । ಹೇಮಪತ್ರದೊಳಗ್ಗಳಿಕೆಯಂ ಬರಿಸಿ ಕಟ್ಟಿಸಿದ ॥ ೪ ॥ ಜವದೆ ಮೂರಕ್ಷೋಹಿಣಿಯಸೈ । ನ್ಯವನು ನೇಮಿಸಿ ತುರಗರಕ್ಷಣೆ । ಗವನಿಪತಿ ಶತ್ರುಘ್ನನಸಹಿತ ಕುದುರೆಯಂಬಿಡಲು ॥ ಅವನಿಮಂಡಲದೊಳದು ಸಂಚಾ । ರವನು ಮಾಡುತ ಕಳೆದು ಬಂದುದು । ವಿವಿಧ ದೇಶಂಗಳನು ಮನಬಂದಂತೆ ದಕ್ಷಿಣಕೆ ॥ ೫ ॥ ಮನುಕುಲೋತ್ತಮ ರಾಘವೇಂದ್ರನ । ವಿನುತ ಹಯಮೇಧಾಧ್ವರ ತುರುಗ । ಮೆನುತ ಬರೆದಿಹ ಪಟ್ಟದಲಿಪಿಯನೋದಿಕೊಂಡಳುಕಿ ॥ ಮನುಜಪಾಲಕ ರೊಬ್ಬರಾಹಯ । ವನು ಪಿಡಿದು ಕಟ್ಟದಿರೆ ಕಾಪಿನ । ಜನರೊಡನೆ ವಾಲ್ಮೀಕಿ ವನಕೈತಂದುದಾ ಕುದುರೆ ॥ ೬ ॥ ಬಂದುಪವನದೊಳಾ ಕುದುರೆ ನಲ । ವಿಂದೆ ಪುಲ್ಲನು ಮೇಯುತಿರಲವ । ನಂದು ತನ್ನೊಡನಾಡಿಗಳೊಡನೆ ವಿಹರಿಸುತಲಿದ್ದ ॥ ಬಂದ

ಹಯುವನು ಕಂಡು ಕಲಿತನ | ದಿಂದೆ ಕದಳೀದ್ರುಮಕೆ ಬಂಧಿಸಿ | ಚಂದವಾಗಿಹ ಪಟ್ಟದಲಿಪಿಯನೋದಿಕೊಳುತಿದ್ದ || ೭ || ತುರಗವಂ ಕಟ್ಟದಿರು ಶಿಕ್ಷಿಸು | ವರವನೀಪತಿಗಳೆನುತ ಮುನಿಸು | ತರೆನಲಾಲವ ನಂಜದೆ ತೊಲಗಿನೀವೆನುತ ಪೇಳ್ದ || ಶರವನೇರಿಸಿ ಬಿಲ್ಲಿನೊಳು ಬೊಬ್ಬಿರಿದು ನಿಂದನು ರಿಪುಗಳೊಡನೆ ಬ | ವರಕೆ ಮದವಾರಣಕೆ ಮರಿಸಿಂಗ ವಿದಿರಪ್ಪಂತೆ ||೮|| ಕುದುರೆಗಾವಲ ಭಟರು ನಡೆತಂ | ದಿದಿರೊಳಾ ಕದಳೀದ್ರುಮಕ್ಕೆ ಬಿ | ಗಿದ ಕುದುರೆಯಂ ಕಂಡು ನೀವೇತಕೆ ಪಿಡಿದಿರೆನುತ || ಇದಿರೊಳಿದ್ದಾ ಮುನಿವಟುಗಳನು | ಹೆದರಿಸಲು ನಾವಲ್ಲ ಲವನೀ | ಕುದುರೆಯಂ ಕಟ್ಟಿದನೆನುತ ತೋರಿದರು ಬೆರಲಿಂದ || ೯ || ತರಳನೀ ಹಯುಮನರಿಯದೆ ಕ | ಟ್ಟಿರುವನೆಂದಾ ಕುದುರೆಗಾವಲ | ಚರರೊಡನೆ ಬಿಡಹೇಳಿ ಗರ್ಜಿಸಲಾ ಲವನಳುಕದೆ || ತುರಗವಂಬಿಡೆಬಿಡಲು ಬಂದ ಜ | ನರಕರವ ಛೇದಿಸುವೆ ನಾನೆನು | ತರುಹಿ ಬಿಡಲೈತಂದ ವರಕೈಗಳನು ಸೀಳಿದನು || ೧೦ || ಬವರಕೈತಂದಖಿಳ ಸೈನ್ಯವ | ವಿವಿಧ ಶಸ್ತ್ರಗಳಿಂದೆ ಛೇದಿಸು | ತವನಿಯೊಳು ಬೀಳಿಸಿದನಾ ಲವನೊಂದು ನಿಮಿಷದಲಿ || ಜವದೊಳಾ ಶತ್ರುಘ್ನನಳಿದ ಬ | ಲವನು ಕಂಡು ಕದನಕೆ ಬಂದನು | ಲವನಮೇಲೆಸುರಿಸುತ ಬತ್ತಿಸಾಯುಧಂಗಳನು || ೧೧ || ಮುತ್ತಿಬಹ ಶತ್ರುಘ್ನನುರುಬೆಗೆ | ತತ್ತರಪಡದೆ ನಿಲ್ಲುತ ಲವಂ | ಚಿತ್ತದೊಳು ಮಾಹೇಶಮಂತ್ರವ ನೆನೆಯುತಾತನನು || ಮತ್ತೆ ಘಾತಿಸಲೆಲವೊ ಬಾಲಕ | ಪೆತ್ತವರದಾರ್ನಿನ್ನನುರಣದಿ | ಸತ್ತುಹೋಗದಿರೆಂದು ಹೊಡೆದನು ಹತ್ತು ಬಾಣದಲಿ || ೧೨ || ಅವಘಡಿಸಿ ಶತ್ರುಘ್ನನೆಚ್ಚಶ | ರವನು ಮಾರ್ಗದೆ ಲವನು ಪಲ್ಲಟಿ | ದವನ ಚಾಪವ ನೆರಡುತುಂಡಪ್ಪಂತೆ ಛೇದಿಸಲು || ಕುವರನ ಪರಾಕ್ರಮಕೆ ಮೆಚ್ಚುತ | ಜವದೊಳಾ ಶತ್ರುಘ್ನನೆಚ್ಚನು | ಲವನ ವಕ್ಷಸ್ಥಳಕೆ ಕೋಪಿಸಿ ಮೂರುಬಾಣವನು || ೧೩ | ವಿರಹಿಗಳನಂಜಿಸುವ ತೆರದಿಂ | ದಿರುತಿಹವು ನಿನ್ನಂಬುಗಳೆನುತ | ಧುರದೊಳಾತನ ಮೂರು ಬಾಣಂಗಳನು ಕತ್ತರಿಸಿ || ತುರಗಸಾರಥಿ ಶರಶರಾಸನ | ವರವರೂಥಪತಾಕೆಗಳನತಿ | ಭರದೊಳಿಕ್ಕಡಿಗೈದುರುಳ್ಚಿದನಾಲವನು ಮತ್ತೆ || ೧೪ || ಪೊಸತೆನಿಪ ತೇಗ-ಡರು ತಾಗಳೆ | ಪಸುಳೆಯನು ಮತ್ತೊಂದು ಶರದಿಂ | ದೆಸೆಯುಲ. ಶತ್ರುಘ್ನನಂದತಿಕೋಪವನುತಾಳ್ದು | ಕುಶನನುಜನ್ನೈತರ್ಪ ಬಾಣವ | ಬಸವಳಿಯು ದಿಕ್ಕಡಿಗ ಶಿವನಾ | ರಕೆಗೊಲ್ಲ ಸಡಿಲಯನಾಗುದು ಕಂಟಕಾಕ್ಷಿ ನ್ರೊಳು || ೧೫ ||

ಕುವರನ ಪರಾಕ್ರಮಕೆ ಮೆಚ್ಚುತ | ಜವದೊಳೊಂದು ಮಹಾಸ್ತ್ರವನು ಬಿಡ | ಲವನಿಜಾತೆಯ ಸುತನ ಮೇಲ್ಶತ್ರುಘ್ನನುರೆಮುಳಿದು | ತವಕ ದಿಂದದ ನಿಕ್ಕಡಿಗಡಿಯ | ಲವನಿಯೊಳು ಬಿದ್ದುದು ಶರದೊಳ | ರ್ಧವು ಮಹಾಭಯವನೆಸಗುತ ಸಂಗರದಮಧ್ಯದಲಿ || ೧೬ || ಶರದೊಳಂದುಳಿದ ರ್ಧಭಾಗವು | ಭರದೆಬಂದಾ ಲವನಚಾಪವ | ನಿರಿದವನ ವಕ್ಷಸ್ಥಳವ ನುಛ್ಛಳಿಸಿಳೆಗೆಕೆಡಹಿ || ಪಿರಿಯ ಮೂರ್ಛೆಯನೈದಿಸಲು ರಘು | ವರನ ತಮ್ಮನು ಹತ್ತಿರಕೆ ಬಂ | ದುರುತರದ ರಾಮಾಕೃತಿಯೊಳಹ ಶಿಶುವನೀ ಕ್ಷಿಸಿದ || ೧೭ || ಕರುಣದಿಂದೀಕ್ಷಿಸಿ ರಥದಮೇ | ಲಿರಿಸಿಕೊಂಡತಿ ಮೋಹದಿಂದಾ | ತರಳನಂ ಮೈದಡವಿ ಮುದ್ದಿಸಿಕೂಡೆ ಬಿಗಿದಪ್ಪಿ || ತುರಗಸಹ ಶತ್ರುಘ್ನನಿತ್ತ ನ | ಗರಕೆ ನಡೆತಂದನತಿ ಭರದೊಳು | ಧರ ಣಿಜಾತೆಯ ಬಳಿಗೆ ಬಂದರುಹಿದರು ವಟುವರರು || ೧೮ || ತಾಯೆ ಚಿತ್ತೈಸು ಲವನಾರಘು | ರಾಯನ ಧ್ವರತುರಗಮಂ ನಿ | ರ್ದಾಯದಿಂ ಬಂಧಿಸಿಮೊಡಾ ರಣರಂಗದೊಳವನನು || ಗಾಯಗೊಳಿಸಿ ಮೂರ್ಛೆಗೆಡ ಹುತ | ಜೇಯನಾಗಿ ರಿಪುಘ್ನನೈದಿದ | ನಾಯಯೋಧ್ಯೆಗೆನುತ್ತ ಪೇಳ್ದ ರು ಸೀತೆಗರ್ಭಕರು ||೧೯|| ಆ ನುಡಿಯ ನಾಲಿಸುತ ದುಃಖಿಸಿ | ಜಾನಕಿಸು ತನ ಸದ್ಗುಣಗಳಂ | ತಾ ನಡಿಗಡಿಗೆ ನೆನೆದು ಮಂದಿರದಿಂದೆ ನಡೆತಂದು || ಜ್ಞಾನವಿಲ್ಲದೆ ರೋದಿಸುತ ದು | ಮ್ಮಾನದಿಂದುರೆ ಕೊರಗುತಿದ್ದಳು | ದೀನಳಾಗುತರಿಯದ ಜನರಂತೈದಿ ಕಳವಳವ || ೨೦ || ಆಳುತ ಕಂಪಿಸಿ ಸೀತೆದೆಸೆಗೆ | ಟ್ಟಳುಕಿ ಬಿಸುಸುಯ್ಯುತ್ತ ಮೇದಿನಿ | ಯೊಳು ಹೊರಳ ಸುತ ಮೋಹದಿಂ ಬಸವಳಿದು ಚೇತರಿಸಿ || ಎಳೆಯನೇನಾಗಿಹನೊ ಮಗ ನೆಂ | ತಳುಕಿದನೊ ಜೀವಿಸಿಹನೊ ಬವರ | ದೊಳಳಿದನೊ ನಾನೆಂತು ನೋಡುವೆನೆಂದು ಹಲುಬಿದಳು || ೨೧ || ಅನಿತರೊಳು ನಡೆತಂದನು ಮನೆಗೆ | ವಿನುತ ಪುಷ್ಪಸಮಿತ್ತುಗಳನು ಕು | ಶನು ಕರಂಗಳೊಳಿರಿಸಿ ಕೊಳ್ಳುತ ಸಖರನೊಡಗೊಂಡು || ವಿನಯದಿಂದೆರಗುತ ನುಡಿದ ನೆಲೆ | ಜನನಿನೀ ನಿಂದೇತಕೆ ಬರಿದೆ | ಮನಮರುಗಿ ರೋದಿಸುವೆ ಪೇಳೆಂದೆನುತ ಶೀಘ್ರದಲಿ ||೨೨|| ಬನ್ನವಂ ಕೇಳ್ಮಗನೆ ರಾಘವ | ನುನ್ನತಹಯಂ ಬಂ ದೊಡಿಲ್ಲಿಗೆ | ನಿನ್ನ ತಮ್ಮನು ಕಟ್ಟಿದನದಂ ಯುದ್ಧಭೂಮಿಯೊಳು || ಉನ್ನತ ಪರಾಕ್ರಮಿರಿಪುಘ್ನನು | ತನ್ನ ಶರದಿಂದೆಚ್ಚುಘಾತಿಸಿ | ನನ್ನ ಕಂದನ ಕೊಂಡುಹೋದನೆನುತ್ತ ಪೇಳಿದಳು || ೨೩ || ಕಾಲನಾಗಲಿ ಮೃತ್ಯುವಾಗಲಿ | ಶೂಲಿಯಾಗಲಿ ಸುರಪನಾಗಲಿ | ಹೇಳು ವಿಷ್ಣುವಿರಂ

ಚಿಗಳೊಳಾರಾದಡೆಯು ಸರಿಯೆ ॥ ಸೀಳಬಿಡುವೆನು ಮುಂದೆ ನಾಸೀ । ರೇಳುಲೋಕದೊಳಹ ಕಲಿಗಳನು । ಚೀಳಸುವೆನೆಂದೆನುತ ಕುಶನಂ ದುಬ್ಬಿ ಬೊಬ್ಬಿರಿದ ॥ ೧೪ ॥ ಶೋಕವೇಕಿದ ಕೆಲೆಜನನಿ ಭೂ । ಲೋಕ ದರಸುಗಳಣಿಕೆ ಗೊಂಬೆನೆ । ನೀ ಕಳುಹು ಸಂಗರಕೆ ನನ್ನನೆನುತ್ತ ಕಾಲ್ಗೆರಗಿ ॥ ಆ ಕುಶಂ ಬೇಡಿದೊಡೆ ಸೀತೆಯು । ನೇಕವಿಧದಿಂ ಪರಸಿ ಜವದೊಳ । ಗಾಕುವರನಂ ಕಳುಹಿಕೊಟ್ಟಳು ತೊಡಿಸಿ ಕವಚವನು ॥ ೧೫ ॥ ತಾಯ ಪದಯುಗಕೆರಗಿ ಕುಶನ ಸ । ಹಾಯನಾಗಿಯೆ ಯುದ್ಧಭೂಮಿಗೆ । ವಾಯುವೇಗದೆ ಬಂದನಂಜದೆ ಪೋಗಬೇಡೆನುತ ॥ ಸಾಯಕದ ಮಳೆಯಂ ಕರೆದು ರಘು । ರಾಯನನುಜನ ಸಕಲ ಸೈನ್ಯ ಕ । ಪಾಯವನೆಸಗಿ ಹಿಂದಿರುಗಿಸಿದ ನೊಂದು ನಿಮಿಷದಲಿ ॥ ೧೬ ॥ ತಿರುಗಿದಂ ಪಡೆಸಹಿತ ಹಿಂದಕೆ । ಭರದೊಳಾ ಶತ್ರುಘ್ನ ನಾತನಿ । ದಿರೊಳು ನಿಂದುರೆಗರ್ಜಿಸಿ ಕುಶಂ ಪೋಗದಿರು ನಿಲ್ಲು । ಧುರಕೆ ನಿಲ್ಲದೆ ಕದ್ದು ಪೋಪೆಯ । ತುರಗದೊಡ ನೆನ್ನನುಜನಂ ಬಿ । ಟ್ಟಿರದೆ ಪೋಗಿಸಲಹಿಕೊಜೀವವನೆನುತ ತೆಗೆದೆಚ್ಚ ॥ ೧೭ ॥ ಹಿಂದೆನಮ್ಮನು ಬಹುಪರಾಕ್ರಮ । ದಿಂದ ಮೊರ್ವಪಸುಳೆ ಬಳಲಿಸಿದ । ನಿಂದುಮತ್ತಿವ ನೊರ್ವನೈತಂದಿಹನೆನುತ ಮುಳಿದು ॥ ಬಂದುನಿಂದನು ಕದನಕೆ ಕುಶನ । ಮುಂದುಗಡೆ ಶತ್ರುಘ್ನನಂಜದೆ । ಕೊಂದುಬಿಡುವೆನೆನುತ್ತ ಬಿಲ್ದುಡುಕುಬ್ಬಿಬೊಬ್ಬಿರಿದು ॥ ೧೮ ॥ ಕಡುಮುಳಿದು ಶತ್ರುಘ್ನನಂದೊಡ । ನೊಡನೆ ಯೊಂಬತ್ತು ಶರದಿಂದಾ । ಪೊಡವಿಯಣುಗಿಯ ಸುತನ ನೆಚ್ಚೊಡಳುಕದೆ ಕುಶನಿರದೆ ॥ ಬಿಡಿದು ಸಾರಥಿರಥಹಯಂಗಳ । ನಡಿಗಡಿಗೆ ಕತ್ತರಿಸಿ ಕೆಡಹಿದ । ನೊಡನಿಳೆಗೆ ಶತ್ರುಘ್ನನಂತಾ ನಾರುಬಾಣದಲಿ ॥ ೧೯ ॥ ಧುರದೊಳಾ ಕುಶನೆಚ್ಚಶರದಿಂ । ದುರುತರದ ಮೂರ್ಛೆಯನುತಾಳುತ । ಧರೆಗೆಬೀಳ್ವನಿತರೊಳು ಶತ್ರುಘ್ನನುಳಿದು ರಥವನು ॥ ದೊರೆಗಳೆಲ್ಲರು ಮೂರ್ಛೆಗೊಂಡರು । ಧರಣಿಯೊಳು ಕನ್ಯಾಕ್ರಯುವಗೆ । ಯ್ಯುರೆಮುದದೆ ಜೀವಿಸುವ ಮಾನವನಾ ಪಿತೃಗಳಂತೆ ॥ ೨೦ ॥ ದುರಿತಮಂ ಬಹು ಧರ್ಮದಿಂದೊಡ । ನೊರಸುವಂತೆ ಕುಶನ ಹಿತರ್ಕಳ । ನಿರಿವಖಿಳ ಶಸ್ತ್ರಾಸ್ತ್ರಸಂಚಯದಿಂದೆ ಕೆಡಹಿದನು ॥ ಮರನೆಯಂ ಕಳೆದು ಲವನಣ್ಣನ ॥ ಪೊರೆಗೆ ಬಂದನು ಕೂಡೆ ಬಂದರು । ಧುರಕೆ ಕುಶಲವರಿಬ್ಬರು ಸಮಿರಣಸುತನ ಹರೊಲು ॥ ೨೧ ॥ ಮತ್ತೆ ಹಯಮಂ ಕಟ್ಟಿ ಸಂಗರ । ಕಿತ್ತನಿಂದಾ ಕುಶಲವರ ಕಂ । ಡತ್ತಲೋಡಿದ ರುಳದ

ಭಟರಾರಾ ಸವನದಬಳಿಗೆ || ಉತ್ತಮೋರ್ಧ್ವರಶಾಲೆಯೊಳು ಮುನಿ | ಪೋ
ತ್ತಮರ ವಚನಂಗಳನು ಕೇ | ಳುತ್ತ ಕುಳಿತಿಹ ರಾಮನಂ ಕಂಡಿಂತು
ಪೇಳಿದರು || ೩೨ || ಅವಧರಿಸು ಜೀಯತಡೆಯಿಲ್ಲದೆ | ಸವನದಹಯಮಂತಿ
ರುಗಿ ಬಂದುದು | ಭುವನದೊಳು ಲವನೆಂಬ ಶಿಶುಬಿಗಿದನದನಾಬಳಿಕ ||
ಬವರದೊಳು ಶತ್ರುಘ್ನನವನಂ | ತಿವಿದು ಬೀಳಿಸಲೊರ್ವ ಬಾಲಕ |
ನವನಿಗೀತನ ನುರುಳಿಸಿದ ನೆಂದರುಹಿದರು ನಮಿಸಿ || ೩೩ || ಜಗದೊ
ಳುಂಟೆ ರಿಪುಘ್ನನಂ ಭೂ | ಮಿಗೆ ಕೆಡಹಿಸುವ ವೀರನತಿ ಸೋ | ಜಿಗವೆನಿ
ಪುದೀ ಮಾತು ನೀವ್ಪೊಲಗೆನುತ ರಾಘವನು || ಮಿಗೆಮುಳಿದು ಗರ್ಜಿ
ಸಲು ಪದಗ | ಳಗೆರಗಿ ಚರರುಬಿನ್ನವಿಸಿದರು | ರಘುಕುಲೇಂದ್ರಗೆ
ನಿಮ್ಮಪದದಾಣೆ ನಿಜವಿದೆನುತ್ತ || ೩೪ || ಅನುಜನಂ ಸೋಲಿಸಿದ ಶಿಶು
ಗಳ | ವಿನುತ ಭುಜಬಲವೆಂತೊ ಲಕ್ಷ್ಮಣ | ರಣಕೆ ನೀಂ ನಡೆ ಸೇನೆ
ಸಹಿತ ಮೆನುತ್ತ ರಾಘವನು || ಘನವಿಷಾದವನಾಂತು ನುಡಿಯ | ಲ್ಕಿನ
ಕುಲೋತ್ತಮ ನಂಘ್ರಿಗೆರಗುತ | ರಣಕೆ ಬಂದನು ಸೇನೆಯೊಡನುರೆ
ಮುಳಿದು ಸೌಮಿತ್ರಿ || ೩೫ || ಬಂದು ಮುನಿವರ ನಾಶ್ರಮಕೆ ಭರ |
ದಿಂದೆ ಲಕ್ಷ್ಮಣನಲ್ಲಿ ರಣದೊಳು | ನೊಂದು ಮೂರ್ಛೆಯನಾಂತು ಬಿದ್ದಿಹ
ತಮ್ಮನನು ಕಂಡು || ಮುಂದೆ ಬಿಲ್ವಿಡಿವತಿ ಪರಾಕ್ರಮ | ದಿಂದೆ ನಿಂದಿಹ
ಶಿಶುಗಳಬ್ಬರ | ನಂದು ನೋಡುತ ಕಾಳಗಕೆ ನಡೆತಂದನುರೆಮುಳಿದು
|| ೩೬ || ಧುರದೊಳರ್ಭಕರಿರ್ವರುಂ ಬಂ | ದರಿಬಲವನೀಕ್ಷಿಸಿ ತಮಗೆ
ಮುನಿ | ವರನು ಪದೆದಿತ್ತಖಿಳ ಶಸ್ತ್ರಾಸ್ತ್ರಂಗಳೆಲ್ಲವನು || ವರಶರಾಸನ
ದಲ್ಲಿ ಸಂಧಿಸಿ | ನೆರೆಮುಳಿದು ವೈರಿಗಳ ಮೇಲ್ಮಳೆ | ಗರೆವುತಿರ್ದ್ದರು
ಲಕ್ಷ್ಮಣಂಗಿದಿರಾದ ನಾಕುಶನು || ೩೭ || ಪರಶುತೋಮರ ಶಕ್ತಿಗದೆ
ಮು | ದ್ಗರ ಭ್ರುಶುಂಡಿ ಪ್ರಾಸಭಲ್ಲಸು | ಪರಿಘಪಟ್ಟಿಸ ಭಿಂಡಿವಾಲಾದ್ಯಾ
ಯುಧಂಗಳನು || ಸುರಿಸಿ ಲಕ್ಷ್ಮಣನಲ್ಲಿ ಘಾತಿಸು | ತಿರಲಡಿಗಡಿಗೆ ಲ
ಕ್ಷ್ಯಮಾಡದೆ | ಸರಣಿಮಧ್ಯದೊಳೆಲ್ಲವನು ಖಂಡಿಸಿದನಾ ಕುಶನು
|| ೩೮ || ಕೊಂದನೈತಂದಾ ಕುದುರೆಗಳ | ಬಂದಗಜಗಳನೆಲ್ಲ ಸೀಳಿ
ದ | ನೊಂದುಳಿಯದಂತಖಿಳ ವೀರರನೆಲ್ಲ ಕೆಡಹಿದನು || ನಿಂದತೇರ್ಗಳ
ನುಚ್ಚುಮಾಡಿದ | ನೊಂದು ನಿಮಿಷದೆ ತನ್ನ ಬಾಣಗ | ಳಿಂದೆ ಕತ್ತರಿ
ಸಿದನು ರಿಪುಗಳ ಶರಗಳೆಲ್ಲವನು || ೩೯ || ಬಳಿಕ ಲಕ್ಷ್ಮಣ ನೈದು
ಬಾಣಂ | ಗಳನು ತೆಗೆದೆಸೆಯಲ್ಕೆ ಕುಶನಂ | ದಳುಕದತಿ ಕೋಪವನು
ತಾಳ್ದುರೆಗರ್ಜಿಸುತ ಕೂಡೆ || ತಳುವದೊಂದು ಸರಳನು ಕಾರ್ಮುಕ |

ದೊಳುರೆ ಸಂಧಿಸಿ ಬಿಡಲು ಘನರಥ । ಮಿಳಗೆ ಬೀಳುತ ಚೂರ್ಣವಾದುದು ರಾಘವಾನುಜನ ॥ ೪೦ ॥ ತರಳನ ಪರಾಕ್ರಮಕೆ ಲಕ್ಷ್ಮಣ । ನುರುತರದ ವಿಸ್ಮಯವನಾಂತತಿ । ಭರದೆ ಮತ್ತೊಂದು ಪೊಸತೇರನ ಡರ್ದುಕೋಪದಲಿ ॥ ಧರಣಿಜಾತೆಯ ಸುತನ ಸುಂದರ । ತರ ಕಿರೀಟ ಕವಚಗಳಂ ಕ । ತ್ತರಿಸಿದನು ಬಳಿಕೈದು ಬಾಣಗಳಿಂದೆ ಶೀಘ್ರದಲಿ ॥ ೪೧ ॥ ಪೊರೆಯುಗಿದ ಕಾಳೋರಗನ ವೋ । ಲ್ತರಳನತಿ ಕೋಪವನು ತಾಳುತ । ವರಧನಂಜಯ ಸೂಕ್ತದಿಂದನಲಾಸ್ತ್ರಮಂಪಡೆದು ॥ ಕರದ ಕಾರ್ಮುಕವಲ್ಲಿ ಸಂಧಿಸಿ । ಭರದೊಳೆಚ್ಚೊಡರಿಬಲ ಮುರಿದುದು । ಪುರಪರಂಪಣೆಗಣ್ದೆರೆದನೆಂಬಂತೆ ಧಗಧಗಿಸಿ ॥ ೪೨ ॥ ಸುಡುವ ತನ್ನ ಚತುರ್ಬಲವ ಕಂ । ಡೊಡನೆ ವರುಣಾಸ್ತ್ರವನು ಲಕ್ಷ್ಮಣ । ನಿಡುತನಿಲಿಸಲ್ಕಂಡು ವಾಯುವ್ಯಾಸ್ತ್ರವನು ಕೊಂಡು ॥ ಕಡುಗಲಿ ಕುಶಂ ಮತ್ತೆ ತಾನೆ । ಚ್ಚೊಡದು ಕುಂಶೈಲವನುರುಳಿಪಂ । ತಡಿಗಡಿಗೆ ಚತುರಂಗ ಬಲಮಂ ಕಡಿದು ಕೆಡಹಿದುದು ॥ ೪೩ ॥ ಮುಳಿದು ಲಕ್ಷ್ಮಣನಸ್ತ್ರಶಸ್ತ್ರಂ । ಗಳನು ತೆಗೆದೆಸೆಯುತಿರಲಾ ಕುಶ । ನಳುಕದೈತಹ ಕೂರ್ಗಣೆಗಳಂ ತೇರ್ಗುದುರೆಗಳನು ॥ ಕೆಲದಭಟರಂ ಸಾರಥಿಗಳಂ । ಪೊತೆರದ ಕಪಿಚಂಗಳಂ ತರಿ । ದಿಳೆಗುರುಳ್ಚಿದ ನಾ ಧ್ವಜಗಳಂ ಕೂಡೆ ಬೊಬ್ಬಿರಿದು ॥ ೪೪ ॥ ಕ್ರೂರ ಗದೆಯುಂ ಕೊಂಡು ಕದನಕೆ । ವೀರ ಲಕ್ಷ್ಮಣ ನೈತರುತಿರ । ಲ್ಧೀರನಹ ಸೀತಾಕುಮಾರಕ ನದನು ಶೀಘ್ರದಲಿ ॥ ಘೋರಶ.ಯಕದಿಂದೆ ಖಂಡಿಸಿ । ಧಾರಿಣಿಗೆ ಕೆಡಹಿದನು ಘನಗಂ । ಭೀರರವದಿಂ ಬೊಬ್ಬಿಡುತರಣರಂಗಮಧ್ಯದಲಿ ॥ ೪೫ ॥ ಮತ್ತೆ ಬತ್ತೀಸಾಯುಧಗಳಂ । ದೊತ್ತರಿಸಿ ಸೌಮಿತ್ರಿಬಂದೊಡೆ । ಕತ್ತರಿಸಿ ನಿಶಿತಾಸ್ತ್ರದಿಂದವನೆಲ್ಲಮಂ ಕುಶನು ॥ ಬತ್ತಳಿಕೆಯಿಂದೈದು ಶರಗಳ । ನೆತ್ತಿಕಿವಿವರೆಗೆಳೆದು ಬಿಟ್ಟೊಡೆ । ತತ್ತರಿಸಿ ಸೌಮಿತ್ರಿ ಬಿದ್ದನು ನೆಲಕೆ ಮೂರ್ಛೆಯಲಿ ॥ ೪೬ ॥ ತನಗೆ ಮುನಿವಾಲ್ಮೀಕಿ ಕೊಟ್ಟಾ । ವಿನುತ ಶಸ್ತ್ರನಿಪಾತದಿಂದಂ । ದನುವರದೆ ಸೌಮಿತ್ರಿ ಮೂರ್ಛೆಯನಾಂತು ತಾನಿರಲು ॥ ಮನುಜಪಾಲಕರೆಲ್ಲರಂ ಮೇ । ದಿನಿಗೆ ಬೀಳಿಸಿ ಕುಶನು ತನ್ನನು । ಜನೆಡೆ ಗಬ್ಬರಿಸುತ್ತ ಬಂದನು ಬಹುವಿನೋದದಲಿ ॥ ೪೭ ॥ ವಿವಿಧ ಶಸ್ತ್ರಾಸ್ತ್ರಂಗಳನು ಕೊಂ । ಡವನಿಜಾತೆಯ ಸುತರು ತುರಗಮಿ । ರುವವನಕೆನಡೆ ತಂದರು ಜಯುವನೈದಿ ಒವರದಲಿ ॥ ತವಕದಿಂದಿರದೋಡಿ ಪೋದರು । ಒವರದೊಳುಳಿದ ಭಟರು ಪರಾ । ಭವನ ಒಳಿ

ಗೈದಿದರು ದೂತರತಿ ಜವದಿಂದಿರದೆ ॥ ೪೮ ॥ ಆಳದ ವೀರರ ಚಾಪಬಾ ಣಂ । ಗಳ ನವುಲ ರತ್ನಾಭರಣ ಕುಂ । ಡಲ ಕಿರೀಟಂಗಳನು ಶ್ರೀಘ್ರ ದೊಳ್ಕೊಂತು ಕುಶಲವರು ॥ ತೆಗೆದಸುಂತಸದಿಂದೆ ಕುದುರೆಯು । ಬಳಿಗೆ ಬಂದರು ಘೋರಸಂಗರ । ದೊಳು ಜಯುವನಾಂತಾ ಮುನೀಂದ್ರನ ಪದ ವಜಾನಿಸುತ ... ... ... ॥ ೪೯ ॥

ಇಂತು ಮೂವತ್ತೆಂಟನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೨೧೪೮.

***

## ಮೂವತ್ತೊಂಬತ್ತನೆಯ ಅಧ್ಯಾಯ.

ಸೂಚನೆ ॥ ಕಾದಿನಿಜಸುತರೊಡನೆ ಮೂರ್ಛಿತ ।
ನಾದ ರಾಮನ ರಣದೊಳೆಬ್ಬಿಸು ।
ತಾದರಿಸಿ ಜಾನಕಿಯ ನಿತ್ತೊಪ್ಪಿಸಿದ ನಾಮುನಿಪ ॥

ವಿನುತ ಸರಯೂನದಿಯ ತೀರದೊ । ಳಿನಕುಲೋತ್ತಮ ರಾಘ ವನಖಿಳ । ಮುನಿಗಳಾಜ್ಞೆಯನಾಂತು ಮಖದೀಕ್ಷೆಯನು ಕೈಕೊಂ ಡು ॥ ಘನಮನೋವ್ಯಥೆಯಿಂದೆ ಕೊರಗಿ ಕ । ದನದೊಳಾ ಶತ್ರುಘ್ನ ನೇ ಗೈ । ದನೊ ಸುಮಿತ್ರಾಸುತನದೆಂತಿಹ ನೆನುತ ಚಿಂತಿಸಿದ ॥ ೧ ॥ ಭರತನಂ ಕರೆದೆಲೆ ಸಹೋದರ । ತರಳರಂ ಪಿಡಿವಪನೊ ವಧಿಪನೊ । ರಣದೊಳಗೆ ಸೌಮಿತ್ರಿ ಸಲೆಗೆದ್ದಪನೊ ಸೋಲ್ವಪನೊ ॥ ತುರಗಮಂ ತಂದಪನೊ ತಾರದೆ । ಬರುವನೊ ಮರವೆಗೊಂಡಿಹನೊ ನಾ । ನರಿಯೆ ಹಾ ಯೆಂದೆನುತ ಬೆಸಗೊಂಡನು ರಘೂದ್ವಹನು ॥ ೨ ॥ ಕನಸಿನೊಳು ಸೌಮಿತ್ರಿ ತಾನಾ । ವನಿಗು ಸೋಲ್ದವನಲ್ಲ ಶಿಶುಗಳ । ವಿನುತ ಭುಜ ಬಲವೆಂತೊ ಮೂರ್ಛೆಗೊಳಿಸುತವರ್ಗಳನು ॥ ತನಗೆ ತಂದೊಪ್ಪಿಸು ವತೆರದಿಂ । ದನುಜನ ಸವಿಷಾವಕೆ ಚರರ ನ । ಟ್ಟೆನಲವಂ ಕಳುಹಲವ ರರಿದೈತಂದು ತಿಳುಹಿದರು ॥ ೩ ॥ ದೇವಬಿಡು ದೀಕ್ಷೆಯನು ಮನದೊ ಳು । ನೋವನಾನದೆ ಧುರಕೆ ನೀಂ ನಡೆ । ಜೀವಸಂಶಯುವಾಗಿಹುದು ಶತ್ರುಘ್ನ ಲಕ್ಷ್ಮಣರ ॥ ಆ ವನದ ಬಾಲಕರು ನಿನ್ನಂ । ತೀ ವಸುಧೆಯೊ

ಳು ರಂಜಿಪರು ರಣ । ಕೋವಿದರಳಿದುದೆಮ್ಮ ಪಡೆಯುಪರಿಂದೆನು ತೋರೆ
ದರು ॥೪॥ ಚರರ ಮಾತನು ಕೇಳ್ದೊಡನೆಮ್ಮೈ । ಮರೆದು ಭೂಮಿಗೆ ಬಿದ್ದ
ನಾ ರಘು । ವರನು ಘನಶೈತ್ಯೋಪಚಾರವ ನೆಸಗಿ ಶೀಘ್ರದಲಿ ॥ ಭರತನಾ
ಕ್ಷಣದೊಳುಪಚರಿಸಲು । ಭರದೊಳೆದ್ದು ಕುಳಿತುಕೊಳುತ ಸೋದರರ
ಸುಗುಣಂಗಳನು ನೆನೆದಳುತಿದ್ದ ನಡಿಗಡಿಗೆ ॥೫॥ ಹಳುವದೊಳ್ತನಗಾಗಿ
ಲಕ್ಷ್ಮಣ । ನಳಿದನೇ ಹಾ ತಮ್ಮ ಹಾ ರವಿ । ಕುಲತಿಲಕ ಹಾ ಸುಗುಣ
ಗಂಭೀರರಿಪುಸಂಹಾರ॥ ಎಳೆಯರಿಂದೆಂತೊರಗಿದೆ ಮಹೀ । ತಳದೊಳೆಲೆ ಶ
ತ್ರುಘ್ನನೀ ನೆಂ । ದಳುತ ಬಿಸುಸುಯ್ಯುತ್ತ ಮರುಗಿದ ನಾ ರಘೂತ್ತಮ
ನು ॥ ೬ ॥ ಇಂತು ಸೋದರರಾ ಸುಗುಣಗಳ । ನಂತವಿಲ್ಲದೆ ರಾಘ
ವೇಂದ್ರನು । ಚಿಂತಿಸುತ್ತಿರೆ ಮತ್ತೆ ಚರರೈತಂದು ಶೀಘ್ರದಲಿ ॥ ಎಂತು
ಸುಮ್ಮನೆ ಕುಳಿತೆ ರಣದೊಳು । ಸಂತಪಿಸುತಿಹ ರನುಜರಿಬ್ಬರ ।
ದೆಂತಿಹುದೊ ಪಡೆದೀಕ್ಷೆಯಂ ಬಿಡೆನುತ್ತ ಮರುಗಿದರು ॥ ೭ ॥ ಮೊರೆ
ವ ಚರರಂ ಗರ್ಜಿಸುತ ರಘು । ವರನ ಪದಪಂಕಜಕೆರಗಿ ನೀಂ । ಬರಿ
ದೆ ದುಃಖಿಸಬೇಡ ಬಂದಿಹ ರಿವರು ಭಯದಿಂದ ॥ ಮರವೆಗೊಂಡಿಹ ರೆಲ್ಲ
ದವರಿಗೆ । ಮರಣ ಮೆತ್ತಣದಾ ಪಸುಳೆಯರ । ಮರುಕವಂ ಬಿಡಿಸೈತಹೆನೆ
ನುತ ಪೇಳ್ದನಾ ಭರತ ॥ ೮ ॥ ಬಳಿಕ ಜಾಂಬವ ಹನುಮ ಕೇಸ
ರಿ । ನಳಕುಮುದಶರಗುಲ್ಮ ಗಜಶತ । ಬಲಿಸುಷೇಣ ಗವಾಕ್ಷಗವ
ಯಾಂಗದರು ಮೊದಲಹ ॥ ಬಲಿಮುಖರಪಡೆಯೆಲ್ಲವಂ ಕೊ । ಟ್ಟಳಿದ
ಸೇನಾಸಹಿತ ಭರತನ । ಕಳುಹಿಕೊಟ್ಟನು ಬವರ ಕಾಶೀರ್ವದಿಸಿ ರಾಘ
ವನು ॥ ೯ ॥ ಜವದೊಳಾ ರಘುವರನಡಿಗೆರಗಿ । ವಿವಿಧ ಚಾಪಶರಂಗ
ಳನು ತಾ । ತವಕದೊಳಗಾಂತಮರ ನದಿಯಂ ದಾಂಟುತ ಭರತನು ॥
ಪವನಸಂಭವನಂ ಕರೆದು ನೀಂ । ಬವರದಾವೃತ್ತಾಂತಮ ನರಿತು ।
ತವಕದೊಳನಗೆ ಪೇಳನುತ ಕಳುಹಿಸಿದನಲ್ಲಿಂದ ॥ ೧೦ ॥ ಕಲಿಹನು
ಮನಲ್ಲಿಂದೆ ಧಿಂಕಿ । ಟ್ಟಳಿದಖಿಳ ಸೈನ್ಯವನು ಕಂಡಿನ । ಕುಲಲಲಾಮಂ
ನಿನ್ನ ಸುತೆಯಂ ಬಿಟ್ಟನೆಂದೆನುತ ॥ ಮುಳಿಯದಿರು ತಾಯ್ಮನ್ನಿಸೆನು
ತಂ । ತಿಳಿದವನಿಯನು ಬೇಡುವಂದದೆ । ಮಲಗಿದಾ ಶತ್ರುಘ್ನ ಲಕ್ಷ್ಮ
ಣರನ್ನು ನೋಡಿದನು ॥ ೧೧ ॥ ವೈಮರೆದು ಚೇತರಿಸಿಕೊಳ್ಳದೆ । ಭೂ
ಮಿತಳದೊಳು ಮಲಗಿದಾ ರಘು । ರಾಮನ ಸಹೋದರರನಾ ಪವಮಾ
ನಸಂಭವನು ॥ ಪ್ರೇಮದಿಂ ಹೆಗಲೊಳಗಿರಿಸಿಕೊಂ । ಡಾ ಮರುತ್ಪಥ
ದಲ್ಲಿ ಬಂದನು । ತಾಮಸವನಾಗಿಸದೆ ಭರತನಬಳಿಗೆ ಶೀಘ್ರದಲಿ ॥ ೧೨ ॥

ಪೆರವೆರಡೂಥದೊಳ್ವೀರರಂ ತಂ | ದಿರಿಸಿ ಹಯವಮಂ ಕಟ್ಟಿಕೊಂಡುರು | ತರದಶರಚಾಪಂಗಳಂ ಪಿಡಿದುಬ್ಬಿ ಬೊಬ್ಬಿರಿದು || ಧುರಕೆ ನಿಂದಾ ಕು ಶಲವರಕೇ | ಳ್ದುರೆಮುಳಿದು ನಡೆತಂದನಾಗಳೆ | ಭರತನಖಿಳ ಚತು ರ್ಬಲಸಹಿತ ಯುದ್ಧಮೋದಿನಿಗೆ || ೧೩ || ಕೋಪದಿಂದುರೆ ಗರ್ಜಿಸಿ ಕುಶಂ | ಚಾಪಟಂಕಾರವ ನೆಸಗುತಿರೆ | ಭೂಪರೋಧಿಗಳೊಡವೆರೆದು ವಧ್ರಿಗಳುನಡುಗಿದವು || ತಾಪದಿಂದಹಿಕಂಪಿಸಿದನು ಏ | ರೂಪವಾದನು ತರಣಿಬೇಗನೆ | ದೀಪಮಿಲ್ಲದ ಮನೆಯ ತೆರದಂತಾಯ್ತು ಸಮರಾಂಗ || ೧೪ || ಇಳೆಗೆ ಬಿದ್ದವು ಕರಿಗಳಟ್ಟಗ | ಳಳಿವ ಜೋದರ ತಲೆಗಳಾಕ ಲಿ | ಗಳ ಮಹಾಸ್ತ್ರಂಗಳ್ಕಪಿವರರ ಘನಶರೀರಗಳು || ಚಲಿಸ ಕುದು ರೆಗಳ ವಯವಂ ಗ | ಳ್ಕಳದ ರಾಹುತ ರಾನನಂಗಳು | ತ್ಯಳುವಪ ಕುಶಂ ಕೊಲ್ಲರೆವುತಿರೆ ಘೋರಯುದ್ಧದೊಳು || ೧೫ || ಸೇನೆಮಡಿ ಯಲು ನಿಮಿಷದೊಳು ಪವ | ಮಾನಜಂ ನಡೆತಂದು ಶಿಶುಗ | ಳ್ಖಿನು ಕುಲಮಣಿ ರಾಮನಾಕೃತಿಯಂತೆ ಕಾಣುವರು || ನೀನು ನೋಡೆಂದೆನುತ ತೋರ | ಲ್ಸಾನುರಾಗದೊಳಂದಿರದೆ ರಾ | ಮಾನು ಜಂನುಡಿಸಿದನು ಕುಶ ನಂಮೊಗವನೀಕ್ಷಿಸುತ || ೧೬ || ವತ್ಸನೀನಾ ರ್ಗನಗದೇತಕ | ಮತ್ಸ ರವು ನಮ್ಮೊಡನೆ ರಣದೊಳು | ಮತ್ಸಹೋದರರನ್ನು ನೀನೇತಕ್ಕೆ ಘಾತಿ ಸಿದೆ || ಸತ್ಸಹಾಯವ ನೆಸಗು ವಿವನಾ | ದುತ್ಸವದೆ ಪೇಳ್ಕಿನ್ನ ತೆರವ ನು | ಮತ್ಸವಿಪಾಪದೊಳೆನುತ ಕೇಳ್ದನು ಭರತನೊಲಿಸುತ್ತ || ೧೭ || ತಂದೆತಾಯಿಗಳಾರು ನಿಮ್ಮಯ | ಮಂದಿರವುದಾವುದಲೆ ಬಾಲಕ | ಕೊಂದೆ ನಮ್ಮಯ ಸಕಲ ಸೈನ್ಯವ ಬರಿದೆ ರಣದೊಳಗೆ || ಮುಂದೆ ಮತ್ಸರಿಸದೆ ತುರಂಗವ | ತಂದು ನಮಗಿಂದೊಪ್ಪಿಸಿ ಕುಶಲ | ದಿಂದಿಪು ದೆನುತ ಭರತನೆಂದನು ಕುಶನ ನೀಕ್ಷಿಸುತ || ೧೮ || ಕಟ್ಟಿದಶ್ವವ ಬಿ ಡೆನು ನನಗೊಡ | ಹುಟ್ಟಿದ ನಿವಂ ಕಲಿಸಿಕೊಟ್ಟನು | ನೆಟ್ಟನೆ ಸಕಲ ವಿದ್ಯೆಯನು ವಾಲ್ಮೀಕಿಮುನಿಪೊರೆದು || ಥಟ್ಟನೆ ಮರವೆಗೊಳಿಸಿ ನಿನ್ನ ನು | ಮುಟ್ಟಿ ದುತ್ಸವದಿಂದೆ ಪೋಪೆನು | ಹುಟ್ಟಿದಮನೆಗೆನುತ್ತ ಭರತ ನನೊಡನೆ ಘಾತಿಸಿದ || ೧೯ || ಭರತನಂ ಗಣಿಸದಿಸುತಿರೆ ತಾಂ | ಕರಿತು ರಗರಥ ಋಕ್ಷವಾನರ | ವರರಸಂಚಯ ಮುತ್ತಲಾ ಕುಶನಿರದೆ ಕೋ ಪಿಸುತ || ಭರದೆ ಲವನಂ ಕಳುಹಿಕೊಟ್ಟು ಕು | ದುರೆಯಬಳಿಗಾ ಶ ತ್ರುಜನಗಳ | ಶಿರರಳನು ತಾ ನಿಕ್ಕಡಿಗಡಿದ ನಾಕ್ಷಣಮೊಳಚ್ಚು || ೨೦ || ಹತ್ತು ಭರತಂಗೆಂಟು ನಳನಿಗೆ | ಮತ್ತೆ ಮೂವತ್ತನಿಲಜಗೆ

ನಾ | ಲ್ವತ್ತು ಕುಮುವಗೆ ಗವಯಗಜನೀಲರ್ಗೆ ನೂರ್ನೂರು || ಇತ್ತವಾ
ಲಿಸುತಂಗೆ ಕುಶನೆಂ ! ಬತ್ತು ಶರಗಳ ನೆಚ್ಚನಿಬರಂ | ತತ್ತರಂಗೊಳಿ
ಸುತ್ತ ಕೆಡಹಿದ ಸಿಳಿಗೆ ಬೊಬ್ಬಿರಿದು || ೨೧ || ಎಲ್ಲಿ ಕುಶನಂಬುಗಳು
ತಗುಲುವು | ವಲ್ಲಿ ಮೂರ್ಛೆಯು ಮರಣವಲ್ಲದೆ | ನಿಲ್ಲುವ ಕಲಿಗಳಿಲ್ಲ
ಬಲ್ಲಿವರೆನಿಪ ವಾನರರು || ತಲ್ಲಣಿಸುತಲೆ ಬಿದ್ದರವನಿಯೊ | ಳೆಲ್ಲೆಡೆಯೊ
ಳಂದಾನೆ ಕುಮರಿಗ | ಳೆಲ್ಲವನು ಕೊಲ್ಲುತ್ತಲಿದ್ದವು ಶರಗಳತಿಜವದೆ
|| ೨೨ || ಕುಶನಬಾಣಕೆ ಸಿಕ್ಕಿ ದವಸೀ | ವಸುಧೆಯೊಳು ತಾಂ ಮೂ
ರ್ಛೆಗೊಳ್ಳುವು | ದಸವಳವೆ ಪೇಳೆಂಬತೆರದಿಂ ಭರತ ಮೈಮರೆದು ||
ಕುಸಿದುಬಿದ್ದನು ಮೇದಿನಿಯೊಳಾ ! ವ್ಯಸನಸಂಭವನೊಂದು ಗಿರಿಯಂ |
ಕುಶನವೇಲ್ಕೊಡಹಲ್ಕದಂ ಖಂಡಿಸಿದ ಸಾಕ್ಷಣದಿ || ೨೩ || ಕಡೆಯುವಾ
ತೇಸಖಿಳ ಬಲವಂ | ಕಡುಗಲಿ ಭರತನಂ ಧರಣಿಯೊ | ಳ್ಕಡಹಿ ಹ
ಯುವಿದ್ದೆಡೆಗೆ ಬಂದಿರೆ ಕುಶನನುಜನೊಡನೆ || ನುಡಿದರೀತೆರನಂ ರಘೂ
ದ್ವಹ | ನಡಿಗೆರಗಿ ಸೇವಕರು ವಿಸ್ಮಯ | ವಡೆದು ಮೂರ್ಛೆಯುನಾಂತು
ಬಿದ್ದನು ರಾಮನವನಿಳಿಯೊಳು || ೨೪ || ನೊಂದು ರೋದಿಸಿ ರಾಘವನು
ತ | ಮ್ಮಂದಿರ ಗುಣಂಗಳನು ನೆನೆನೆನೆ | ದಂದು ಮೈಮರೆದೆದ್ದು ಚೇತರಿ
ಸಿಕೊಳುತಡಿಗಡಿಗೆ || ಮುಂದೆನಿಂದ ವಿಭೀಷಣ ತರಣಿ | ನಂದನರೊಡನೆ
ಕಾಳಗಕೆ ನಡೆ | ತಂದನು ರಥಾರೂಢನಾಗಿಯೆ ಕುಶಲವರಬಳಿಗೆ
|| ೨೫ || ಬಂದು ರಣದೊಳು ಮೈಮರೆದ ತ | ಮ್ಮಂದಿರಂ ಮಡಿದಾ
ಸಕಲ ಬಲ | ವೃಂದವಂ ಹಯುವಂ ಪಿಡಿದುಕೊಂಡಿದಿರಿಸುತ ರಣಕೆ ||
ನಿಂದಣುಗರಂ ಕಾಣುತಾ ರಘು | ನಂದನಂ ಬೆರಗಾಗಿ ತಾನಿಂ | ತೆಂದು
ಬೆಸಗೊಂಡನತಿ ಗಂಭೀರಧ್ವನಿಯೊಳರದೆ || ೨೬ || ಎಲೆ ಶಿಶುಗಳಿರ
ನಿಮ್ಮ ಜನ್ಮ | ಸ್ಥಳ ಮದಾವುದು ನಿಮ್ಮ ನಾಮನು | ಸಹಿದಂ ತಾ
ಯಾರು ನಿಮಗೀ ಚಾಪವಿದ್ಯೆಯನು || ಕಲಿಸಿದವರಾರ್ನಿಮಗೆ ನಮ್ಮೊ
ಳು | ಛಲಮಿದೇತಕೆ ಸೈನ್ಯವ ನಿರಿವ | ಬಲಮಿದೆಂತಾದುದೆನುತಾ ರಘು
ವರನು ಕೇಳಿದನು || ೨೭ || ಅರಸಚಿತ್ತೈಸಹುದು ನೀನೀ | ಧುರ
ದೊಳಿಂದು ಶರವನು ತಾಳುತ | ತುರಗವಂ ಬಿಡಿಸಿಕೊಳಲೊಲ್ಲದೆ ಮ
ರುಳು ಮಾತೇಕೆ || ಬರಿದೆ ನಮ್ಮವಿಚಾರವನು ಕೇ | ಳ್ದರಿದೊಡೆ ಜ
ಗಂ ಮೆಚ್ಚುವುದೆ ಸಂ | ಗರದೊಳಿಂದೆಚ್ಚಾಡಿ ನೋಡೆನುತಂದನಾ
ಕುಶನು || ೨೮ || ಎಳೆಯರಾಗಿಹ ನಿಮ್ಮೊಳೆಂತು ಜ || ಗಳವನಾಡು
ವೆ ಮೈಮರೆದು ರಣ | ದೊಳೊರಗಿದ ಸೋದರರ ನೀಕ್ಷಿಸಿ ತಾಳ್ದು

ಕೋಪವನು || ಬಲಿದ ಧನುವಂ ತೊಡುವೆನೆಂದೊಡೆ | ಸಲೆಮನವೊ ಡಂಬಡದೆನಗೆ ನೀಂ | ತಿಳುಹು ನಿನ್ನಯ ಪರಿಯನೆನಲಾ ಕುಶನು ಪೇಳಿದನು || ೨೯ || ಈ ತಪೋವನದಲ್ಲಿ ಹೆತ್ತಳು | ಸೀತೆ ನಮ್ಮಿಬ್ಬರನ ವಳಯಿಂ | ದೊತು ಜಾತೋಪ ನಯನಾದಿಕ ಕರ್ಮಗಳನೆಸಗಿ || ನೀತಿಗಳ ನರುಹಿ ನಿಗಮಾಗಮ | ಜಾತಮಂ ನಮಗೊಲಿದು ಪೇಳ್ದ್ದ ಮ | ಹಾತಿಬಲರೆನಿಸಿದನು ಮುನಿವಾಲ್ಮೀಕಿ ಲಾಲಿಸುತ || ೩೦ || ವರಧ ನುರ್ವೇದವನು ನಮ್ಮಿ | ಬ್ಬರಿಗೆ ಮೊದಲಿಂದರುಹಿ ಪಾವನ | ತರಮುನಿಪ ಸಕಲ ಶ್ರುತಿಸ್ಮೃತಿಗಳನು ಬೋಧಿಸುತ || ಪರಮಸಂಮುದದಿಂದೆ ತಿಳು ಹಿದ | ನುರುತರದ ರಾಮಾಯಣವ ನಾ | ವರತಪೋನಿಧಿ ಯೆನಿಪ ವಾ ಲ್ಮೀಕಿ ಮುನಿಮೊದಲಿಂದ ||೩೧|| ವಿನುತ ರಾಮಾಯಣವನು ನಾವನು | ದಿನವು ಭಕ್ತಿಯೊಳೋದುವುದರಿಂ | ಜನನುತ ನಿರಾಲಸ್ಯ ನಿಶ್ಚಲಮತಿ ಸುಖಾತಿಶಯ || ಘನಸುಪುಷ್ಟ್ಯಕ್ಷೇಮ ಸಂಮುದ | ಮಿನಿತುನಿಮ್ಮಾಸೈ ನ್ಯವೆಲ್ಲವ | ರಣದೆ ಸೋಲಿಪ ಶಕ್ತಿಯುಂಟಾಯ್ತೆನುತ ಕುಶನೆಂದ || ೩೨ || ಆ ನುಡಿಯ ನಾಲಿಸುತ ಘನಸುಂ | ಮಾನವನುತಾಳ್ದರ್ಭಕರ ನನು | ಮಾನಮಿಲ್ಲದೆ ತನ್ನ ಸುತರೆಂದರಿದು ರಾಘವನು || ಜಾನಕಿಯ ನಾಮವನು ಕೇಳ್ದೊಡ | ನಾನೆಲದೆ ಮೈಮರೆದು ಬೇಗನೆ | ತಾನು ಯೆಚ್ಚರಗೊಂಡು ಭಾಸ್ಕರಸುತನಿಗಿಂತೆಂದ || ೩೩ || ತಪನಸುತಕೇಳ್ಕೆ ಕುಮಾರರ | ವಿಪುಲವಚನಂಗಳನು ವಿದ್ಯಾ | ನಿಪುಣರಿವರಾ ರಾಮಪುರು ಷಂ ಗುದಿಸಿಪರೊ ಕಾಣೆ || ವಿಪಿನಚಾರಿಗಳನು ಕರೆದು ನೀ | ನುಪಚ ರಿಸಿ ಕೇಳೆನಲು ನಗುತಾ | ಕಪಿಪತಿ ರಘೋತ್ತಮನಿಗೆಂದನು ಮತ್ತೆ ತಾನಿಂತು || ೩೪ || ದೇವಚಿತ್ತವಿ ಸೀ ಕುಮಾರರು | ಭಾವಿಸಲು ತವತ ನುಜರಾಗಿಪ | ರಾ ವಿಬುಧವಂ ದಿತನದೆಸೆಯಿಂದ ಎದಿಸಿರುವರಿವರು | ಪಾವನತರದ ಭಾನುಕುಲಜರು | ತೀವಿದತಿ ಬಲಯುತರು ದೇವರ | ದೇವ ನಿನ್ನಯ ರೂಪಿನಂದದೆ ಕಂಗೊಳಪರಿವರು || ೩೫ || ನಿನ್ನ ಸುತ ರಲ್ಲದೊಡೆ ರಣದೊಳು | ನಿನ್ನಖಿಳ ಬಲಮಂ ಗೆಲುವ ಸಂ | ಪನ್ನ ಪೌರುಷವೆಂತು ನೆಲೆಗೊಂಡಿಪುದು ಶಿಶುಗಳೊಳು || ಇನ್ನು ಸಂಶಯ ಮೇಕೆನಿನಗೆಂ | ದೆನ್ನುತಂ ನುಡಿವನಿತರೊಳು ರಣ | ಕುನ್ನತಪರಾಕ್ರ ಮದೆ ಬಂದನು ನೀಲನುರೆಮುಳಿದು || ೩೬ || ತರಣಿಸಂಭವ ರಘುಪತಿ ಗಳ | ವ೯ರು ಮೊಲಿದು ಮಾತಾಡುತಿರುವ ನಿ | ತರೊಳು ಹಯಮಂ ಬಿಡಿಸಿಕೊಳಬೇಕೆನುತ ಶೀಘ್ರದಲಿ || ಮುರದಬಳಿಗಾ ನೀಲನೈತರೆ | ಶರಗ

ಳಂ ಕುಶನೆಚ್ಚು ಭೂತಳ । ಕುರುಳಿಸಿದ ಸಾತನನ ವಸಸೇನೆಸಹಿತ್ತಬ್ಬ
ರಿಸಿ ॥ ೩೭ ॥ ರವಿಯು ನಾರಾಧಿಸಿ ಕುಶನ ಪೋ । ಘವೆಸಿಸಿದ ಬಾಣಂಗ
ಳನು ಬಹು । ಜವದೊಳಾಂತು ಧನುವ್ರೊಳು ಸಂಧಿಸಿ ಸೆಳದು ಕಿವಿವರೆ
ಗೆ ॥ ಲವನ ನೀಕ್ಷಿಸುತೆಚ್ಚು ಕೆಡಹಿದ । ನವನಿಯೊಳು ರವಿಸುತ ವಿಭೀ
ಷಣ । ಗವಯುವೊದಲಾದಖಿಳ ವೀರರ ನೊಂದು ನಿಮಿಷದಲಿ ॥ ೩೮ ॥
ಅಳಿದ ವಾನರ ಋಕ್ಷರಾಕ್ಷಸ । ವಲಿಮುಖರು ಮೊದಲಾದ ಸೈನ್ಯವ ।
ತಳುವದೀಕ್ಷಿಸಿ ಯುದ್ಧರಂಗದೊಳಾ ರಘೂತ್ತಮನು ॥ ಮುಳಿದು ಸರಳಂ
ಪೂಡಿ ಕಿವಿವರೆ । ಗೆಳೆದು ಬಿಟ್ಟನೆಳೆಯರ ಮೇಲೀ । ನೆಲದೊಳಾ ಕ್ಷತ್ರಿ
ಯರ ಮನವಾಸಿಗಳ ದೆಂತೆನಲು ॥ ೩೯ ॥ ಬಿಚ್ಚೆವೋಗಲ ರಾಮಬಾಣ
ವೆ । ನುಚ್ಚುನೂರಾಗುವ್ರೊಲು ಕುಶಕಡಿ । ದೆಚ್ಚೊಡಾ ರಘುವರನು ಕ
ಡುಮುಳಿದಾ ಕುಶಲವರನು ॥ ಎಚ್ಚೊಡವುಗಳ ನಣುಗರೆಡೆಯೊಳು ।
ಕೊಚ್ಚಿ ರಘುವರನಂ ಬಳಲಿಸಿದ । ರಚ್ಚರಿಯ ಸಂಗ್ರಾಮ ನಡೆದುದು
ತಂದೆಮಕ್ಕಳಿಗೆ ॥ ೪೦ ॥ ಚಂಡರಾವಣ ಕುಂಭಕರ್ಣರ । ಮಂಡೆಗಳ
ನಿರಿದಂಬುಗಳು ರಣ । ಮಂಡಲದೆ ಸಲೆಮುರಿದು ಬಿದ್ದುವು ಕುಶನೆಸುಗೆ
ಯಿಂದ ॥ ಕಂಡುರಾಘವನಾ ಕುಶನ ಕೋ । ದಂಡದಿಂದೈತಪ್ಪ ಘನ
ಶರ । ಕಾಂಡವನು ತರಹರಿಸಲಾರದೆ ಸುಮ್ಮನಿರುತಿದ್ದ ॥ ೪೧ ॥
ಕಕ್ಕಸದ ಕುಶನಂಬುಗಳು ಸಲೆ । ಪೊಕ್ಕವು ಶರೀರದೊಳು ಮ
ಕ್ಕಳೊ । ಳಕ್ಕರುಂಟೆಲ್ಲೆಂಬುದಂ ಸಲೆನೋಳ್ಪವೆಂಬಂತೆ ॥ ಸೊಕ್ಕಿ
ವ್ಮೈಮರೆದಾ ರಘುವರನು । ಗಕ್ಕನೆ ಮಹೀತಳಕೆ ಬಿದ್ದನು । ವುಕ್ಕಿ
ನ ಕೊಡಲಿಯಿಂದೆ ಕಡಿದಾ ಮರವು ಬೀಳ್ವಂತೆ ॥ ೪೨ ॥ ಬಳಿಕ
ರಾಘವನೆಡೆಗೆ ಬಂದು ವ । ಸುಳೆಗಳಿಬ್ಬರು ಮನುಕುಲೇಂದ್ರನ ।
ಸುಲಲಿತಾಕಾರವನು ಮನದಣಿವಂತೆ ನೆರೆನೋಡಿ । ಹೊಳೆವ ಮ
ಣಿಕುಂಡಲ ಕಿರೀಟಂ । ಗಳನು ಸಲೆಕಂಗೊಳಿಸು ವೇಕಾ । ವಳಿ
ಯು ಸರಗಳನಾಂತು ತಾವೈತಂದರಲ್ಲಿಂದ ॥ ೪೩ ॥ ಭರದೆ ಲಕ್ಷ್ಮಣ
ಭರತ ಶತ್ರು ! ಘ್ನರ ವಿಭೂಷಣಗಳನು ಕೊಂಡಾ । ಧುರದೊಳಗಳಿಯ
ದೆಚ್ಚರಾಗಿಹ ವೀರರಂ ಪಿಡಿದು ॥ ತರುವೆನೆಂದು ಕುಶಂಗರುಹಿ ಲವ । ನಿ
ರದೊಡನೆ ಲಕ್ಷ್ಮಣನ ತೇರನ । ಡರಿ ಬರುತಿರಲ್ಜಾಂಬವನಿಗಾ ಹನುಮ
ನಿಂತೆಂದ ॥ ೪೪ ॥ ಕೇಳಯ್ಯೆ ಜಾಂಬವರೆ ರಘುಭೂ । ಪಾಲಕನುಮೊದ
ಲಹ ಕಲಿಗಳಂ । ಸಾಲುಸಾಲಾಗಿಯೆ ಕೆಡಹಿ ರಣರಂಗದೊಳು ಬಳಿಕ ॥
ಕಾಲನ ಕರಾಗನುಳಿವರನೀ । ಬಾಲಕನೆಳೆದುಕೊಂಡು ಪೋಪನು । ಕೇಳು

ನೋಡದೆ ಜಾನಕಿಯುಬಳಿಗಿಂದು ಶೀಘ್ರದಲಿ ‖ ೪೫ ‖ ದೇವಿಯುಬಳಿಗೆ ಕೊಂಡುಪೋಗಲಿ। ನಾವು ಸುಮ್ಮನಿರುತಿಹುದುತ್ತಮ। ಕಾವಳವ್ಮನು ಸೀತೆ ತನ್ನಯ ಚರರಿವರೆನುತ್ತ ‖ ದೇವಿ ರಕ್ಷಿಸ ಲುಳಿಯಲೆಮ್ಮನು। ಜೀವಿಸುವರಿಂದೆಲ್ಲ ರೆಂದೆನು। ತಾ ವಿಕಟಕಪಿ ನುಡಿವನಿತರೊಳು ಲವನು ನಡೆತಂದ ‖ ೪೬ ‖ ಕೆಡೆದಭಟರಂ ನೋಡಿ ರಣದೊಳು। ವಿಡಂಕಿ ಮಾತಾಡುವಿವರಂ ಕಂ। ಡೊಡನೆ ಪಿಡಿತಂದಗ್ಗದ ಕಪಿಗಳಿಬ್ಬರಿವರೆನುತ ‖ ನುಡಿದು ಲವನಣ್ಣನಿಗೆ ತೋರ। ಲ್ಕಿಡಿವ ಸಂತಸದಿಂದ ಮನ್ನಿಸಿ। ಪಡೆದ ಮಾತೆಯುಬಳಿಗೆ ಬಂದರು ವಾನರರಸಹಿತ ‖ ೪೭ ‖ ತನಯರೇನಾಗಿಹರೊ ಹಾ ಯೆಂ। ದೆನುತ ಚಿಂತಿಸುತಿದ್ದ ತಮ್ಮ ಜ। ನನಿಗೆರಗಿ ರಾಮಾದಿಗಳ ಭೂಷಣಗಳನು ಕೊಟ್ಟು ‖ ಘನವುನೋವ್ಯಥೆಯಿಂದೆ ಬಳಲಿದ ‖ ಹನುಮಜಾಂಬವರ ನಿದಿರೊಳರಿಸೆ। ಜನಕಸುತೆ ಕಂಪಿಸುತ ಕೇಳಿದಳಂತು ಮಕ್ಕಳನು ‖ ೪೮ ‖ ಆರರಿಯದಂತಿದ್ದೆ ವನದೊಳು। ಧಾರಿಣೀಶರೊಷವೆಗಳೇತಕೆ। ವೀರ ಕಪಿವರರಿವರಿಗೇತಕೆ ನೋವ ನೆಸಗಿದಿರಿ ‖ ಕ್ರೂರಕೃತ್ಯಂಗಳ ನೆಸಗಿದಿರಿ। ದಾರಿತಪ್ಪಿದಿರಕಟ ಮುನಿಪತಿ। ಬಾರದಿರನಿವರಂ ರಣದೊಳರಿಸೆಂದಳಾಲವಗೆ ‖ ೪೯ ‖ ಅವನಿಸುತೆ ಪೇಳಿದುದ ನಾಲಿಸಿ। ಪವನಸಂಭವ ಜಾಂಬವರ ನಾ। ಲವನು ಸಮರದ ಮಧ್ಯದೊಳರಿಸಿ ಮತ್ತೆ ಬರುತಿರಲು ‖ ದಿವಿಜಮುನಿಯಿಂದಿದನು ಕೇಳುತ। ತವೆತಪಿಸಿ ವಾಲ್ಮೀಕಿ ಬಂದನು। ತಪಕ[illegible]ೊಳು ಪಾತಾಳಲೋಕವನುಳಿದು ತನ್ನೆಡೆಗೆ ‖ ೫೦ ‖ ಚರಣಕಾನತಳಾದ ಸೀತೆಯು। ನಿರದೆ ಸೆಂತೈಸುತ್ತ ತನ್ನಡಿ। ಗೆರಗಿದವರಂ ಮನ್ನಿಸುತ ಶರವೇದಮೂರ್ತಿಗಳ ‖ ತೆರದೆ ಕಂಗೊಳಿಸುತ್ತ ನಮಿಸಿದ। ತರಳರಂ ಮಣಿದೆತ್ತಿ ಪರಸುತ। ಭರದೊಳಾ ವಾಲ್ಮೀಕಿ ನುಡಿದನು ಮೈದಡವುತಿಂತು ‖ ೫೧ ‖ ಮಕ್ಕಳಿರ ರಾಮನೊಳದೇತಕೆ। ಕಕ್ಕಸ ಜಗಳವಾಯ್ತು ನಿಮಗಿಂ। ದಕ್ಕರೊಳು ನಡೆತಂದು ಹೊಡೆದಾಡುತ್ತ ಮೈಮರೆಗು ‖ ಸೊಕ್ಕಿ ಬಿದ್ದವರಾರು ನಿಮಗೇ। ತಕ್ಕೆ ಗಾಯಗಳಾಗದಿಹುದೆನ। ಲುಕ್ಕಿ ದಾನಂದದೊಳು ಕುಶನಿಂತೆಂದನಾಮುನಿಗೆ ‖ ೫೨ ‖ ತಂದೆ ನೀನಿರಲೆಮಗೆ ಸುಖಮೆಂ। ದೆಂದಿಗಹುದೇನಚ್ಚರಿಯೆ ಕೇ। ಳ್ಬಂದುದು ಕುದುರೆ ಯೊಂದು ಕಟ್ಟಿದ ನೊಡನದಂಲವನು ‖ ಮಂದಿ ಕವಿದುದು ಕಾಳಗಕೆ ನಡೆ। ತಂದನಾ ಶತ್ರುಘ್ನನವನಂ। ಸಂಧಿಸಿ ನೆಲಕುರುಳ್ಚಿ ನಾಂ ಮೂರ್ಛೆಗೆಡಹಿದೆ ಮುಳಿದು ‖ ೫೩ ‖ ಧುರಕೆ ಬಂದರು ಬಳಿಕ ಲಕ್ಷ್ಮಣ। ಭರತ

ರಘುನಂದನರು ಪಾವನ । ತರವೆನಿಪ ನಮ್ಮಾಶ್ರಮದೊಳಾಗಿಹುದು ಭೂತಬಲಿ ॥ ದೊರೆದೊರೆಗಳಂ ಕೆಡಹುತಲೆ ನಾಂ । ಭರದೊಳಾರಘು ವೀರ ಲಕ್ಷ್ಮಣ । ಭರತರಂ ಸಲೆಮೂರ್ಛೆಗೆಡಹಿದೆ ನೆಂದನಾ ಮುನಿಗೆ ॥ ೫೪ ॥ ಒಡನೆ ಮುನಿವಾಲ್ಮೀಕಿ ಕುಶನಾ । ನುಡಿಗೆ ವಿಸ್ಮಯವೈದಿ ನೊಂದಡಿ । ಗಡಿಗೆ ಬಿಸುಸುಯ್ಯುತ್ತ ಚಿಂತಿಸಿ ಕೊರಗಿ ಹಾಯೆನುತ ॥ ನಡುಗುತ್ತಿರ್ಪಾ ಸೀತೆಯು ನೋಡಂ । ಬಡಿಸಿ ಬಂದನು ಶೀಘ್ರದೊಳು ತ । ನ್ನೊಡನೆ ಬಂದಿಹ ತಾಪಸರಸಹಿತ ಸಮರಾವನಿಗೆ ॥ ೫೫ ॥ ಮುರಿದ ಸತ್ತಿಗೆ ಸಿಂಧಸೀಗುರಿ । ವರಪತಾಕೆಗಳಿಂವಳಿದ ವಾ । ನರ ಮನುಜ ಗೋಪುಚ್ಛರಾಕ್ಷಸ ಋಕ್ಷಚಯದಿಂದ ॥ ಪರಿದಮಿದುಳಿದೆ ಮಾಂಸನೆಣವಸೆ । ಕರಳು ರಕ್ತಗಳಿಂದ ತುಂಬಿದ । ಧುರದೊಳಾ ವಾಲ್ಮೀಕಿ ಮುನಿನೋಡಿದನು ರಾಘವನ ॥ ೫೬ ॥ ನೆರೆಮಸುಳ್ದುವೊಗದನಿ ತಿಯುತಾ । ಪೆರೆವೊಲಿಹ ಕಣ್ಣುಗಳ ಕೆಲಕೋ । ಸರಿಸಿ ಬಿದ್ದಿಹ ಶರಶರಾಸನ ಖಡ್ಗಖೇಟಗಳ ॥ ತರತರದ ಗಾಯಗಳ ನೆತ್ತರಿ । ನೊಂತೆಗಳ ಕಳೆಗುಂದಿ ದಂಗದ । ವರರಘುವರನ ಕಂಡು ಮುನಿವಾಲ್ಮೀಕಿ ಬೆರಗಾದ ॥ ೫೭ ॥ ಈಕ್ಷಿಸಿ ಕಮಂಡಲ ಸಲಿಲದಿಂ । ಪ್ರೋಕ್ಷಿಸಿದೊಡಾ ಮುನಿಕುಲೇಂದ್ರನು । ಪಕ್ಷಿವಾಹನನುರಗತಲ್ಪವನುಳಿದು ಸಿಂದಂತೆ ॥ ರಾಕ್ಷಸಾಂತಕ ನೆದ್ದು ಕಣ್ದೆರೆ । ದಾಕ್ಷಣದೆ ವಾಲ್ಮೀಕಿಮುನಿಪಂ । ಗಕ್ಷತನೆನಿಸಿ ನಮಿಸಿದ ನಧಿಕ ಭಕ್ತಿಭಾವದಲಿ ॥ ೫೮ ॥ ಪರಮಸಂಮುದದಿಂದೆ ತಾಪಸ । ವರನಿನಕುಲೋತ್ತಮನ ನೀಕ್ಷಿಸಿ । ಪರಸಿಸಲೆಬಿಗಿಯಪ್ಪಿ ಕರತಲದಿಂದೆ ಮೈದಡವಿ ॥ ಗರುಡವಾಹನ ಭಕ್ತವತ್ಸಲ । ಶರಣಜನರಕ್ಷಕದಯಾನಿಧಿ । ಸಿರಿಯ ರಸರಘುವೀರರಾಘವ ಯೆನುತ ಪೊಗಳಿದನು ॥ ೫೯ ॥ ಬಳಿಕರಾಮನ ಸಿರಿಮುಡಿಗೆ ಪೂ । ಮಳೆ ಸುರಿದುದಂ ದಮರದುಂದುಭಿ । ಗಳುರೆಮೊಳಗಿದುವಾ ಮುನೀಂದ್ರನ ಮಂತ್ರಜಲದಿಂದ ॥ ತಳುವದೆದ್ದರು ಲಕ್ಷ್ಮಣಾದಿಗ । ಳೊಲವಿನಿಂದ ನಿಮಿಷರಮೃತದಿಂ । ತಳೆದರಳಿದ ಸಮಸ್ತ ಸೈನಿಕ ಮೆದ್ದುದಾಕ್ಷಣದೆ ॥ ೬೦ ॥ ಒರಸಿ ಸುರಧೇನುವನು ಪಾವನ । ಪರಿಕರಂಗಳನಾಂತು ತಾಪಸ । ವರನು ರಾಮಂಗೆಸಗಿದನು ದುಗ್ಧಾಭಿಷೇಕವನು ॥ ಪರಮಸಂಮುದದಿಂದೆ ರಘುಭೂ । ವರನ ಹೊಗಳುತ ಕುಶಲವರನತಿ । ಭರದಿ ರಾಮನ ಚರಣದೊಳ್ಬೀಳಿಸುತ ಲಿಂತೆಂದ ॥ ೬೧ ॥ ಜನಪ ಕೋಪವನೆಸಗದಿರ್ಪುದು । ಜನರು ನಿನ್ನನು ಹೊಗಳುವರು ಮೇ । ದಿನಿಯೊಳು

ದಯಾನಿಧಿಯುಂ ಭಕ್ತರಪೊರೆವನೆಂದೆನುತ ॥ ಜನಕಜಾಜೆಯ ಸುತರಿವರು ಕೇ । ಳ್ನಿನಗೆ ತನುಸಂಭವರೆನಿಸುವರುಂ । ನಿನಗೆಸಗಿದಪರಾಧವನು ಸೈರಿಪುದು ಕರುಣಿಸುತ ॥ ೬೦ ॥ ವಿನುತ ಮಖಯಾಜನಕೆ ವರುಣಂ । ವಿನಯದಿಂದಲೆ ಕರಿಸಲಾಂ ಪೋ । ದೆ ನೆನಗೊಂದುಂ ತಿಳಿಯದ ಪರಾಧಂಗಳಿಲ್ಲವನು ॥ ಮನಕೆತಾರದೆ ರಕ್ಷಿಪುದು ತನ । ಯನು ವಿನೀತನೆನಿಸಿದೊಡಂ ಧೂ । ರ್ತನೆನಿಸಿದೊಡಂ ಮನ್ನಿಪುದುಚಿತವಲ್ಲವೆ ಪಿತನಿಗೆ ॥ ೬೩ ॥ ತಂದೆಗೆ ದ್ರೋಹವನೆಸಗಿದೀ । ನಂದನ ರತೀತವನು ಮನ್ನಿಪು । ದೆಂದು ಮುನಿವಾಲ್ಮೀಕಿ ಬಿನ್ನೈಸುತಿರೆ ರಾಘವನು ॥ ನಿಂದ ಲಕ್ಷ್ಮಣನಾನನವಕಂ । ಡಿಂದುಮುಖಿತಾನೆಂತು ವನದೊಳ । ಗಂದು ಸುತರನು ಪೆತ್ತಳೆನೆ ಸೌಮಿತ್ರಿಯಿಂತೆಂದ ॥ ೬೪ ॥ ಜಾನಕಿಯುನಂದಾ ವಿಮಲಗಂ । ಗಾನದಿಯ ದಕ್ಷಿಣದ ವನದೊಳ । ಗಾ ನುಳಿದು ನಡೆತಂದುದಲ್ಲದೆ ಮುಂದರಿಯೆನೆನಲು ॥ ಕಾನನದೊಳೊಬ್ಬಳೆ ತಪಿಸುತತಿ । ದೀನತೆಯನಾಂತವನಿಸುತೆಯುಂ । ನಾನು ಕಂಡೆನೆನುತ್ತ ಮುನಿ ಪೇಳದನು ರಾಮನಿಗೆ ॥ ೬೫ ॥ ಬಳಿಕ ಧರಣೀಸುತೆಯ ನೊಪ್ಪಿಸಿ । ತಳುವದೆನ್ನಾಶ್ರಮಕೆ ಕರೆತಂ । ದೊಲಿದು ರಕ್ಷಿಸುತಿದ್ದೆ ನಾಂತರುವಾಯದೊಳು ಸೀತೆ ॥ ಅವಳಮಕ್ಕಳ ಹೆತ್ತಳವರಿಗೆ । ಕಲಿಸಿಕೊಟ್ಟೆನು ಸಕಲ ವಿದ್ಯಂ । ಗಳನೆನುತ ವಾಲ್ಮೀಕಿಮುನಿ ಪೇಳದನು ರಘುಪತಿಗೆ ॥ ೬೬ ॥ ತಳುವದಂದಾ ಮುನಿಕುಶಲವರ । ಕಳುಹಿ ಸವನಕ್ಕೆರಡು ವಲ್ಲಕಿ । ಗಳನು ತರಿಸುತ್ತವರಿಗೆ ತಾಂ ಕಲಿಸಿಕೊಟ್ಟಿರುವ ॥ ನೆಲದೊಳುನ್ನತಿ ವೆತ್ತು ಸಲೆಕಂ । ಗೊಳಿಪ ರಾಮಾಯಣವ ನವರಿಂ । ದೊಲಿದು ಪಾಡಿಸಿದನು ಮೊದಲಿನಿಂದಲೆ ಕೊನೆಯತನಕ ॥ ೬೭ ॥ ವರಲಲಿತೆ ಧನ್ಯಾಸಿಪಳಮಂ । ಜರಿಸುಭೈರವಿ ತೋಡಿ ವರಗು । ಜ್ಜರಿವಿನುತ ಸಾಳಂಗ ಸಾವೇರಿಗಳು ಮೊದಲಾದ ॥ ಧರೆಯೊಳಾರಾಜಿಸುವ ಮೂವ । ತ್ತೆರಡು ರಾಗಂಗಳನು ಕೇಳಸು । ತಿರದೆ ಪಾಡಿದರವರು ತುಂಬುರ ನಾರದರತೆರದೆ ॥ ೬೮ ॥ ವೀಣೆಯಂ ಕೈಕೊಂಡು ಮುಖದೊಳು । ವಾಣಿ ತಾಂ ನೆಲಸಿರುವಳೋ ಕೈ । ಗಾಣಿಕೆಯ ನೊಳಕೊಂಡುರೆಮೆರೆವ ಗಾನದೇವತೆಯೋ ॥ ಮಾಣದತಿ ಮೋಹನದ ತನಿರಸ । ಪೋ ಸರೆದ ಕರ್ಣಾಮೃತ ವಿದೋ । ಕಾಣೆ ವೆಂಬಂತೊಲಿದು ಪಾಡಿದ ರಣುಗರಾದರದೆ ॥ ೬೯ ॥ ಅಡಿಗಡಿಗೆ ಲಯಜೋಕೆಯಿಂ ಚರ । ಬೆಡಗುಬಿನ್ನಾಣಗಳ ನವರಸ । ದೊಡನೆ ತೋರಿಸುತಾ ಹತಪ್ರತ್ಯಾಹತಂಗಳನು ॥ ಬಿಡದೆಕಂಪಿತ ಮೂರ್ಛರೀ

ತ್ರಿವಿ । ಗಡಸುತ್ತಾಳಸ್ವರಗಳಗತಿಯು । ನೊಡರಿಸುತ ಪಾಡಿದರು ರಾಮಾ ಯಣವನೆರಾಲವಿಂದ ॥ ೩೦ ॥ ಸ್ಥಾಯಿಸಂಚಾರಿಗಳ ಸರಿಗಮ । ದಾಯತ ದಲಯು ಸಂಚಯದ ಪೂ । ರಾಯುತಸುತಾನಂಗಳಂ ತಾಳಂಗಳಿಂದೊಡ ನೆ ॥ ಗೇಯರಸ ಮೊಸರಿಸುವವೊಲು ರಘು । ರಾಯನ ಸುತರು ಸೊಗ ಸುಗೊಳಸು । ತ್ತಾ ಯುವರಿ ತೊಲವಿಂದೆ ರಾಮಕಥೆಯನು ಪಾಡಿದರು ॥೩೧॥ ವಿನುತ ರಾಮಾಯಣದ ಸತ್ಕಥೆ । ಯನೊಲಿದಾಲಿಸುತಾ ರಘುವರ ನು । ಮನವುರುಗಿ ಮೆಚ್ಚಿಕೊಳುತಲೆ ಸೌಮಿತ್ರಿ ಭಾಪಿಸಲು ॥ ಅಣು ಗರಿಬ್ಬರು ರೂಪುಚೇಷ್ಟೆ ಸು । ಗುಣಗಳಿಂದಲೆ ಕಣ್ಗೆ ತೋರ್ಪರು । ಜನಕನಂದನೆ ಯಂವದೊಳಪರ ನೋಡು ನೀನೆಂದ ॥ ೩೨ ॥ ಜನಕ ಜಾತೆಯು ನುಳದನನ್ಯ ಯು । ಘನತರದ ವಿರಹಾಗ್ನಿಸುತ ದ । ರ್ಶನ ಸಲಿ ಲವಿಂ ನಂದಿತ್ರಿನಕುಲದೇಳಿಗೆಯುದಾಯ್ತು ॥ ಪಿನುತಿವೆತ್ತನ್ನ ಶರವನು ಮೇ । ದಿನಿತಳದೊಳಗೆ ಬಂಜೆಗೈಯುವ । ಮನುಜನಾವನಿರುವನು ಲಕ್ಷ್ಮಣ ಕೇಳು ನೀನೆಂದ ॥ ೩೩ ॥ ಆ ವಚನವನು ಕೇಳ್ದು ನಸುನ ಗು । ತೀ ವಸುಧೆಯೊಳು ನಿನ್ನ ಬಾಣಗ । ಳಾವಗಂ ಮೋಘಮೆನಿಸವಿ ವರು ನಿನ್ನ ಸುತರಹರು ॥ ಭಾವಿಸಿದೊಡದರಿಂ ದಣುಗರೊಳು । ತೀವಿ ಹುದು ನಿನ್ನಾತ್ಮಶಕ್ತಿಯು । ದೇವಸುತರಂ ಗ್ರಹಿಸೆನುತ ಪೇಳಿದನು ಸೌಮಿತ್ರಿ ॥ ೩೪ ॥ ಆನುಡಿಯನಾಲಿಸುತ ಘನಸುಂ । ಮಾನವನುತಾಳ್ದಾ ರಘೂತ್ತಮ । ನೀ ನೆಲದೊಳಾವಿಂದು ಧನ್ಯರೆನಿಸಿದೆವೆಂದೆನುತ ॥ ಸಾನು ನಯದಿಂದಾ ಘನತರತ । ಪೋನಿಧಿಗೆ ಕೈಮುಗಿದೆರಗಿ ನಿಜ । ಸೂನುಗಳ ಕರೆದಂದೊಲಿಸುತಿಂತೆಂದು ನುಡಿಸಿದನು ॥ ೩೫ ॥ ಅರಸುತರಲೆ ಮಕ್ಕ ಳರಸಿಮ । ಗೀ ರಣದ ಶೂರತ್ವಮೆತ್ತಣ । ದಾರು ಸಲಹಿದರಿನಿತು ವಿದ್ಯಾ ಬಲಮದೆಂತಾಯ್ತು ॥ ಘೋರಕಾರ್ಮುಕ ವಿದ್ಯವೆನು ನಿಮ । ಗಾರು ಪೇ ಳಿದರೆಂದೆನುತ ರಘು । ವೀರನಾತ್ಮಜರನ್ನು ಮನ್ನಿಸುತೊಲಿದು ಕೇಳಿದ ನು ॥ ೩೬ ॥ ನಾವು ಸೀತೆಯ ಮಕ್ಕಳೆನಿಸುವೆ । ವೀವನದೊಳೆವಿಸ್ಮಾ ರ್ಣರ ನತಿ ಕೃ । ಪಾವಲೋಕನದಿಂದೆ ಮುನಿವಾಲ್ಮೀಕಿ ಪೊಷಿಸುತ ॥ ಪಾವನವ ಕೃತ್ಯಂಗಳ ನೆಸಗಿ । ಸಾವಧಾನದೊಳೆಮಗಖಿಳ ವಿ । ದ್ಯಾ ವಿಭವಗಳ ನೊಲಿದು ಬೋಧಿಸಿದನುಪಚರಿಸುತ್ತ ॥ ೩೭ ॥ ತಂದೆನಿನ್ನಯ ಚರಣಪಂಕಜ । ಕಿಂದು ಗೈದದ್ರೋಹವನು ಸುತ । ರೆಂಮತಿಳಿದು ಕ್ಷ ಮಿಸಿಕಾವುದೆನುತ್ತ ಕುಶಲವರು ॥ ಬಂದತಿವಿನಯದಿಂದೆ ದಶರಥ । ನಂದ ನನ ಪದಪಂಕಜದೊಳಾ । ನಂದ ಬಾಷ್ಪವೆ ಸುರಿಸುತೆರಗಿದ ರಧಿಕಭಕ್ತಿ

ಯಲಿ ॥ ೭೮ ॥ ತನಯರಂ ಪಿಡಿದೆತ್ತಿ ರಘುನಂ । ದನನು ಕೂಡಿಸಿಕೊಂ
ಡು ತೊಡೆಯೊಳು । ಘನತರ ಸ್ನೇಹಾತಿಶಯದಿಂದೊಡನೆ ಬಿಗಿದಪ್ಪಿ ।
ಮನವೊಲಿದು ಮುಂಡಾಡಿ ವಿಮಲವ । ದನವ ಚುಂಬಿಸುತಡಿಗಡಿಗೆ ನ
ಲಿ । ದನು ಶಿರವನಾಘ್ರಾಣಿಸುತ ನೆರೆನೋಡಿ ಮೈದಡವಿ ॥ ೭೯ ॥ ಮುನಿ
ಪನಂ ಕೊಂಡಾಡಿ ರಘುನಾ । ಥನನುಜರ್ಕಳ ಸಹಿತ ಕುಶಲವ । ರನೊ
ಲಿದೀಕ್ಷಿಸಿ ಮುಳುಗಿದನು ಸಂತೋಷವಾರ್ಧಿಯಲಿ ॥ ವಿನುತ ದುಂದುಭಿ
ಗಳು ಮೊಳಗಿದವ । ವನಿತಳದೊಳು ಸುರಿದುದು ಪೂಮಳೆ । ಮನವೊ
ಲಿದು ತುಂಬುರರು ಗಾನವಮಾಡಿದರು ಕೂಡೆ ॥ ೮೦ ॥ ಬಳಿಕ ವಾಲ್ಮೀ
ಕಿ ಮುನಿವರನಂ । ಸಲೆಪೊಗಳಿ ಸಂತೈಸಿ ರವಿಕುಲ । ತಿಲಕನೆಂದನು
ತಾಪಸೋತ್ತಮ ಕೇಳು ಜಗಮರಿಯೆ ॥ ನೆಲದಣುಗಿ ಪರಿಶುದ್ಧೆ ಪಾವ
ನೆ । ನೆಲನೆ ಹದಿಬದೆಯೆಂಬುದನು ನಾಂ । ತಿಳಿದಿಹೆನು ಲೋಕಾಪವಾ
ದಕೆ ಬೆಚ್ಚಿನಾನೆನುತ ॥ ೮೧ ॥ ಮುನಿಪ ಕೇಳಂತಾದೊಡಂ ಸುತ । ರನು
ಪಡೆದವಳೀಸೀತೆ ಭೂಮಿಯೊ । ಳಿನಕುಲದವಂಶಾಭಿವೃದ್ಧಿಯು ಬೆಳೆವುದೀ
ತೆರದೆ ॥ ಇನಿಯಳಂತನ್ನೆಡೆಗೆ ಕಳುಹೆಂ । ದೆನುತ ನೇಮಿಸಿ ಮುನಿಗೆ
ಪೋದನು । ತನಯರೊಡನಧ್ವರದ ಕುದುರೆಯಸಹಿತ ನಿಜಪುರಕೆ
॥ ೮೨ ॥ ಪುರವರಕೆ ನಡೆತಂದು ರಘುಭೂ । ವರನು ಮುನಿಪೋತ್ತಮ
ರು ಪೇಳಿವ । ಪರಿಯೊಳುಳಿದಾ ವಿನುತ ವರಪಯಮೇಧಯಾಗವನು ॥
ಪರಮಸಂಭ್ರಮದಿಂದೆ ಸಕಲ ಸು । ರರನೊಲಿದು ಸಂತುಷ್ಟಿವಡಿಸುತ ।
ವಿರಚಿಸಿದನು ತ್ರಿಜಗಕಿದು ಪೊಸತೆಂಬರೀತಿಯಲಿ ॥ ೮೩ ॥ ಈತೆರದೊ
ಳಾ ರಘುವರನು ಸಂ । ಪ್ರೀತಿಯಿಂದನುದಿನವು ದಿವಿಜ । ವ್ರಾತವನೊಲಿ
ಸಿ ನೂರನೆಯ ಹಯಮೇಧಯಾಗವನು ॥ ಆ ತಪೋನಿಧಿಗಳಭಿಮತ
ದಿಂ । ಭೂತಸಂತುಷ್ಟಿಯ ನೆಸಗುತ । ತ್ಯಾತುರದೆ ಮುಗಿಸಿದನು ಶಾ
ಸ್ತ್ರೋಕ್ತಪ್ರಕಾರದಲಿ ॥ ೮೪ ॥ ಸುರರು ಬಹುಸಂತುಷ್ಟಿವಡೆದರು ।
ವರಹವಿರ್ಭಾಗಂಗಳಲಿ ಭೂ । ಸುರರು ದಣಿದರು ದಕ್ಷಿಣೆ ಭೋಜನಂಗ
ಳಲಿ ತರತರದ ಮನ್ನಣೆಗಳನು ತಾ । ಳ್ದರಸುಗಳು ತೆರಳಿದರು
ಹಿಂದಕೆ । ನೆರದಋತ್ವಿಕ್ಕುಗಳು ನಲಿದರು ಸಕಲ ದಾನದಲಿ ॥ ೮೫ ॥
ತುರಗಮೇಧಾಧ್ವರದ ಕೊನೆಯೊಳು । ಪರಮವೈಭವದಿಂದೆ ರಘು
ಭೂ । ವರನು ವಿರಚಿಸಿ ಯವಭೃತಸ್ನಾನವನು ಪಟ್ಟಣಕೆ ॥ ಗುರುಪು
ರೋಹಿತ ಬಂಧು ಸುತಸೋ । ದರರ ಸಹಿತೈತಂದು ಪೊಕ್ಕನು । ಮೆರೆ
ವ ತನ್ನರಮನೆಯನೆಲ್ಲರ ನೊಲಿದು ಮನ್ನಿಸುತ ॥ ೮೬ ॥ ಇತ ಲಿಂತಿರು

ತಿರಲು ಮುನಿವರ । ನತ್ತ ಕುಶಲವರಂ ರಘುವರಂ । ಗಿತ್ತು ತನ್ನಾಶ್ರಮಕೆ ಪೋಗಲು ಮನೆಯಬಾಗಿಲೊಳು ॥ ಉತ್ತಮಾಂಗನೆ ಸೀತೆ ನೋಡುತ । ಚಿತ್ತದೊಳ್ಕಳವಳಿಸಿ ಮುನಿಗೆರ । ಗುತ್ತ ಬಿನ್ನೈಸಿದಳು ಕಂಬನಿವಿಡಿದು ರೋದಿಸುತ ॥ ೮೭ ॥ ತನಯರೇನಾದರೆಲೆ ತಾತಸ । ದನಕೆ ಕುಶಲವರೇಕೆ ಬರಲಿ । ಲ್ಲೆನಗೆ ಮುಂದಿನ್ನೇನುಗತಿ ನಾನೆಂತು ಜೀವಿಸಲಿ ॥ ತನಯರಂ ಪಡೆದಂದು ಮೊದಲೊಡ । ಲನಿಡಿದಿದ್ದೆನು ಪತಿವಿರಹಮಂ । ಮನಕೆ ತಾರದೆ ಇನ್ನು ಗತಿಯೇನೆಂದು ಮರುಗಿದಳು ॥೮೮॥ ಆರಿಗಿತ್ತೈತಂದೆ ತಂದೆಕು । ಮಾರರನೆನುತ ಗೋಳಿಡುತಿರುವ । ಧಾರಿಣೀಸುತೆ ಸೀತೆಯನು ಮಣಿದೆತ್ತಿ ಸಂತವಿಸಿ ॥ ವೀರರಾಘವನೊಡನೆ ನಿನ್ನಕು । ಮಾರರಂ ಕಳುಹಿದೆನು ನಿನ್ನನು । ಸೇರಿಸುವೆ ನೀನೆಣಿಕೆಗೊಳ್ಳದಿರೆಂದ ನಾಮುನಿಪ ॥ ೮೯ ॥ ಬಳಿಕ ಮುನಿವಾಲ್ಮೀಕಿ ಮನುಕುಲ । ತಿಲಕರಾಘವ ನರಸಿಯಂ ತಾಂ । ನಲಿದೊಡಂಬಡಿಸುತ್ತ ರಥದೊಳ್ಕುಳ್ಳಿರಿಸಿಕೊಂಡು ॥ ತಳುವದೈತಂದಧಿಕ ವೈಭವ । ದೊಳು ಮೆರೆವಯೋಧ್ಯಾಪುರವರದೊ । ಳಿಳಿಸಿಬಿಟ್ಟನು ರಾಮಚಂದ್ರನ ಪದಸರೋಜದೊಳು ॥ ೯೦ ॥ ಧರಣಿಸುತೆ ಬಂದೊಡನೆ ಕಾಣದೆ । ಭರದೊಳಾಕ್ಷಣ ಮಾಯವಾದುದು । ಪರಮ ವಿಸ್ಮಯವನೆಸಗುತ ಮಾಯಾಕೃತಿಯ ಭುಜವು॥ ಧರಣಿಯಂ ಪಾಲಿಸಿದನಾ ರಘು । ವರನು ಬಳಿಕಾ ಸತಿಸುತ ಸಹೋ । ದರರೊಡನೆ ಹನ್ನೊಂದುಸಾವಿರ ವರುಷಪರಿಯಂತ ॥ ೯೧ ॥

ಇಂತು ಮೂವತ್ತೊಂಬತ್ತನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೨೭೩೯.



## ನಲವತ್ತನೆಯ ಅಧ್ಯಾಯ.

ಸೂಚನೆ ॥ ಘೋರಶಪಥವನೆಸಗಿ ಜಾನಕಿ ।
ಧಾರಿಣಿಯೊಳಡಗುತಿರೆ ರಾಘವ ।
ವೀರನೆಬ್ಬಿಸಿ ಭೂಮಿಯಂ ಸಲಹಿದನು ಸತಿಸಹಿತ ॥

ಒಂದುದಿನ ವಾಲ್ಮೀಕಿಮುನಿಗಾ । ನಂದದಿಂದೆರಗುತ್ತ ದಶರಥ । ನಂದನನು ಪೇಳ್ದನೆಲೆ ಮುನಿಪತಿ ನಿನ್ನ ನೇಮವನು ॥ ತಂದು ನನ್ನಯ

ಮನದೆ ಧರಣೀ | ನಂದನೆಯ ನಂಗೀಕರಿಸಿದೆನು | ಯೆಂದಿಗುಂ ಪರಿಶು ದ್ಧಿಯಿವಳೆಂದರಿತಿಹೆನು ನಾನು || ೧ || ನನಗೆ ಚನ್ನಾಗಿ ತಿಳಿದಿಹುದಿದು | ಮುನಿಪಕೇಳಾದೊಡೆ ಸಭೆಯೊಳಹ | ಮನುಜರಿಗೆ ನಂಬುಗೆಯು ದಯಿ ಪಂತಿಂದು ಭೂಮಿಸುತೆ || ಘನಶಪಥವನು ಮಾಡಲೆನುತಾ | ಮನುಕು ಲೇಂದ್ರನು ಪೇಳಲವನೀ | ತನುಜೆ ನುಡಿದಳು ನಿಂದು ರಾಮನಮುಂದೆ ಕೈಮುಗಿದು || ೨ || ಪತಿಯ ಪಾದಕಮಲವನಲ್ಲದೆ | ಸತತವೆನ್ನಯ ಚಿತ್ತದೊಳು ನಾ | ನಿತರ ಮಾನವರನ್ನು ನೆನೆದವಳಲ್ಲ ಮೊದಲಿಂದ || ಕ್ಷಿತಿಯೊಳೀನುಡಿ ಸತ್ಯವಾದೊಡೆ | ಸುತೆಗೆ ದಾರಿಯನಿತ್ತು ಕಾವುದೆ | ನುತ ಮಹೀಸುತೆ ಬೇಡಿದಳು ಭೂಮಿಯನು ತಲೆವಾಗಿ || ೩ || ಧರೆ ಯೊಳುಂಟಾಯೊತ್ತಂದು ರಂಧ್ರವೆ | ದರೊಳಗಿಂದಾಗಲತಿ ಸುಂದರ | ತ ರಮೆನಿಪ ಸಿಂಹಾಸನಮದೊಂದೊಡನೆ ಕಾಣಿಸಿತು || ಧರಣಿದೇವತೆ ಬಂ ದು ಮೇಲಕೆ | ಧರಣಿಜಾತೆಯ ಕೈವಿಡಿದು ಸ | ತ್ಕರಿಸಿ ಕುಳ್ಳಿರಿಸಿದಳು ಸಿಂಹಾಸನದ ಮಧ್ಯದಲಿ || ೪ || ಒಡನೆ ಚಮರವ ಬೀಸುತಿದ್ದಳು | ಪೊಡವಿದೇವತೆ ಧಾರಿಣಿಯೊಳಡಿ | ಗಡಿಗೆ ಸಿಂಹಾಸನವು ಕುಗ್ಗುತಲಿದ್ದು ದಂದಿರದೆ || ಬಿಡದೆ ಪೂಮಳೆಗರೆದ ರಮರರು | ಕಡುಮೊಳಗಿದವು ದುಂದುಭಿಗಳೀ | ಕಡೆಭಯವನೈದಿದರು ಲಕ್ಷ್ಮಣನಾದಿ ಯಾವವರು || ೫ || ಕೆಲರು ಚಿಂತಾಕ್ರಾಂತರಾದರು | ಕೆಲರು ಸೀತೆಯ ನೋಡುತಿ ದ್ದರು | ಕೆಲರು ರಾಮನ ನೋಡುತಿದ್ದರು ಮನದೆ ಬೆರಗಾಗಿ || ಕೆಲರು ದುಃಖಿಸಿ ಮೂರ್ಛೆಪೋದರು | ಕೆಲರು ಹಾಯೆನುತಳುತಲಿದ್ದರು | ಕೆಲರು ಸಲೆಮೊರೆಯಿಡುತಲಿದ್ದರು ತಾಳ್ದು ಭೀತಿಯನು || ೬ || ಆಗ ಲಾ ರಘುಕುಲತಿಲಕ ಬಲು | ಬೇಗನೆ ಮಹೀತಲದೊಳು ಕುಸಿದು | ಪೋಗುತಿಹ ಜಾನಕಿಯ ನೆಡಗೈಯಿಂದೆ ತಾಂ ಪಿಡಿದು || ಜಾಗರೂಕತೆ ಯಿಂದೆ ಮಣಿದವ | ನಾಗಿ ಭೂದೇವಿಯನು ಪಿಡಿದು ಸ | ರಾಗದೆ ಬಲದ ಕೈಯೊಳಂದಿಂತೆಂದು ಪೊಗಳಿದನು || ೭ || ನೀನಖಿಳವಿಧ ಜಂತುಗಳಿಗೆ | ಸ್ಥಾನಳಾಗಿಹೆ ಪುಣ್ಯದೇವತೆ | ನೀ ನೆನಿಸಿಕೊಂಡಿರುವೆ ಹೊಟ್ಟೆಯೊಳಿರು ವ ಚಿನ್ನವನು || ನೀನು ನಿತ್ಯವು ಕೊಡುತಿಹೆ ಸಕಲ | ಮಾನವರಿಗೆಲೆ ದೇವಿ ಪಡೆದಿಹೆ | ನೀನು ಘನಸಂತುಷ್ಟಿಗೊಳಿಪ ಸಮಸ್ತ ಲತೆಗಳನು || ೮ || ನೀನೆ ದುರ್ಗೆಯು ನೀನೆ ಲಕ್ಷ್ಮಿಯು | ನೀನೆ ಮೇಲೆನಿಪ ಸ್ವ ರಾತ್ಮಿಕೆ | ನೀನೆ ಮಂಗಳದೇವತೆಯು ನೀನೆನ್ನರಸಿಯೆನಿಪೆ || ನೀನೆ ನನ್ನಯ ಶಕ್ತಿಯಾಗಿಹೆ | ನಾನೆ ನಿನ್ನನು ನಿರ್ಮಿಸಿದೆ ಕೇ | ಳ್ಜಾನಕಿಯು

ನಿಸ್ವಾತ್ಮಸಂಭವೆಯೆನಿಸಿಕೊಂಡಿಹಳು || ೯ || ನೀನು ನನಗಿಲ್ಲತ್ತಿಯ
ಗಿಹೆ | ಮಾನಿನೀಮಣಿ ಮತ್ತೆ ಕನ್ಯಾ | ದಾನವನು ಮಾಡೆನಗೆ ನೀನೆ
ತಾ ರಘೂತ್ತಮನು || ತಾನಡಿಗಡಿಗೆ ಬೇಡಿಕೊಳುತಿರ | ಆ ನುಡಿಗ
ನು ಕೇಳದೆ ಧರಾ | ಮಾನಿನಿ ಕೆಳಗೆ ಪೋಗುತಿದ್ದಳು ತನ್ನ ಮಗಳೊ
ನೆ || ೧೦ || ಮುಳಿದು ಹುಂಕರಿಸುತ್ತ ರವಿಕುಲ | ತಿಲಕ ನಾಭೂಜನ
ಸುತೆಯುರ | ನುಳಿದು ಕೋದಂಡವನು ಕೈಕೊಂಡದಕೆ ಬಾಣವನು
ಪ್ರಳಯರುದ್ರನ ತೆರದೆಕಾಣುತ | ತಳುವದಾಗಲೆ ಸಂಧಿಸುತಿರ | ಕ್ಷಿ
ಯೊಳುಂಟಾದುವು ಮಹೋತ್ಪಾತಗಳು ಶೀಘ್ರದಲಿ || ೧೧ || ಪೊಡವಿ
ಳಕತ್ತಿ ಭೀತಿಯನುತಾ | ಳೆದ್ದಡನೆ ನಡುನಡುಗುತ್ತ ರಾಘವ | ನಡಿಗೆ
ಗಿ ಕೈಮುಗಿದು ನಿಲ್ಲುತ ಕೊಟ್ಟು ಸೀತೆಯನು || ಪೊಡವಿಯೊಡೆಯ
ಮನ್ನಿಸೆಂದೆನು | ತಡಿಗೆರಗಿ ವಂದನೆಯನಾಗಿಸಿ | ಬಿಡದೆ ಕೊಂಡಾಡಿ
ಳನುಪಮಸ್ತುತಿಗಳಿಂ ದೊಲಿದು || ೧೨ || ಪರಮ ಕರುಣಾತಿಶಯದಿ
ದಾ | ಧರಣಿದೇವತೆಯುಂ ಕ್ಷಮಿಸಿ ರಘು | ವರನು ನೀಂ ಸುಸ್ಥಿ
ಯಾಗಿರು ಮೊದಲಿನಂತೆನುತ || ವರವ ನಿತ್ತಡಿಗಡಿಗೆ ಮನ್ನಿಸಿ | ನರೆ
ರಾಜಸಭೆಯೊಳೊಡನೆ ಸ | ತ್ಕರಿಸಿ ಕೈಕೊಂಡನು ಮಹೀಸುತೆಯನ
ಕ್ಕೈವಿಡಿದು || ೧೩ || ಬಳಿಕ ಜಾನಕಿ ಬಹುಳಹರ್ಷವ | ತಳೆದು ಭೂದ
ವತೆಯ ಚರಣಕ | ಮಲಕೆರಗಿ ಪೂಜಿಸಿದಳಂವತಿ ಭಕ್ತಿಭರದೊಳಗೆ
ತಳುವದಾ ರಘುವರನನೇಮವ | ತಳೆದು ಪದಪಂಕಜಕೆರಗುತಾ | ನೇ
ಮೇದಿನಿ ಮಾಯವಾದಳು ಸಭೆಯಮಧ್ಯದಲಿ || ೧೪ || ಅನಲನೊಳ
ಬಿದ್ದಂದು ವಿಸ್ಮಯ | ವನೊದಗಿಸಿ ಮೂಜಗಕೆ ಸೀತೆ ಸು | ಮನಸರೆ
ರ ಮುಂದೆ ಲಂಕಾಪುರದ ಮಧ್ಯದಲಿ || ವಿನುತ ಪಾತಿವ್ರತ್ಯದ ಮ
ಮೆ | ಯನುಪಸರಿಸಿದುದಲ್ಲದಿಂತೀ | ಜನಸಮೂಹದೊಳಿಂದು ಕಾ
ಸಿದಳೆನುತೆರಗಿದರು || ೧೫ || ತಾಯೆ ಕರುಣಿಸು ರಕ್ಷಿಸೆಮ್ಮನ | ಪಾ
ಗಳ ದೆಸೆಯಿಂದೆ ತಪ್ಪಿಸಿ | ಮಾಯೆ ಜಗದಾಧಾರೆ ಶೋಕಭಯಾಬ್ಧಿ
ಗ್ನರನು || ಕಾಯಬಲ್ಲವರಾರೆಮಗೆ ಸು | ಶ್ರೇಯವನು ನೀನಿತ್ತು ಸ
ಹೆಂ | ದಾ ಯುವತಿ ಜನವೃದ್ಧ ಜನಮಗ್ರೆಹೊಕ್ಕದವನಿಜೆಯ || ೧೬
ಘನದಯಾರಸದಿಂದೆ ಪೊಗಳುವ | ಜನರ ನೀಕ್ಷಿಸುತಾಮಹೀಸುತೆ
ಮನುಕುಲೋತ್ತಮ ರಾಘವನ ಪದಪಂಕಜಕೆ ನಮಿಸಿ || ವಿನಯದಿ
ವತ್ತಯರುಗಳ ಪದ | ವನಜಕೆ ನಮಿಸಿ ಬಳಿಕ ತನ್ನಯ | ಮನೆ
ಬಂದಳು ಮುನಿಮನಕೆ ಸಂತಸವನಾಗಿಸುತ || ೧೭ || ಸುತರ ಸಹಿತ

ನಿಜೆಯುನಾ ಮುನಿ । ಪತಿ ರಘೂದ್ವಹನ ವಶಕೊಪ್ಪಿಸಿ । ವಿತತಸತ್ಕಾರ ಗಳನ್ನೈದುತ ಪರಸಿರಾಘವನ ॥ ಕ್ಷಿತಿಸುತೆಯು ಮಾಹಾತ್ಮ್ಯವನು ಪೊಗ । ಳುತ ನಿಜಾಶ್ರಮಕೆ ನಡೆತಂದನು । ಮತಿವಿಶಾರದರೆಂದೆನಿಪ ನಿಜಶಿಷ್ಯರೊಡಗೂಡಿ ॥ ೧೮ ॥ ಹರುಷವನುಹೊಂದಿದರು ಲಕ್ಷ್ಮಣ । ಭರತ ಶತ್ರುಘ್ನಾದಿಗಳು ಪುರ । ವರದೊಳಾದುದು ಮಂಗಳ ಮಹೋತ್ಸವಗಳಡಿಗಡಿಗೆ ॥ ಪರಮಸಂಮದದಿಂದೆ ರಘುಭೂ । ವರನು ಪಾಲಿಸುತಿದ್ದನತ್ಯಾ । ದರದೊಳವನೀಮಂಡಲವನಾ ಸತಿಸುತರಸಹಿತ ॥ ೧೯ ॥ ಜನರಿಗತ್ಯಧಿಕ ಸುಖಸಂಮದ । ವನೆಸಗುತ ರಾಘವನಖಿಳ ಮೇ । ದಿನಿಯನೊಲಿದಾಳುತಿರಲೊಂದುದಿನದೊಳು ಕುಶಲವರ ॥ ಮನವೊಲಿದು ನೋಡುತ್ತ ಮದುವೆಗ । ಳನೆಸಗುವ ಕಾಲವೊದಗಿತಿವರಿ । ಗೆನುತ ಯೋಚಿಸಿ ದನವರವಯೋಧರ್ಮವನುತಿಳಿದು ॥ ೨೦

ಇಂತು ನಲವತ್ತನೆಯ ಅಧ್ಯಾಯು ಸಂಪೂರ್ಣವು.

ಪದ್ಯಗಳು ೨೦೪೯.



## ನಲವತ್ತೊಂದನೆಯ ಅಧ್ಯಾಯು

ಸೂಚನೆ॥ ಸುತರಿಗಾದ ವಿವಾಹಗಳನಾ ।
ಕ್ಷಿತಿಸುತೆ ವಿಲೋಕಿಸುತ ಪಡೆದಳು ।
ಪತಿಸುತರೊಡನೆ ವಿತತಸಂಸ್ಕೃತಿ ಸೌಖ್ಯಗಳನೊಲಿದು ॥

ಬಳಿಕ ರಾಘವನೊಂದುದಿನ ಸಭೆ । ಯೊಳಿರಲೊರ್ವ ಚರನು ಮನೆಯುಬಾ । ಗಿಲಬಳಿಗೆ ಬಂದೆನ್ನಬರವನು ದೊರೆಗೆ ಪೇಳೆನುತ ॥ ತಿಳುಹಲಾ ಸೇವಕನು ತಾಂ ರಘು । ಕುಲಲಲಾಮಂಗರುಹಿ ಕರೆತಂ । ದೊಳಗೆ ಬಿಟ್ಟನು । ರಾಜನಪ್ಪಣೆಯಂತೆ ದೂತನನು ॥ ೧ ॥ ಶಿರವಬಾಗಿಸಿ ರಾಘವೇಂದ್ರನ । ಚರಣಪಂಕಜಕೆರಗಿ ನಾನಾ । ಧರಣಿಪಾಲಕ ಭೂರಿಕೀರ್ತಿಯ ದೂತನಾಗಿಹೆನು ॥ ಅರಸನೀ ಪತ್ರವನು ನಿಮ್ಮಯ । ಚರಣಕೊಪ್ಪಿಸಿ ಬರ್ಪುದೆನ್ನುತ । ಭರದೆ ಕಳುಹಿದನೆಂದು ಕೊಟ್ಟನು ಬಿನ್ನವತ್ತಳೆಯ ॥೨॥ ಅದನು ಲಕ್ಷ್ಮಣ ನೋದಿ ಸಭೆಯೊಳು । ಪದೆದುರಘುನಾಥಂಗೆ ಬಿನ್ನವಿ । ಸಿದನು ಮಂಗಳ ಲಗ್ನಪತ್ರಿಕೆಯೊಳಿಹ ವಿವರವನು ॥ ಅದನು ಕೇಳ್ದು ವಸಿಷ್ಠ ಕಶ್ಯಪ । ಮೊದಲಹ ಮುನಿಗಳೊಡನೆ ಯೋ

ಚಿಸಿ | ಮುದದೊಳಾ ರಘುಭೂವರನು ತಾಂ ಪಯಣಕನುವಾದ ||
ಪುರದ ಸಂರಕ್ಷಣೆಗೆ ವಿಜಯುತ | ನಿರಿಸಿ ರಘುನಂದನನಯೊಧ್ಯಾ
ಪುರದೊಳಿರುವ ಸಮಸ್ತ ಮಾನವರನ್ನು ತನ್ನೆಡೆಗೆ || ಕರಿಸಿಕೊಳ್ಳ
ಭೂರಿಕೀರ್ತಿಯ | ಪುರಕೆ ಪಯಣವನಾಗಿಸಿದನತಿ | ಭರದೊಳು
ವಸುತಸಹೋದರ ಬಂಧುಗಳಸಹಿತ ||೪|| ದಾರಿನಡೆದಿಪ್ಪತ್ತು ದಿನತ
ಕಾ ರಘೂತ್ತಮ ಬಂದು ಹೊಕ್ಕನು | ಭೂರಿಕೀರ್ತಿಯ ಪಟ್ಟಣವ
ಸಮಸ್ತ ಜನಸಹಿತ || ಮೀರಿದಾನಂದದೊಳಗಾ ರಘು | ವೀರನ ನಿ
ಗೊಂಡು ರಾಜನು | ದಾರಮನದಿಂ ಕರೆದುತಂದನು ತನ್ನ ಪಟ್ಟ
|| ೫ || ಮರುದಿನದೊಳಾ ಭೂರಿಕೀರ್ತಿಯು | ವರರಘೂತ್ತಮನ
ಸುತಸೋ | ದರರ ಸಹಿತೈತಂದ ರಾಜರುಗಳೊಡನುಪಚರಿಸಿ || ಅ
ನೆಗೆ ಕರೆತಂದಿರದೆ ಕು | ಳ್ಳಿರಿಸಿದನು ಸಿಂಹಾಸನಂಗಳೊ | ಳುರೆ
ಥಳಿಸುವಾ ಸ್ವಯಂವರ ಮಂಟಪದನಡುವೆ || ೬ || ಭರದೊಳೈವ
ರುದೇಶದ | ದೊರೆಗಳೈತಂದಾರಘುವರನ | ಚರಣಪಂಕಜಕೆರಗಿ
ಕಾಣಿಕೆಗಳನು ಕೊಟ್ಟು || ಧರಣಿಪಾಲಕರೆಲ್ಲರತಿ ಸಂ | ದರಮ
ಸಿಂಹಾಸನಗಳೊಳು | ಪರಮಸಂಮುದದಿಂದೆ ಕುಳಿತಿದ್ದರು ವಿನೋದ
|| ೭ || ನಂದೆಯೆಂಬಾ ಮುದುಕಿಯೊಡನಾ | ನಂದವನು ತಾಳ್ದಾಗ
ಭರ | ದಿಂದವನಿಪತಿ ಭೂರಿಕೀರ್ತಿಯ ಮೊದಲನೆಯ ಮಗನ || ನಂ
ಯೆನಿಪ ಚಂಪಿಕೆಯು ನಡೆ | ತಂದಳು ಸಭೆಗೆ ಮೆರೆವ ದಂಡಿಗೆ | ಯ
ದಿಳಿದು ಮಿಂಚಿನತೆರದೊಳಾಗ್ನೇಯದಿಕ್ಕಿನಲಿ || ೮ || ಒಡನೆ ಸಭೆಗೈತ
ಳರಸನೆ | ರಡನೆಯ ಮಗನ ಪುತ್ರಿಯನಿಪಾ | ಹುಡುಗಿ ಸುಮತಿಸು
ದೆ ಸಹಿತೀಶಾನ್ಯದಿಶೆಯಿಂದೆ || ಪೊಡವಿಯಾಣ್ಮರು ಬೆಂದರೊಳಗೊ
ಗಡಿಗಡಿಗೆ ಬತ್ತಿದವು ತುಟಿಗಳು | ಹುಡುಗಿಯುರ ನೀಕ್ಷಿಸುತೊಡನ
ಕಂಠವೊಣಗಿದವು || ೯ || ಒಡನೆ ಛಪ್ಪನ್ನಾರು ದೇಶದ | ಪೊ
ಯೊಡೆಯರ ಬಳಿಗೆ ಸಂತಸ | ವಡೆದು ಚಂಪಿಕೆಯೆಂಬಳನಿರದೆ ನ
ಕರೆತಂದು || ಅಡಿಗಡಿಗೆ ಬೇರ್ಬೇರೆ ಬಗೆಯಿಂ | ದೊಡೆಯರನು ವ
ಸಿ ವರಿಸೆನುತ | ನುಡಿಯುಲೊಬ್ಬರ ನೊಪ್ಪದೈತಂದಳು ನಿರಾಕ
|| ೧೦ || ರಾಮ ಲಕ್ಷ್ಮಣ ರನವಲೋಕಿಸ | ದಾ ಮಹೀವರನಸುತೆ
ಪಿಕೆ | ತಾಮನಕೆ ತಾರದೆ ಭರತ ಶತ್ರುಘ್ನರಿಬ್ಬರನು || ಕಾಮನಂತೆಸೆ
ಕುಶನೆಡೆಗೆ | ತಾಮಸವನಾಗಿಸದೆ ನಡೆತಂ | ದಾ ಮನುಕುಲೋತ್ತಮ
ಸುತನಂ ಮನದೆಮೆಚ್ಚಿದಳು || ೧೧ || ನಂದೆಪೇಳಿದ ಕುಶನಪೆರ್ಮೆಯ

ನಿಂದುಮುಖಿಯಾಚಂಪಿಕೆ ಹರುಷ | ದಿಂದೆ ಕೇಳುತ ಮೆಚ್ಚಿ ಕುಶನನು ಕೂಡೆತಲೆವಾಗಿ ॥ ಮುಂದುಕಡೆ ನಿಂದವನಕೊರಳೊಳು | ಸುಂದರಮೆನಿಪ ಪುಷ್ಪಹಾರವ | ನಂದಮೆನೆಹಾಕಿದಳು ಮುಖಪಂಕಜವನೀಕ್ಷಿಸುತ ॥ ೧೦ ॥ ಭರದೊಳೈವತ್ತಾರುದೇಶದ | ದೊರೆಗಳ ಸಮಿಪಕೆ ಸುಮತಿಯೆಂ | ಬೆರಡನೆಯ ಮಗಳನು ಸುನಂದೆಯು ಕೂಡೆ ಕರೆತಂದು ॥ ಪರಿಪರಿಯೊಳೆಸೆವರಸುಮಕ್ಕಳ | ಬಿರುದುಗಳ ಹೊಗಳುತ್ತ ಪೇಳಲ | ವರೊಳಗೊಬ್ಬರ ನೊಪ್ಪದೈತಂದಳು ವಿಲೋಕಿಸುತ ॥ ೧೩ ॥ ವರಸುನಂದೆಯ ಹಿಂಗಡೆ ಸುಮತಿ | ಭರದೊಳೈತಂದಾಲವನೆಡೆಗೆ | ಹರುಷದಿಂದಾಲಿಸುತವನ ಬಿರುದಾವಳಿಯನೆಲ್ಲ ॥ ಮೆರೆವಕುಸುಮದ ಹಾರವ ನವನ | ಕೊರಳೊಳರ್ಪಿಸಿ ಮೆಚ್ಚಿದಳರದೆ | ಶಿರವಬಾಗಿಸಿ ಧಾರಿಣಿತಲವನೀಕ್ಷಿಸುತನಿಂದು ॥ ೧೪ ॥ ಲವಕುಶರು ಲಜ್ಜೆಯನುತಾಳ್ದು ಶಿ | ರವನು ಬಾಗಿಸಿದರು ಸತಿಸಹಿತ | ರವಿಕುಲೋತ್ತಮ ರಾಘವನು ಸಂತಸವನೈದಿದನು ॥ ಅವನಿಪಾಲರೆ ನೀವು ನಾಸೆಸ | ಗುವ ವಿವಾಹಂಗಳನು ಕಂಡು ನ | ಡೆವುದೆನುತಲಾ ಭೂರಿಕೀರ್ತಿನುಡಿದನು ಕೈಮುಗಿದು ॥ ೧೫ ॥ ಆಗಲೆನುತ ನುಡಿದುದೊರೆಗಳನು | ರಾಗದಿಂದಲೆ ಭೂರಿಕೀರ್ತಿಯು | ನಾಗ ಸಂತಸವಡಿಸಿ ನಡೆದರು ಬಿಡದಿಮನೆಗಳಿಗೆ ॥ ರಾಘವೇಂದ್ರನು ಮನೆಗೆಬಂದನು | ಬೇಗನೆ ಸುತಸಹೋದರರಸಹಿ | ತಾಗಲಾ ಧರಣಿಪನ ಚಿತ್ತಕೆ ಮುದವನಾಗಿಸುತ ॥ ಭೂರಿಕೀರ್ತಿ ಮರುದಿನದೊಳು ರಘು | ವೀರನೆಡೆಗೈತಂದು ಪದಸಂ | ಕೇರುಹಕೆರಗಿ ಜೀಯನೀಂವರ ಶುಭಮುಹೂರ್ತವನು ॥ ಧಾರಿಣೀಸುರರಿಂದಿರಿಸಿ ನೆರ | ವೇರಿಪುದು ಲಗ್ನಗಳನೆನ್ನುತ | ದಾರಭಾವದೊಳೈದೆ ಬಿನ್ನೈಸಿದನು ಶೀಘ್ರದಲಿ ॥ ೧೭ ॥ ಅದನರಿತು ರಾಘವನು ತನ್ನಯ | ಸದನಕೆ ವಸಿಷ್ಠಮುನಿವರನಂ | ಮುದದೊಳಾಗ ಕರೆಯಿಸಿ ತಿಳುಹಲು ವರ್ತಮಾನವನು ॥ ಚದುರತನದಿಂದಾಮುನೀಶ್ವರ | ನೊದವಿದ ಶುಭಮುಹೂರ್ತವನಿರಿಸಿ | ಸದಯದಿಂದೆ ನುಡಿದನು ಮನ್ನಿಸುತಾ ರಘೂತ್ತಮನ ॥ ೧೮ ॥ ಇಂದಿಗೈದನೆದಿನವೆ ಶುಭಕರ | ಮೆಂದೆನಿಸಿಕೊಂಡಿಹುವು ನಿನ್ನಯ | ನಂದನರ ವೈವಾಹಕೆನ್ನುತ ಮುನಿಕುಲೋತ್ತಮನು ॥ ಅಂದುಲಗ್ನವನಿರಿಸಿ ದಶರಥ | ನಂದನಂಗರುಹಲನುಗೊಳಿಸುವು | ದೆಂದು ನುಡಿದನು ಲಕ್ಷ್ಮಣಂಗೆ ಸಮಸ್ತವಸ್ತುಗಳ ॥ ೧೯ ॥ ಮನುಕುಲೋತ್ತಮ ನಪ್ಪಣೆವಡೆದು | ಮನೆಗೆಬಂದಾ ಭೂರಿಕೀರ್ತಿಯು | ಘನತರದ ವೈವಾಹಮಂಟಪವನೊಲಿದಾಗಿಸು

ತ ॥ ಮನವೊಲಿದು ಬೇಕಾದ ವಸ್ತುಗ । ಳನತಿ ಸಂಭ್ರಮದಿಂದೆ ತನ್ನ ಸ । ದನದೊಳಂದಡಿಗಡಿಗೆ ಸಿದ್ಧಪಡಿಸಿದನತಿಜವದೆ ॥ ೨೦ ॥ ರವಿಕುಲೋತ್ತಮ ರಾಘವನ ವಚ । ನವನು ಕೇಳುತ ಜವದೆ ಲಕ್ಷ್ಮಣ । ನವನಿ ಜಾತೆಯ ಮಕ್ಕಳ ಮದುವೆಗಳಿಗೆ ಬೇಕಾದ ॥ ವಿವಿಧವಸ್ತುಗಳೆಲ್ಲವನು ತಾ । ನವಸರಗೊಳುತ ಕೂಡಿಸಿದನತಿ । ಜವದೊಳಂದಾ ರಾಘವೇಂದ್ರನ ಮನವನೊಪ್ಪಿಸುತ ॥ ೨೧ ॥ ವರವಸಿಷ್ಠಮುನೀಂದ್ರ ನಾಮುನಿ । ವರರ ಸಹಿತೈತಂದು ಭವನಕೆ । ಹರುಷವನುತಾಳ್ದು ರಘುವರೇಣ್ಯನ ಸಮಿಪದೊಳು ॥ ಮೆರೆವಭದ್ರಾಸನದೊಳು ಕುಶಲ । ವರನುಕೂಡಿಸಿ ಮೊದಲು ವಿಘ್ನೇ । ಶ್ವರನ ಪೂಜೆಯನಾಗಿಸಿದ ನಾಗಮವಿಧಾನದಲಿ ॥ ೨೨ ॥ ವಿನುತ ವರಪುಣ್ಯಾಹನಾಂದಿಗ । ಳನೊಲಿದಾಗಿಸಿ ಮುನಿವಸಿಷ್ಠನು । ಮನವೊಲಿದು ತಾನಾಗಿಸಿ ನವಗ್ರಹಸುಕರ್ಮವನು ॥ ಮನುಜಪಾಲಕ ನಿಷ್ಟದೇವತೆ । ಯನುರೆಜಾನಿಸುತ ಕುಲದೇವತೆ । ಯನೊಲಿ ವರ್ಚಿಸಿ ರಚಿಸಿದನು ಹೋಮಗಳ ನಗ್ನಿಯಲಿ ॥ ೨೩ ॥ ಮೆರೆವ ವರ ಪೀತಾಂಬರವ ನಾ । ಧರಣಿತನುಜೆಯಲಂಕರಿಸಿ ಕೊಂ । ಡುರೆಮೆರೆವ ಶೃಂಗಾರಮಂಟಪದೊಳು ವಿರಾಜಿಸುತ ॥ ನೆರೆದ ಮುನಿಪತ್ನಿಯರ ನೊಲಿದಾ । ದರಿಸಿ ಮನ್ನಿಸುತ ಕೊಡುತ್ತಿದ್ದಳು । ಪರಮಸಂಭ್ರಮದಿಂದ ಲರಿಸಿನ ಕುಂಕುಮಂಗಳನು ॥ ೨೪ ॥ ವರವಿವಾಹ ಮಹೋತ್ಸವಕೆ ಬಂ । ದರಸುಗಳ ನಾರಘುವರನು ಸ । ತ್ಕರಿಸಿ ಸೋದರರೊಡನೆ ತಾನು ಪಚರಿಸು ತಡಿಗಡಿಗೆ ॥ ಪರಿಪರಿಯ ಧನಕನಕ ವಸ್ತ್ರಾ । ಭರಣಗಳ ನೊಲಿದಿತ್ತು ದಣಿಸಿದ । ನರಸುಗಳ ಯೋಗ್ಯತೆಗಳನು ತಾನರಿತು ಮನ್ನಿಸುತ ॥ ೨೫ ॥ ಮೊಳಗುತಿದ್ದವು ಬಹುಳವಿಧಮಂ । ಗಳಕರದ ವಾದ್ಯಂಗಳೆಲ್ಲವು । ತಳುವದಂದಾಗಿಸುತ ಸೇರಿದ ಜನಕೆ ಹರ್ಷವನು ॥ ಬಳಿಕ ಬಂದನು ಭೂರಿಕೀರ್ತಿಬ । ಹುಳ ವಿಭವದಿಂದಾ ರಘುವರನ । ನಿಳಯಕೆ ಕುಶಲವರನು ತನ್ನಯ ಮನೆಗೆ ಕರೆತರಲು ॥ ೨೬ ॥ ಮೆರೆವ ರಘುನಂದನನ ವರಮಂ । ದಿರದ ಮಂಜುಳ ಮಂಟಪದೊಳಾ । ಧರಣಿಪಾಲಕ ಭೂರಿಕೀರ್ತಿಯು ಮೊದಲನೆಯಮಗನು ॥ ವರಪುರೋಹಿತ ನಪ್ಪಣೆಯನನು । ಸರಿಸುತಲೆ ವರಪೂಜೆಯನು ತಾಂ । ವಿರಚಿಸಿದನತಿವೈಭವದೊಳಾನಂದವನುತಾಳ್ದು ॥ ೨೭ ॥ ಲವನಿಗತ್ಯಾನಂದದೀಡೊಡ । ನವನಿಪಾಲಕ ನೆರಡನೆಯ ಮಗ । ನವಸರಗೊಳುತ ಬಂದು ವರಪೂಜೆಯನು ಮಾಡಿದನು ॥ ಲವಕುಶರು ಮಾವಂದಿರುಗಳಾ । ದಿವಸ ಕೊಟ್ಟವಸನಗಳ ನುಡು

ತ | ರವಿಶಶಿಗಳಂದದೊಳು ರಂಜಿಸುತ್ತಿದ್ದರಡಿಗಡಿಗೆ || ೨೮ || ತಳೆದಲಂ
ಕೃತಿಯಿಂದೆ ಸಲೆಕಂ | ಗೊಳಿಸುವೆರಡಾನೆಗಳ ಕೊರಳೊಳು | ಕುಳಿತು
ಕೊಳ್ಳುತಕೂಡೆ ಲವಕುಶರಧಿಕವೈಭವದೆ || ಪಲವುಬಗೆಯ ವಿನೋದಗಳ
ನೆಸ | ಬಲವನೋಡುತ ತಾವುಬಂದರು | ಪೊಳಲಮಧ್ಯದೆ ಭೂರಿಕೀರ್ತಿ
ಯು ರಾಜಮಂದಿರಕೆ || ೨೯ || ಅರಮನೆಯ ಬಾಗಿಲೊಳು ಮದಕಾಂ |
ಚರಗಳಿಂದಾ ಕುಶಲವರಿಳಿದು | ಮೆರೆವ ವರವೈವಾಹಮಂಟಪಕೊಸನೆ
ನಡೆತಂದು || ವರಪುರೋಹಿತರಾಜ್ಞೆಯನು ತಳೆ | ದುರೆಮೆರೆವ ಮಂಗಳ
ಕರವೆನಿಪ | ಸುರುಚಿರದ ಪೀಠಂಗಳೊಳು ಕುಳಿತರತಿಹರ್ಷದಲಿ ||೩೦||
ಬಳಿಕ ಮಧುಪರ್ಕಾದಿ ಕರ್ಮಂ | ಗಳನು ಕುಶಲವರಿಗೆಸಗಿದರು ಬ |
ಹುಳ ವಿಭವಪೆಂದಾ ನೃಪನ ಸುತರಿಬ್ಬರಾದರಿಸಿ || ನೆಲದಣುಗಿ ರಾಘವೆ
ರು ಸಂತಸ | ವಳೆದು ಸಲೆಸತ್ಕರಿಸಿದರು ಮುನಿ | ತಿಳುಹಿದಂತಾ ಚಂಪಿ
ಕಾಸುಮತ್ರಿಗಳ ವೀಕ್ಷಿಸುತ || ೩೧ || ಬಂದುವೇದಿಕೆಯೊಳು ಮುನಿಪ
ನಾ | ನಂದದಿಂದಲೆ ಚಂಪಿಕೆ ಕುರ | ನಂದುನಿಲ್ಲಿಸಿ ಸುಮತ್ರಿಲವರ
ನವರಸವಿಲಾಸದೊಳು || ಚಂದದಿಂದುರೆ ಕಂಗೊಳಿಪ ಮ | ತ್ತೊಂದು
ವೇದಿಕೆಯಲ್ಲಿ ನಿಲ್ಲಿಸು || ತಂದಮೆನೆ ಪೀತಾಂಬರದ ತೆರೆವಿಡಿದ ಮಧ್ಯದ
ಲಿ || ೩೨ || ತಳುವದಂದು ಸ್ವಸ್ತಿವಾಚನ | ಗಳನು ತಾಪಸರೊಲಿದು
ಪೇಳುತ್ತಿ | ರ ಲದನಾಲಿಸುತಾ ವಸಿಷ್ಠಮುನೀಂದ್ರನಾದರದೆ || ಹಲವುಬ
ಗೆಯುಹ ಮಂಗಳಾಷ್ಟಕ || ಗಳನು ತಾನುಚ್ಚರಿಸಿ ಸಂತಸ | ದೊಳು
ತೆಗೆಮುತೆರೆಯುನ್ನು ಜೀರಕ ಗುಡವನಿರಿಸಿದನು || ೩೩ || ವೇದವಿಧಿಗನುಸಾ
ರವಾಗಿಯೆ | ಸಾದರದೊಳಾ ಮುನಿವಸಿಷ್ಠನು | ಮೇದಿನೀಸುತೆ ಸೂನು
ಗಳೆನಿಸುವ ಕುಶಲವರಿಂಗೆ || ಮೇದಿನೀಸುರ ರವನಿಪಾಲಕ | ರಾದಿ ಯಾ
ದವ ರೊಪ್ಪುವೆಂದದೊ | ಳಾದಿಯಿಂದೆ ವಿವಾಹಕರ್ಮವನೆಲ್ಲ ಮಾಡಿಸಿದ
|| ೩೪ || ಬಳಿಕುಭಯ ದಂಪತಿಗಳನು ಮುನಿ | ಕುಲತಿಲಕನಂದೆರಡು
ವೇದಿಕೆ | ಗಳೊಳು ನಿಲ್ಲಿಸಿ ಯಕ್ಷತಾರೋಪಣೆಯನಾಗಿಸುತ || ಪಲವುತ
ರವಹ ವೇದಮಂತ್ರಂ | ಗಳನು ಪೇಳ್ದಗ್ನಿಯೊಳಗವರಿಂ | ದೊಲಿದು
ಲಾಜಾಹೋಮವನು ಮಾಡಿಸಿದನಾಬಳಿಕ || ೩೫ || ವರವಸಿಷ್ಠಮುನೀ
ಶ್ವರನು ತಮ | ಗರುಹಿದಂದದೊಳಾ ಕುಶಲವರ | ವರವರ ಸತಿಗಳೊ
ಡನೆ ಹೋಮಾನಲಗೆ ಮಣಿದೆರಗಿ || ಪರಮಸಂಮದದಿಂದೆ ವೈಶ್ವಾ |
ನರನ ಸುತ್ತಲು ಮೂರುಸಲ ತಾ | ವ್ತಿರುಗಿದರು ಮಂತ್ರಗಳನುಚ್ಚರಿ
ಸುತ್ತ ಭಕ್ತಿಯಲಿ || ೩೬ || ಆದುದವರ ವಿವಾಹವೈಭವ | ವೈದಸಯು

ದಿವಸದೊಳು ಮುನಿವರ । ನಾದರದೊಳಾಗಿಸುತ ನಾಕಬಲಿಯು ಮಹೋ
ತ್ಸವವ ॥ ವೇದವಿಹಿತ ವಿಧಾನದಿಂ ಹೋ । ಮಾದಿಗಳ ನಂದನುದಿನ ವತಿ
ವಿ । ನೋದದೊಳು ಮಾಡಿಸಿದನೆಲ್ಲರ ಮನವನೊಪ್ಪಿಸುತ ॥ ೩೭ ॥
ಮೊದಲುದಿನ ದಿಂದೆಂಟನೆಯು ದಿವ । ಸದ ಕೊನೆತನಕ ಭೂರಿಕೀರ್ತಿನೆ ।
ರೆದಖಿಳ ಮಹೀಪಾಲಕರಿಗೆ ಸಮಸ್ತ ವಿಪ್ರರಿಗೆ ॥ ಸದಯದಿಂದಲೆ ಹಗಲಿ
ರುಳು ದಣಿ । ಸಿದ ನುಪಚರಿಸಿ ನಲಿದು ಪ್ರಾಷ್ಟಾ । ನ್ನದೊಡನೆ ಬಹು
ಳ ಭಕ್ಷ್ಯ ಭೋಜನಗಳನು ಮಾಡಿಸುತ ॥ ೩೮ ॥ ಅವರವರ ಮರ್ಯಾ
ದೆಗಳಿಗೆ ಸ । ಮಮೆನಿಪಂತಾ ಭೂರಿಕೀರ್ತಿಯು ॥ ರವಿಕುಲೋತ್ತಮ
ರಾಘವೇಶ್ವರನು ಮೊಲಿದತಿಹಿತದೆ ॥ ಅವನಿಪಾಲಕರೆಲ್ಲರಿಗೆ ತಾ । ವ್ಹವೆ
ದೊಳಿತ್ತುಪಚರಿಸುತ್ತಿದ್ದರು । ವಿವಿಧವಸ್ತ್ರಾಭರಣಗಳ ನತ್ಯಧಿಕಹರ್ಷ
ದಲಿ ॥ ೩೯ ॥ ಧರಣಿಸುರರಿಗಖಿಳ ಮುನೀಂದ್ರರಿ । ಗೆರಗಿ ಕೊಟ್ಟರು ವಿ
ವಿಧವಸ್ತ್ರಾ । ಭರಣ ರತ್ನಾದಿಗಳ ನಾದರದೊಳುಪಚರಿಸುತ್ತ ॥ ದೊರೆಗ
ಳೆಲ್ಲರು ಬಳಿಕ ರಘುಭೂ । ವರನ ಪದಕೆರಗುತ್ತ ಪೋದರ । ವರವನಿ
ವಾಸಂಗಳಿಗೆ ಬಂದಂತೆ ಶೀಘ್ರದಲಿ ॥ ೪೦ ॥ ಬಂದುಲಕ್ಷದ ವಾರಣಂಗಳನಿ ।
ನೊಂದು ಲಕ್ಷದ ರಥಗಳನು ಮ । ತ್ತೊಂದು ಲಕ್ಷದ ಪಲ್ಲಕಿಗಳನು ಶೀ
ಘ್ರಗಮನವನು ॥ ಹೊಂದಿ ಕಂಗೊಳಿಪೈದು ಲಕ್ಷದ । ಸುಂದರಹಯಂಗ
ಳನು ಸಂಮುದ । ದಿಂದೆ ಕೊಟ್ಟನು ಭೂರಿಕೀರ್ತಿ ಕುಶಲವರಿಬ್ಬರಿಗೆ
॥ ೪೧ ॥ ಕನಕಮಯಪಾತ್ರಂಗಳನು ಮೋ । ಲೆನಿಪ ಪೀತಾಂಬರಗಳನು
ಪಾ । ವನತರದ ವಸ್ತ್ರಾಭರಣಗಳ ನುತ್ತಮೋತ್ತಮದ ॥ ವಿನುತ ಕಂ
ಬಳಗಳನು ದಾಸೀ । ಜನಗಳನು ಸಂತಸದೊಳಿತ್ತನು । ಮನುಜಪಾಲಕ
ಪಾರಿತೋಷಕವೆನಿಸುತಳಿಯರಿಗೆ ॥ ೪೨ ॥ ಅಳಿಯರಿರ್ವರ ನಡಿಗಡಿಗೆ
ತಾ । ನೊಲಿದು ಮನ್ನಿಸುತಾನೃಪಾಲಕ । ಬಳಿಕ ಚಂಪಿಕೆ ಸುಮತಿಗಳ
ನಾ ಕುಶಲವರಸಹಿತ ॥ ಕಳುಹಿಕೊಟ್ಟನು ನೀತಿ ವಾಕ್ಯಂ । ಗಳನು
ತಿಳಿಸುತ ವೈದಡವಿ ಕಂ । ಗಳೊಳು ಕಂಬನಿವಿಡಿದು ನೋಡುತ ಪಥದೊ
ಳಡಿಗಡಿಗೆ ॥ ೪೩ ॥ ಸತಿಸಹೋದರರೊಡನೆ ರಘುಭೂ । ಪತಿ ಕುಶಲವೆ
ರುಗಳ ನವರವರ । ಸತಿಗಳಸಹಿತ ದಿವ್ಯರಥದೊಳು ಕುಳ್ಳಿರಿಸಿಕೊಂ
ಡು ॥ ಅತಿವಿಭವದಿಂದಾ ನೃಪನನೊಲಿ । ಸುತ ಭರದೊಳೈತಂದನಾ ಜ
ನ । ತತಿಯುಮಧ್ಯೆದೊಳಂದಯೋಧ್ಯಾಪುರಿಗೆ ಶೀಘ್ರದಲಿ ॥ ೪೪ ॥ ಇರ
ಲಿರಲು ಬಳಿಕೊಂದುದಿನ ರಘು । ವರನು ಬಂದನು ಕುಂಭಸಂಭವ
ನುರುತರದ ಪುಣ್ಯಾಶ್ರಮಕೆ ಭೂನಂದನೆಯುಸಹಿತ ॥ ಅರಿದಗಸ್ತ್ಯಮು

ನೀಂದ್ರನತ್ಯಾ | ದರದೊಳಾ ರಘುಭೂವರನ ನುಪ | ಚರಿಸಿ ಕುಳ್ಳಿರಿಸಿ
ದನು ಮನ್ನಿಸುತುಚಿತ ಪೀಠದಲಿ ॥ ೪೫ ॥ ಮುನಿಕುಲೋತ್ತಮನೊ
ಡನೆ ತನ್ನೆಲೆ | ವನೆಮೊಳಗುನ್ನತ | ಭಕ್ತಿಯಿಂದೆಹ | ರನಮಡದಿಯೆನಿಪ
ನ್ನಪೂರ್ಣೆಯನೊಲಿದು ಜಾನಿಸಲು ॥ ಮನವೊಲಿದು ದಾಕ್ಷಾಯಿಣಿಯು
ಗ | ಸ್ತ್ಯನಿದಿರೊಳು ನಿಂದಿತ್ತು ಪಾಯಸ | ವ ನಿರಿಸಿದ ಬಟ್ಟಲನು
ಕೂಡೆ ಯದೃಶ್ಯಳೆನಿಸಿದಳು ॥ ೪೬ ॥ ಬಳಿಕ ಲೋಪಾಮುದ್ರೆಸಂತ
ಸ | ದಳೆದು ಪಾತ್ರೆಯೊಳಿದ್ದ ಪಲತೆರ | ಗಳೆನಿಸಿದ ಶಾಲ್ಯನ್ನ ಭಕ್ಷ್ಯಂಗ
ಳನು ಕೈಕೊಂಡು ॥ ನೆಲದಣುಗಿ ಗಾಗಿಸುತ ಮುದವನ | ಖಿಳ ಮು
ನೀಂದ್ರರ ಸಹಿತ ಭಾಸ್ಕರ | ಕುಲತಿಲಕನಿಗೆ ಬಡಿಸಿ ಭೋಜನ ಮಾಡಿಸಿ
ದಳಂದು ॥ ೪೭ ॥ ಮುನಿಯಗಸ್ತ್ಯನ ನಂತರದೊಳಾ | ಮನುಕುಲೋ
ತ್ತಮ ರಾಘವನು ಮೊದ | ಲೆನಿಸಿದ ಸಮಸ್ತ ಮುನಿಸಂದೋಹವನು
ಮನ್ನಿಸುತ ॥ ವಿನುತ ಚಂದನ ಪುಷ್ಪ ವೀಳೆಯ | ಘನಸುವಸ್ತ್ರಂಗ
ಳನು ಕೊಟ್ಟತಿ | ವಿನಯ ವಚನಗಳಿಂದೆ ತೃಪ್ತಿಪಡಿಸಿದ ನಡಿಗಡಿಗೆ
॥ ೪೮ ॥ ಕರುಣದಿಂದೀಕ್ಷಿಸುತ ತಾಪಸ | ವರನು ಕೊಟ್ಟನು ರಾಘವೇಂ
ದ್ರನಿ | ಗುರೆ ವಿರಾಜಿಪ ರತ್ನ ನಿರ್ಮಿತ ಕಂಕಣಂಗಳನು ॥ ಧರಣಿಜಾತೆ
ಗೆ ಕೊಟ್ಟನಾಮುನಿ | ವರನು ಥಳಥಳಿಸುತ್ತ ಕಂಗೊಳಿ | ಪೆಡು ದಿವ್ಯ
ಸುಕುಂಡಲಂಗಳ ನೊಲಿದು ಮನ್ನಿಸುತ ॥ ೪೯ ॥ ಮುನಿಕುಲೋತ್ತ
ಮನೆನಿಪಗಸ್ತ್ಯನ | ಮನವನೊಪ್ಪಿಸುತೊಡನೆ ರಘುನಂ | ದನನು
ಬಂದನು ದಂಡಕಾವನ ಕವನಿಸುತೆ ಸಹಿತ ॥ ವನದ ಮಧ್ಯದೊಳೈತರು
ತತ | ನ್ನನಿಯಳಿಗೆ ನಲವಿಂದೆ ತೋರಿಸಿ | ದನುಪಲವುಬಗೆಯಾ ವಿನೋ
ದಂಗಳನು ಮುಂದುಗಡೆ ॥ ೫೦ ॥ ಬರುತ ಕಂಡನು ಕೂಡೆಪಂಚಾ |
ಪ್ಸರಸೆನಿಪ ಪೆಸರಿಂದೆಸೆವ ಪು | ಷ್ಕರಿಣಿಯೊಂದನು ರಾಘವೇಶ್ವರನಾ
ವನದನಡುವೆ ॥ ಮೆರೆವ ಕಾಸಾರದ ದಡದೊಳೆ | ಲ್ಲರ ಸಹಿತ ತಾಂ ರಾ
ತ್ರಿ ವಸಿಸು | ತ್ತರಸಿಯೊಡನೆ ಮಲಗಿದನುತ್ತಮಮೆನಿಪ ಮಂಚದಲಿ
॥ ೫೧ ॥ ಮಲಗಿಕೊಂಡೀಕ್ಷಿಸಿದ ನಾ ಮನು | ಕುಲತಿಲಕ ನಪ್ಸರಸರೆಂ
ಬಾ | ಲಲನೆಯರ ಘನನೃತ್ಯವನತಿ ವಿನೋದವನುತಾಳ್ದು ॥ ಪಲವುಬಗೆ
ಯಿಂದೆಸೆವ ರಾಗಂ | ಗಳನು ಕೇಳಿದ ನಲ್ಲಿಸಂತಸ | ದಳೆದು ಜಾನಕಿ
ಸಹಿತ ಘನಲೀಲಾವಿನೋದದಲಿ ॥ ೫೨ ॥ ವರಮುನೀಂದ್ರನ ಕರುಣೆ
ಯಿಂದ | ಪ್ಸರ ಸರಾಸತ್ಸಂಗತಿಯನಾ | ದರಿಸಿ ಕೇಳುತ ವಿಸ್ಮಯವ
ನಾಂತಾ ರಘೊತ್ತಮನು ॥ ಪರಮಕರುಣಾತಿಶಯದಿಂದುಪ | ಚರಿಸುತವೆ

ರೆಲ್ಲರ ನಯೋಧ್ಯಾ । ಪುರವರಕೆ ಕರೆತಂದನಾಧರಣೀಸುತೆಯುಕೂಡೆ ॥ ೫೩ ॥ ಪತ್ರಿಗೆ ಸಂತೋಷವನೆಸಗುತಾ । ಕ್ಷಿತಿಸುತೆ ಮಹಾವಿಭವದಿಂದೆ ಸ । ತತ ಮಧಿಕಸೌಖ್ಯಗಳ ನಡಿಗಡಿಗನುಭವಿಸುತಂದು ॥ ವಿತತ ವಿಭವಂಗಳನು ನೆರೆನೋ । ಡುತ ಮೆಸಿಸುತಿದ್ದಳು ನಿರಂತರ । ಹಿತದೊಳಾನಂದ ಪಡಿಸುತಖಿಳ ಜನರನುಪಚರಿಸಿ ॥ ೫೪ ॥

ಇಂತು ನಲವತ್ತೊಂದನೆಯ ಅಧ್ಯಾಯ ಸಂಪೂರ್ಣವು.

ಪದ್ಯಗಳು ೭೩೧೩.



## ನಲವತ್ತೆರಡನೆಯ ಅಧ್ಯಾಯ.

ಸೂಚನೆ ॥ ಬಂದ ದುರ್ವಾಸಮುನಿಯುಂ ನಲ ।
ವಿಂದುಪಚರಿಸಿ ವಿರಹತಾಪದೊ ।
ಳಂದು ತಪಿಸುತ ಮತ್ತೆ ಬಂದಳು ಲಂಕೆಗವನಿಜೆಯು ॥

ಹರುಷದಿಂದಿಂತಿರಲು ಕಾಲಾಂ । ತರದೊಳೊಂದಾನೊಂದುದಿನ ರಘು । ವರ ನರಮನೆಯ ಮುಂದುಗಡೆ ದುರ್ವಾಸಮುನಿವರನು ॥ ಭರದೆ ಬಂದನು ತನ್ನನೊಲಿದುಪ । ಚರಿಸಿ ಸಂತುಷ್ಟಿಪಡಿಸುತ್ತೆ । ತರುತಲಿರ್ಪರವತ್ತುಸಾವಿರ ಶಿಷ್ಯರೊಡಗೂಡಿ ॥ ೧ ॥ ಬಾಗಿಲೊಳು ನಿಂದಾ ಮುನಿಪನಂ । ಬೇಗನೆ ಚರರು ಕಂಡು ಬಂದಾ । ರಾಘವೇಂದ್ರನ ಪದಕೆರಗಿ ಬಿನ್ನೈಸಲತಿಭರದೆ ॥ ಆಗಲಾ ಮುನಿಪಾಲನೆಡೆಗೆ ಸ । ರಾಗದಿಂದೈತಂದೆರಗಿ ಬಲು । ಬೇಗನೆ ರಘೂದ್ವಹನು ಕರೆತಂದನರಮನೆಯೊಳಗೆ ॥ ೨ ॥ ಸಮುಚಿತಾಸನದಲ್ಲಿ ಕೂಡಿಸಿ । ನಮಿಸಿದುರ್ವಾಸಮುನಿಪನ ಪದ । ಕಮಲ ಯುಗಕಂದರ್ಘ್ಯ ಪಾದ್ಯಾಚಮನಗಳನಿತ್ತು ॥ ದ್ಯುಮಣಿಕುಲತಿಲಕನತಿ ಭಕ್ತಿಯೊ । ಳಮಲ ವಚನಗಳಿಂದುಪಚರಿಸಿ । ವಿಮಲಮನದಿಂದಾದರಿಸಿದನು ಮುನಿಕುಲೋತ್ತಮನ ॥ ೩ ॥ ಪರಸಿ ಮಂತ್ರಾಕ್ಷತೆಯನಿತ್ತತಿ । ಕರುಣೆಯಿಂದೀಕ್ಷಿಸುತ ರಘುಭೂ । ವರನಿಗಂದಿಂತೆಂದು ನುಡಿದನು ಕೇಳು ರಾಘವನೆ ॥ ಧರಣಿಯೊಳು ನಾನೊಂದುಸಾವಿರ । ವರುಷದಿಂದಾಚರಿಸಿ ದತಿದು । ಷ್ಕರಮೆನಿಸಿದುಪವಾಸದ ವ್ರತಪೂರ್ತಿಯಾಗಿಹುದು ॥ ೪ ॥ ನನಗೆ ಹಸಿವಾಗುತಿದೆ ರಘುನಂ । ದನನೆ

ನೀಂ ಭೋಜನವನಾಗಿಪು । ದೆನುತ ನಿನ್ನನು ಕೇಳ್ವೆನೊಂದು ಮುಹೂ
ರ್ತದೊಳಗಾಗಿ ‖ ಅನಲಚಿಂತಾಮಣಿ ಸುರಭಿಗಳ । ಘನಸಹಾಯವನುಳಿ
ದು ನೀನೆನ । ಗನುಗೊಳಿಸಿ ಭೋಜನವನಾಗಿಸು ಬೇರೆವಿಧದಿಂದ ‖ ೫ ‖
ಜನರು ಕಾಣದಿರುವ ಕುಸುಮಗಳ । ನೆನಗೆ ನೀಂ ತರಿಸೀವುದೀಗ ಹ ।
ರನನೊಲಿದು ನಾನರ್ಚಿಸಲು ಹಾಗಲ್ಲದಿರ್ದೊಡೆಯುಂ ‖ ವನಕೆ ಪೋಗು
ವೆನೆಂದು ಮುನಿವರ । ನೆಸಲು ನಿಮ್ಮಭಿಲಾಷೆಯುಂ ತೀ । ಕ್ಷ್ಣಾವೆ ನೆರ
ವೇರಿಸುವೆ ನೆಂದೊಪ್ಪಿಸಿದನಾರಾಮ ‖ ೬ ‖ ಸ್ನಾನಕೋಸುಗ ಮುನಿವ
ರನು ಸರ । ಯೂನದಿಗೆ ಪೋದಾಕ್ಷಣದೊಳಂ । ದಾನರೇಂದ್ರನು ಲಕ್ಷ್ಮಣ
ನಕೈಯಿಂದೆ ಪತ್ರವನು । ಸಾನುರಾಗದೆ ಬರೆಯಿಸುತದನು । ಬಾಣದ
ಬುಡಕೆ ಕಟ್ಟಿಸೇರಿಸಿ । ತಾನುಬಿಟ್ಟನು ಶಕ್ರನಸವಿಧಪಕತಿಶೀಘ್ರದಲಿ
‖ ೭ ‖ ದೇವಪುರಿಗೈತಂದು ಘನಶರ । ಮಾವಿಬುಧಪಾಲಕನ ಸಭೆಯೊಳ ।
ತೀವಜವದಿಂದಿರದೆ ಬಿದ್ದುದು ಕೂಡೆಮುಂದುಗಡೆ ‖ ದೇವಪತಿಕಾಣುತ್ತ
ಬಾಣವ । ನಾವನದಿದೆಂದಳುಕುತಾ ರಘು । ಭೂವರನ ನಾಮವನು ಕಂ
ಡಾತನದೆನುತ ತಿಳಿದ ‖ ೮ ‖ ತಿಳಿದು ರಾಮನ ಪತ್ರವನು ಕೊಂ । ಡೊ
ಲವಿನಿಂದಮರೇಂದ್ರನತಿ ಭರ । ದೊಳದನೋದಿ ಸಮಸ್ತ ದಿವಿಷದರೊಡ
ನೆ ಯೋಚಿಸುತ ‖ ಬಳಿಕ ಸುರತರು ಪಾರಿಜಾತಂ । ಗಳನು ತನ್ನ ವಿ
ಮಾನದೊಳರಿಸಿ । ಕೊಳುತ ಬಂದನು ರಾಮಚಂದ್ರನಬಳಿಗಮರರೊಡ
ನೆ ‖ ೯ ‖ ಬಂದು ಘನದಿವ್ಯಾಸನದೊಳೊಲ । ವಿಂದೆ ಕುಳಿತಮರೇಂದ್ರ
ನಾ ರಘು । ನಂದನನ ನುರೆಹೊಗಳುತತಿ ಸಂತೋಷವನು ತಾಳ್ದು ‖
ಮುಂದಿರಿಸಿಕೊಟ್ಟನು ಸಭೆಯೊಳತಿ । ಸುಂದರಮೆನಿಸಿ ಮಾನವರ ನಾ।
ನಂದವಡಿಪಾ ಪಾರಿಜಾತ ಸುಕಲ್ಪವೃಕ್ಷಗಳ ‖ ೧೦ ‖ ಅನಿತರೊಳು ದು
ರ್ವಾಸಮುನಿಬಂ । ದನು ಸದನಕೆ ಸ್ನಾನವನೆಸಗಿ । ವಿನುತ ಸರಯೂ
ನದಿಯೊಳಾತನ ಶಿಷ್ಯರೊಡವೆರಸಿ ‖ ವಿನುತ ಪೀಠದೊಳಾ ಮುನಿಕು
ಲೇಂ । ದ್ರನನು ಕುಳ್ಳಿರಿಸುತ್ತ ರಘುವೀ । ರನೊಲಿದಿತ್ತನು ಪಾರಿಜಾತಕು
ಸುಮಗಳನುಕೂಡೆ ‖ ೧೧ ‖ ಪಾರಿಜಾತ ಕುಸುಮಗಳಿಂದೆ ಪು । ರಾರಿ
ಯನು ದುರ್ವಾಸಮುನಿಪನು । ದಾರಭಾವದೊಳರ್ಚಿಸಿದ ನತ್ಯಧಿಕಭ
ಕ್ತಿಯಲಿ ‖ ಧಾರಿಣೀಸುತೆ ಸೋದರರಸಹಿ । ತಾರಘುವರ ನಮರ
ರನೆಲ್ಲವಿ । ಚಾರಪೂರ್ವಕಮಾಗಿ ಪೂಜಿಸಿದನತಿಹರ್ಷದಲಿ ‖ ೧೨ ‖
ಧರಣಿಸುತೆ ಲಕ್ಷ್ಮಣರಿಗಾ ರಘು । ವರನು ನೇಮಿಸಿದನು ಸಮ
ಸ್ತ ಸು । ರರಿಗೆ ನೀವು ಬಡಿಸುವುದತ್ಯಾದರದೊಳೆಂದೆನುತ ‖ ವರ್ಧ

ಸುರತರುವು ಪಾರಿಜಾತೆಗ । ಳೆರಡ ನರ್ಚಿಸಿ ಜಾನಕಿಯು ಮರ । ತರುವೆ ನುರೆಕೊಂಡಾಡಿದಳಿರಿಸಿ ಕೋಟಿಪಾತ್ರಗಳ ॥ ೧೩ ॥ ಸುರರಿಗಿಷ್ಟಾರ್ಥಂ ಗಳನು ಕೊಡು । ತಿರುವೆ ನೀನವನೀರುಹಂಗಳ । ಗರಸನಾಗಿಹೆ ನೀನು ಪಾಳ್ಗಡಲೊಳುದಿಸಿಹೆ ನೀನು । ಸುರಮಹೀಜವೆ ತನ್ನ ಶಿಷ್ಯನಿ । ಕರ ದೊಡನೆ ಮಂದಿರಕೆ ನಡೆತಂ । ದಿರುವ ದುರ್ವಾಸಮುನಿಯಂದಣಿಸೆಂದು ಜೇಡಿದಳು ॥ ೧೪ ॥ ಪಡೆದಖಿಳ ವ್ಯಪಷ್ಟಾನ್ನಭಕ್ಷ್ಯಗ । ಳೊಡನೆ ಕಂ ಗೊಳಿಸುತಿಹ ಪಾತ್ರಗ । ಳೆಡೆಗೆ ಜಾನಕಿ ಬಂದವುಗಳೆಲ್ಲವನು ತೆಗೆದಿರಿ ಸಿ ॥ ತಡವಮಾಡದೆ ಸಕಲ ನಿರ್ಜರ । ರೊಡವೆರಸಿ ಕುಳಿತಾ ಮುನಿಪತಿ ಗೆ । ಬಡಿಸಿದಳು ಸೊಸೆತಂಗಿಯರ ಸಹಿತಧಿಕಹರ್ಷದಲಿ ॥ ೧೫ ॥ ರಾಮ ಭದ್ರನ ಬಿನ್ನಪಂಗಳ । ನಾಮುನಿವರೇಣ್ಯನೊಲಿದಾಲಿಸು । ತಾ ಮುನಿಸ ಮೂಹದೊಡನೆ ಸಕಲ ನಿರ್ಜರರಸಹಿತ ॥ ತಾಮನದಣಿಯೆ ಭೋಜನ ಮೆಸಗು । ತಾ ಮನುಕುಲೋತ್ತಮನು ಕೊಟ್ಟತಿ । ಕೋಮಲ ಸು ತಾಂಬೂಲ ದಕ್ಷಿಣೆಯುಕೊಳು ತಿಂತೆಂದ ॥ ೧೬ ॥ ಧರಣಿಪಾಲಕ ಕೇಳು ನೀಂ ದಶ । ಶಿರನ ಸಂಹಾರಾರ್ಥಕಾಗವೆ । ತರಿಸಿರುಮವೆನು ಜಾತಾರದೊ ಳೀ ಮಹೀತಲದೆ ॥ ನಿರುತ ವಿಜಾಗಕೀಶ್ವರನೆನಿಸು । ತಿರುವೆ ನೀಂ ಹದಿನಾಲ್ಕು ಲೋಕವ । ನಿರಿಸಿಕೊಂಡಿಹೆ ನಿನ್ನುದರದೊಳು ಸರ್ವಕಾ ಲದಲಿ ॥ ೧೭ ॥ ಜನಸಮೂಹಕೆ ನಿನ್ನ ಪೌರುಷ । ವನುತಿಳಿಸಬೇಕೆನು ತ ಯಾಚಿಸಿ । ದೆನು ವಿನುತ ಚಿಂತಾಮಣಿಯು ನಲಕಾಮಧೇನುಗಳು ॥ ನಿನಗೆ ನಿರ್ಮಿಸಿಕೊಡದ ಪರಿಯೊ । ಳ್ಘನತರದ ದಿವ್ಯಾನ್ನವನು ನಾಂ । ಜನರು ಕಾಣದ ಸುಮನಸಂಗಳ ನಿಂತುಕೇಳದೆನು ॥ ೧೮ ॥ ವೀರರಾಘ ವಕೇಳು ನಿನ್ನ ವಿ । ಚಾರವನು ತಿಳಿಯಲ್ಕವನಿಯೊಳ । ಗಾರಿಗುವು ಸಾಧ್ಯಮೆನಿಪುದು ಪರಿಭಾವಿಸುತತಿಳಿದು ॥ ಕ್ಷೀರಸಾಗರದೊಳು ಮುಳು ಗುತಿರೆ । ಭೂರಿಮಂದರ ಶೈಲವ ದನು । ದ್ಧಾರವಮಾಡಿದೆ ನೀನು ಘನಕೂ ರ್ಮಾವತಾರನಲಿ ॥ ೧೯ ॥ ಸಿರಿಯುಚಂದ್ರನು ಕಾಮಧೇನುವು । ಸುರಮ ಹೀಜವು ಕೌಸ್ತುಭವು ಅ । ಪ್ಸರರು ಧನ್ವಂತರಿಯು ಮುಚ್ಚೈಶ್ರವಸು ಮದ್ಯಗಳು ॥ ಹಿರಿಯಲಕ್ಷ್ಮಿಯು ಕಾಲಕೂಟವು । ಸುರುಚಿರಸುಧೆ ಯು ಪಾರಿಜಾತವು । ಸುರಪನೈರಾವತಗಳವು ನಿನ್ನಿಂದೆ ಹೊರಟಹವು ॥ ೨೦ ॥ ಅಮರರೆಲ್ಲರು ನಿನ್ನ ನೇಮವ । ನಮಲಮನದಿಂದೊಲಿದು ಕೇಳ್ವರು । ಕಮಲನೇತ್ರನೆ ನಿನಗೆ ದುರ್ಘಟಮೆಂಬುದೊಂದಿಲ್ಲ ॥ ವಿ ಮಲಮನದಿಂದಖಿಳ ಮಾನವ । ಸಮುದಯಕೆ ವಿಸ್ಮಯವನೀಯುತ ।

ವಿಮಲಭಾವದೊಳಾಗಿಸಿದೆ ನೀನೆನ್ನಭೀಷ್ಟವನು ‖ ೨೧ ‖ ಆವನರನಿಂತೆನಗೆ ಪೂರ್ವದೊ । ಳೀ ವಸುಧೆಯೊಳು ತೋರಿಸಿಲ್ಲವು । ಹೀವರನೆ ನೀನೆನಗೆ ಸದ್ಗತಿಯನೊಲಿದಾಗಿಸುವೆ ‖ ಸಾವಧಾನವೆ ಸೃಷ್ಟಿವಮಾಡಿಹೆ । ಕಾವುತಿಹೆ ಹದಿನಾಲ್ಕುಲೋಕವ । ಹೇವರಿಸಿ ನಾಶವನು ಮಾಡುವನಾಗಿರುವೆ ಮುಂದೆ ‖ ೨೨ ‖ ಮನ್ನಿಸಲೆ ರಘುನಂದನನ ನೀ । ನೆನ್ನ ತಪ್ಪಿತಗಳ ನೆನುತ ಸಂ । ಪನ್ನಮತಿ ದುರ್ವಾಸಮುನಿಪೊಗಳುತ್ತ ಕೈಮುಗಿದು ‖ ಸನ್ನುತ ವಚನದಿಂದೆ ರಾಘವ । ನನ್ನು ಸಂತಸವಡಿಸಿ ಬಂದನು । ತನ್ನ ವಿಮಲ ತಪೋವನಕೆ ನಿಜಶಿಷ್ಯರೊಡವೆರಸಿ ‖ ೨೩ ‖ ತೆರಳಿದರು ಸುರರೆಲ್ಲ ಸಗ್ಗಕೆ । ಧರಣಿಪತಿ ರಾಘವನ ನೇಮವ । ಶಿರದೊಳಾನುತ ಕಲ್ಪವೃಕ್ಷನ ಮೂಲಭಾಗದೊಳು ‖ ಮೆರೆವ ಮಣಿಪರ್ಯಂಕದೊಳು ರಘು । ವರನು ತಾನನುಭವಿಸುತಿದ್ದನು । ಪರಿಪರಿಯ ಭೋಗಂಗಳನು ಸತಿಸಹಿತ ಹರ್ಷದಲಿ ‖ ೨೪ ‖ ಧಾರಿಣಿಯೊಳಾ ಪಾರಿಜಾತ ಮ । ಹೀರುಹದ ಶಾಖಾಶಕಲಗಳ್ । ಪಾರಿಜಾತ ಮಹೀಜಗಳೆನಿಸಿ ತೋರ್ಪುದಿದುವರೆಗೆ ‖ ಸಾರತರವೆಂದೆನಿಪ ಕಲ್ಪಮ । ಹೀರುಹದ ಭಾಗಗಳ ಬಗೆಯು । ಲ್ಲಧರಿಣಿಯೊಳಶ್ವತ್ಥ ವೃಕ್ಷಗಳೆನಿಸಿಕೊಂಡಿಹವು । ೨೫ ‖ ಇರುತಿರಲು ಬಳಿಕೊಂದುದಿನ ರಘು । ವರನಬಳಿಗೆ ವಿಭೀಷಣನು ಬಂ । ದೆರಗಿ ಕೈಮುಗಿದಿತ್ತು ಕಪ್ಪವನತಿ ವಿನಯದಿಂದೆ ‖ ಪರಮಖೇದವನಾಂತರುಹಿದನು । ದುರುಳ ಪೌಂಡ್ರಕನೆಂಬ ರಜನೀ । ಚರನದೆಸೆಯಿಂ ತನಗೆ ಬಂದೊದಗಿದತಿ ಸಂಕಟವ ‖ ೨೬ ‖ ಜನಪ ಕೇಳೆಂದು ಮಡಿದನಿ ಕುಂ । ಭನ ಕುಟುಂಬಿನಿ ಹೆತ್ತಳು ಬಹುಳ । ದಿನಕೆ ಪೌಂಡ್ರಕನೆಂಬಸುರನನು ತಾಳ್ದುಗರ್ಭವನು ‖ ದನುಜಜನವನಾ ಪಾಲ್ಗಡಲಿ ನಾ । ಸನಿಹದೊಳಸೆವ ವಿನುತಶೋಣಿತ । ಟನಿಯ ತೀರದೊಳಿರುವ ಮಾಯಾಪುರವರಕೆ ಪೋಗಿ ‖ ೨೭ ‖ ನೂರುತಲೆಗಳನೈದುತವನಿ । ನ್ನೂರು ಕೈಗಳ ನಾಂತೆಸೆವ ಬಹು । ಶೂರನಹ ಶತಕಂಠರಾವಣನೊಡನೆ ಸಖ್ಯವನು ‖ ತಾರಚಿಸಿ ಲಂಕಾಪುರಿಗೆ ಬಂ । ದಾರಜನಿಪನ ನೆರವಿಯಿಂದಲೆ । ದಾರುಣವೆನಿಪ ಯುದ್ಧರಂಗದೊಳೆನ್ನ ಸೋಲಿಸಿದ ‖ ೨೮ ‖ ಬಳಿಕ ಲಂಕಾಪುರಿಗೆ ನಡೆತಂ । ದೊಡೆಯನಾಗುತ ಲಂಕೆಯಿಂದೆ । ಹೊರಡಿಸಿದನು ಪೌಂಡ್ರಕನೆನುತ್ತ ವಿಭೀಷಣನರುಹಲು ‖ ಕಡುಜವದೆ ರಘುನಾಥನಾತನ । ನುಡಿಯ ನಾಲಿಸುತತಿಭರದೊಳಾ । ಪೊಡವಿಯಣುಗಿಯಕೂಡೆ ಲಂಕಾಪುರಕೆ ನಡೆತಂದ ‖ ೨೯ ‖ ಬಂದುಘನಸಂಗ್ರಾಮದೊಳು ರಘು । ನಂದನನು ಶತಕಂ

ತರಾವಣ | ನೊಂದುಶರದಿಂದೆಚ್ಚು ಮೂರ್ಛೆಗೆಡಹಿದ ಸಿಳಿಯೊಳಗೆ || ಸುಂದರಾಂಗನೆ ಸೀತೆ ರಣದೊಳ | ಗೊಂದು ಬಾಣವ ನೆಚ್ಚು ಶೀಘ್ರದೆ | ಕೊಂದಳಾಶತಕಂಠರಾವಣ ಪಾಂಡ್ರಕರುಗಳನು || ೩೦ || ವರವಿಭೀಷಣನಿಗೊಲಿದಾ ರಘು | ವರನು ಲಂಕಾರಾಜ್ಯವನು ಕೊ | ಟ್ಟರಸಿಯೊಡನಾ ಲಂಕೆಯನುಳಿದು ಬಹುಳ ಶೀಘ್ರದಲಿ || ಮೆರೆವಯೋಧ್ಯಾಪುರಿಗೆ ಬರುತಲೆ | ಹರುಷದಿಂದೆಲ್ಲರನು ನಿತ್ಯವು · ಪೊರೆವುತಿದ್ದನು ಮಕ್ಕಳಂದದೊಳತಿ ಕರುಣೆಯಿಂದೆ || ೩೧ || ಅಳುಕುತ ವಿಭೀಷಣನು ಮನುಕುಲ | ತಿಲಕನೆಡೆಗೈತಂದು ಚರಣಕ | ಮಲಕೆ ನಮಿಸುತ ಮತ್ತೆ ಕೇಳಿದಿನ ವಾದನಂತರದೆ || ಜಲಜನೇತ್ರನೆ ಕೇಳು ಬಹುದಿನ | ಗಳಿಗೆ ಪೂರ್ವದೆ ಕುಂಭಕರ್ಣ ನೊ | ಡಲೊಳು ಪುಟ್ಟಿದ ನೊಬ್ಬ ಕುವರನು ಮೂಲಋಕ್ಷದಲಿ || ೩೨ || ಭರದೊಳೀಕ್ಷಿಸಿ ಸುತನ ನಾದಶ | ಶಿರನ ತಮ್ಮನು ಭೀತಿವಡೆದೀ | ತರಳನಿಂದಲೆ ತನಗೆಮರಣವು ಸಂಭವಿಪ್ಪುದೆನುತ || ಅರಿದು ಸೇವಕರಂ ಕರೆಯಿಸುತ | ಮರರಿಪುನುಡಿದನಡವಿಯೊಳು ನೀ | ವಿರಿಸಿ ಬಹುದೀ ಮಗುವನೊಂದೆಡೆ ಮರದಕೆಳಗೆನುತ || ೩೩ || ಅಸುರನಾಥನನೇಮವನು ತಾ | ಳ್ದಸುರರಾ ಪಸುಳೆಯ ನಡವಿಯೊಳು | ಬಿಸುಟರೊಂದಾನೊಂದು ಮರದಾಕೆಳಗೆ ಸೆಳೆದೊಯ್ದು || ಪಸುಳೆಬೆಳೆದನು ಜೇನು ಹುಳುಗಳು | ವಸುಧೆಯೊಳಗೋಕರಿಸಿ ಸಲೆಪಸ | ರಿಸಿದವಮನಜಲವನು ಪದೆದೀಂಟುತ್ತ ದಿನದಿನವು || ೩೪ || ಅರಸಚಿತ್ತೈಸಣುಗನಂದಾ | ಮರದಕೆಳಗಭಿವೃದ್ಧಿಯಾಗು | ತ್ತಿರಿದು ನಿನ್ನಿಂದಾದ ಲಂಕಾನಾಶವನು ಬಳಿಕ || ಭರವೊಳತಿ ಭೀಕರತಪವನಾ | ಚರಿಸಿ ಮೆಚ್ಚಿಸಿ ಹೊಂದಿದನು ಪಂ | ಕರುಹಸಂಭವನಿಂದೆ ಮೇಲೆನಿಪಖಿಳ ವರಗಳನು || ೩೫ || ಮುಳಿದು ಗರ್ವಿಸಿ ಹುಂಕರಿಸುತಾ | ಖಿಳನಿರದೆ ಪಾತಾಳಲೋಕದ | ಖಿಳ ನಿಶಿಚರರಸಹಿತ ಲಂಕಾಪುರಕೆ ನಡೆತಂದು || ತಳುವದೆನ್ನೊಡನಾರುಮಾಸ ಜ | ಗಳವನಾಗಿಸಿ ಸೋಲಿಸುತ ಬಲು | ಬಲುಮೆಯಿಂದಲೆ ನನ್ನ ಹೊರಡಿಸಿ ಪೊರೆವಲಂಕೆಯನು || ೩೬ || ಮನುಜಪತಿ ಕೇಳವನ ನೀಮೋ | ದಿನಿಯೊಳೆಲ್ಲರು ಮೂಲಕಾಸುರ | ನೆನುತ ಪೇಳುವರವನು ನನ್ನನು ಯುದ್ಧಭೂಮಿಯಲಿ || ಕನಲಿನೋಡುತ ತ್ರಿಳುಹಿದನು ನಿ | ನ್ನನು ಮೊದಲು ಕೊಂದಾಬಳಿಕ ರಾ | ಮನನು ಕೊಲ್ಲುವೆನೆನುತ ಗರ್ಜಿಸಿ ಕಡಿದು ಪಲ್ಗಳನು || ೩೭ || ನನ್ನ ತಂದೆಯ ನಿರಿದವನ ಕುಲ | ವನ್ನು ನಾಶನಮಾಡುವೆನು ನಾ | ನೆನ್ನುತ ಶಪಥ

ಮಾಡಿರುವನಾ ಮೂಲಕಾಸುರನು ॥ ನಿನ್ನ ಮನದೊಳಗೇನು ಯೋಚನೆ । ಯನ್ನು ಮಾಡಿಹೆ ರಾಘವೇಂದ್ರನೆ । ಮುನ್ನದನು ಮಾಡೆನುತ ಪೇಳ್ದನಾ ವಿಭೀಷಣನು ॥ ೩೮ ॥ ಆ ನುಡಿಯ ನಾಲಿಸುತ ದೂತರ । ವಾನರೇಂದ್ರನು ಕರೆದು ಪೇಳ್ದನು । ಸೇನೆಸಹಿತ ಸಮಸ್ತ ರಾಜರ ಕರೆತರಪುದೆನುತ । ನೀನು ಹೇಳಿದ ಮಾತನು ಶಿರದೊ । ಳಾನುತ ಕೆಲರು ಬಂದಿಹರುಳಿ । ದಾನುಡಿಯ ನುಲ್ಲಂಘಿಸಿಹರೆಂದರುಹಿದರು ಚರರು ॥೩೯॥ ಚರರ ಮಾತನು ಕೇಳ್ದು ರಘುಭೂ । ವರನು ಕೋಪಾವಿಷ್ಟನಾಗುತ । ಭರದೆ ಪೇಳ್ದನು ಮೊದಲು ಕೊಂದಾ ಮೂಲಕಾಸುರನ ॥ ಧರೆಯೊಳನ್ಯಾಜ್ಞೆ ಯನು ಮೀರಿರು । ವರಸರನು ಸೋಲಿಸುವೆ ಘನಸಂ । ಗರದೊಳಾನೆಂದೊರೆದು ಲಂಕೆಗೆ ಹೊರಡಲನುವಾದ ॥ ೪೦ ॥ ಇರಿಸಿ ಸೀತಾದೇವಿಯನು ತ । ನ್ನರಮನೆಯೊಳಾ ಯೂಪಕೇತುವ । ನಿರಿಸಿ ಪುರರಕ್ಷಣೆಗೆ ಮಿತಸೈನ್ಯವನು ಕೈಕೊಂಡು ॥ ವರಶುಭಮುಹೂರ್ತದೊಳಗಾ ರಘು । ವರನ ಯೋಧ್ಯೆಯ ನುಳಿದು ಲಂಕಾ । ಪುರಕೆ ಬಂದನು ಪರಿಪರಿ ವಿನೋದಗಳ ನೀಕ್ಷಿಸುತ ॥ ೪೧ ॥ ಸಂಗರಕೆ ರಾಘವನು ಬಂದಿಹ । ಸಂಗತಿಯನರಿದತಿ ಭರದೊಳಾ । ತುಂಗವಿಕ್ರಮ ಮೂಲಕಾಸುರ ನಿರದೆ ಕಾಳಗಕೆ ॥ ಸಂಗಳಿಸಿ ಬಂದೊದಗಿದಾ ಚತು । ರಂಗ ಸೈನ್ಯದ ಸಹಿತನಿಂದನು । ಸಂಗರಕೆ ಲಂಕಾಪುರದ ಹೊರಗಡೆಯ ಭೂಮಿಯಲಿ ॥೪೨॥ ದನುಜರಿಗೆ ವಾನರರಿಗಾದುದು । ದಿನಗಳೇಳರತನಕ ಘೋರ ಕ । ದನವಳಿದವಾನರರ ನಾಪವಮಾನಸಂಭವನು ॥ ಅನಿಲಜವದಿಂ ದ್ರೋಣಪರ್ವತ । ವನು ತರುತ್ತ ಬದುಕಿಸುತಿದ್ದನೊ । ಡನೊಡನೆ ಮೊದಲಿನಂತೆ ಸಂಗರ ರಂಗಮಧ್ಯದಲಿ ॥೪೩॥ ನೆಲಕುರುಳ್ಚಿದನೊಂದು ಘನಶರ । ದೊಳವನೀನಂದನೆಯ ಸುತಕುಶ । ನಳುಕದಾಖಳಮೂಲಕಾಸುರನ ನತಿಶೀಘ್ರದಲಿ ॥ ತಿಳಿದು ಮೂರ್ಛೆಯ ನಾಖಳನು ಭರ । ದೊಳು ಗುಹುಗೆ ಬಂದನಖಿಳಾಯುಧ । ಗಳನು ಹೊಂದಲಿ ರದಭಿಚಾರಕ ಹೋಮವನು ಗೈದು ॥ ೪೪ ॥ ಹೋಮಧೂಮವ ನೀಕ್ಷಿಸಿ ಭರದೊ । ಳಾ ಮನುಕುಲೇಂದ್ರಂಗರುಹಿದನು । ಹೋಮಭಂಗವ ನಾಗಿಸೆಂದೆನುತಾ ವಿಭೀಷಣನು ॥ ರಾಮಚಂದ್ರನೆಡೆಗನಿತರೊಳು ಪಿ । ತಾಮಹನು ನಡೆತಂದರುಹಿದನು । ತಾಮಸವನಾಗಿಸದೆ ದೈತ್ಯನ ಮರಣಕಾರಣವ ॥ ೪೫ ॥ ವೀರರಾಘವ ಕೇಳುವನತಿ ಕ । ಠೋರತಪವನು ಮಾಡಿ ತನ್ನನು । ವೀರರೊಬ್ಬರು ಯುದ್ಧದಲಿ ಸಂಹರಿಸದಂದದಲಿ । ಭೂರಿವರವ ನನುಗ್ರಹಿಸೆನುತ ।

ಕೋರಿ ನನ್ನನು ಬೇಡಿಕೊಳ್ಳಲು । ದಾರವಮನದಿಂದಿತ್ತನು ವರವ ನಿವನೆ ಣಿಸಿದಂತೆ ॥ ೪೬ ॥ ವನಿತೆ ಕೈಯಿಂದೀಖಳನಿಗೆ ವು । ರಣವೊದಗಬೇ ಕಾಗಿಹುದೆಲೆ ತ । ವನಕುಲೋತ್ತಮ ಕೇಳು ಹಿಂದಿನವನೊಂದು ಕಾಲ ದಲಿ ॥ ಜನಕನಂದನೆ ಚಂಡಿಯುವಳಿಂ । ದನುಜರೆಲ್ಲರು ಲಂಕೆಯೊಳು ನಾ । ಶನವನೈದಿದರೆನುತ ನುಡಿದನು ವಿಪ್ರರಡೆಗೈದಿ ॥ ೪೭ ॥ ಅವರೊ ಳೊರ್ವ ಮಹೀಸುರನು ಕಂ । ಡಿವನನೆಂದನು ಮೂಢಕೇಳೀ । ಭುವಿ ಯೊಳಿಂದಾವಳನು ಚಂಡಿಯೆನುತ್ತ ಪೇಳದೆಯೋ ॥ ಅವಳೆ ನಿನ್ನನು ಕೊಲ್ಲುವಳೆನು । ತ್ತವನಿಗೀಯಲು ಶಾಪವನವನು । ಜವದೆ ಕೊಂದ ನು ವಿಪ್ರವರನನು ಕೂಡೆ ಕಡುಮುಳಿದು ॥ ೪೮ ॥ ಅದು ನಿಮಿತ್ತದೆ ವಧಿಸಬೇಕಾ । ಗಿದೆ ಧರಾಸುತೆಯಿಾ ಖಳನನೆಲೆ । ಪದುಮನಾಭನೆ ಕರೆ ಯಿಸಾಕೆಯ ನಿಲ್ಲಿಗೀಗಲೆ ನೀಂ ॥ ಮೊದಲು ಕೊಲ್ಲಿಸಿವನನೆನುತ್ತ ನು । ಡಿವು ರಘೂತ್ತಮನೊಡನೆ ಬಂದ ತೆ । ರದೆ ಸುರಪುರಿಗೆ ಪೋದನಾ ಕಮಲಾಸನನು ಕೂಡೆ ॥ ೪೯ ॥ ಗರುಡ ಹನುಮಂತರನು ರಘುಭೂ । ವರನು ಕರೆಯಿಸಿ ಬಳಿಕ ಪೇಳದ । ನಿರದೆಲೆ ಗರುಡ ನೀನಯೋಧ್ಯಾಪ ಟ್ಟಣಕೆ ಪೋಗಿ ॥ ಧರಣಿಸುತೆಯುಂ ನಿನ್ನ ಬೆನ್ನಿನೊ । ಳಿರಿಸಿಕೊಂಡಿಲ್ಲಿ ಗತಿಭರದಿಂ । ಕರೆತಹುದೆನುತ ಪೇಳ್ದು ಬಳಿಕಿಂತೆಂದು ತಿಳುಹಿದನು ॥ ೫೦ ॥ ದಾರಿಯೊಳು ಬಹತೊಂದರೆಗಳ ನಿ । ವಾರಿಸುವ ನೀ ಹನು ಮನೆಂದೆನು । ತಾ ರಘುವರನು ಪೇಳ್ದಯೋಧ್ಯೆಗೆ ಕೂಡೆ ಕಳುಹಿದ ನು ॥ ಧಾರಿಣೀಸುತೆ ಯಿಷ್ಟರೊಳು ರಘು । ವೀರನ ವಿರಹತಾಪದಿಂ ಬಾ । ಯಾರಿ ಶೋಕಿಸುತಿದ್ದಳಂದಡಿಗಡಿಗೆ ಬಸವಳಿದು ॥ ೫೧ ॥ ಪತಿಗೆ ಜಯವಾಗಲೆನುತಾ ಕ್ಷಿತಿ । ಸುತೆ ಮನದೊಳಗೆ ಬೇಡುತಿದ್ದಳು । ಸತತ ಮಂತಃಪುರದೊಳಾ ಸಾಧನಿವಹಂಗಳೊಳು ॥ ಕುತುಕದೆ ದ್ರಾಕ್ಷಾಲತೆ ಯುಡಿಯೊ । ರುತಿಹ ಕಾಬದೊಳೆಲ್ಲ ಕೈಮುಗಿ । ದತಿ ಭಕುತಿಯಿಂದ ನುದಿನದೆ ಜಾನಿಸುತ ದೇವರನು ॥ ೫೨ ॥ ಬಡವೆಗಳ ತೆಗೆದಿಟ್ಟು ಚಿಂತಿ ಸಿ । ಪೊಡವಿಯುಣುಗಿಯು ನರ್ತನಂಗಳ । ನಡಿಗಡಿಗೆ ನೋಡದೆಯೆ ಜಯವಾಗಲೆನುತಿನಯನಿಗೆ ॥ ಮೃಡನನೊಲಿದರ್ಚಿಪಳು ತುಲಸೀ । ಗಿಡಕೆ ಸುತ್ತು ಬಳಸುವ ಳರಳೀ । ಗಿಡಕೆ ಕೈಮುಗಿದು ಪ್ರದಕ್ಷಿಣೆಗಳನು ಮಾಡುವಳು ॥ ೫೩ ॥ ದಿನದಿನದೊಳಾ ಕಾರ್ತ್ತವೀರ್ಯಾ । ರ್ಜನನನೊಲಿ ದರ್ಚಿಸುವ ಳವನೀ । ತನುಜೆ ಗೋಮಯದಿಂದೆ ಗೋಡೆಯೊಳಾಂಜ ನೇಯನನು ॥ ಮನವೊಲಿದು ಬರೆಯಿಸುತಲೆ ಪ್ರತಿ । ದಿನದೊಳೊಂದಂ

ಗುಲವ ನಿತವನ | ಘನಸುಪುಷ್ಪವ ಬೆಳೆಯಿಸಿದ ಪಳುವಿಸ್ಮಯವನಿತ್ತು || ೫೪ || ವಿನುತ್ರಿವೇತ್ರಾ ಮನ್ಯುಸೂಕ್ತಗ | ಳನವನೀಸುತೆ ವಿಪ್ರರಿಂದನು | ದಿನವು ಪಾರಾಯಣವನಾಗಿಸುತಿದ್ದಳತಿ ಹಿತವೆ || ಜನಕಸುತೆ ದೇವಾಲಯದೊಳಾ | ವಿನುತ ಶತರುದ್ರೀಯಪಾರಾ | ಯಣಗಳಿಂಪಭಿಷೇಕ ಮಾಡಿಸುತಿದ್ದ ಳನುದಿನವು || ೫೫ || ಪರಮಭಕ್ತಿಯನಾಂತು ಕೈಮುಗಿ | ದೆರಗಿ ಜಾನಕಿ ಗೌರಿಗಣಪತಿ | ತರಣಿ ಶಂಕರಹನುಮರನುದಕ ಕಳಶಗಳೊಳಿರಿಸಿ || ನಿರುತ ವರ್ಚಿಸುತಿದ್ದ ಳತ್ಯಾ | ದರದೆ ಪೂಜಿಪಳರಿಸಿ ರಘುಭೂ | ವರನ ಮಂಚದೆ ಕಾರ್ತವೀರ್ಯಾರ್ಜುನನ ಯಂತ್ರವನು || ೫೬ || ಕುಳಿತುಕೊಂಡವಳಲ್ಲ ಜಾನಕಿ | ಗೆಳತಿಯರನಿವಹದೊಳು ಸಲೆಕಂ | ಗೊಳಿಪಖಿಳ ರತ್ನಾಭರಣಗಳ ನಿರಿಸಿದವಳಲ್ಲ || ಸಲಿಲ ಯಂತ್ರಂಗಳ ಬಳಿಯೊಳಾ | ನೆಲದಣುಗಿ ನಿದ್ದೆಯನು ಮಾಡದೆ | ಸಲೆಕೊರಗುತಿರುತಿರ್ದಳನಿಯನ ವಿರಹತಾಪದಲಿ || ೫೭ || ಬಂದುಸಲ ಮಾಳಿಗೆಯ ಮೇಲ್ಕಿಳಿ | ತೊಂದು ಕಾಗೆಯ ನತಿಸಮೀಪದೊ | ಳಿಂದುಮುಖಿ ಜಾನಕಿಯು ನೋಡುತಲೆ ಪಿಕವರ್ಧನನೆ || ಮುಂದಕೆ ತೆರಳು ಬೇಗನಾರಘು | ನಂದನನು ಬರುವಂತಿರಲು ನಲ | ವಿಂದೆ ಕುಳಿತಿರು ಬಾರದಿರುವಂತಿರಲು ನೀನಿಲ್ಲಿ || ೫೮ || ಎನುತ ಜಾನಕಿ ಪೇಳುತಿರಲಂ | ದನಿತರೊಳು ಮುಂದಕ್ಕೆ ಪೋದುದ | ವನಿಸುತೆಗೆ ನಂಬುಗೆಯನಾಗಿಸುವಂತೆ ವಾಯಸವು || ಜನಕಸುತೆ ಸಿತಪಕ್ಷಬಿದಿಗೆಯ | ದಿನದೊಳು ಸ್ನಾನವನೆಸಗಿ ಮೇ | ಲೆನಿಪ ಮಂಗಳ ವಸ್ತುಗಳ ನಿರಿಸುತ್ತ ಶೀಘ್ರದಲಿ ||೫೯|| ತನ್ನ ಸಖಿಯರ ಕೂಡೆ ನಡೆತಂ | ದುನ್ನತಮೆನಿಪ ಸೌಧದೊಳು ಕುಳಿ | ತನ್ನೆ ಗಂಧರಣೀಸುತೆ ಮೆರೆವ ಚಂದ್ರನನು ಕಂಡು || ನನ್ನ ಪತಿಯನು ನೋಡುವನು ಸಂ | ಪನ್ನಮತಿ ಚಂದ್ರನಿವನೀದಿನ | ಮಿನ್ನು ಪತಿಯಸಮಾಗಮ ವಹುದೆನುತ್ತ ಪೇಳಿದಳು || ೬೦ | ಅತ್ರಿಮುನಿಪನ ಪತ್ನಿ ಕೊಟ್ಟ ಪ | ವಿತ್ರ ವಸ್ತುಗಳಲ್ಲದೆ ಜನಕ | ಪುತ್ರಿ ತಾಳ್ದವಳಲ್ಲಿ ತರವಿಧಮೆನಿ ಪೊಡವೆಗಳನು || ಗಾತ್ರದೊಳಿರಿಸಲಿಲ್ಲ ಗಂಧವ | ಚಿತ್ರ ಕುಸುಮಂಗಳನು ತನ್ನ ಪ | ವಿತ್ರ ಮಸ್ತಕದಲ್ಲಿ ತಾಳ್ದವಳಲ್ಲ ಚಿಂತಿಸುತ || ೬೧ || ಪತಿಯ ನೀಕ್ಷಿಸಬೇಕೆನುತ ಸಂ | ತತವು ಶಕುನಂಗಳನು ನೆರೆನೋ | ಡುತ ಮಹೀಸುತೆ ಶುಭ ಶಕುನಗಳ ನಂದು ತಾಸರಿತು || ವಿತತ ಸಂತೋಷವನು ಹೊಂದು | ತ್ತತಿ ವಿನೋದದವೆ ಕೊಡುತಲಿದ್ದಳು | ಚಿತವರಿತು ಸಕ್ಕರೆಗಳನು ಪಡೆದಖಿಳ ಮನುಜರಿಗೆ ||೬೨||

ಇತರರ ಮನೆಗೆ ಪೋಗುತಿರಲಿ । ಲ್ಲಿತರರೊಳು ಮಾತಾಡುತಿರಲಿ । ಲ್ಲಿತರ
ರನು ತಲೆಯೆತ್ತಿ ಕಂಡವಳಲ್ಲ ಭೂಮಿಸುತೆ ॥ ಇತರ ಮನುಜರ ಕಂಗ
ಳಗೆ ಕಾಣು । ತ್ತಿರಲಿಲ್ಲ ಹರುಷಿಸಲಿಲ್ಲ ಕು । ಳಿತವಳಲ್ಲ ಸದನದೊಳಗೆ
ತಾನಾಂತು ಖೇದವನು ॥ ೬೩ ॥ ಅವನಿಸುತೆ ಯಭ್ಯಂಗಸಸ್ನಾ । ನವನು
ತಾನೆಸಗಿದವಳಲ್ಲ ಪ । ಲವುತೆರದ ಮೃಷ್ಟಾನ್ನಭೋಜನಗಳ ನೆಸಗಲಿಲ್ಲ ॥
ಸವಿದುಂ ತಿದ್ದವಳಲ್ಲ ತಾಂಬೂ । ಲವನು ಸಂತಸದಿಂದೆ ಸಂಗೀ । ತವನು
ಕೇಳ್ದವಳಲ್ಲ ನಗುತ್ತಿರಲಿಲ್ಲ ಹರ್ಷದಲಿ ॥ ೬೪ ॥ ಮಲಗಲಿಲ್ಲವು ಮಂಚ
ದೊಳು ಸ । ಲ್ಲಲಿತ ಕೇಶಾಲಂಕರಣಗಳ । ನೊಲಿದು ತಾನು ವಿರಚಿಸಿ
ಕೊಂಡವಳಲ್ಲ ಸಲೆ ಕೊರಗಿ ॥ ನೆಲದಣುಗಿ ರಾಘವನ ವಿರಹಾ । ನಲನೊ
ಳತಿ ಬಿಳುಪೇರಿದ ಮುಖವ । ನೊಲಿದು ಕಂಡವಳಲ್ಲ ಕನ್ನಡಿಯನು
ವಿಲೋಕಿಸುತ ॥ ೬೫ ॥ ತರತರದೆ ಕಂಗೊಳಪ ಪೀತಾಂ । ಬರಗಳನು
ಕುಸುಮಗಳನು ತಾಂ । ಧರಿಸಲಿಲ್ಲವು ಸೀತೆ ಸರಯೂನದಿಗೆ ಮನವೊಲಿ
ದು ॥ ತೆರಳಲಿಲ್ಲವು ಮೀಯಬೇಕೆಂ । ದರಮನೆಯ ಹಿಂದುಗಡೆಯೊಳಗಿ
ರು । ತಿರುವ ಕಾಸಾರಕ್ಕೆ ಪೋದವಳಲ್ಲ ಬೇಸತ್ತು ॥ ೬೬ ॥ ಪೋಗಲಿಲ್ಲ
ವು ಸೀತೆ ಯುಪವನ । ಕಾಗಿ ವಿಹರಿಸಲಿಲ್ಲವು ವಸಂ । ತಾಗಮದೊಳಾ
ಪುಷ್ಪವಾಟಿಕೆಗಳೊಳು ನಡೆತಂದು ॥ ಆಗಮೋಕ್ತ ವಿಧಾನದೊಳತಿ
ಸ । ರಾಗದಿಂದಲಿ ಪೂಜೆಗೈವಳು । ಬೇಗನೆ ಬ್ರಾಹ್ಮಣಸುವಾಸಿನಿಯರ
ನು ಸತ್ಕರಿಸಿ ॥ ೬೭ ॥ ಬೇರೆಬೇರೆ ವ್ರತಗಳನು ಪದೆ । ದಾ ರಮಣಿ
ಯಾಚರಿಸುತ್ತಿದ್ದಳು । ಮೀರಿದ ಭಕುತಿಯಿಂದೆ ಸುರರನು ತೃಪ್ತಿಮಾ
ಳ್ಪುದಕೆ ॥ ಭೂರಿನಿಯಮಗಳಿಂದೆ ಚಿತ್ತಕೆ । ತೋರಿದ ವ್ರತಗಳ ನೆಸ
ಗುತಾ । ಧಾರಿಣೀಸುರಪತ್ನಿಯರ ನರ್ಚಿಸುವಳನುದಿನವು ॥ ೬೮ ॥ ನಿನಗೆ
ಸಂಡಿಗೆ ಸರವನೀಯುವೆ । ನನಿಲನಂದನ ನಿನಗೆ ನಾಂ ಕೊಡು । ವೆನೆಲೆ
ವಿಘ್ನೇಶ್ವರನೆ ಹೂರಣ ಕಡುಬುಗಳನೆಸಗಿ ॥ ನಿನಗೆ ಬಲಿದಾನವನು
ಮಾಡಿಸು । ವೆನೆಲೆ ದುರ್ಗೆಯೆ ಬರಲಿ ರಘುನಂ । ದನನು ಶೀಘ್ರದೊಳೆ
ನುತ ಜಾನಿಸುತಿದ್ದಳಾ ಸೀತೆ ॥ ೬೯ ॥ ನಿನಗೆನಾಲಗೆಯಲ್ಲಿಹ ರಕುತ ।
ವನು ಸಮರ್ಪಿಸುವೆನೆಲೆ ಚಂಡಿಯೆ । ನಿನಗೆ ಬಲಿದೀಪಗಳೊಡನೆ ಪ
ಕ್ವಾನ್ನಗಳನಿತ್ತು ॥ ಮನದಣಿಯೆ ಸಂತುಷ್ಟಪಡಿಸುವೆ । ನಿನಕುಲೇಂ
ದ್ರನು ಕುಶಲದಿಂದಾ । ತನ ಸುತರಸಹಿತಿಲ್ಲಿ ಗೈತರಲೆನುತ ಬೇಡಿದಳು
॥ ೭೦ ॥ ಬರುತ್ತಿರುವ ಶನಿವಾರದಿಂದಲೆ । ವಿರಚಿಸುವೆ ನುಪವಾಸದ ವ್ರ
ತ । ವರಿತು ನಾನೈದು ಶನಿವಾರಂಗಳೊಳನುಕ್ರಮದಿ ॥ ಇರುಳು ಹಗ

ಲಿನೊಳೊಂದು ತಿಂಗಳ | ವರೆಗೆ ತಿನ್ನದೆ ತುಪ್ಪ ಬೆಲ್ಲವ | ನಿರುವೆ ನಾಚ
ರಿಸುತ್ತ ಘೃತಮಧುವರ್ಜ್ಯನಿಯಮವನು || ೩೧ || ಸಪರಿವಾರ ಸಮೇ
ತನಾಗಿಯೆ | ವಿಪುಲಮತಿ ರಾಘವ ನಯೋಧ್ಯೆಗೆ | ರಿಪುಗಳನು ಸಂಹರಿಸಿ
ಬಂರುವ ತಾಗಿಸಲೆಗಿರಿಜೆ || ತಪವನಾಗಿಸುತ ತಿಲಪಿಷ್ಟವ | ಗುಪಿತದಿಂ
ದಲೆ ನಾನು ತಿನ್ನುವೆ | ಚಪಲಮಿಲ್ಲದೆ ಕೃಷ್ಣಪಕ್ಷ ಚತುರ್ಥಿ ದಿವಸ
ದಲಿ || ೩೨ || ಎಳೆ ರವಿಯೆ ವಿಧ್ಯುಕ್ತಮಾಗಿಯೆ | ಸಲಿದು ನಿನ್ನನು ಭಾನುವಾ
ರಂ | ಗಳೊಳು ಪೂಜಿಪೆನೆಂದು ಜಾನಕಿ ನುಡಿದು ಕೈಮುಗಿದು ||
ಪಲವುಬಗೆಯ ವ್ರತಗಳನು ಮನ | ವೊಲಿದೆಸಗುತ ಕೊಡಿಸಿದಳರ್ಘ್ಯಂ |
ಗಳನು ನಿರ್ಜರರಿಗೆ ಸಮಂತ್ರವ್ರತಗಳಂದೊಲಿದು || ೩೩ || ಪತಿಯವಿ
ರಹಾತುರದೊಳುರೆ ಕೊರ | ಗುತಪನೀಸುತೆ ನಿದ್ರೆಯನು ಮಾ | ಡುತಿ
ರಲಿಲ್ಲವು ಹಗಲು ರಾತ್ರಿಗಳಲ್ಲಿ ಯೊಂದುದಿನ || ಪತಿಯುನಿಂತನುದಿನದೊ
ಳಾಕ್ಷಿತಿ | ಸುತೆ ನೆನೆನೆನೆದು ಹೊಂದಲಿಲ್ಲವು | ಹಿತದೆ ಸುಖಸಂದೋಹವೆ
ನು ತಾನಾವೆತಾಣದೊಳು || ೩೪ || ಧರಣಿಸುತೆ ಗರುಡಾಂಜನೇಯರ |
ನಿರುವರನು ಮಾಹ್ವಾನಮಾಡಿದ | ಳುರುತರ ನಿಯಮದಾವ್ರತಂಗಳನೆ
ಲ್ಲ ವಿರಚಿಸುತ || ಭರದೊಳೈತಂದವರಯೋಧ್ಯಾ | ಪುರವರವ ನೈದಿದರ
ನಿತರೊಳ | ದಿರಿದು ವೆಡಗಣ್ಣೊಡದ ಭುಜವಾಮೇದಿನೀಸುತೆಗೆ || ೩೫ ||
ಬಂದಯೋಧ್ಯೆಗೆ ಗರುಡಕೇಸರಿ | ನಂದನರೆರಗಿ ಯೂಪಕೇತುವಿ |
ಗಂದರುಹಲು ಸಮಸ್ತ ಸಂಗತಿಗಳನು ಕೈಮುಗಿದು || ಸಂದಸಂತಸದಿಂದೆ
ಧರಣೀ | ನಂದನೆಯ ಸನ್ನಿಧಿಗೆ ತಾನೈ | ತಂದರುಹಿದನು ಯೂಪಕೇ
ತುವದನತಿ ಶೀಘ್ರದಲಿ || ೩೬ || ವಿನುತಿವೆತ್ತನಿಜಾಗ್ನಿ ಹೋತ್ರಗ |
ಳನು ಸಕಲ ಋತ್ವಿಕ್ಪುರೋಹಿತ | ರನು ನಿಲಿಸುತಾ ಸೀತೆ ವಿನತಾಸು
ತನ ಬೆನ್ನಿನೊಳು || ಮನುಕುಲೇಂದ್ರನ ಪಾದಕಮಲಗ | ಳನು ನೆನೆ
ಯುತಲೆ ಕುಳಿತು ಬಂದಳು | ಹನುಮನಾಕೆಯ ನೊಲಿದು ರಕ್ಷಿಸುತಿದ್ದ
ನಾಪಥದೆ || ೩೭ || ಬರುತ ನಾನಾದೇಶಗಳ ಪರಿ | ಪರಿ ಯತಿಶಯಂಗ
ಳನು ನೋಡುತ | ಧರಣಿಸುತೆ ಲಂಕಾನಗರಕೈತಂದು ಜವದಿಂದೆ ||
ವರವಿಮಾನದ ಮಧ್ಯದೊಳಸೆವ | ಸುರಮಹೀಜದಡಿಯೊಳು ಸುಖ
ದಿಂ | ದಿರುವ ರಾಮನ ನೀಕ್ಷಿಸಿದಳುರುತಂತರಿಕ್ಷದೊಳು || ೩೮ ||
ಇಳಿಗಿಳದು ಭೂಜಾತೆ ಸಂತಸ | ದೊಳತಿ ಭರದಿಂದಾ ಗರುಡನ ಹೆ |
ಗಲನುಳದು ರಾಘವನ ಪದಪಂಕೇರುಹಕೆರಗಲು || ನೆಲದಣುಗಿಯನು
ಕಂಡು ಕೇಳದ | ನೆಲೆ ಲಲನೆ ಕೇಳ್ನಿನ್ನ ದೇಹವು | ಸಲೆಸಮೆದು ಬಿಳು

ಪಾಗಿರುವುದೇಕೆನುತ ರಾಘವನು ॥ ೭೯ ॥ ಪತಿಯೆನಿನ್ನಯ ವಿರಹತಾಪ
ದೆ । ಸತತ ದು ಖಿಸಿದೆ ನವರಿಂ ಕೃಶಿ । ಸಿತು ಕಳೇಬರವಿಂತಿದನು ಕೇ
ಳ್ಳೀನೆ ತ್ರಿಳದಿರುವೆ ॥ ಪ್ರತಿದಿನವು ನಿದ್ರೆಯನು ಮಾಡದೆ । ಹಿತದೆ ನೀರ
ನು ಕುಡಿಯದಿದ್ದೆನು । ಪತಿಯೆ ಕೇಳ್ ಭೋಜನಗಳನು ನಾನೆಸಗಿದವಳಲ್ಲ
॥ ೮೦ ॥ ನೆನೆಯುತಿದ್ದೆನು ನಿನ್ನನೇಪ್ರತಿ । ದಿನವು ವೈರಾಗ್ಯವನುತಾಳ್ದ
ತಿ । ಘನತೆಯಿಂದಿಹ ಯೋಗಿ ಯಂತಿರುತಿದ್ದೆನನವರತ ॥ ಕನಸಿನೊಳ
ಗಾದೊಡೆಯು ನಾಂ ನಿ । ನ್ನನು ವಿಲೋಕಿಸಲಿಲ್ಲ ಚಂದ್ರನಿ । ಗೆಣೆಯೆ
ನಿಪ ನಿನ್ನಾನನವನಾಂ ನೋಡಿದವಳಲ್ಲ ॥ ೮೧ ॥ ಪಿಕನಿನಾದವ ಕೇಳಲಿ
ಲ್ಲವು । ಸಖಿಯರನೊಲಿಸುತಗ್ನಿಹೋತ್ರವ । ಸುಖದೊಳೆಂದುಂ ನಾನು
ಕಾಯಿಸಿಕೊಂಡಿರುವುದಿಲ್ಲ ॥ ಸಕಲವಿಧದ ವ್ರತಗಳನೊಲಿವು । ಭಕುತಿ
ಯೊಂದಲೆ ನಾನುಮಾಡಿದೆ । ಚಕಿತಳಾಗುತ ನಿನಗೆ ಮಂಗಳವಾಗಬೇಕೆಂ
ದು ॥ ೮೨ ॥ ಎಳ್ಳನಿತು ಸೌಖ್ಯವನು ಕಂಡವ । ಳಲ್ಲ ನಾನೆನುತಾ ಮ
ಹೀಸುತೆ । ನಲ್ಲನಿ ಗರುಹಲಾ ನುಡಿಯನಾಲಿಸುತ ರಾಘವನು ॥ ಪಲ್ಲವಾಧ
ರೆ ಜನಕಜಾತೆಯ । ನುಲ್ಲಸದೊಳಾಲಿಂಗಿಸಿಕೊಳುತ । ಲಲ್ಲಿ ನಲಿಸಿದ
ನೊಡನೆ ಸರಸಸುಖೇಲನಂಗಳಲಿ ... ॥ ೮೩ ॥

ಇಂತು ನಲವತ್ತೆರಡನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೨೩೯೬.



## ನಲವತ್ತು ಮೂರನೆಯ ಅಧ್ಯಾಯ.

ಸೂಚನೆ ॥ ಮೂಲಕಾಸುರನನ್ನು ವಧಿಸಿ ವಿ ।
ಶಾಲಲೋಚನೆ ಸೀತೆ ಸುಖತರ ।
ಲೀಲೆಯಿಂದಿರುತಿದ್ದಳಾ ರಘುವರನ ನೊಲಿಸುತ್ತ ॥

ಬಳಿಕ ಮಾರನೆದಿನದೊಳಾ ರಘು । ಕುಲಲಲಾಮನು ಮಜ್ಜನವೆಸ
ಗಿ । ಲಲನೆಜಾನಕಿಯನ್ನು ತಾಂ ಕರೆಯಿಸುತ ಹತ್ತಿರಕೆ ॥ ಪಲತೆರದ
ಶಸ್ತ್ರಾಸ್ತ್ರ ವಿದ್ಯಂ । ಗಳನು ಪೇಳುತ ತಿಳುಹಿಸಿದನವು । ಗಳುಪ ಸಂ
ಹಾರ ಪ್ರಯೋಗ ವಿಧಾನಗಳನೆಲ್ಲ ॥೧॥ ಧರಣಿಸುತೆಗಾ ತೆರದೊಳಾರ
ಘು । ವರನೊಲಿದಖಿಳ ಚಾಪವಿದ್ಯೆಯ । ನರುಹುತೊಲಿದು ಪದೇಶಿಸಿದನತಿ

ಹರ್ಷವೆನುತಾಳ್ದು || ಪರಮ ಸಂಮೊದದಿಂದೆ ರಘುಭೂ | ವರನನೇವಮ
ವನಾಂತು ಲಕ್ಷ್ಮಣ | ನೆರಗಿ ತಂದಿರಿಸಿದನು ಮುಂಗಡೆ ವರವರೂಥವ
ನು || ೧ || ಆ ರಥಕೆ ಸಾರಥಿಮೆನಿಸಿದನು | ದಾರು ಕನವರೊಳಿದ್ದ
ವು ಬಹು ಕ | ಠೋರತರವೆನಿಸುತ್ತ ಮೆರೆವಖಿಳಾಸ್ತ್ರಶಸ್ತ್ರಗಳು ||
ವಿರಾರಿದ ಗದಾಯುಧ ಪದುಮಗಳು | ತೋರುತ್ತಿದ್ದುವು ರಥದೊಳು ಗ
ರುಡ | ನಾರಥ ಧ್ವಜದೊಳಿರುತಿದ್ದನು ಕಾಣುತ್ತಲ್ಲರಿಗೆ || ೨ || ವರವ
ರೂಥಕೆ ಬಿಗಿದು ಕಟ್ಟಿ | ದ್ದರು ಬಲಾಹಕ ಮೇಘಪುಷ್ಪವು | ಸುರುಚಿ
ರದ ಸುಗ್ರೀವ ಶೈಬ್ಯಗಳೆಂಬ ಹಯುಗಳನು || ಮರುತಜವದಿ ದೋಡು
ತ್ತಿಪ್ಪವು | ತುರಗಗಳರದೆ ಬೆಳುಗೊಡೆಯು ಚಾ | ಮರಗಳಿದ್ದುವು
ಕಂಗೊಳಿಸಿ ಕಾಣಿಸುತ ರಥದೊಳಗೆ || ೪ || ಇಂತೆಸೆವ ವರದಿವ್ಯರಥ
ವನು | ಸಂತಸದೊಳವಲೋಕಿಸುತ ನವು | ನಂತರದೊಳಾ ಸೀತೆಯನು
ಕುರಿತಾ ರಘೂತ್ತಮನು || ಕಾಂತೆ ಕೇಳೀ ರಥದೊಳು ಕುಳಿತು | ಚಿಂ
ತಿಸದೆ ಸಂಹರಿಸು ನೀನೇ | ಕಾಂತದೊಳಗೀ ಮೂಲಕಾಸುರನ ನೆನುತ
ರುಹಿದನು || ೫ || ಹಾಗೆಯಾಗಲೆನುತ್ತೊರೆದು ಬಲು | ಬೇಗನಾ ಧರ
ಣೀಸುತೆ ನಮಿಸಿ | ರಾಘವನ ಪದಯುಗಕೆ ಭಾಯಾ ಸೀತೆಯನುಕರೆದು ||
ಕೂಗಿ ಗರ್ಜಿಸುತನುಪರಕೆ ನೀಂ | ಪೋಗಿ ರಣರಂಗದೊಳು ಕೋಪಿ
ಸು | ತೀಗ ಕೊಲ್ಲುವುದು ಮೂಲಕಾಸುರನನೆನುತರುಹಿದಳು || ೬ ||
ಬಹನೆ ತಾನುಸರೂಪಿಮೆನಿಪಾ | ಪೊಡವಿಯಣುಗಿಯು ನಮಿಸಿ ರಾಘವ |
ನಡಿಗಳಿಗೆ ಶೀಘ್ರದೊಳು ಹತ್ತಿದಳಾವರೂಥವನು || ಪಡೆದುಭೀಕರರೂ
ಪದಿಂದೆಸೆ | ವೊಡಲನಂದತಿ ಘೋರಶಬ್ದವ | ನೊಡರಿಸುತ ಕಾಳಗಕೆ
ಭಾಮಾಸೀತೆ ತೆರಳಿದಳು || ೭ || ಅನಿತರೊಳು ರಾಘವನು ಮುನ್ನ
ಕ | ದನಕೆ ನೇಮಿಸಿ ಕಳುಹಿಕೊಟ್ಟಾ | ವನಚರರು ಲಂಕಾಪುರಕೆ ನಡೆ
ತಂದು ಮೊದಲಂತೆ || ದನುಜನಾಥನ ಹೋಮಕರ್ಮಗ | ಳನು ಕೆಡಿಸಿ
ಭಂಗಪಡಿಸುತ್ತಲೆ | ಮಣಿದು ಪೇಳ್ದರು ರಾಮನೆಡೆಗಾ ಸಂಗತಿಯ
ನಂದು || ೮ || ಮುಳಿದು ಗರ್ಜಿಸಿ ಪಲ್ಗಡಿದು ಭರ | ದೊಳು ಬರು
ರಲು ಮೂಲಕಾಸುರ | ನಿಳೆಗೆಬಿದ್ದುದವನ ಕಿರೀಟವು ಧರಣಿಕಂಪಿಸಿ
ತು || ಕುಳಿತುಕೊಂಡವು ಪದ್ದುಗಳವನ | ತಲೆಯಮೇಲ್ಗಡೆ ಜಂಬುಕ
ಗಳಿದಿ | ರೊಳು ರಕುತವನು ಕಾರಿದವು ತಾರೆಗಳು ಮುದುರಿದವು
|| ೯ || ಕ್ರೂರರವಗಳ ಕಾರ್ಮುಗಿಲಿನ ಶ | ರೀರದ ವಿಶಾಲಾನನದತಿ ಕ |
ಠೋರರೊಮಾವಳಿಯ ಶೂರ್ಪಾಕೃತಿಯ ಜಂಘೆಗಳ || ಭೂರಿಮಸ್ತಕ

ದ ಘನಗುಹೆಯಾ । ಕಾರ ವಕ್ತ್ರದ ಹೊರಗೆ ನೀಡಿದ । ಘೋರಿ ಜಿಹ್ವೆ
ಯುಘೋರಛಾಯಾ ಸೀತೆಯನುಕ್ಷಣ ॥ ೧೦ ॥ ಆರುನೀನೆಲೆ ರಮಣಿ
ಘೋರಾ । ಕಾರವ ಜಗಳಕೇತಕೆಂದು ವಿಚಾರಿಸದಪೇಕ್ಷಿಸಿದೆ ತಿಳುಹಿಸು
ನಿನ್ನ ಸಂಗತಿಯ ॥ ವೀರನೆನುತಾಂ ಜಸವಡೆದಿರುವೆ । ಧಾರಿಣೀತಲದೊ
ಳಗೆ ಕೇಳೆಲೆ । ನಾರಿ ನನ್ನನು ಮೂಲಕಾಸುರನೆನುತ ಪೇಳುವರು
॥ ೧೧ ॥ ಇದಿರು ನಿಲ್ಲದೆ ಪೋಗು ಹಿಂದಕೆ । ಬದುಕಬೇಕೆಂಬಿಚ್ಛೆಯು
ಳ್ಳೊಡೆ । ಕದನದೊಳು ಬರಿದೇಕೆ ಸಾಯುವೆ ನನ್ನ ಶರದಿಂದ ॥ ಸುವತಿ
ಯರೊಳಗ್ಗನಗೆ ಪೌರುಷ । ಮದು ನಿಮಿತ್ತದೊಳೊಂದೆರಡು ನಿಮಿ ।
ಷವವರೆಗು ವಿರಬೇಡವೆನುತಾ ಖಳನು ಗರ್ಜಿಸಿದ ॥ ೧೨ ॥ ಪರವಿ
ಮಾನದೆ ಕೂಡುತಾ ರಘು । ವರನು ಜಾನಕಿ ನೋಡುತಿರಲಂ । ದಿರದೆ
ಛಾಯಾಸೀತೆ ರಜನೀಚರನ ನೀಕ್ಷಿಸುತ ॥ ದುರುಳಬರಿದೇತಕ್ಕೆ ಗರ್ಜಿ
ಸು । ತಿರುವೆ ಚಂಡಿಕೆನಾನು ಲಂಕಾ । ಪುರವು ನಿನ್ನಯ ಕುಲವು ನಾಶನ
ವಾಯ್ತು ನನ್ನಿಂದ ॥ ೧೩ । ನನ್ನ ಭಕ್ತನೆನಿಸಿದ ಭೂಸುರ । ನನ್ನ
ವಧಿಸಿದೆ ನೀನು ಖೂಳನೆ । ನಿನ್ನನಿರಿದಾ ಬ್ರಾಹ್ಮಣನ ಋಣವನ್ನು ಹರಿ
ಸುವೆನು ॥ ನನ್ನ ವಿಕ್ರಮವೆಲ್ಲವ ನರಿವು । ದೆನ್ನುತಾರ್ಭಟಿಸುತ್ತ ರಕ್ಕ
ಸ । ನನ್ನ ಬಾಣಗಳೈದರಿಂದೊಡನೆಚ್ಚಳಾಸೀತೆ ॥ ೧೪ ॥ ದನುಜವಲ್ಲ
ಭ ನುರೆಮುಳಿದು ಮೇ । ಲೆನಿಸುವಾಯುಧಗಳನು ಕೊಂಡಾ । ವನಿತೆ
ಗಿಡಲಾ ಶರಗಳನಿರಿದು ತನ್ನ ಖಡ್ಗವಲಿ ॥ ವನಿತೆಕೋಪಿಸಿ ಮೂಲಕಾ
ಸುರ । ನನು ವಿಲೋಕಿಸುತಾಗಳೆಚ್ಚಳು । ಘನತರದ ನಿಶಿತಾಯುಧಂಗ
ಳನಾಂತು ಶೀಘ್ರದಲಿ ॥ ೧೫ ॥ ಆಕೆ ನಾಲ್ಕುಶರಂಗಳಿಂದಸೆ । ವಾ
ಕುದುರೆಗಳನೆಲ್ಲ ಕೊಂದು ಪ । ತಾಕಚಾಪಕಿರೀಟ ಕವಚಂಗಳಗೆ ಗು
ರಿಯಿಟ್ಟು । ಜೋಕೆಯಿಂದಲೆ ಮೂರು ಶರಗಳ । ಹಾಕುತಿಕ್ಕಡಿಮಾಡಿ
ದಳಸುರ । ನಾಕಡೆಯೊಳೈತಂದು ಹತ್ತಿದನೊಂದು ಪೊಸರಥವ ॥ ೧೬ ॥
ಭರದೆ ನಡೆತಂದಸುರನತ್ಯಾ । ದರದೊಳಾಗ್ನೇಯಾಸ್ತ್ರವನು ಕೊಂ ।
ಡಿರದೆ ಛಾಯಾಸೀತೆ ಗಿಡಲದನಾಕೆ ಶೀಘ್ರದಲಿ ॥ ಉರುತರದ ಮೇಘಾ
ಸ್ತ್ರದಿಂದಲೆ । ಪರಿಹರಿಸುತಿರಲವನು ಗರ್ಜಿಸು । ತಿರದೆ ಬಿಟ್ಟನು ಪರ್ವ
ತಾಸ್ತ್ರವ ನಾಮಹೀಸುತೆಗೆ ॥ ೧೭ ॥ ಅದನು ಕುಲಿಶಾಸ್ತ್ರಂಗಳಿಂದೆ
ಕ । ಡಿದಳು ಛಾಯಾಸೀತೆ ಖಳನುಮು । ಳಿದುಬಿಡಲು ಸರ್ಪಾಸ್ತ್ರವೆ
ನು ಗರುಡಾಸ್ತ್ರವೆನು ಬಿಡುತ ॥ ಅದನು ಕತ್ತರಿಸಿಟ್ಟಳು ಬಳಿಕ ।
ಕದನ ಮೇಳ್ವನತನಕ ಮಿಂತುನ । ದೆಮದು ರಾತ್ರಿಹಗಲೆಡೆ ಬಿಡದವರಿ

ಂಗೆ ಮತ್ತೆ || ೧೪ || ಒಡನೆ ಛಾಯಾಸೀತೆ ಗರ್ಜಿಸು | ತಡಿಗಡಿಗೆ
ಚಂಡಿಕಾಸ್ತ್ರವ | ಸಿಡಲಸುರವಲ್ಲಭನ ಮೇಲ್ಕಂಪಿಸಿತು ಮೇದಿನಿ
। || ಕಡಲು ಹೊರಳಿತು ಕೂಡೆಬಿದ್ದುವು | ಪೊಡವಿಯೊಳು ತಾರೆಗ
ರಕ್ತದ | ಜಡಿಮಳೆಸುರಿದುದಾ ಖಳಂಗಶುಭವನು ತೋರ್ಪಂತೆ
೧೯ || ಅತಿಭರದೊಳೈತಂದು ಕತ್ತರಿ | ಸಿತು ಶರಮವನ ತಲೆ
ನಾವಸು | ಮತಿಗೆ ಬಿದ್ದುದುಖಳನದೇಹವು ಭಯವನಾಗಿಸುತ ||
ಗೆ ಪೂಮಳೆಯನ್ನು ಸುರಿಸಿಯೆ | ವಿತತದುಂದುಭಿಗಳನು ಹೊ
ವ | ರತಿಹಿತದೊಳಸುರೇಂದ್ರನಳಿದುದ ನರಿತು ನಿರ್ಜರರು
೨೦ || ಹಿಂದಿರುಗಿ ರಣರಂಗವನುಳಿದು| ಬಂದು ಛಾಯಾಸೀತೆ ದಶರ
ನಂದನಗೆರಗುತ್ತೈಕ್ಯವಾದಳು ಸೀತೆ ಯುಂಗದಲಿ || ವಂದಿಮಾಗಧರು
ಗಳಿದರಾ | ನಂದದಿಂದೆಸಗಿದರು ಹಾಡುತ | ಚಂದಮೆನೆ ನರ್ತನವನ
ರರಧಿಕ ಹರ್ಷದಲಿ || ೨೧ || ಅಮರರೆಲ್ಲರ ಸಹಿತ ಲಂಕೆಗೆ | ಕಮ
ಭವನೈತಂದು ಶೀಘ್ರದೆ | ನಮಿಸಿ ಸೀತಾರಾಘವರ ಪದಯುಗ್ಮಸರಸಿ
॥ ವಿಮಲವೇದೋಕ್ತ ವಚನಗಳಿಂ | ದಮಲಮನದೊಳು ಹೊಗ
ನು ತಾ ನಮರರೆಲ್ಲರ ಮಧ್ಯದೊಳು ಸೀತೆಯನುಪಲತೆರದೆ || ೨೨ ||
ಕರಾಯನ ಮಗಳೆನಿಸಿ ರಾ | ಮನಿಗರಸಿಯಾಗುತ್ತ ನೀನನು |
ವು ರಕ್ಷಿಸುತ್ತಿರುವೆ ತಾಯೆ ಸಮಸ್ತ ಭಕ್ತರನು || ಮನವೊಲಿದು
ದಾಡುತಿದೆ ಕೇ | ಳ್ಜನನಿ ತವಪದ ಕಮಲಯುಗ್ಮದೊ | ಳನವರತ
ನ್ನಯಶಿರೋಭೃಂಗವು ವಿನೋದದಲಿ || ೨೩ || ನೀನು ವಧಿಸಿದೆ
ಾಲಕಾಸುರ | ನೀನೆಬದೊಳಾದಿಲಕುಮಿಯೆನಿಸಿಪೆ | ನೀನಯೋನಿಜೆ
ಾಗಿರುವೆ ಸರ್ವೋತ್ತಮಳೆನಿಸಿಹೆ || ನೀನು ಪಾವನಗೈವೆ ಜಗವನು |
ನು ಪರಿಶುದ್ಧಳೆನಿಸುತ್ತಿಹೆ | ನೀನು ಭೂದೇವತೆಗೆ ಮಗಳಾಗಿರುವೆ
ನಕಿಯೆ || ೨೪ || ಸಲಹುವನು ರಾಘವನು ಸಂತತ | ವೆಲೆ ಜನನಿ
ನ್ನನವನೀ | ತಳದೊಳುರೆ ಸೇವಿಪನು ನಿನ್ನನು ಬಹುವಿನೋದ
|| ಪಲವುತೆರದ ವಿಲಾಸವಿಭ್ರಮ | ಗಳ ನೆಸಗುತಾ ರಘುವರನುಮನ |
ಲಿದು ಸಂತಸವಡಿಸುತಿರಲು ವಿರಾಜಿಸುವೆನೀನು || ೨೫ || ರಾ
ನನು ಮೋಹಗೊಳಿಸುತ್ತಿಹೆ | ರಾಮನುತ್ತಮದೇಹ ದೊಳು
| ನೀ ಮನುಜರಿಗೆ ಕಾಣಿಸುತ್ತಿಹೆ ಯಾದಿಲಕ್ಷ್ಮಿಯೊಲು || ತಾಮರ
ೇತ್ರಿಯೆನಿಸುವೆ ಗಜ | ಗಾಮಿನಿಯು ನೀನಾಗಿ ರಂಜಿಪೆ | ಹೇಮರ
ಭರಣದಿವ್ಯಾಂಬರಗಳನು ತಾಳ್ದು || ೨೬ || ಜನನಿ ಕೇಳು ನಿರಂ

ತರವು ಮೇ । ದಿನಿತಲದೊಳನುಭವಿಸುತಿಹೆ ಮೇ । ಲೆನಿಪ ನೈಜಸ್ವಸ್ವ
ರೂಪಾನಂದ ಸೌಖ್ಯವನು ॥ ವನಜಮುಖಿ ಯೆಂದೆನಿಸಿಕೊಂಡನು ।
ದಿನವು ರಕ್ಷಿಪೆ ನಿನ್ನ ಸೇವಕ । ರನುದನುಜ ಸಂದೋಹಕಾಗಿಸುತಧಿಕ
ದುಃಖವನು ॥ ೨೭ ॥ ತಾಯೆ ಕರುಣಿಸು ಮೂಲಕಾಸುರ । ನೀ ಯನು
ವರದೊಳಳಿದನಾರಸ । ಹಾಯುಮಿಲ್ಲದ ನಿನ್ನ ಕಡೆಗಣ್ಣಿನವಲೋಕನದಿ ॥
ತಾಯಿಯಾಗಿಹೆ ಕುಶಲವರಿಗಂ । ಶ್ರೇಯವನು ನೀನಾಗಿಸುತ ಕಡೆ ।
ಹಾಯಿಸುವೆ ಜನಗಳನು ಪಾಪಗಳಿಂದೆ ನೀಂ ಬಿಡಿಸಿ ॥ ೨೮ ॥
ನಿನ್ನ ಮುಖವು ಮನೋಹರಮದೆಂ । ದೆನ್ನಿಸಿರುವುದು ಮುಗುಳುನ
ಗೆಯಿಂ । ದುನ್ನತಿಯನಾಂತಿಪುದಧರವಾಬಿಂಬ ಫಲದಂತೆ ॥ ನಿನ್ನ ನಾಸಿ
ಕ ಸಂಪಗೆಯ ಹೂ । ವನ್ನು ಹೋಲುತ ರಂಜಿಪುದು ಘನ । ಸನ್ನುತಿ
ವಡೆದು ಸಕಲ ಲೋಕಪ್ರಾಣಮೆಂದೆನಿಸಿ ॥ ೨೯ ॥ ಪೊಡವಿಯಣು
ಗಿಯೆ ನೀನು ನಮ್ಮನು । ಬಿಡಿಸಿ ರಕ್ಷಿಸಿಕೊಂಡು ಬಂದಿರು । ವಡಿಗಡಿಗೆ
ಭಯಮೋಹ ಸಂಚಯದಿಂದೆನುತ ನುತಿಸಿ ॥ ಒಡನೆ ಸೀತಾರಾಘವರ
ಪದ । ಕೊಡಲ ನೀಡುತ ಪಲತೆರ ದುಡಿಗೆ । ತೊಡಿಗೆಗಳನೀಯುತ್ತ
ಪೋದನು ಸತ್ಯಲೋಕಕ್ಕೆ ॥ ೩೦ ॥ ಬಳಿಕರಾಮನ ಪಾದಪಂಕಜ ।
ಗಳಿಗೆ ನಮಿಸಿ ವಿಭೀಷಣನು ಕೈ । ಗಳನು ಮುಗಿದೆಲೆ ದೇವಲಂಕೆಗೆ
ಹಿಂದೆಬಂದಾಗ ॥ ಬಳಹೊಗದಯೋಧ್ಯೆಗೆ ನಡೆದಿರೀ । ಸಲ ನಗರಕ್ಕೈತಂ
ದಖಿಳಜನ । ಗಳ ಸಹಿತ ಸಂತೋಷಪಡಿಸುವುದೆನುತ ಬೇಡಿದನು
॥ ೩೧ ॥ ಹಾಗೆಯಾಗಲೆನುತ್ತ ನುಡಿದಾ । ರಾಘವನು ಲಂಕಾಪುರದೊ
ಳು ಸ । ರಾಗದಿಂದೈತರುತ ಹೊಕ್ಕನು ರಾಜಮಂದಿರವ ॥ ಬೇಗನೆ
ವಿಭೀಷಣನ ಮನ್ನಿಸು । ತಾಗ ಪಟ್ಟವ ಕಟ್ಟಿದನು ಅನು । ರಾಗದೊಳು
ಲಂಕಾಧಿಪತ್ಯವನಿತ್ತರಡನೆಸಲ ॥ ೩೨ ॥ ನಡೆದುದದ್ಭುತ ಮಂಗಳೋ
ತ್ಸವ । ವಡಿಗಡಿಗೆ ಲಂಕಾಪುರದೊಳು । ಪೊಡವಿಯಣುಗಿ ರಘೋತ್ತಮರ
ನೊಲಿದರ್ಚಿಸುತಕೂಡೆ ॥ ಕಡುಬೆಲೆವಡೆದು ಕಂಗೊಳಿಪುಡುಗೆ । ತೊಡಿ
ಗೆಗಳನಿತ್ತಾ ವಿಭೀಷಣ । ನಡಿಗಡಿಗೆ ದಣಿಸಿದನು ಸೇನೆಸಹಿತ ರಘೂದ್ವ
ಹನ ॥ ೩೩ ॥ ಸುರಪನಂ ಜಯಿಸುತ್ತ ದಶಶಿರ । ನರಮನೆಯೊಳಗೆ
ತಂದಿರಿಸಿಕೊಂ । ಡೆರಗಿ ಪೂಜಿಸುತಿದ್ದ ಕಪಿಲವರಾಹಮೂರ್ತಿಯನು ॥
ಪರಮ ಸಂಮುದದಿಂದೆ ರಘುಭೂ । ವರನಿಗಿತ್ತು ವಿಭೀಷಣನು ಪದ । ಕೆ
ರಗಿ ಕೊಟ್ಟನು ತನ್ನ ಸರ್ವಸ್ವವನು ಭಕ್ತಿಯಲಿ ॥ ೩೪ ॥ ಪತಿಯು ಕೈ
ಯನು ಪಿಡಿದುಕೊಳುತಾ । ಕ್ಷಿತಿಸುತೆ ವಿನೋದಾರ್ಥವಾಗಿಯೆ । ಸುತರ

ಸಹಿತ ಸಮಸ್ತ ಸೇನಾಜನರ ನೊಡಗೊಂಡು ॥ ವಿತತ ವೈಭವದಿಂದೆ ಬಂವತಿ । ಹಿತದೊಳಗಶೋಕಾವನಕೆ ರಘು । ಪತಿಗೆ ತೋರ್ದಳು ಶಿಂಶುಪಾಭೂರುಹದಮೂಲವನು ॥ ೩೫ ॥ ಹಿಂದೆ ತಾಂ ಕುಳಿತಿದ್ದೆಡೆಗಳನು । ಮಿಂದಭಾವಿಗಳನ್ನು ತೋರಿಸು । ತಂದು ವಸ್ತ್ರಾಭರಣಗಳನಾ ತ್ರಿಜಟೆಗೊಲಿದಿತ್ತು ॥ ಮುಂದೆ ನೀಂ ತ್ರಿಜಟೆಯುನು ಸಂತವಿ । ಸೆಂದು ಸರಮೆಗೆ ಪೇಳ್ದು ಧರಣೀ । ನಂದನೆ ಘನನಿಕುಂಭಳಾದಿಗಳನ್ನು ನೋಡಿದಳು ॥ ೩೬ ॥ ವರವಿಭೀಷಣ ನೊಲಿಸುತಾ ರಘು । ವರನ ವನಸಂರಕ್ಷಣೆಗೆಸುತ । ಭರದೆ ತನ್ನಯ ಪೆಸರಿನಿಂದೆಸೆವೊಂದು ಬಾಣವನು ॥ ಕರುಣೆಯಿಂದಿತ್ತು ವನಲಂಕಾ । ಪುರಿಗೆ ರಕ್ಷಾರೇಖೆಯನೆಸಗಿ । ವರವಿಮಾನವನಾಗ ಪತ್ತಿದ ನಖಿಳಜನರೊಡನೆ ॥ ೩೭ ॥ ಬಳಿಕ ನಾನಾದೇಶ ವಿಭವಂ । ಗಳನು ತನ್ನಯ ಸತಿಗೆ ಸಂತಸ । ದೊಳರುಹುತ ರಾಘವನಯೋಧ್ಯಾನಗರಕೈತಂದು ॥ ನೆಲೆಗೊಳಿಸಿ ನಿಜರಾಜಮಂದಿರ । ದೊಳಗೆ ಕಪಿಲವರಾಹಮೂರ್ತಿಯ । ನೊಲಿದು ಪೂಜಿಸುತಿದ್ದನನುದಿನವಧಿಕ ಭಕ್ತಿಯಲಿ ॥ ೩೮ ॥ ಕೆಲವುದಿನತರುವಾಯ ರಾಘವ । ನೊಲಿದು ಶತ್ರುಘ್ನನಿಗೆ ಕೊಟ್ಟನು । ತಿಳಿದು ಪೂಜಿಸೆನುತ್ತ ಕಪಿಲವರಾಹಮೂರ್ತಿಯನು ॥ ನೆಲದಣುಗಿ ನೆರವೇರಿಸಿದಳು ಮೊ । ದಲು ಹರಿಸಿಕೊಂಡಂತೆ ಸುವ್ರತ । ಗಳನು ಸಾಂಗೋಪಾಂಗವಾಗಿಯೆ ಬಹುಳ ಭಕ್ತಿಯಲಿ ॥ ೩೯ ॥ ಅವುಗಳಗಮುದ್ಯಾಪನೆಗಳನು । ತವಕದಿಂದಾಗಿಸುತ ದಣಿಸಿದ । ಳವನಿನಿರ್ಜರರಾದಿಯಾದ ಸಮಸ್ತ ಜನಗಳನು ॥ ರವಿಕುಲೋತ್ತಮ ನೊಂದುದಿನದೆ ಪೃ । ಥಿವಿಸುತೆಯನೀಕ್ಷಿಸುತ ಪೇಳ್ದನು । ಜವದೆನಾಂ ದಿಗ್ವಿಜಯಕೋಸುಗ ಪೋಗಿಬಹೆನೆನುತ ॥ ೪೦ ॥ ಬರುವೆ ನಿನ್ನಯ ಹಿಂಗಡೆಯೊಳನು । ತೆರಗಿ ಪದಪಂಕಜಕೆ ಜಾನಕಿ । ಪರಿಪರಿವಿಧದೆ ಬೇಡುತಿರಲಾ ರಾಘವೇಶ್ವರನು ॥ ಕರೆದುಕೊಂಡೈದುವೆನೆನುತ ತ । ನ್ನರಸಿಯ ನೊಡಂಬಡಿಸಿ ಸಕಲಜ । ನರಸಹಿತ ಹತ್ತಿದನು ಪುಷ್ಪಕವರವಿಮಾನವನು ॥ ೪೧ ॥ ಹೊರಟು ಮೂಡಣದೆಸೆಗೆ ರಘುಭೂ । ವರನು ಭಪ್ಪನ್ಶ್ವಾರುದೇಶಗ । ಳರಸರಿಂದುರೆ ಮನ್ನಣೆವಡೆದು ಕಪ್ಪಗಳನಾಂತು ॥ ಮೆರೆವ ಜಂಬೂದ್ವೀಪ ಮಧ್ಯದೊ । ಳಿರುವ ನವವರ್ಷಂಗಳಿಗೆ ತಾಂ । ಭರದೊಳೈತಂದನು ಸತೀಸುತ ಹಿತಜನರಸಹಿತ ॥ ೪೨ ॥ ಭರತ ವರ್ಷಕೆ ಬಂದು ರಘುಭೂ । ವರನು ಕಪ್ಪವನಾಂತು ವರಕಿಂ । ಪುರುಷವರ್ಷಕೆ ಪೋಗಿ ಕಾಣಿಕೆಯ

ನ್ನು ಕೈಕೊಂಡು || ಹರಿವರುಷಕ್ಕೈತಂದು ಸಕಲಜ | ನರಸಹಿತ ಕಪ್ಪ
ವನುಕೊಂಡತಿ | ಭರದೆ ಬಂದನಿಲಾವೃತವರುಷಕಾಗಿ ಹರ್ಷದಲಿ || ೪೩ ||
ಪಡೆದು ಕಪ್ಪವನಲ್ಲಿ ಜಾನಕಿ | ಯೊಡನೆ ಭದ್ರಾಶ್ವವರುಷಕೆ ಬಂ | ದೊ
ಡೆಯನ ನೊಲಿಸಿಕೇತುಮಾಲವರುಷಕೆ ನಡೆತಂದು || ಕಡುತವಕದಿಂದಲ್ಲಿ
ಕಪ್ಪವ | ಪಡೆದುಕೊಳ್ಳುತ ರಮ್ಯಕವರುಷ | ಕಿಡಿದ ಸಂತಸದಿಂದೆ ಬಂ
ದನು ಗಗನಮಾರ್ಗದಲಿ || ೪೪ || ತೆಗೆದುಕೊಳ್ಳುತ ಕಾಣಿಕೆಯನಾ |
ರಘುಕುಲತಿಲಕನಲ್ಲಿ ಸಕಲ ಕ | ಪಿಗಳ ನೋಲೈಸುತ ಹಿರಣ್ಮಯವ
ರ್ಷಕ್ಕೈತಂದು || ಅಗಣಿತದ ಕಪ್ಪವನು ಬೇಗನೆ | ತೆಗೆದುಕೊಂಡೈತರುತ
ಪಡೆದನು | ಸೊಗಸಿನಿಂದುತ್ತರ ಕುರುವರುಷದಲ್ಲಿ ಕಾಣಿಕೆಯ || ೪೫ ||
ಜಯಿಸಿಜಂಬೂದ್ವೀಪವ ನವನಿ | ಜೆಯನೊಲಿಸುತಪ್ಲಕ್ಷಶಾಲ್ಮಲಿ | ನ
ಯಯುತ ಕುಶಕ್ರೌಂಚಪುಷ್ಕರ ಶಾಕಗಳನಿಸುವನಯನಕಾನಂದಾತಿ
ಶಯವನು | ಜಯಿಸುವೇಳುದ್ವೀಪಗಳ ತಾ | ಜಯಿಸಿ ಕಾಣಿಕೆಗೊಂಡ
ಯೋಧ್ಯಾಪುರಿಗೆ ನಡೆತಂದ ... ... || ೪೬ ||

ಇಂತು ನಲವತ್ತುಮೂರನೆಯ ಅಧ್ಯಾಯ ಸಂಪೂರ್ಣವು.
ಪದ್ಯಗಳು ೨೪೪೨.



## ನಲವತ್ತುನಾಲ್ಕನೆಯ ಅಧ್ಯಾಯ

ಸೂಚನೆ || ವಿತತವಿಸ್ಮಯಗಳನು ನೆರೆನೋ |
ಡುತ ಮಹೀಸುತೆ ನಾರದಮುನಿಯು |
ನತಿಭಕುತಿಯಿಂದುಪಚರಿಸಿದಳು ತನ್ನರಮನೆಯಲಿ ||

ಬಂದು ಹೊಕ್ಕಳು ಪುರವರವನತಿ | ಚಂದದಿಂದುರೆ ಕಂಗೊಳಿಪ
ನಿಜ | ಮಂದಿರಕೆ ನಡೆತಂದಳಿಳಿದಾ ವರವಿಮಾನವನು || ಸಂದಸಂತಸ
ದಿಂದೆ ಧರಣೀ | ನಂದನೆ ರಘೂದ್ವಹನ ಮನಕಾ | ನಂದವನು ತಾ ನೆಸ
ಗುತಿದ್ದಳು ಬಹುವಿನೋದದಲಿ || ೧ || ಇರಲಿರಲು ಬಹುದಿವಸಗಳನಂ |
ತರದೊಳೈದು ವರುಷದ ಧರಣೀ | ಸುರನ ಪುತ್ರನದೊರ್ವನೈದಲು
ಮೃತಿಯನತಿಭರದೆ || ಪರಿಪರಿವಿಧಗಳಿಂದೆ ರಘುಭೂ | ವರನ ಬಾಗಿಲ

ಮುಂಗಡೆಯೊಳಳು । ತುರೆ ವಿಲಾಪಿಸುತ್ತಿದ್ದ ರೆಳೆಯನ ತಾಯಿತಂದೆಗ
ಳು ॥ ೧ ॥ ಮೆಡದಿಯೊಡನಾ ರಾಘವೇಶ್ವರ । ನೊಡನೆ ಬಾಗಿಲಬಳಗೆ
ಬರಲಾ । ಪ್ರೊಡವಿಯಣುಗಿ ರಘೋತ್ತಮರ ನೀಕ್ಷಿಸುತ ಭೂಸುರನು ॥
ಒಡೆಯನೀಂ ಕೇಳ್ನಿನ್ನ ರಾಜ್ಯದೊ । ಳಡಿದ ಧರ್ಮಗಳಿಂದಲೋ ನೀ ।
ನೊಡರಿಸಿದ ಧರ್ಮಂಗಳಿಂದಲೊ ನನ್ನ ಮಗನಳಿದ ॥೨॥ ಇವನ ಬದುಕಿ
ಸಿಕೊಟ್ಟರೆ ಸರಿಯು । ಸುವಿಡಿದಿಹೆ ನಿಲ್ಲದೊಡೆನನ್ನ ವ । ಧುವಿನ ಸಹಿ
ತಳಿವೆನೆನುತವನೀಸುರನು ಪೇಳಿದೊಡೆ ॥ ಜವದೊಳೀಗೆಲೆ ಬದುಕಿಸುತ್ತ
ಕೊ । ಡುವೆನು ನಿನ್ನಯ ಮಗನನಲ್ಲದೊ । ಡವನಿಗೆ ಬದಲು ಕುಶನ
ನೀಯುವೆನೆಂದನಾರಾಮ ॥ ೪ ॥ ಅವನಿಜಾತೆಯೆ ಕೇಳು ಮಗುವಿನ ।
ಸುವನುಳುಹಿಕೊಡದಿದ್ದರೀಗಳ । ಸುವನು ಬಿಡುವೆನು ನಿನ್ನಿದಿರೊಳೆನು
ತಾಕೆ ಗೋಳಿಡಲು ॥ ರವಿಕುಲೋತ್ತಮ ರಾಮನಾ ವಚ । ನವನು ನೀ
ನಾಲಿಸಿದೆ ಯಷ್ಟ್ಯಕೊ । ಡುವೆನುಲವನನು ನಿನ್ನ ಕುವರನು ಬದುಕ
ದಿರಲೀಗ ॥ ೫ ॥ ಎನುತ ಸೀತಾರಾಘವರು ಬಹು । ವಿನಯದಿಂದಾದಂಪ
ತಿಗಳ ನೊ । ಡನೊಡನೆ ಸಮಾಧಾನಪಡಿಸುತ್ತಿರಲನಂತರದೆ ॥ ಮನ
ದೊಳೊಂದು ಮುಹೂರ್ತಯೋಚಿಸಿ । ಮುನಿವಸಿಷ್ಠನ ಪದಕೆರಗಿ ನು
ಡಿ । ದನದರನಿಮಿತ್ತವನು ತಿಳಿಸೆಂದೆನುತ ರಾಘವನು ॥ ೬ ॥ ಹರಿಮು
ಕುಂದಮುರಾಂತಕಾಚ್ಯುತ । ಗರುಡವಾಹನ ವಾಸುಕಿಶಯನ । ಮುರ
ಮಥನನಾರಾಯಣಯೆನುತ ವಿಷ್ಣುನಾಮವನು ॥ ಪರಮಸಂಮದದಿಂದೆ
ಪಾಡುತ । ಭರದೆ ಬಂದನನಿತರೊಳಾ ರಘು । ವರನೆಡೆಗೆ ನಾರದಮುನೀಂ
ದ್ರನು ಧರಿಸಿವೀಣೆಯನು ॥ ೭ ॥ ಬಂದನಾರದನಡಿಗೆರಗಿ ರಘು । ನಂದನ
ನುಚಿತಪೀಠದೊಳು ನಲ । ವಿಂದೆಕೂಡಿಸಿ ಯರ್ಘ್ಯಪಾದ್ಯಾಚಮನಗಳ
ನಿತ್ತು ॥ ಮುಂದೆನಿಂದುಪಚರಿಸುತಿರಲಾ । ನಂದದಿಂದಾಶೀರ್ವದಿಸುತಿಂ ।
ತೆಂದು ನುಡಿದನು ದೇವಮುನಿಮಂತ್ರಾಕ್ಷತೆಯನಿತ್ತು ॥ ೮ ॥ ವೀರರಾ
ಘವ ಕೇಳು ನೀನೀ । ಧಾರಿಣೀವಲಯದೊಳರದೆ ಸಂ । ಚಾರವನೆಸಗಿ
ಕಂಡುಹಿಡಿವುದ ಧರ್ಮವನೆನುತ್ತ ॥ ನಾರದಮುನೀಂದ್ರನರುಹಿ ಘನದ ।
ಯಾರಸನೆ ತೆರಳಿದನು ಘನಗಂ । ಭೀರಗಾನವನಾಗಿಸುತ ಮರಲೋಕಕ
ತಿಭರದೆ ॥ ೯ ॥ ಸತಿಸಹಿತ ರಘುನಂದನನ ಪರಿ । ಮಿತಮುನಿಪ ಪರಿವಾ
ರದೊಡನೆ ಕು । ಳಿತು ಕುಬೇರನ ಘನತರದ ಪುಷ್ಪಕವಿಮಾನದೊ
ಳು ॥ ಅತಿಭರದೊಳಂದೆಲ್ಲ ಕಡೆತಿರು । ಗುತ ಭರತಖಂಡದೊಳು ಬಂ
ದನು । ವಿತತ ವಿಂಧ್ಯಾಚಲದಹತ್ತಿರ ಕಭ್ರಮಾರ್ಗದಲಿ ॥ ೧೦ ॥ ಗಿರಿಯ

ಮಧ್ಯದೊಳೊರ್ವ ಶೂದ್ರನು । ಹರನ ನಾಮವ ಜಾನಿಸುತ ಹ
ಲಿರುಳಧೋಮುಖನಾಗಿ ನಿಂದು ತಪವನೆಸಗುತಿರಲು ॥ ತ್ವರಿತದಿಂದ
ನು ವಧಿಸಿ ರಘು । ವರನು ಮುಕ್ತಿಯನೀಯಲಂದನಿ । ತರೊಳಯೆ
ಧ್ಯಾಪುರದ ವಿಪ್ರನ ಮಗನು ಜೀವಿಸಿದ ॥ ೧೧ ॥ ಸುರಪಥದೊಳ್ಳೈತ
ಯೋಧ್ಯಾ । ಪುರಿಗೆ ರಘುನಂದನನು ಧರಣೀ । ಸುರನಿಗೊಪ್ಪಿಸುತ
ಮಗನನು ಬಹುಳಹರ್ಷದಲಿ ॥ ಕರುಣೆಯಿಂದೀಕ್ಷಿಸುತ ಸಕಲ ಜ
ರನು ಮನ್ನಿಸಿ ಕಳುಹಿಕೊಟ್ಟತಿ । ಭರದೆ ಬಂದನು ಸತಿಸಹಿತ ನಿಜ
ಜಮಂದಿರಕೆ ॥ ೧೨ ॥ ಕೆಲವುದಿನಗಳನಂತರದೊಳಾ । ನೆಲದಣುಗಿ
ನೊಂದು ದಿವಸದಿ । ರುಳತಿಗೋಪ್ಯದೆ ನಮಿಸಿ ರಾಮನ ಪಾದಪಂಕ
ಕೆ ॥ ಎಲೆ ಮನೋರಥ ಕುಶನು ಹುಟ್ಟಿದ । ಬಳಿಕ ನನಗೇತಕ್ಕೆ
ತ್ತೆಯೊ । ಡಲೊಳು ಗರ್ಭವು ನಿಲ್ಲಲಿಲ್ಲವೆನುತ್ತ ಕೇಳಿದಳು ॥ ೧
ಲಲನೆ ಪೇಳದ ನುಡಿಯಕೇಳ್ದನ । ಕುಲತಿಲಕ ನೊಂದು ಕ್ಷ
ನಕ । ಸಕಲವಿಚಾರವನಾಂತು ಯೋಚಿಸಿ ತನ್ನ ಚಿತ್ತದಲಿ ॥ ಎಲೆಸತಿ
ನೀನೇತಕೆಳಸುವೆ । ಪಲವುಮಕ್ಕಳ ಸತ್ಕುಲದೊಳು ಬ । ಹುಳಸ
ರು ಸಂಜನಿಸಬಾರದು ಕೇಳು ಮನವಿರಿಸಿ ॥ ೧೪ ॥ ಇರಲಿರಲು ಸದ
ಶದೊಳು ಬಲು । ದುರುಳ ನೊರ್ವನು ಜನಿಸಿ ಕಾಲಾಂ । ತರದೆ
ನಾಕುಲಕೆ ಹಾನಿಯನುಂಟುಮಾಡುವನು ॥ ಅರಸಿಕೇಳದು ಕಾರ
ಹು ಸು । ತರನಪೇಕ್ಷಿಸಲಿಲ್ಲ ನಾನು ಬ । ಸಿರನು ಹೊಂದುವುದೆಲ್ಲಿ ನಿ
ನ್ನಿಷ್ಟೆಯಿಲ್ಲದೆಯೆ ॥ ೧೫ ॥ ಕುಲವನುದ್ಧರಿಪೊರ್ವ ಪುತ್ರನ । ನಿಳೆಯೆ
ಲ್ಲರಪೇಕ್ಷಿಸಲು ಬೇ । ಕೆಲೆ ಸತಿಯೆ ಕೇಳ್ಕ್ರಮಿಗಳಂತತಿ ದುಷ್ಟರಹ
ತರು ॥ ಹಲಬರುದಿಸಿದೊಡೇನುಫಲವು ಕ । ಮಲಸಖವಿಧುಗಳಂತ
ಸಿಹರೊ । ಡಲೊಳು ಕುಶಲವರಿಬ್ಬರಿನ್ನೇತಕೆ ಸುತರು ನಿನಗೆ ॥ ೧
ನಿನಗೆ ಸಂತತಿಬೇಡವೆನುತಾ । ಮನುಕುಲೋತ್ತಮ ನರುಹಲಂದ
ಜನಕಸುತೆ ಮನದೊಳು ವಿಷಾದವತಾಳ್ದು ಬಿಸುಸುಯ್ದು ॥ ನ
ಕನ್ಯಾರತ್ನ ವೊಂದನು । ಮನವೊಲಿದನುಗ್ರಹಿಸಬೇಕೆಂ । ದೆ
ಬೇಡಿಕೊಳುತಿರಲಾ ರಘುನಾಥನಿಂತೆಂದ ॥ ೧೭ ॥ ನಿನಗೆ ಮಗಳುದಿ
ರವಳ ನಾ । ವನಿಗೆ ನಾಂ ಕೊಡಲೀಭುವನದೊಳು । ನನಗೆ ಸವ
ರುಂಟು ಜಾನಕಿ ಕೇಳವನಿಪರೊಳು ॥ ವಿನಯದಿಂದಾವ ನೃಪನ
ಗೆ । ವಿನಮಿಸುವೆ ನೀನಾರಕಾಲುಗ । ಳನು ತೊಳೆಯಬೇಕೀಮಹಿ
ಳದೊಳಗೆ ನಾಂ ಪಿಡಿದು ॥ ೧೮ ॥ ಅವನಿಹನಂತಪುದೊರೆವ

ನೀ ವಸುಧೆಯೊಳದರ ನಿಮಿತ್ತದೆ । ಭಾವಿಸದಿಹೆನು ಮಗಳು ಬೇಕೆನು
ತೆನ್ನ ಚಿತ್ತದಲಿ ॥ ಆವಕಾಲದೊಳಲ್ಲ ನನಗೀ । ಭೂವಲಯದೊಳು ಮ
ಗಳುಬೇಕೆಂ। ಬಾವಿತತವೆನಿಪಾಸೆ ಕೇಳೆಲೆಮತ್ತಗಜಗಮನೆ ॥ ೧೯ ॥
ಲವಕುಶರು ಮೊದಲಾದ ಮಕ್ಕಳ । ಕುವರಿಯರು ನಿನ್ನಾತ್ಮಜೆಯರ ।
ಲ್ಲವೆ ಮಹೀಸುತೆ ನೀನು ಯವ್ವನವುತ್ತತೆಯೊಳಂತು ॥ ಕವಿದವೋಹ
ಕಥೀನಳಾಗುತ । ಕುವರರ ನಪೇಕ್ಷಿಸಿಯೆ ಕೇಳುತಿ । ರುವೆ ಬಗೆದ್ರ
ಯೆ ಜನನಿಯಲ್ಲವೆ ನೀನು ಮೂಜಗಕೆ ॥ ೨೦ ॥ ನಿನಗೆ ಹೆಂಗಸರೆಲ್ಲ
ಪುತ್ರಿಯ । ರೆನಿಸಿಕೊಂಡಿರುತಿಹರು ಗಂಡಸ । ರ ನಿಬರು ಕುವರರೆನಿಸಿ
ಕೊಂಡಿಹರೆನುತೊಡಂಬಡಿಸಿ ॥ ವನಜಮುಖಿ ಕೇಳ್ನನಗೆ ಬಹುಸು
ತ । ರನು ಕೊಡದಿರಲಿಹುದು ನೆಪವದನು । ನಿನಗೊರೆವೆನಾಲಿಪುದೆನುತ
ಲಿಂತೆಂದನಾರಾಮ ॥ ೨೧ ॥ ಸುತರು ಬಹುಜನ ಸಂಜನಿಸಲು ವ ।
ನಿತೆಯರಿಗೆ ಯವ್ವನವು ಪೋಪುದು । ಸತಿಯೆ ನೀಂ ಕೇಳ್ನಿನ್ನ ಜವ್ವನ
ಪೋಪುದೆಂದೆನುತ ॥ ಅತಿ ಚತುರತನದಿಂದಿದನು ಸಂ । ತತವು ತಿಳದಿಂ
ತಾಗಿಸಿನೆ ನೀ । ಕ್ಷಿತಿಯೊಳದು ಬಹುಗೋಪ್ಯವೆನುತೊಪ್ಪಿಸಿದ ನವನಿಜೆ
ಯ ॥ ೨೨ ॥ ಭರದೊಳೊಂದಾನೊಂದುದಿನ ಬಂ । ದರವನೀಸುತೆ
ಪಾದಪದ್ಮಗ । ಳೆರಡ ನೀಕ್ಷಿಸಬೇಕೆನುತ ವಾಹನಗಳ ನಡರ್ದು ॥
ಅರಸಿಯರು ಮುನಿಪತ್ನಿಯರಿಳೆಯೊ । ಳಿರುವ ಚಾತುರ್ವರ್ಣ್ಯದವನಿತೆ ।
ಯರುಗಳೇಳು ದ್ವೀಪಗಳೊಳಿರುವಖಿಳನಾರಿಯರು ॥ ೨೩ ॥ ಸಾವಿರಾ
ರುಜನಗಳ ನೊಡಗೊಂ । ಡಾವಿಮಲತರ ಚೈತ್ರಮಾಸದ । ಪಾವನ
ಸ್ನಾನಕೆನುತಾವನಿತೆಯರು ಬರುತಿರಲು ॥ ತೀವಿಪತಿ ಕರುಣಾಕಟಾಕ್ಷ
ದೊ । ಳಾವನಿತೆಯರ ನಿದಿರುಗೊಳ್ಳುತ । ಭೂವಧೂಸುತೆ ಯುಪಚರಿಸಿ
ದಳು ಮನೆಗೆ ಕರೆತಂದು ॥ ೨೪ ॥ ವಿನುತ ಸಿಂಹಾಸನದೆ ಕುಳಿತಿಪ ।
ಜನಕಜಾತೆಯ ಪಾದಪದ್ಮಕೆ । ಮಣಿದೆರಗುತವರೆಲ್ಲ ನಾನಾದೇಶದೊಳಿ
ರುತಿಪ ॥ ಮಣಿಕನಕವಸನಾಭರಣ ವಾ । ಹನಗಳನು ಕಾಣಿಕೆಯ
ನೀಯುತ । ಮನವೊಲಿದು ಪೂಜಿಸಿದರರಿಸಿನ ಕುಂಕುಮವನಿರಿಸಿ
॥ ೨೫ ॥ ಆಗಳಾ ಮಾನಿನಿಯರೆಲ್ಲ ಸ । ರಾಗದಿಂದವನೀಸುತೆ ನುಡಿದ ।
ರಾಘವನ ಕಥೆಗಳನು ಕೇಳುತ್ತಧಿಕಹರ್ಷದಲಿ ॥ ಶ್ಲಾಘಿಸುತ ಸೀತಾ
ವಿವಾಹವ । ನಾಗ ಬಿನ್ನವಿಸಿದರೆಲೆ ಜನನಿ । ಬೇಗತಿಳುಹಿಸು ನಿನ್ನ
ಮದುವೆಯ ಸತ್ಕಥೆಯನೆನುತ ॥ ೨೬ ॥ ಅವರ ಮಾತನು ಕೇಳ್ದು
ಜಾನಕಿ । ತವಕದಿಂದಲೆ ತನ್ನ ಸಖಿಯೆನಿ । ಸುವ ತುಲಸಿಯೊಡನೆಂದ

ಳಾಕಥೆಯನ್ನು ತಿಳಿಸೆನುತ || ಅವಳ ಮುಖದಿಂದಾಲಿಸುತ ಲಾ | ದಿವ
ಸವನಿತೆಯುರಾ ವಿವಾಹೋ | ತ್ಸವದ ಸತ್ಕಥೆಯನ್ನು ಹೊಗಳಿವರಧಿಕಭ
ಕ್ತಿಯಲಿ || ೨೭ || ಧರಣಿಜಾತೆಯು ಚರಣಪಂಕಜ | ಕೆರಗಿ ಪೂಜಿಸಿ
ಮನ್ನಣೆಯನಾಂ | ತುರುತರದವರ ಚೈತ್ರಮಾಸಸ್ನಾನವನುಗೈದು ||
ಹೊರಟುಹೋದರು ತಮ್ಮಡೆಗಳಿಗೆ | ಭರದೆ ರಾಮನಬಳಿಗೆ ಬಂದನು |
ಮರುದಿವಸ ವಾಲ್ಮೀಕಿ ವನದಿಂದೊರ್ವ ವಟುವೆರನು || ೨೮ ||
ನಮಿಸಿ ರಘುಭೂಪಾಲಕನ ಪದ | ಕಮಲಕಾ ವಟುವರನು ಪೇಳ್ದ
ನು | ವಿಮಲಮತಿ ವಾಲ್ಮೀಕಿಯಾಗವನಾಗಿಸುತ್ತಿಹನು || ಕಮಲನಾಭ
ನೆ ನೀವುಬರ್ಪುದು | ವಿಮಲಯಾಗಕೆ ಸಕಲಬಾಂಧವ | ಸಮುದ
ಯದೊಳೆಂದೆನುತಪೇಳ್ದನು ಕೊಟ್ಟು ಪತ್ರಿಕೆಯ || ೨೯ || ಬಳಿಕ
ಮನೆಗಿನ್ನೊರ್ವ ವಟುಬಂ | ದಡಿಗೆರಗಿ ಬಿನ್ನೈಸಿದನು ಕೇ | ಳೊಡೆ
ಯ ವಿಶ್ವಾಮಿತ್ರಮುನಿ ಘನತರದ ಯಜ್ಞವನು || ಒಡರಿಸುತ್ತಿಹನದಕೆ
ಸತಿಸುತ | ರೊಡನೆ ನೀವ್ಬೈಯಮಾಡಬೇಕೆನು | ತಿಡಿದ ಸಂತಸದಿಂದೆ
ಪೇಳ್ದನು ನಮಿಸಿ ಕೈಮುಗಿದು || ೩೦ || ಧರಣಿಸುತೆ ಗೀ ಸಂಗತಿಯ
ನಂ | ದರುಹಿ ರಾಘವನಖಿಳ ಜನಸಹಿ | ತೆರಡು ದಾರಿಗಳೆರಡು ದೆಸೆಗೈ
ದು ವೆಡೆಗೈತಂದು || ಎರಡೆರಡು ರೂಪುಗಳ ನೈದುವ | ತೆರದೊಳಾಜ್ಞಾ
ಪಿಸಿ ಸಮಸ್ತ ಜ | ನರಿಗೆ ಬಂದನು ಭರದೊಳಬ್ಬರ ಯಾಗಗಳಿಗಾಗಿ
|| ೩೧ || ಆ ಮುನೀಂದ್ರರ ಯಜ್ಞಗಳೆರಡ | ನಾ ಮನುಕುಲೋತ್ತಮ
ನು ಮಾಡಿಸಿ | ಭೂಮಿಸುತೆ ಸಹಿತಖಿಳ ಮರ್ಯಾದೆಗಳನೈದುತ್ತ || ನೇ
ಮದಿಂದಾ ಮುನಿಪತಿಗಳಿಗೆ | ಕೈಮುಗಿದು ಸಂತೋಷಪಡಿಸುತ | ತಾಮ
ಸವನಾಗಿಸದೆ ಬಂದನು ತನ್ನ ಪುರಿಗಾಗಿ || ೩೨ || ಮೊದಲೆರಡು ರೂ
ಪಂಗಳಸು ತಾ | ಳಿದೆಡೆಗೈತಂದಾ ರಘೂತ್ತಮ | ನೊದವಿಸುತ ವಿಸ್ಮ
ಯವನೊಂದೇರೂಪವನು ತಾಳ್ದು || ಪದೆದು ಮನ್ನಿಸುತಖಿಳಸೇನೆ
ಯ | ನೊದವಿದತ್ಯಾನಂದದಿಂದಾ | ಸುದತಿ ಜಾನಕಿಯೊಡನಯೋಧ್ಯಾ
ಪುರಿಗೆ ನಡೆತಂದ || ೩೩ || ಪರಿಮಳಂಗಳನೆಲ್ಲ ಕಡೆಗಂ | ಪರಡಿಸುವ
ಪಂಕೇರುಹಂಗಳ | ನಿರಿಸಿದಪಲವು ಸಾವಿರದ ಬುಟ್ಟಿಗಳನಾತೆರದೆ ||
ಪರಿಪರಿಯ ಪಕ್ವಫಲಗಣದಿಂ | ದುರೆಮೆರೆವ ಪೆಟ್ಟಿಗೆಗಳನು ರಘು |
ವರನಬಳಿಗಾ ಭೂರಿಕೀರ್ತಿ ಕಳುಹಿದನೊಂದುದಿನ || ೩೪ || ಅವುಗಳೆಲ್ಲ
ವ ನೀಕ್ಷಿಸುತ ರಾ | ಘವನು ಧರಣೀಸುತೆಯ ಹತ್ತಿರ | ಕವುಗಳೆಲ್ಲವನು
ಕಳುಹಿಸಲಾ ಜನಕನಂದನೆಯು || ತವಕದಿಂದಾ ಪೆಟ್ಟಿಗೆಗಳೆ | ಲ್ಲವನು

ತೆಗೆದಾಘ್ರಾಣಿಸಿದಳು ಹ । ಲವುಸಲ ಘನಸುಗಂಧದಿಂದೆಸೆವಾ ಕುಸು
ಮಗಳನು ॥ ೩೫ ॥ ಮನುಜಪಾಲಕ ಸಭೆಯೊಳಿರುತಾ । ಜನಕನಂದನೆ
ಗೈದುದನರಿತು । ವನಜಗಳನಾಘ್ರಾಣಿಸಿದಳುಳಿದೆನ್ನ ನವನಿಜೆಯು ॥ ಇನ
ಯನಪ್ಪಣೆ ಯಿಲ್ಲನಾ ಪತಿ । ಯನುಳಿದಾಪಪದಾರ್ಥವನು ಮಾ । ನಿನಿ
ಯರು ಧರಿಸಕೂಡದಿದು ತರವಲ್ಲಬಲೆಯರಿಗೆ ॥ ೩೬ ॥ ಅದುನಿಮಿತ್ತದೆ
ಶಿಕ್ಷಿಸುವೆನೀ । ಸುದತಿಯನು ನಾನಿಲ್ಲದಿದ್ದರೆ । ವಧುಗಳೆಲ್ಲರು ಜಗದೊ
ಳೀತೆರವಿಂದೆ ಮಾಡುವರು ॥ ಇದು ವಿಹಿತವಲ್ಲೆಂದು ಯೋಚಿಸಿ । ಸದ
ನಕತಿ ಶೀಘ್ರದೊಳು ಬಂದನು । ಅದನು ಮತ್ತೊಬ್ಬರಿಗೆ ಪೇಳದೆ ಮ
ನದೆ ಯೋಚಿಸುತ ॥ ೩೭ ॥ ಭರದೊಳೊಡ್ಡೋಲಗವ ನಾರಘು । ವರ
ನು ಮುಗಿಸುತ ಜಾನಕಿಯು ಹ ॥ ತ್ತಿರಕೆ ಬಂದಾ ಪೆಟ್ಟಿಗೆಗಳನು ತೆಗಿಸಿ
ನೆರೆನೋಡಿ ॥ ವರಫಲ ಕುಸುಮಚಂದನಂಗಳ । ನಿರದೆ ಪಟ್ಟಣದೊಳಹ
ಸಕಲ ಜ । ನರಿಗೆ ಕೊಟ್ಟುಬಳಿಕವುಗಳನು ತಾನುಧರಿಸಿದನು ॥ ೩೮ ॥
ಬಂದುದಿನವೇಕಾದಶಿಯೊಳಾ । ನಂದದಿಂ ದುಪವಾಸವನೆಸಗು । ತಿಂದು
ವದನೆ ಮಹೀಸುತೆ ದ್ವಾದಶಿಯುಷಸ್ಸಿನೊಳು ॥ ಮಿಂದುಬೃಂದಾವನಕತಿ
ಭಕುತಿ । ಯಿಂದೆ ಪೂಜೆಯನಾಗಿಸುತ ನಲ । ವಿಂದೆ ಸುತ್ತುಬಳಸುತಲಿ
ದ್ದಳು ಪೇಳ್ವಮಂತ್ರವನು ॥ ೩೯ ॥ ಪೊಡಮಡುತಲಾಸೀತೆ ತುಲಸಿಯ ।
ಗಿಡಕೆಮೂರುಸಲ ಪ್ರದಕ್ಷಿಣೆ । ಯೊಡರಿಸುತ್ತಿರೆ ಸೆರಗುಸೋಂಕುತಬಿ
ದ್ದುದೊಂದೆಲೆಯು ॥ ಪೊಡವಿಯೊಳಗೀದಿನದೆ ತುಲಸಿಯ । ಗಿಡದೆಲೆಯು
ರುಳ್ದುದ ನುಚಿತವೆನು । ತೊಡನೆ ಪತ್ರವನಲ್ಲಿರಿಸಿಬೇಡಿದಳುಪಲತೆರದೆ
॥ ೪೦ ॥ ಮುಗಿಸಿಪೂಜೆಯನಾ ಗಿಡಕೆಕೈ । ಮುಗಿದುಜಾನಕಿ ಪಲವು
ಬಗೆವರಿ । ಕೆಗಳನಾಗಿಸಿ ಬರುವನಿತರೊಳು ರಾಜಮಂದಿರಕೆ ॥ ಗಗನ
ದಿಂದೈತಂದ ಮುರಮುನಿ । ರಘುವರನ ಮುಂದುಗಡೆ ನಿಂದನು । ಬಗೆಬ
ಗೆಯರಾಗಂಗಳನು ಹಾಡಿಸುತವೀಣೆಯಲಿ ॥ ೪೧ ॥ ದೇವಮುನಿಯಚರ
ಣಕೆರಗಿ ರಘು । ಭೂವರನು ಕುಳ್ಳಿರಿಸಿಕೂಡೆ ಮ । ಹಾವಿಭವದಿಂದ
ರ್ಘ್ಯ ಪಾದ್ಯಾಚಮನಗಳನಿತ್ತು ॥ ತಾವುಭೋಜನ ಕೇಳಬೇಕೆನೆ । ಲೀ
ವಸುಮತೀಸುತೆ ಬಡಿಸುವರೆ । ನಾವುಮಾಡುವುದಿಲ್ಲ ವೂಟವೆನೆಂದುಪೇಳಿದ
ನು ॥ ೪೨ ॥ ಧಾರಿಣೀಸುತೆ ಭೀತಿಗೊಂಡಳು । ವೀರರಾಘವ ನರಿಯದಂ
ದದೆ । ಕಾರಣವದೇನೆನುತ ಕೇಳ್ದಡಮರಮುನೀಂದ್ರನನು ॥ ಘೋರ
ಪಾತಕಿ ಸೀತೆಮುರಿದಳು । ಸೀರೆಸೆರೆಗಿಂ ದೊಂದೆಲೆಯನು ವಿ । ಚಾರಿಸದೆ
ತುಲಸೀಗಿಡದೊಳೀ ದ್ವಾದಶಿಯದಿವಸ ॥ ೪೩ ॥ ಪೋಗಿನೋಡೆಲೆ ರಾಘವ

ನೆನೀ । ನೀಗಲಿವರ ನಿಜಸ್ಥಿತಿಯು ಗೊ । ತ್ತಾಗುವುದಿದು ಬ್ರಹ್ಮಹತ್ಯಕೆ
ಸರಿಯಹುದೆನುತ್ತ ॥ ಆಗ ನಾರದನರುಹುತಿರಲನು । ರಾಗದಿಂದಾ ರಘು
ವರನಿದ । ಕ್ಕಾಗಿಪ್ಪದು ಪರಿಹಾರವನು ನೀವೆನುತಬೇಡಿದನು ॥ ೪೪ ॥
ತನ್ನಪಾತಿವ್ರತ್ಯ ಮಹಿಮೆಯೊ । ಳನ್ನು ಜಾನಕಿಗಿಡದೊಳೀಯೆಲೆ । ಯ
ನ್ನುಸಂಧಿಸಲೀ ದುರಿತಪರಿಹಾರವಹುದೆನುತ ॥ ಮನ್ನಿಸಿತಿಳಿಸ ಲಮರ
ಮುನಿವರ । ನನ್ನಿಗಂ ಪದಕೆರಗಿಜಾನಕಿ । ಚಿನ್ನವಿಸಿದಳು ನೀವ್ರನುಡಿ
ದಂತಾಗಿಸುವೆನೆಂದು ॥ ೪೫ ॥ ಒಡನೆಬೃಂದಾವನದ ಬಳಿಗಾ । ಪೊಡಪಿಯ
ಣಾಗಿಯು ಬಂದುತುಲಸಿಯ । ಗಿಡಕೆಕೈಮುಗಿದೆರಗಿ ನಿಂದೆಲೆತುಲಸಿದೇ
ವತೆಯೆ ॥ ಗಿಡದೊಳಗೆಮೊದಲಂತೆ ಸೇರಲಿ । ಕಡುತವಕದಿಂ ದೀಯಲೆ
ಯುನಾಂ । ಪೊಡವಿತಳದೆ ಪತಿವ್ರತೆಯೆನುತ ಜಸವನಾಂತಿರಲು ॥ ೪೬ ॥
ಸಿಲುಕಿಕೊಳ್ಳದೆ ಪೋಗಲೆಲೆಕೋ । ಮಲತುಲಸಿ ಗಿಡವಲ್ಲನಿತರೊಳ । ಖಿ
ಳವಿಬುಧ ರೈತಂವರತಿ ಜವದಿಂದನೆರೆನೆರೆದು ॥ ನೆಲವನೀಕ್ಷಿಸುತತಿವಿಷಾ
ದವ । ತಳೆದು ನಿಂದವನಿಜೆಯುಕಂಡು ವ । ಹಿಲದೊಳಮರ ಮುನೀಂದ।
ನೊಲವಿಂದಿಂತುಪೇಳಿದನು ॥ ೪೭ ॥ ಎಲೆಮಹೀಸುತೆ ಕೇಳುಗಂಡನ್ರ
ನುಳದುಚಂದನ ಪುಷ್ಪಫಲಗಳ । ನೊಲಿದುಸೇವಿಸಕೂಡದು ಪತಿವ್ರತೆ
ಯರಿಳೆಯೊಳಗೆ ॥ ಸಲೆಹೊಳೆವುತಿಹ ಪರಸುಗಂಧ ಕ । ಮಲಗಳನು
ನೀಂ ರಾಘವೇಂದ್ರನ । ನುಳಿದೆ ಆಘ್ರಾಣಿಸಿದೆಯಲ್ಲವೆ ಹಿಂದೆಯೋಚಿಸದೆ
॥ ೪೮ ॥ ಮತ್ತೆಬೃಂದಾವನದ ಬಳಗೈ । ದುತ್ತಪತಿಗೆಸಮರ್ಪಿಸದೆನಾ ।
ನುತ್ತಮ ಕಮಲತತಿಯನಾ ಘ್ರಾಣಿಸಿದುದನುತೊರೆದು ॥ ಉತ್ತಮಪತಿ
ವ್ರತೆಯಧರ್ಮವೆ । ನೆತ್ತಲುಂ ಸಲಪಿದರ್ಗಡೀಯೆಲೆ । ಮತ್ತೆಸಂಧಿಸಲೆಂ
ದುಬೇಡೆನುತಮರ ಮುನಿನುಡಿದ ॥ ೪೯ ॥ ಅಮರರೆಲ್ಲರು ನೋಡುತಿರ
ಲಾ । ಕಮಲಲೋಚನೆ ಸೀತೆಶೀಘ್ರದೊ । ಳಮಲ ಬೃಂದಾವನದಮುಂ
ಗಡೆನಿಂದು ಕೈಮುಗಿದು ॥ ರಮಣನಂತೊರೆದಾ ಕಮಲದಕು । ಸುಮ
ವನಾಘ್ರಾಣಿಸಿದುದಲ್ಲದೆ । ವಿಮಲಪಾತಿವ್ರತ್ಯಧರ್ಮವು ನನ್ನೊಳಿರುತಿರಲು
॥ ೫೦ ॥ ಎಲೆಯು ನಿನ್ನೊಳುಸಿಕ್ಕಿಕೊಳಲಿ ಮೊ । ದಲಿನ ರೀತಿಯೊಳೆಂ
ದುಜಾನಕಿ । ತುಲಸಿಯನು ಬೇಡಿಕೊಳಲಷ್ಟರೊ ಳಳಗುರುಳ್ದಿಲೆಯು ।
ಸಿಲುಕಿಕೊಂಡುದು ಮೊದಲಿನಂತಾ । ತುಲಸಿಗಿಡದೊಳು ಸಕಲದೇವತೆ ॥
ಗಳು ಮನುಕುಲೇಂದ್ರನನು ಹೊಗಳುತಪಡೆದರಚ್ಚರಿಯ ॥ ೫೧ ॥
ಅವನಿಜಾತೆಯ ಪದಿಬವೆಯಧ । ರ್ಮವನು ಹೊಗಳುತ್ತಖಿಳ ನಿರ್ಜರ ।
ರವನಿಜೆ ಬ[illegible]ತ್ತಮರ ಪದಪಂಕಜಕೆತಾವೆರಗಿ ॥ ಅವರವರ ಲೋಕಂ

ಗಳಿಗೆ ಕಡು | ತವಕದಿಂದಲೆ ಪ್ರೋದರಾನಂ | ದವನುತೋರ್ಪಡಿಸುತ್ತ ತವ್ಮ್ಮ ಮುಖಾರವಿಂದದೊಳು || ೫೦ || ಸುರಮುನಿಪನವನೀ ಸುತೆಬಡಿಸಿ | ದುರುತರದ ಮೃಷ್ಟಾನ್ನವನು ಪರಿ | ಪರಿಯ ಪಾವನಭಕ್ಷ್ಯಭೋಜ್ಯಾದಿಗಳ ಭುಂಜಿಸುತ || ಪರಿಮಳಸುಗಂಧ ಕುಸುಮಗಳನು | ಧರಿಸಿ ಫಲತಾಂಬೂಲ ದಕ್ಷಿಣೆ | ವರವಸನಗಳನಾಂತು ತೆರಳಿದನಮರಪುರಿಗಾಗಿ || ... ... ... || ೫೩ ||

ಇಂತು ನಲವತ್ತುನಾಲ್ಕನೆಯ ಅಧ್ಯಾಯ ಸಂಪೂರ್ಣವು

ಪದ್ಯಗಳು ೨೪೯೫.



## ನಲವತ್ತೈದನೆಯ ಅಧ್ಯಾಯ.

ಸೂಚನೆ || ಪ್ರತಿವರುಷದೊಳು ರಾಘವನು ಭೂ |
ಸುತೆಯೊಡನೆ ವಿಪ್ರರಿಗೆಕೊಟ್ಟನು |
ವಿತತವೈಭವದಿಂದ ಪೂಜಿಸಿ ಕೋಟಿಲಿಂಗಗಳ ||

ಗುರುವಸಿಷ್ಠ ಮುನೀಂದ್ರನರುಹಿದ | ತೆರದೆ ರಾಘವನತಿಭಕುತಿಯಿಂ | ದಿರದೆ ಒಳಕೊಂದೊಂದು ಭಾರವತೂಕಮಿರುವಂತೆ || ವರಸುವರ್ಣದೊಳೊಂದು ಲಿಂಗದ | ತೆರದೆಮಾಡಿಸಿದನತಿ ಮಂಜುಳ | ತರಮೆನಿಸಿತೋರ್ಪೊಂದು ಕೋಟಿಯಲಿಂಗಗಳ ನೊಲಿದು || ೧ || ಒಂದುಸಾವಿರವೆಂಟು ಲಿಂಗಗ | ಳಂದೆನಿರ್ಮಿಸಿದತಿ ಶುಭಕರಮ | ದೆಂದೆನಿಪ ಮಂಗಳಸುಪೀಠವ ಮಧ್ಯಭಾಗದೊಳು || ಅಂದವಾಗೆಸೆವೊಂದು ಕಮಲದೊ | ಳೊಂದುಲಿಂಗವ ನಿರಿಸಿಸಂತಸ | ದಿಂದಲೆ ನಭೋಮಾಸದೊಳು ತಾಳ್ದಧಿಕ ಭಕ್ತಿಯನು || ೨ || ಅದಕೆ ಷೋಡಶವಿಧದಪೂಜೆಯ | ನೊದವಿಸುತೆರಗಿ ರಾಘವೇಶ್ವರ | ನದರದಕ್ಷಿಣೆಗಿಟ್ಟು ಪಾವನ ರಾಮಟಂಕಿಯನು || ಮುದದೊಳೊರ್ವ ಧರಣಿಸುರನನೊದ | ವಿದ ಭಕುತಿಯಿಂದರ್ಚಿಸಿತ್ತನು | ಸದಯದಿಂದಾಸನದ ಸಹಿತಾತನಿಗೆ ಲಿಂಗವನು || ೩ || ಬೇರೆಬೇರೆ ವಿಧಂಗಳಿಂದಿಂ | ತಾರಘುವರನು ಕೂಡೆಮೂವತ್ತ್ಮರು ದಿವಸದೊಳೊಂದು ಕೋಟಿಯ ಲಿಂಗಗಳನೊಲಿದು || ಧಾರಿಣೀಸುತೆಸಹಿತಘನಗಂ | ಭೀರ ವಚನದೊಳಾದರಿಸಿ ಯುಪ | ಚಾರಮಾಡುತ ದಾನ

ಮಾಡಿದನಂದು ವಿಪ್ರರಿಗೆ ॥ ೪ ॥ ಪುರುಷಪುರುಷ ದೊಳಂತುರಾಮನು ।
ವರನಭೋಮಾಸದೊಳು ತಪ್ಪದೆ । ಪರಮ ಭಕ್ತಿಯೊಳರ್ಚಿಸುತ ಬ
ಹುಕಾಲಪರ್ಯಂತ ॥ ಧರಣಿಜಾತೆಯು ಸಹಿತ ಸಮನಂ । ತರದೊಳು ವ್ರತ
ದಂಗಮೋಮವ । ವಿರಚಿಸುತ್ತಾಗಿಸಿದ ನವಕಮದ್ಯಾಪಸಂಗಳನು ॥ ೫ ॥
ಮುನಿಗಳಿಗೆ ಧರಣೀಸುರರಿಗಾ । ಮನುಕುಲೋತ್ತಮ ನಖಿಳದಾನಗ ।
ಳನೊಲಿದಿತ್ತುರೆ ಮನ್ನಿಸುತ ಮೃದುಮಧುರವಚನದಲಿ ॥ ಜನಕನಂದನೆ
ಯೊಡನೆ ವಿಪ್ರರ । ಘನಚರಣಪಂಕಜಕೆ ವಿನಯದೆ । ಮಣಿದೆರಗಿದನು
ಭಕ್ತಿಭಾವದೊಳಂದು ಕೈಮುಗಿದು ॥ ೬ ॥ ಕಡುಬು ಹೋಳಿಗೆಲಾಡು
ಪಿರಿಹೊ । ಯ್ಗಡುಬು ಮಂಡಿಗೆ ಫೇಣಿಘಾರಿಗೆ । ಸುಡುವಪಪ್ಪಳ ಸಂ
ಡಿಗೆ ಚಿರೋಟಿ ಕರದಾಂಬೊಡೆಯು ॥ ಕಡುಸವಿಯನಾಂತ ಸುಭಿಯಂ
ಡೆಪ । ರಡಿಯುಪಾಯಸ ಪಭ್ಯಪುಳಿ ಪ । ಚ್ಚಡಿಗಳೀ ಮೊದಲಾದವುಗ
ಳನ್ನಡಿಗೆ ಮಾಡಿಸುತ ॥ ೭ ॥ ಹೊಳೆವ ಮಂಶಾಲ್ಯನ್ನ ಷಡ್ರುಚಿ । ಗಳ
ತಳೆದಚಿತ್ರಾನ್ನ ಸಲೆಕಂ । ಗೊಳಿಪ ವಾರ್ತಾಕಾನ್ನ ದಧ್ಯನ್ನ ಪರಸು
ಘೃತಾನ್ನ ॥ ತಿಳಿಯರಸ ಚಟ್ನಿಪುಡಿ ತೊವ್ವೆಬ । ಹುಳರುಚಿವಡೆದ
ಮೊಸರು ತುಪ್ಪಮೊ । ದಲಪ ವಸ್ತುಗಳೆಲ್ಲವನು ಮಾಡಿಸುತರಾಘವನು
॥ ೮ ॥ ವಿತತಸಂಮವದಿಂದೆ ಪುರದೊಳ । ರುತಿಪ ವರ್ಣಚತುಷ್ಟ
ಯದ ಜನ । ತತಿಗೆ ಭೋಜನಗಳನು ಮಾಡಿಸಿಕೊಡೆಯುಪಚರಿಸಿ ॥
ಅತಿಸುವಾಸನೆಯಿಂದೆ ಮಘಮಘಿ । ಸುತಿಪ ಚಂದನಕುಸುಮಗಳನು
ಕೊ । ಡುತವಣಿಸಿದನು ದಕ್ಷಿಣಾತಾಂಬೂಲಗಳನಿತ್ತು ॥ ೯ ॥ ಜವದೆ
ಜಾನಕಿ ಸಂತಸವವಳೆ । ದವರವರ ಯೋಗ್ಯತೆಗಳನರಿತು । ಸುವಿಮ
ಲೋಕ್ತಿಗಳಿಂದೆ ಪುರದಸುಮಂಗಲೀಯರನು ॥ ತವಕದಿಂದಡಿಗಡಿಗೆ ಮ
ನ್ನಿಸಿ । ವಿವಿಧ ಮಂಗಳವಸ್ತುಗಳ ನಿ । ತ್ತವರವುನವಣಿವಂತೆ ಭೋಜ
ನಮಾಡಿಸಿದಳೊಡನೆ ॥ ೧೦ ॥ ಪುರದಮಾನವರೆಲ್ಲರಾ ರಘು । ವರನಾ
ಧರಣೀಸುತೆಯನಾ । ದರದೆ ಹೊಗಳುತಲಿಬ್ಬರಿಗೆ ಸುಖವಾಗಲೆಂದೆನು
ತ ॥ ಹರಿಹರರ್ಗಡಿಗಡಿಗೆ ತಾವ್ವಲ । ತೆರದೊಳರ್ಪಿಸಿ ಬಲುಹರಿಕೆಗಳ ।
ತೆರಳಿವರು ನಿಜಭವನಗಳಿಗಾನಂದವನುತಾಳ್ದು ॥ ೧೧ ॥ ಜನರಿಗೆವಿಶೇ
ಷವನು ರಘುನಂ । ದನನು ತಿಳುಹಿಸುವಂತೆ ಹೊಂದುತ । ಮನುಜವೇ
ಷವನಾ ದಶರಥವಹೀಶಸುದರದೊಳು ॥ ಜನಿಸಿ ನಿತ್ಯವುಸಕಲವಿಧವಂ ।
ಪನಿಪಕರ್ಮಂಗಳನು ವಿರಚಿಸಿ । ದನವನಿಯೊಳತಿ ವಿಸ್ಮಯಮಪನಾಗಿಸುತ
ಸಂತತವು ॥ ೧೨ ॥ ಹಲವುಕಾಲದ ತನಕಸಲೆಕಂ । ಗೊಳಿಪ ಯೋಧ್ಯಾ

ವೆರವೊಳಾ । ಜಲಜನೇತ್ರನು ತನ್ನ ಸತಿಸುತ ಸೋದರರಸಹಿತ ॥
ವಸಂತಸದಿಂ ಪಡಿಗಡಿಗೆ । ಬಿಳವಿಧದ ಸೌಖ್ಯಂಗಳನು ತಾ । ಳ್ದೂ
ರಕ್ಷಿಸುತಿರ್ದನು ಸಕಲಜೀವಿಗಳನರಿತು ॥ ೧೩ ॥ ಇದಲ್ಲದಂಬಳ
ಂಮಯಿನ ರಘು । ವರನು ಲಕ್ಷ್ಮಣನಂಕರೆದು ಹ । ತ್ತಿರಕೆ ಸಹೋ
ರಿ ಕೇಳ್ಕೈನಾಳೆಯುದಯದಲಿ ॥ ಪುರದ ಮಾನವರೆಲ್ಲರಸಹಿತ । ಭರದೆ
ಬೇಟೆಗೆ ಪೋಗಬೇಕೆಂ । ದಿರುವೆ ಸಿದ್ಧಪಡಿಸು ಸಮಸ್ತವನೆಂದುನೇಮಿ
॥ ೧೪ ॥ ಅಣ್ಣನಾಜ್ಞೆಯನಾಂತು ಲಕ್ಷ್ಮಣ । ನನ್ನಿಗಂ ಶಿರಬಾಗಿ
ಸಿವೆ । ನುನ್ನತಚರಣಯುಗಳ ಪಂಕಜಕೆರಗಿ ಭಕ್ತಿಯಲಿ ॥ ನನ್ನ
ಮೃಗಯಾವಿಹಾರಕೆ । ನನ್ನೊಡವೆರಸಿ ನಾಳೆ ಸಿದ್ಧ್ವಪ । ದನ್ನತ
ಗೈದನಾ ಪುರದಖಿಳಮನುಜರ್ಗೆ ... ॥ ೧೫ ॥

ಇಂತು ನಲವತ್ತೈದನೆಯ ಅಧ್ಯಾಯ ಸಂಪೂರ್ಣವು

ಪದ್ಯಗಳು ೩೫೧೦.

## ನಲವತ್ತಾರನೆಯ ಅಧ್ಯಾಯ.

ಸೂಚನೆ ॥ ಮೃಗದಬೇಂಟೆಯನೆಸಗಿ ವನದೊಳು ।
ರಘುವರನು ವಿಸ್ಮಯವನೆಸಗಿದ ।
ನಗಸುತೆ ಮಹೀಸುತೆಯರಿಗಭೇದವನು ತೋರಿಸುತ ॥

ಬಳಿಕಲೊಂದಾನೊಂದು ದಿನ ರವಿ । ಕುಲತಿಲಕ ರಾಘವನುಪಟ್ಟ
। ದೊಳಹ ಮಾನವರೆಲ್ಲರನು ಬರಿಸುತ್ತ ಹತ್ತಿರಕೆ ॥ ತಳುವದೈತಂದ
ಕುದುರೆ ಬೆ । ನ್ನೊಳು ಕುಳಿತುಕೊಳ್ಳುತ ವನಕೆ ಮೃ । ಗ್ಯಾಸಹಿತ
ಗಯಾವಿಹಾರಕೆ ಧರಿಸಿಬಿದ್ದವನು ॥ ೧ ॥ ಅಟ್ಟಿಕೊಂಡೈದಿದನು ವ
ೊಳು । ಘಟ್ಟನೆಮಹಾ ಮೃಗವದೊಂದನು । ನೆಟ್ಟನೆಬಹುಳನೂರ
ತಂದದನು ಶರದಿಂದೆ ॥ ಕುಟ್ಟಿಸಂಹರಿಸಿದ ನರಣ್ಯದ । ನಟ್ಟನಡು
ಠಾಣದೊಳು ಗುರಿ । ಯಿಟ್ಟು ರಘುನಂದನನು ತಾನಾಂತತಿವಿನೋ
ನು ॥ ೨ ॥ ಜನಗಳೆಲ್ಲರು ಹಿಂದೆನಿಂದರು । ವನದಮಧ್ಯದೆ ಬಹು
ೂರದೊ । ಳಿನಕುಲೇಂದ್ರನು ಹಸಿವುಬಾಯಾರಿಕೆಗಳನುಹೊಂದಿ ।
ನದೊಳಾಯಾಸವನು ತಾಳುತ । ವನದೊಳೈತಂದೊಂದು ವೃಕ್ಷದ ।

ಸನಿಹದೊಳು ತಾಕುಳಿತುಕೊಂಡನು ತಣ್ಣೆಳಲಿನೊಳಗೆ ‖ ೩ ‖ ಆಗಳ
ಲ್ಲಿಗದೊರ್ವ ಬೇಡಿತಿ । ಬೇಗನೈತಂದಿದಿರು ನಿಂದಾ । ರಾಘವನನೀಕ್ಷಿ
ಸುತ ನಮಿಸಿದಳಧಿಕಭಕ್ತಿಯುಲಿ ‖ ಈಗಬಾಯಾರಿಕೆ ಹಸಿವ್ರುನನ । ಗಾ
ಗುತಿವೆ ಬಹುವಾಗಿ ನೀನನು । ರಾಗದೊಳು ಪ್ರೋಗಿಸೆಲೆಬೇಡಿತಿ ನನ್ನ
ಬಾಧೆಗಳ ‖ ೪ ‖ ದೂರದಲಿ ಸಾಮಿತ್ರಿವೊದಲಹ । ಪಾರಜನಗಳು ನಿಂ
ತಿರುವರು ವಿ । ಚಾರಿಸೆಂದೆನುತವಳನಾ ರಘುವರನುಕೇಳದೊಡೆ ‖ ಧಾರಿ
ಣೀಪತಿಕೇಳು ಘನಕಾ । ಸಾರವೊಂದಿಹುದಿಲ್ಲಿಗೆ ಬಹುಳ । ದೂರವೆನಿ
ಸದೆ ವಿಮಲಜಲದಿಂದೆಸೆದು ಸಂತತವು ‖ ೫ ‖ ಅದರ ಹತ್ತಿರದಲ್ಲಿರು
ವುದು ಪಿ । ರಿದಹ ದುರ್ಗಾದೇವತೆಯಗುಡಿ । ಯದರಬಳಿಗೀಹೊತ್ತು
ಮಂಗಳವಾರವದರಿಂದೆ ‖ ಪದೆದುಚಂಡಿಕೆಯನ್ನು ಪೂಜಿಸ । ಲೊದ
ವಿದಭಕುತಿಯಿಂದಲೀ ನಗ । ರದಸುಮಂಗಲಿಯರು ಬರುತಿಹರುಗುಂಪು
ಗುಂಪಾಗಿ ‖ ೬ ‖ ಮನುಜಪತಿಕೇಳಲ್ಲಿ ಗೀಗಳೆ । ಮನವಿರಿಸಿನೀಂ ಬರ
ಲುದೊರೆವುವು । ನಿನಗೆ ವರಚಿತ್ರಾನ್ನ ಪಾನೀಯಗಳೆಸುತರುಹಲು ‖
ವನಿತೆಕೇಳಾ ಲಕ್ಷ್ಮಣಾದಿಗ । ಳನು ನಿರೀಕ್ಷಿಸಿಕೊಂಡಿರುವೆನೀ । ವನ
ದೊಳೆನ್ನವಿಚಾರವನು ಪೇಳಾವನಿತೆಯರಿಗೆ ‖ ೭ ‖ ಎಂದು ತಿಳುಹಿಸಲಂ
ತೆಮಾಡುವೆ । ನೆಂದು ಬಿನ್ನವಿಸುತ್ತ ತಾನೈ । ತಂದು ದುರ್ಗಾದೇವಿ ದೇ
ವಾಲಯದಹತ್ತಿರಕೆ ‖ ಸುಂದರಾಂಗನೆಯರನು ಕಂಡಾ । ನ್ದದಿಂದಾ
ಶಬರಿಪೇಳದ । ಳಂದಧಿಕ ಮೃದುಮಧುರವಚನಗಳಿಂದೆ ಕೈಮುಗಿದು
‖ ೮ ‖ ರಘುವರನು ಬಂದಿರುತಿಹನು ಬೇಂ । ಟೆಗೆನುತ್ತಿಲ್ಲಿಗೆ ಬಹುಸಮೀ
ಪದೊ । ಳಗಿಹನು ಹಸಿವುನೀರಡಿಕೆಗಳನಾಂತು ಬಳಲಿಹನು ‖ ಜಗದೊ
ಡೆಯನೀ ಸಂಗತಿಯನು ನಿ । ಮಗರುಹುವುದೆಂದೆನ್ನ ನಿಂದಿ । ಲ್ಲಿಗೆಕ
ಳುಹಿದನೆನುತ್ತ ಪೇಳ್ದಳು ಶಬರಿವಧುಗಳಿಗೆ ‖ ೯ ‖ ಆವನಿತೆಯರವಳನಿ
ರಿಸಿಕೊಂ । ಡಾವಿನುತ ಚಂಡಿಕೆಯನರ್ಚಿಸಿ । ದೇವದೇವನಿಗನ್ನವಿಟ್ಟು
ಕೃತಾರ್ಥರಹೆವೆನುತ ‖ ಸಾವಧಾನದೊಳಂದು ಯೋಚಿಸಿ । ಠೀವಿಯಿಂ
ದಲೆ ಸಿಂಗರಿಸಿಕೊಂ । ಡಾವಿಮಲವಸ್ತುಗಳ ನಾಂತೈತಂದರಾಗುಡಿಗೆ ‖
‖ ೧೦ ‖ ಆಗುಡಿಯೊಳ್ದುರ್ಗಾಂಬಿ ಯನಿತರೊ । ಳಾಗಳವರಿಗೆ ಕರುಣೆ
ತೋರಿಸಿ । ಬೇಗನಾದೇವಾಲಯದ ಬಾಗಿಲನುಮುಚ್ಚಿದಳು ‖ ನಾಗ
ಭೂಷಣನರಸಿ ಮಹದನು । ರಾಗದೊಳ ಗೊಂದುಕ್ಷಣದವೋ । ಲಾಗು
ಡಿಯುಮುಂದುಗಡೆ ನಿಂದಿಂತೆಂದು ಪೇಳ್ದಳು ‖ ೧೧ ‖ ವನಿತೆಯರೆ ನೀ
ವ್ಕೇಳನಕುಲೇಂ । ದ್ರನೆನಿಪಾ ರಘುನಂದನನೆ ಗಿರಿ । ಶನೆನಿಪನು ಜಾನಕಿ

ಯ ಪಾರ್ವತಿಯೆಂದೆನಿಸುತ್ತಿಹಳು ॥ ಜನಕಜಾಪಾರ್ವತಿಯರಿಗು ಮೇ ।
ಣ್ಮನುಕುಲೋತ್ತಮ ವಾಮದೇವರಿ । ಗಿನಿತುಭೇದವು ತೋರದೆನ್ನುತ
ರಿಪುಮಚಿತ್ತದಲಿ ॥ ೧೦ ॥ ಇವರುಗಳಿಗಾವ ಜನಗಳು ಭೇ । ದವನೆಣಿಸು
ತ್ತಿಹರಾಜನರುಮೆಸಿ । ಸುಮರುಕುಂಭೀಪಾಕಮೊದಲಾದ ನರಕಂಗಳಲಿ ।
ವಿವಿಧಯಾತನೆಗಳನು ತಾವನು । ಭವಿಸುತ ದಿವಾರಾತ್ರಿ ಹಾಹಾ । ರವವ
ಗೈಯುತ ಕೋಟಿಕಲ್ಪದ ಕಾಲಪರ್ಯಂತ ॥ ೧೩ ॥ ಅದುನಿಮಿತ್ತದೊಳೀ
ಗಲೆ ಸಕಲ । ವಿಧಗಳಹ ವ್ಯಂಜನಾನ್ನಗಳನಿ । ತ್ತೊದವಿವತಿ ಭಕ್ತಿಯ
ನುತಾಳ್ದೆನ್ನೊಡೆಯ ನೆಂದೆನಿಪ ॥ ಮಧುವಿನಾಶಕ ರಾಮಚಂದ್ರನ ।
ಪವನಚಿಸಿ ತೃಪ್ತಿಯನೆಸಗು । ವುದತಿಶೀಘ್ರದೆ ನೀವುಕೈಮುಗಿದೆರಗಿ
ಮನವೊಲಿದು ॥ ೧೪ ॥ ಮಿಕ್ಕಶೇಷಾನ್ನವನು ನಾನಿಂ । ದಕ್ಕರೆಯೊಳು
ಣ್ಣು ಹೆನೆನ್ನುತ । ಫಕ್ಕನೆನುಡಿದು ಹೊರಡಿರಘುನಂದನನು ಹಸಿವಿಂದೆ ॥
ಸೊಕ್ಕಿಬಳಲಿಪ ನೆಂದುಚಂಡಿಕೆ । ತಕ್ಕಮಾತುಗಳಿಂದೆ ತಿಳುಹಿವೆ । ನ
ಕ್ಕೆಕಳುಹಿಸಿಕೊಟ್ಟಳಂದಾ ವನಿತೆಯರನೊಡನೆ ॥ ೧೫ ॥ ಅನುಡಿಯನಾ
ಲಿಸುತಘನಸುಂ । ಮಾನವನು ತಾಳ್ದಚ್ಚರಿವಡೆದು । ಮಾನಿನಿಯರಾಶಬ
ರಿಮಸಹಿತ ಬಹುಳಶೀಘ್ರದಲಿ ॥ ಭಾನುಕುಲ ತಿಲಕನಬಳಿಗೆಬಂ । ದಾ
ನರೇಂದ್ರನ ಚರಣಕಮಲಕೆ । ಸಾನುರಾಗದೆ ನಮಿಸಿದರುಕಣ್ಣಾರೆನೆರೆ
ನೋಡಿ ॥ ೧೬ ॥ ಕನಕಜಲಕುಂಭಂಗಳನು ಮೇ । ಲೆನಿಪ ದಿವ್ಯಾನ್ನಂಗ
ಳನು ರಾ । ಮನಿದಿರೊಳಿರಿಸಿ ಸಕಲನಾರಿಯರೆಲ್ಲ ಕೈಮುಗಿದು ॥ ಮನು
ಕುಲೋತ್ತಮಕೇಳು ಜೇಡಿತಿ । ಯನುಕಳುಹಿ ನಮ್ಮೆಡೆಗೆ ಸಲಹಿದೆ ।
ವಿನುತಕರುಣಾತಿಶಯದಿಂದಲೆ ನಮ್ಮನೀಕ್ಷಿಸುತ ॥ ೧೭ ॥ ಗಿರಿಜೆದಿವ್ಯಾ
ನ್ನಂಗಳನು ತರ । ತರದ ಭಕ್ಷ್ಯಂಗಳನು ನಿನಗತಿ । ಹರುಷದಿಂದಲೆ
ಕಳುಹಿಕೊಟ್ಟಹಳವನು ಕೈಕೊಂಡು ॥ ಭರದೆಭೋಜನಮಾಡಿ ಹಸಿವೆ
ನು । ಪರಿಹರಿಸಿಕೊಳ್ಳುವುದೆನುತ ಕಾ । ಲ್ಗೆರಗಿಬೇಡಿದರತಿ ವಿನಯದಿಂ
ದಖಿಳನಾರಿಯರು ॥ ೧೮ ॥ ಎಲೆವನಿತೆಯರೆ ದೇವಿಪೇಳ್ದುದ । ನೊಲಿದು
ತಿಳಿಸೆಂದೆನುತ ಭಾಸ್ಕರ । ಕುಲತಿಲಕನಾ ಸ್ತ್ರೀಯರೆಲ್ಲರನಂದು ಬೆಸಗೊ
ಳಲು ॥ ಜಲಜನಾಭನೆ ಕೇಳುದುರ್ಗೆಗು । ಮಿಳೆಯುಮಗಳಿಗು ಭೇದವಿ
ಲ್ಲೆನು । ತಲು ಶಿವನೆನೀನೆನ್ನುತಲು ಪೇಳದಳು ಶರ್ವಾಣಿ ॥ ೧೯ ॥ ಗಿರಿಜೆ
ಜಾನಕಿಯರೊಳು ಗಂಗಾ । ಧರರಘೂತ್ತಮರೊಳಗೆ ಭೇದವ । ನಿರಿಸು
ತಿಹ ಮಾನವರು ನರಕಂಗಳಲಿಬೀಳುವರು ॥ ಅರುಹುತಿಂತಿಂದೆಮ್ಮದೇ
ವತೆ । ಹರುಷದಿಂದಲೆ ಭುಜಿಪೆನಾರಘು । ವರನ ಯುಚ್ಛಿಷ್ಟವನೆನುತ

ಪೇಳಿದಳುನವೆನ್ನೊಡನೆ ॥ ೨೦ ॥ ಬಂದೆವೆದಕೆಂದಿಂದು ನಾವ್ಮುದ | ದಿಂ
ನೀವಿದನುಂಡು ರಕ್ಷಿಪು | ದಂದದಿಂದಲೆನುತ್ತಡಿ ಗಡಿಗೆಬೇಡಿಕೊಳಲ
ರು ॥ ಮಂದಹಾಸದೊಳೀಕ್ಷಿಸುತ ರಘು | ನಂದನನು ಹಾಗಾಪದಾಗಿರಿ
ನಂದನೆಯು ಭೂಜಾತೆಯಾಗುತ ಬರಲಿನನ್ನೆಡೆಗೆ ॥ ೨೧ ॥ ಪೋಗಿ
ವೆನ್ನೊಳಗೊಬ್ಬರಲ್ಲಿಗೆ | ಬೇಗನೀಸಂಗತಿಯು ಪೇಳುವು | ದೀಗವರ್ಗೆ
ನುತ್ತಪೇಳಿದನಾ ರಘೂದ್ವಹನು ॥ ಆಗಳೆಂದೆನುತೂರ್ವ ವಸಿತೆ ಸ
ರಾಗದಿಂದೈತಂದು ಕೈಮುಗಿ | ದಾಗಿರಿಸುತೆಗೆ ಬಿನ್ನವಿಸಿದಳು ರಾಮವಾ
ಕ್ಯವನು ॥ ೨೨ ॥ ಬಡನೆಬಾಗಿಲತೆರೆದು ಪಾರ್ವತಿ | ಪೊಡವಿಯಣು
ಯ ರೂಪಿನೊಳಗಂ | ಬಿಡಿವ ಸಂತಸದಿಂದೆ ಹೊರಗೈತಂದುಶೀಘ್ರದಲಿ
ಗಡಿಬಾಗಿಲಮುಚ್ಚಿ ಕೈಯೊಳು | ಪಿಡಿದು ಜಲಪಾತ್ರಯನು ಒ
ದಳು | ಕಡುತವಕದೆ ರಘುವರನೆಡೆಗಾನಂದವನು ತಾಳ್ದು ॥ ೨೩
ಮುಗುಳುನಗೆ ಯಿಂದೀಕ್ಷಿಸುತ್ತಾ | ರಘುವರನ ಚರಣಾರವಿಂದಕೆ | ರ
ಮಿಸುತೆ ನಿಂತುಕೊಂಡಳು ರಾಘವನಿದಿರೊಳು | ಜಗದೊಡೆಯ ರ
ಘವನನಂದುರೆ | ಪೊಗಳುತ ಸಕಲ ನಾರಿಯರಡಿಗ | ಡಿಗೆ ಬಹುಳವಿ
ಯುವನಾಂತರು ಕೂಡೆನೆರೆನೋಡಿ ॥ ೨೪ ॥ ವರ ಧನುರ್ಬಾಣಂಗಳ
ರಘು | ವರನು ಕೈಯೊಳಗಾಂತು ಸಂಧಿಸಿ | ಧರಣಿಯನು ಭೇದಿಸು
ವದಪಾತಾಳಗಂಗೆಯನು ॥ ಬರಿಸಿಮೇಲಕದರೊಳು ವಿಾಯುತ | ವಿ
ಚಿಸಿಯೆ ಪಾಥ್ಯಾಹ್ನಿಕವನತಿ | ಭರದೊಳೂಟಕೆ ಸಿದ್ಧವಾದವನು
ಳಿತುಪೀಠವೊಳು ॥ ೨೫ ॥ ಅನಿತರೊಳ ಗೈತಂದುದಲ್ಲಿಗೆ | ಮನುಕು
ಲೋತ್ತಮ ರಾಘವೇಂದ್ರನ | ಘನಚತುರ್ಬಲವೆಲ್ಲ ಲಕ್ಷ್ಮಣನೊಡನೆ
ಘ್ರವಲಿ ॥ ವನಜನಾಭನಮುಂದೆ ನಿಂದಿಹ | ಜನಕಜಾತೆಯು ನೀಕ್ಷಿಸು
ಲ | ಮನದೊಳಾಶ್ಚರ್ಯವನು ತಾಳ್ದರು ತಮ್ಮೊಳಡಿಗಡಿಗೆ ॥ ೨೬ ॥ ಲ
ಕುಶರು ಮೊದಲಾದಖಿಳ ಮಾ | ನವರು ಬೇಡಿತಿಮಾತಿನಿಂದತಿ | ಜ
ದೊಳೀವಾರ್ತೆಯನು ತಿಳಿದತಿಮೋದವನು ತಾಳ್ದು ॥ ಶಿವನೆರಾಘವನೆ
ತಲು ಗಿರಿಜೆ | ಯುವನಿಸುತೆಯೆಂತಲು ತಿಳಿದುಕೊಂ | ಡವರೊಳಗ
ದವನು ಮಾಡಿವರಂದು ಮೊದಲಾಗಿ ॥ ೨೭ ॥ ಸತಿಸುತ ಸಹೋದರರೆ
ಡನೆಕೂ | ಡುತ ಜವದೊಳಾರಾಘವೇಶ್ವರ | ನತಿಹರುಷವನು ತಾಳ
ಪಚರಿಸುತ ಖಿಳಸೇನೆಯನು ॥ ಹಿತದೊಳೂಟವಗೈದು ಮೇಲೆನಿ |
ತಿಹ ನೀರನುಕುಡಿದು ಕೂಡೆವೆ | ನಿತೆಯರೆಲ್ಲರ ನೀಕ್ಷಿಸುತ್ತತಿಕೃಪೆಯೆ
ಳಂತೆಂದ ॥ ೨೮ ॥ ನಿಮಗೆ ರಾಮಾ ಯೆಂಬನಾಮವ | ಸುಮನದಿಂ

ತ್ತಿಹೆನು ನನ್ನೊಳು । ನಿಮಗೆಮೇಲೆನಿಸುತಿಹ ಭಕ್ತಿಯು ಸಂಜನಿಸಲಿ
ನ್ನು ॥ ನಿಮಗೆದೇವತೆಗಳೊಳು ವಿಪ್ರರೊ । ಳಮಲಧರ್ಮದೊಳುತ್ತಮ
ಕಥಾ । ಸಮುದಯವನಾಲಿಸುವ ರೊಳಿರಲಿಭಕ್ತಿ ಸಂತತವು ॥ ೨೯ ॥
ನೀವು ಪರಿಶುದ್ಧರೆನಿಸಿರುವಿರಿ । ನೀವು ಶುಭಶಕುನಂಗಳನು ಕೊಡಿ ।
ರಾವಗಂ ಭೂತಳದೊಳಿರುತಿಹ ಮನುಜಸಂಚಯಕೆ ॥ ಈವಿಧದಮೇ
ಲೆನಿಪ ವರಗಳ । ನೀವೆನು ನಿಮಗೆನಾನೆನುತ ರಘು । ಭೂವರನು ಸಂ
ತೋಷಪಡಿಸಿದನಾ ವನಿತೆಯರನು ॥ ೩೦ ॥ ಎಲೆಮಹೀಸುತೆ ನೀನು
ನಿನ್ನ । ಸ್ಥಳಕೆ ಪೋಗೆನುತಪ್ಪಣೆಯ ಮಾ । ಡಲತಿ ಶೀಘ್ರದೊಳಾಕೆ ಸ
ಕಲ ಸುಮಂಗಲಿಯರೊಡನೆ ॥ ಕಲಶಕನ್ನಡಿ ಕಂಬತೋರಣ । ಬಳಗ
ದಿಂದುರೆ ಮೆರೆವುತಿಹ ಗುಡಿ । ಬಳಿಗೆ ಬಂದೊಳಪೊಕ್ಕು ಪಾರ್ವತಿಯಾ
ದಳಾಕ್ಷಣವೆ ॥ ೩೧ ॥ ಏನಿವಚ್ಚರಿ ಯೆಂದೆನುತ್ತ ಭ । ವಾನಿದೇವಿಯ
ಪದಕೆರಗುತಾ । ಮಾನಿನಿಯರಾ ದುರ್ಗೆಯನು ಪಲತೆರದೆಸಂಸ್ತುತಿಸಿ ॥
ಸಾನುರಾಗದೊಳರ್ಚಿಸುತ ಘನ । ಕಾನನವನುಳಿದತ್ತ ಪೋದರು ।
ಜಾನಿಸುತ ರಾಘವನನಾಮವ ನವರಮನೆಗಳಿಗೆ ॥ ೩೨ ॥ ಮೃಗವಬೇಂ
ಟೆಯನಾಗಿಸಿ ಬಹುವಿ । ಧಗಳೆಸಿಪ ಚರ್ಮಂಗಳನು ಕೊಂ । ಡೊಗೆದಸಂ
ತಸದಿಂದಖಿಳ ಸೇನೆಗಳನೊಲಿಸುತ್ತ ॥ ಬಗೆಬಗೆಯ ವನವೈಭವಗಳನ ।
ಡಿಗಡಿಗೆ ವಿಲೋಕಿಸುತ ಬಂದನು । ರಘುವರನಯೋಧ್ಯಾಪುರಿಗೆ ಸುತ
ಸೋದರರಸಹಿತ ... ... ॥ ೩೩ ॥

ಇಂತು ನಲವತ್ತಾರನೆಯ ಅಧ್ಯಾಯ ಸಂಪೂರ್ಣವು

ಪದ್ಯಗಳು ೨೫೪೩.



## ನಲವತ್ತೇಳನೆಯ ಅಧ್ಯಾಯ.

ಸೂಚನೆ॥ ಸೋಮಕುಲದರಸರನು ಘನಸಂ ।
ಗ್ರಾಮದೊಳು ಸೋಲಿಸುತಿರೆ ಕುಶನು ।
ಭೂಮಿಸುತೆ ನಿಲ್ಲಿಸಿದಳಬ್ಜೋದ್ಭವನನುಡಿಗೇಳ್ದು ॥

ಬಳಿಕರಾಘವನೊಂದುದಿನ ಕಂ । ಗೊಳಿಪ ನಿಜಸಿಂಹಾಸನದ
ಮೇ । ಲ್ಕುಳಿತುಕೊಂಡೆಲ್ಲರನು ಪದೆದುವಿಚಾರಿಸುತ್ತಿರಲು ॥ ಸಲೆವಿನಾ

ಜಿಪ ಹಸ್ತಿನಪುರಿಯ | ನುಳಿದು ನಡೆತಂದೊರ್ವ ದೂತನು | ತಳುವೆ
ದಾನತನಾಗಿ ಬಿನ್ನವಿಸಿದನು ರಘುಪತಿಗೆ || ೧ || ಅರಸಚಿತ್ತೈಸಹುದುಹ
ಸ್ತಿನ | ಪುರಿಯನಿಂದಾ ಕ್ರಮಿಸಿಕೊಂಡಿರು | ವೆರು ವಿಧುಕುಲೋತ್ಪ
ನ್ನ ಚಿರಜೀವಿಗಳೆನಿಸಿಕೊಂಡು || ವರನಳಾದಿ ಮಹೀಪತಿಗಳೆನು | ತರು
ಹಿಬಿನ್ನೈಸಿದನು ರಘುಭೂ | ವರನ ಪದಪಂಕೇಜಕರಗುತ ಮತ್ತೆ ಕೈ
ಮುಗಿದು || ೨ || ಅವಚನವನುಕೇಳ್ದೊಡನೆ ರಘು | ಭೂವರನುಸಾವಿ
ತ್ರಿಯಂ ಕರೆ | ದಾವಿನುತಸಭೆಯೊಳುರೆವುನ್ನಿಸಿ ನಾಳೆಯುದಿನದೊಳು ||
ಸಾವಕಾಶವನಾಗಿಸದೆ ನಾ | ನಾವಿಧದಖಿಳ ಸೇನೆಸಹಿತಮು | ಹಾವಿಭವ
ದೊಳು ಪೋಗಬೇಕಾಹಸ್ತಿನಾಪುರಿಗೆ || ೩ || ಕರೆಯಿಸೇಳುದ್ವೀಪ ಮ
ಧ್ಯದೊ | ಳಿರುವ ರಾಜರನೆಲ್ಲ ನೀನತಿ | ಭರದೊಳೆಮ್ಮಸುತರನು ಸೈನ್ಯ
ಸಮೇತಕಾಳಗಕೆ || ಬರುವತೆರದೊ ಳನುಜ್ಞೆಗೊಡೆನು | ತ್ತರುಹಿಸಲೆ
ಪಟ್ಟಾಭಿಷೇಕವ | ವಿರಚಿಸಿದನು ಕುಶಂಗೆ ಸಪ್ತದ್ವೀಪಕರಸೆನಿಸಿ || ೪ ||
ಘನವರೂಥದೊಳಗ್ನಿ ಹೋತ್ರಗ | ಳನಿರಿಸಿ ಮನುಕುಲೋತ್ತಮನಖಿ
ಳ | ಜನರನಾರಥದಲ್ಲಿ ಕುಳ್ಳಿರಿಸುತ್ತಶೀಘ್ರದಲಿ || ಇನಿಯಳಸಹಿತಕೂ
ಡೆನಡೆತಂ | ದನು ರಥದೆಕೂಡುತ ಪುರದಹೊರ | ಗಣ ಪಟದಗೃಹಕಾಗಿ
ನಿಜಚತುರಂಗ ಬಲಸಹಿತ || ೫ || ಅಲ್ಲಿನಿಂದಾ ರಾತ್ರಿಸತಿಯೊಡ | ನುಲ್ಲ
ಸದೊಳೂಟವನೆಸಗಿ ವರ | ಸಲ್ಲಲಿತ ಮೃದುತಲ್ಪದೊಳು ಸುಖನಿದ್ರೆ
ಯನುಮಾಡಿ || ನಲ್ಲಳಸಹಿತ ಲೆದ್ದುದಯದೊಳ | ಗೆಲ್ಲರನೊಲಿಸುತಸರ
ಯೂನದಿ | ಯಲ್ಲಿ ಮಿಂದೆಸಗಿವನು ಸಂಧ್ಯಾವಂದನಾದಿಗಳ || ೬ || ವಿಧಿ
ವಿಧಾನದೊಳೆಸಗಿವಿಪ್ರಸ | ಮುದಯುಕೆ ಸಕಲದಾನಗಳನಾ | ನದಿಯತೀ
ರದೊಳಾ ರಘೂದ್ವಹನಧಿಕಭಕ್ತಿಯಲಿ || ಪದಿದುವಂದಿಸಿ ಹರಿವಸರಯೂ |
ನದಿಗೆಕೋಸಲಪುರಿಗೆ ನಮಿಸಿಭ | ರದೊಳುಪೋದನು ಮುಂದಕೆಸಕಲ
ಸೈನ್ಯಜನಸಹಿತ || ೭ || ಕುಳಿತುಕೊಂಡರು ಜನಕಪುತ್ರಿಮೊ | ದಲಹ
ರಾಜಾಂಗನೆಯರೆಲ್ಲರು | ಸಲೆವಿರಾಜಿಪ ಘನಗಜಂಗಳೊಳತಿ ವಿನೋದ
ದಲಿ || ಕುಳಿತುಕೊಂಡನು ರಾಘುವನುಕಂ | ಗೊಳಿಪ ಮತ್ತಮತಂಗ
ಜವಕೊರ | ಳೊಳತಿ ವೈಭವದಿಂದೆ ಬಿರುದಾವಳಿಯನಾಲಿಸುತ || ೮ ||
ವರವಿಮಾನವನೇರಿದರು ತರ | ತರದಖಿಳ ವಸ್ತುಗಳನಿರಿಸುತ | ಪುರದ
ಮಾನವರೆಲ್ಲರತಿ ಶೀಘ್ರದೊಳುನಡೆತಂದು || ಭರದೊಳಾ ರಘುವರನು
ಹಸ್ತಿನ | ಪುರಿಗೆಬಂದನು ದಿವಸಪನ್ನೊಂ | ದರಲಿ ನಾನಾಪುರಗಳನತಿ
ಕ್ರಮಿಸಿ ಮಾರ್ಗದಲಿ || ೯ || ಕಳುಹಿಕೊಟ್ಟನು ವಾನರರನು ಜ | ಗಳ

ಕೆರಘುಭೂವರನು ಕೂಡೆಜ । ಗಳನಡೆದುದು ನಲಾದಿಗಳಿಗಾವಾನರೇಂ
ದ್ರರಿಗೆ ॥ ಹಲವುಜೋಧರು ಮಡಿದರಿರ್ಕಡೆ । ಯೊಳಗೆ ಹನ್ನೆರಡುಪದು
ಮಂಗಳ । ಬಲವಿನಾಶನವಾದುದು ನಲಾದಿಗಳಸೈನ್ಯದಲಿ ॥೧೦॥ ನೊಂದು
ಕೊಳ್ಳದೆ ಬಹುಪರಾಕ್ರಮ । ದಿಂದೆ ಜಗಳವನೆಸಗಿವರುಹ । ನ್ನೊಂದು
ತಿಂಗಳಮೇಲೆ ಹನ್ನೊಂದುದಿನಗಳತನಕ ॥ ಕುಂದಿಕೊರಗುತ್ತ ತ್ರಿ ವಿಷಾ
ದವ । ನೊಂದಿ ರಣರಂಗದೊಳುನಿಲ್ಲದೆ । ಬೆಂದುಪೋದರು ಶತ್ರುಗಳು
ಕುಶನಸ್ತ್ರಘಾತದಲಿ ॥ ೧೧ ॥ ಅಳಿದಸೈನ್ಯವನೆಲ್ಲ ಕಂಡಾ । ನಳನುಮೊದ
ಲಾದ ಚಿರಜೀವಿಗ । ಳಳುಕದಾ ರಣರಂಗಕೈತಂದೊಡನೆ ಗರ್ಜಿಸುತ ॥
ಹಲವುಬಗೆ ಕೂರಂಬುಗಳ ನಿದಿ । ರೊಳು ಕುಶಲವರಮೇಲಿಡುತ ಧುರ ।
ದೊಳುರೆ ಪೊಯ್ದಾಡಿದರು ವೀರಾಲಾಪವನುಗೈದು ॥ ೧೨ ॥ ನಳನುಮೊ
ದಲಾದವರು ಬಿಟ್ಟಸ । ಕಲವಿಧದ ಶಸ್ತ್ರಾಸ್ತ್ರಗಳನೆಡೆ । ಯೊಳುಕುಶ
ನು ಖಂಡಿಸಿಮಹಾಸ್ತ್ರವನೆಚ್ಚು ಶೀಘ್ರದಲಿ ॥ ಬಳಿಕಲಾಬ್ರಹ್ಮಾಸ್ತ್ರವ
ನುಕ್ಕೈ । ಯೊಳುಪಿಡಿದು ಸಂಧಿಸುತ ಕಾರ್ಮುಕ । ದೊಳುರೆ ಗರ್ಜಿಸಿ
ಶತ್ರುಗಳಮೇಲೆಚ್ಚಲನುವಾದ ॥ ೧೩ ॥ ವನಜಸಂಭವನಷ್ಟರೊಳಗಾ ।
ಜನಕಜಾತೆಯ ಸುತನಹತ್ತಿರ । ಕನುನಯದೆ ಬಂದೀಕ್ಷಿಸಿ ಬ್ರಹ್ಮಾಸ್ತ್ರ
ವನುಕೂಡೆ ॥ ತನಯಕೇಳೀ ಪ್ರಾಣನಾಶಕ । ಮೆನಿಸುವ ಬ್ರಹ್ಮಾಸ್ತ್ರ
ವನುನೀ । ನನುವರದೆ ಶತ್ರುಗಳಮೇಲ್ಬಿಡ ದಿರೆನುತಡ್ಡಗಿಸೆ ॥ ೧೪ ॥
ಸರಸಿಜೋದ್ಭವನೆಂದ ನುಡಿಗು । ತ್ತರವನೀಯದೆ ಹೋಗೆನುತಧಿ । ಕ್ಕ
ರಿಸಲಾ ಕುಶನಬ್ಜಸಂಭವನತಿ ವಿಷಾದವನು ॥ ಧರಿಸಿರಾಘವನೆಡೆಗೆ ನಡೆ
ತಂ । ದೆರಗಿ ಬಿನ್ನೈಸಿದನು ರಘುಭೂ । ವರನೆಪೇಳು ಕುಶಂಗೆ ಬಿಡ
ದಂತಸ್ತ್ರವನೆನುತ್ತ ॥ ೧೫ ॥ ಅವನು ನನ್ನ ವಚನಗಳನು ಕೇ । ಳುವ
ವನಲ್ಲೆನುತಾಸರಸಿಜೋ । ದ್ಭವನನೊಪ್ಪಿಸಿ ರಾಘವನು ವಾಲ್ಮೀಕಿಮು
ನಿಬಳಿಗೆ ॥ ತವಕದಿಂದಲೆ ಕಳುಹಲತಿ ಹ । ರ್ಷವನುತಾಳ್ದಾ ಮುನಿಕು
ಲೇಂದ್ರನ । ಸುವಿಮಲಾಶ್ರಮಕಾಗಿ ಬಂದನು ಮನದೆಯೋಚಿಸುತ
॥ ೧೬ ॥ ಬಂದುಮುನಿ ವಾಲ್ಮೀಕಿಗಾರಘು । ನಂದನನು ಪೇಳ್ದಾನುಡಿ
ಯುನೊಲ । ವಿಂದೆ ಕಮಲಾಸನನು ಬಿನ್ನವಿಸಲತಿಶೀಘ್ರದಲಿ ॥ ಅಂದದ
ನುಕೇಳುತ್ತ ಧರಣೀ । ನಂದನೆ ನುಡಿದೊಡಾಲಿಸುವನದ । ರಿಂದೆಸೀತೆಗೆ
ಪೇಳೆನುತ ವಾಲ್ಮೀಕಿಕಳುಹಿದನು ॥ ೧೭ ॥ ನಳನುಮೊದಲಾದವರಹೆಂ
ಡತಿ । ಗಳನುಬೇಗನೆ ಸೀತೆಯಬಳಿಗೆ । ಕಳುಹಿಕೊಟ್ಟಾ ಕಮಲಸಂಭ
ವನಾಮಹೀಸುತೆಯು ॥ ಬಳಿಗೆಬಂದಿಂತೆಂದು ಪೇಳಿದ । ನೆಲೆ ಜನಸಿಕೇ

ಕ್ಕಿನ್ನ ಮಗನಿಗೆ | ತಿಳುಹಿಸು ಬ್ರಹ್ಮಾಸ್ತ್ರ ಬಿಡದಂತೆನುತಬೇಡಿದನು || ೧೮ || ಆನುಡಿಯನಾಲಿಸುತ ಬರುವಾ | ವೂನಿನಿಯರ್‍ಗನು ಕಂಡು ಜಾನಕಿ | ಸಾನುನಯದಿಂದೊಡನೆ ಮಂಚವನಿಳಿದು ನಿಂದಿರಲು || ಆನಳಾದಿಗಳರಸಿಯರು ಸುಂ | ಮಾನವನುತಾಳುತ್ತ ಬಂದರು | ಜಾನಕಿಯುಪತ್ತ್ತಿರಕತಿ ವಿನಯದಿಂದಶಿಕ್ಷೆಪ್ರದಲಿ || ೧೯ || ಬಂದತಿಬಕುತಿಯಿಂದೆ ಧರಣೀ | ನಂದನೆಯ ಪದಪಂಕಜಕೆರಗಿ | ತಂದಕಾಣಿಕೆಗಳನು ಪದೆದಿತ್ತಖಿಳನಾರಿಯರು || ನಿಂದುಮುಂಗಡೆಯಲ್ಲಿ ಸಂತಸ | ದಿಂದೆಹೊಗಳುತ ಕರವಮುಗಿದಿಂ | ತೆಂದು ಬಿನ್ನವಿಸಿದರು ತಮ್ಮವಿಚಾರವನು ಕೂಡೆ || ೨೦ || ದೇವಿಕರುಣಿಸು ನಮ್ಮಪತಿಗಳ | ಜೀವಗಳನೊಲಿದಿಂದುರಕ್ಷಿಸು | ಸಾವಧಾನದೊಳವರ ತಪ್ಪುಗಳನ್ನುಮನ್ನಿಸುತ || ಆವರಬ್ರಹ್ಮಾಸ್ತ್ರವನು ಸಮ | ರಾವನಿಯೊಳು ಬಿಡದಿರುವೆಂದದೆ | ನೀವುಕುಶನಿಗೆಪೇಳ್ದುಪಾಲಿಸೆನುತ್ತ ಬೇಡಿದರು || ೨೧ || ನಮ್ಮಪತಿಗಳನೀಗ ಬದುಕಿಸು | ತೆಮ್ಮನು ಸಲಹಬೇಕೆನುತ ನೆರೆ | ನಮ್ಮಗೆಯೊಳ್ಕೈತಂದೆವಮ್ಮಾನಿಮ್ಮಸನ್ನಿಧಿಗೆ || ನಿಮ್ಮನುಳಿದರೆ ರಕ್ಷಿಸುವರಿ | ಲ್ಲೆಮ್ಮನೆಂದುರೆ ಬೇಡಿಕೊಂಡರು | ತಮ್ಮಮನದಣಿವಂತೆ ನಾರಿಯರೆಲ್ಲ ಸೀತೆಯನು || ೨೨ || ಹಾಗೆಯಾಗಲೆನುತ್ತ ಲೊಪ್ಪಿಸಿ | ಬೇಗನೆಕುಳಿತುಕೊಂಡು ಸೀತೆಸ | ರಾಗದೊಳಸೆವ ಮಂಡಿಗೆಯೊಳಾವನಿತೆಯರಸಹಿತ || ಆಗಳ್ಕೈತಂದಾ ಕುಶನೆಡೆಗೆ | ಪೋಗಿಪೇಳಿದಳೆಲೆ ಕುಶಬಿಡದಿ | ರೀಗಲೀ ಬ್ರಹ್ಮಾಸ್ತ್ರವನು ಶತ್ರುಗಳಮೇಲೆನುತ || ೨೩ || ಸುತನಿಗೆ ಸಮಾಧಾನವನು ಪೇ | ಳ್ದತಿ ಭರದೊಳೊಪ್ಪಿಸುತ ಧರಣೀ | ಸುತೆ ನಿವಾರಣೆಗೈದಳಾನತ ಜನರತಾಪವನು || ಚತುರಮತಿ ಕುಶನಾಜನನಿ ನುಡಿ | ದತಿ ಹಿತೋಕ್ತಿಯನಂದೊಲಿದುಕೇ | ಳುತ ಭರದೆನಿಲ್ಲಿಸಿದನಾ ಬ್ರಹ್ಮಾಸ್ತ್ರವನುಬಿಡದೆ || ೨೪ || ಧುರದೆಸೋತು ಕುಶಂಗೆಕ್ಯೆಮುಗಿ | ದೆರಗಿ ಹಸ್ತಿನನಗರವನುಳಿದು | ಹೊರಟುಹೋದರು ತಮ್ಮನೆಲೆಗಳಿಗಾ ನಳಾದಿಗಳು | ಪರಮಸಂಮದದಿಂದೆ ರಘುಭೂ | ವರನಬಳಿಗಾ ಜನನಿಸಹಿತಸ | ಮರಮಹೀತಳವನುಳಿ ದಂದೈತಂದನಾ ಕುಶನು || ೨೫ || ನಿಂತುಪೋದುದು ಕಾಳಗವು ಸಮ | ನಂತರದೊಳಾ ರಾಘುವನು ಬಲು | ಸಂತಸವನಾಂತಖಿಳಸೇನಾಜನಗಳೊಡವರಸಿ || ಅಂತಮಿಲ್ಲದ ವಿಭವದಿಂದೆ ನಿ | ರಂತರಮೆಸೆವ ತನ್ನಪಟ್ಟಣ | ಕಂತರಿಕ್ಷಪಥದೊಳು ಬಂದನು ಕುಶನು ಪ್ರಷ್ಪಕದೆ || ೨೬ || ಮರೆವಯೋಧ್ಯೆಗೆ ಬಂದುರಘುಭೂ | ವರನುಹೊಕನ್ಕ

ತನ್ನ ಸತಿಸಹಿ । ತರವುನೆಯನಂದಖಿಳವಿಧ ರಾಜವಿಭವೆಂಗಳಲಿ ॥ ಧರಣಿ
ಸುತೆ ರಘುಭೂವರನ ಸಹ । ತರವುನೆಯೊಳಗೆ ಹಗಲಿರುಳು ಪರಿ ।
ಪರಿಯ ಸೌಖ್ಯವನೈದಿದಳಖಿಳ ಜನಗಳನೊಲಿಸುತ ... ॥ ೭೩ ॥

ಇಂತು ನಲವತ್ತೇಳನೆಯ ಅಧ್ಯಾಯ ಸಂಪೂರ್ಣವು
ಪದ್ಯಗಳು ೨೫೩೦.



## ನಲವತ್ತೆಂಟನೆಯ ಅಧ್ಯಾಯ

ಸೂಚನೆ ॥ ತೆರಳಿದಳು ವೈಕುಂಠಕಾ ರಘು ।
ವರನಕೂಡೆ ಮಹೀಸುತೆ ಖಗೇ ।
ಶ್ವರನ ಬೆನ್ನೊಳುಕುಳಿತು ಗಂಗಾನದಿಯತೀರದಲಿ ॥

ಬಳಿಕರಾಘವನಖಿಳ ಸೌಖ್ಯಂ । ಗಳನುಹೊಂದುತನೇಕವರ್ಷಂ । ಗಳತನಕ ಸಂತೋಷದಿಂದಿರಲವನಿಸುತೆಸಹಿತ ॥ ಹಲವುದಿನಗಳು ಕಳೆದ ನಂತರ । ಜಲಜಸಂಭವ ನೊಂದುದಿನರವಿ । ಕುಲಲಲಾಮನ ಬಳಿಗೆಬಂದನು ವಿಪ್ರವೇಷದಲಿ ॥ ೧ ॥ ಜವದೊಳೈತಂ ದಬ್ಜಭವನಾ । ರವಿಕುಲೇಂದ್ರನ ಪಾದಕಮಲಕೆ । ಜವದೊಳುನಮಿಸಿ ಮನ್ನಣೆವಡೆದುಕುಳಿತು ಪೀಠದೊಳು ॥ ಸುವಿಮಲೋಕ್ತಿಗಳಿಂದೆ ಹೊಗಳುತ । ಭುವನರಕ್ಷಕ ನೀನುಬಾರೈ । ದಿವಕೆಶೀಘ್ರದೊಳೆನುತ ಬಿನ್ನೈಸಿದನುಗೋಪ್ಯದಲಿ ॥ ೨ ॥ ಇಂದಿಗಾದುದೆಮಗಿಳೆಯೊಳು ಹ । ನ್ನೊಂದುಸಾವಿರ ವರ್ಷಗಳು ಹ । ನ್ನೊಂದುವರ್ಷಗಳನಿತೆ ತಿಂಗಳುಮನಿತೆ ದಿವಸಗಳು ॥ ಅಂದವಹ ವೈಕುಂಠಕೇಜನ । ವೃಂದದಸಹಿತ ಸಾಳಬರುತಿಹೆ । ನೆಂದುಬೀಳ್ಕೊಟ್ಟನು ರಘೂದ್ವಹನಬ್ಜಸಂಭವನ ॥ ೩ ॥ ಕಳುಹಿಕೊಟ್ಟ ನವರವರ ಸ್ಥಳ । ಗಳಿಗಖಿಳವಾನರರನಾ ರವಿ । ಕುಲತಿಲಕನು ಸಮಸ್ತರಾಜರ ನೈದೆಮನ್ನಿಸುತ ॥ ಕಳುಹಿದನವರವರನಿವಾಸಂ । ಗಳಿಗೆಕೂಡೆಸಮಸ್ತ ಬಾಂಧವ । ಕುಲವಬೀಳ್ಕೊಟ್ಟನವರವರ ನಿಜಭವನಂಗಳಿಗೆ ॥ ೪ ॥ ಕಳುಹಿಕೊಟ್ಟನುಕೂಡೆ ಸಂತಸ । ದಳೆದು ರಘುಭೂವರನು ಲವನನು । ತಳೆದಡವಿ ತಾನುತ್ತರದ ಕುರುಭೂಮಿಗತಿಜವದೆ ॥ ಬೆಳೆದಸಂತಸದಿಂದೆ ಜಾನಕಿ । ತಳುವದುತ್ತಮ ಕಾಮಧೇನುವ । ನೊಲಿದುಕೊಟ್ಟು ಕಳು

ಹಿದಳಾಶೀರ್ವದಿಸುತಾ ಲವನ ‖ ೫ ‖ ಮತ್ತೆ ಚಿಂತಾಮಣಿಯು ರತ್ನವ ।
ನಿತ್ತನುಕುಶಂಗಾ ರಘೂದ್ವಹ । ನುತ್ತಮವೆನಿಪ ಕಲ್ಪವೃಕ್ಷ ಸುಪಾರಿ
ಜಾತಗಳ ‖ ಇತ್ತು ಕಳುಹಿದ ನಿಂದ್ರನಿಗೆನಲಿ । ಯುತ್ತವರ ಪುಷ್ಪಕವಿ
ಮಾನವ । ನಿತ್ತು ಕಳುಹಿದನಾ ಕುಬೇರನಿಗತಿವಿನೋದದಲಿ ‖ ೬ ‖ ನೀವು
ನಿಮ್ಮಯಪತ್ರಿಗಳ ಸಹಿತ । ಸಾವಕಾಶವನಾಗಿಸದೆ ಪರಿ । ಭಾವಿಸುತ್ತಲೆ
ನಾಳೆಯದಿನವೆ ಸಹಗಮನಗೈದು ‖ ದೇವಪುರಿಗೈತಹುದೆನುತ ರಘು ।
ಭೂವರನುಪೇಳದನು ಬಹುಕರು । ಣಾವಲೋಕನದಿಂದೆ ನಾದಿನಿಯರಿಗೆ
ತಾನಿರದೆ ‖ ೭ ‖ ಸಾದರಗೊಳು ಹಿತೋಪದೇಶವ । ಗೈದು ಕಳುಹಿಸಿ
ಕೊಟ್ಟನು ಮನೆಗೆ । ಮೋದದಿಂಶ್ರುತಕೀರ್ತಿ ಮಾಂಡವಿ ಯುರ್ಮಿಳೆಯ
ರುಗಳ ‖ ಮೇದಿನೀಸುತೆಸಹಿತ ರಾಘವ । ನಾದಿನದ ರಾತ್ರಿಯನುಕಳೆದ
ನು । ವೇದವನುಪಠಿಸುತ್ತ ಚಿನ್ನದಮಂಚದೊಳು ಮಲಗಿ ‖ ೮ ‖
ಮರುದಿನ ಮಡದಿಯೊಡನೆ ರಘುಭೂ । ವರನು ತಾನೇಳುತಜವಿಘಾಥನ ।
ಕರೆದುವೈಕುಂಠಕ್ಕೆ ಪೋಗುವೆನೀದಿನವೆ ನಾನು ‖ ಭರದೊಳೀಗಲೆಕಳು
ಹು ಕುಶನೆಡೆ । ಗಿರುವ ಜಡವಸ್ತುಗಳನೆಲ್ಲವ । ಬರಲಿ ಚರವಸ್ತುಗಳ
ವೆಲ್ಲವು ನನ್ನ ಜೊತೆಯೊಳಗೆ ‖ ೯ ‖ ನೀನು ಕುಶನಸಮೀಪಕ್ಕೈದಿ ನಿ ।
ದಾನಿಸದಖಿಳ ಸಂಗತಿಗಳನು । ಸಾನುನಯದಿಂದರುಹು ಮುಂದಮಗಾಗಿ
ಕುಶನೊಲಿದು ‖ ಕ್ಷೋಣಿತಲದೊಳು ವಿಪ್ರರಿಗೆಬಹು । ದಾನಗಳನೀಯಯು
ತ್ತ ಘನಸುಂ । ಮಾನದಿಂದಾಗಿಸುವ ನುತ್ತರಕರ್ಮಗಳನೆಲ್ಲ ‖ ೧೦ ‖
ಎಂದುಪೇಳುತ್ತವನ ನಾರಘು । ನಂದನನು ಬೀಳ್ಕೊಟ್ಟು ಸಂತಸ ।
ದಿಂದೆ ಗಂಗಾಮಂಗಳ ಸ್ನಾನವನುತಾನೆಸಗಿ ‖ ಚಂದದಿಂದಲೆ ನಿತ್ಯಕ
ರ್ಮವ । ನಂದೆಸಗಿ ವೈಶ್ವಾನರನಿಗಾ । ನಂದವನು ತಾಳ್ದಿತ್ತನಾಹುತಿಗಳ
ನುಬಹುವಾಗಿ ‖ ೧೧ ‖ ವಿನುತ ಗಂಗಾನದಿಯತೀರದೊ । ಳನಕುಲೋ
ತ್ತಮನಖಿಳ ದಾನಗ । ಳನೆಸಗುತ್ತ ಯಥಾವಿಧಿಯೊಳತ್ಯಧಿಕ ಭಕ್ತಿಯು
ಲಿ ‖ ಘನಮಹಾ ಪ್ರಸ್ಥಾನಿಕವ ಜೇ । ಗನೊಡರಿಸಿ ವೈಕುಂಠಕೆಕಳು
ಹಿ । ದನತಿಶೀಘ್ರದೊಳಗ್ನಿಯನು ವಿಸ್ಮಯವನಾಗಿಸುತ ‖ ೧೨ ‖ ಆಗ
ಮೂರ್ತೀಭವಿಸಿ ಹೊರಟಿತು । ರಾಘವನಕೈಯಿಂದೆ ಪದ್ಮವು । ಬೇಗನೆ
ವಿರಾಜಿಸುತ ವೈಕುಂಠಕತ್ತಿತೇಜದಲಿ ‖ ರಾಗರಸದಿಂದಖಿಳ ವೇದಗ । ಳಾ
ಗವೈಕುಂಠಕ್ಕೆ ತೆರಳದ । ವಾಗಸದದಾರಿಯೊಳು ತಾವ್ಪ್ರತ್ಯಕ್ಷರೂಪದಲಿ
‖ ೧೩ ‖ ಭರದೊಳಂದಾ ಪ್ರಣವರೂಪಿನೊ । ಳರದೆಬಂದುದು ರಾಮನ
ಮುಖವ । ತೊರೆದುಗಾಯತ್ರೀಮಹಾದೇವತೆಯು ಹೊರಗಡೆಗೆ ಹೊ

ರಟುಹೋದವು ರಾಮಚಂದ್ರನಿ । ಗೆರಗಿಸಗ್ಗಕೆ ಶಾಂತಿಯುಶಬಲ । ಕರುಣಾ
ಮೇಧಾಕ್ಷಾಂತಿ ತೇಜಧೃತಿಗಳುಶೀಘ್ರದಲಿ ॥ ೧೪ ॥ ಸುರವಿನುತ ಗಂಗಾ
ನದಿಯೊಳಾ । ಪುರವಮಾನವರೆಲ್ಲ ರೊಡನಂ । ದಿರದಖಿಳಕಪಿವೀರರೆಲ್ಲರು
ಮಿಂದುಹರ್ಷದಲಿ ॥ ತೊರೆದರು ನಿಜಶರೀರಗಳನುರು ತರದಯೋಗಾ
ಭ್ಯಾಸದಿಂದಾ । ಪರಿಯುಜಾನಿಸಿಬಂಧಿಸುತ್ತ ಪ್ರಾಣಪಾಯುಗಳ ॥ ೧೫ ॥
ವಿತತಸಂಮುದದಿಂದೆ ಘನಸಂ । ನುತಿವಡೆದ ಗಂಗಾಜಲವನತಿ । ಹಿತದೆರಾ
ಘವನು ಸ್ಪರುಶವನುಮಾಡಿಕೈಯಿಂದೆ ॥ ಅತಿವಿಮಲ ದರ್ಭಾಸನದೊಳು
ಕು । ಳಿತುಸಲೆವಿರಾಜಿಸಿದ ತನ್ಮಯ । ಸತಿಯೊಡನುದನ್ಮುಖದೊಳತಿ
ಪೂತಾತ್ಮನೆಂದೆನಿಸಿ ॥ ೧೬ ॥ ದೇವಲೋಕವನುಳದುಸಲೆಸಂ । ಭಾವಿಸುತ
ಖಿಳ ದೇವತೆಗಳಂ । ದಾ ವಿನುತಗಂಗಾನದಿಯ ತೀರಕೊಡನೈತಂದು ॥
ಸಾವಧಾನದೊಳಲ್ಲಿ ಸಕಲಜ । ನಾವಳಿಗೆ ದರ್ಶನವಕೊಡುತಿಹ । ದೇವ
ದೇವನ ವಿನುತಮೂರ್ತಿಯ ನಿಂತುನೋಡಿದರು ॥ ೧೭ ॥ ಹೊಳೆವನಿಡು
ದೋಳ್ಗಳ ಮಘಮಘಿಸಿ । ಸಲೆವಿರಾಜಿಪತುಲಸಿಹಾರದ । ಲಲಿತಕೌಸ್ತುಭ
ಮಣಿ ವಿರಾಜಿತವಿಸ್ತೃತೋರದಮೇಣ್ ॥ ವಿಲಸಿತ ಶ್ರೀವತ್ಸನಾಭಿಯ ।
ಕಲಿತ ದಿವ್ಯಾನಂದರೂಪದ । ಜಲಜನೇತ್ರನು ರಂಜಿಸಿದನಂದಧಿಕ ತೇಜ
ದಲಿ । ೧೮ ॥ ಮೇದಿನೀಸುತೆ ಲಕ್ಷ್ಮಿರೂಪವ । ನೈದಿನಿಂತಿದ್ದಳೆಡಭಾಗ
ದೊ । ಳಾದಿಶೇಷನು ತಾನೆನಿಸಿತೋರಿದನು ಲಕ್ಷ್ಮಣನು ॥ ಆದಿನಾರಾ
ಯಣನ ಕೈಗಳೊ । ಳೈದೆಸೇರುತ ಶಂಖಚಕ್ರಗ । ಳಾದರಾಗಲೆ ಭರತ
ಶತ್ರುಘ್ನರುಗಳೆಡಬಲದೆ ॥ ೧೯ ॥ ಮೊಳೆಗಿದವು ದುಂದುಭಿಗಳಾಗಸ ।
ದೊಳತ್ರಿಶೀಘ್ರದೆ ಸುರಿಸಿದರು ಪೂ । ಮಳೆಯನೀಧರಣೀತಲಕೆ ಸುರರತಿ
ವಿನೋದದವಲಿ ॥ ಚೆಳವಸಂತಸದಿಂದೆ ನರ್ತನ । ಗಳನು ಮಾಡಿದರಪ್ಸರ
ಸ್ಸಗ । ಳೊಲಿದುಗಾನವಮಾಡಿದರು ಗಂಧರ್ವಕಿನ್ನರರು ॥ ೨೦ ॥
ಗರುಡನಾಗಳೆಬಂದು ಪದಗಳ । ಗೆರಗಿದನು ದೇವಾಂಗನೆಯರತಿ । ಭರದೆ
ಮುಂಗಡೆ ಹತ್ತುಸಾಸಿರದ ಮಣಿದೀಪಗಳ ॥ ಇರಿಸಿಕೊಂ ಡಾರತಿಗಳ
ನೆಸಗಿ । ದರು ಲಕುಮಿನಾರಾಯಣರಿಗತಿ । ಹರುಷದಿಂದುರೆ ಮೆರೆವ ಚಿ
ನ್ನದತಟ್ಟೆಗಳೊಳಂದು ॥ ೨೧ ॥ ಪದಸರೋಜಯುಗಳಕೆ ಕೂಡೆಪ ।
ದೆದುನಮಿಸಿ ಕೈಮುಗಿದು ಬೊಮ್ಮನು । ಮೊದಲೆನಿಪಖಿಳ ದೇವತೆಗಳತಿ
ಭಕ್ತಿಭಾವದಲಿ ॥ ವಿಧವಿಧಗಳಿಂದೆ ಸ್ತುತಿಸಿದರು । ಪದುಮನಾಭನನೊಲಿ
ದುಸಾನಂ । ದದೊಳು ನಿಗಮಾಗಮವಿಚಾರವನೆಲ್ಲ ಬೋಧಿಸುತ ॥ ೨೨ ॥
ವಿನುತಚೈತ್ರ ಬಹುಳದ ಪಂಚಮಿ । ದಿನದೊಳೀಶ್ವರನಿಂದೆ ತಾಂಪ್ರೀ ।

ರಣೆಯನಾಂತಾಲಂಗಿಸುತ ವಾಲ್ಮೀಕಿಮುನಿಪನನು ‖ ಮುನಿಗಳೆಲ್ಲರ
ಲಿವು ನೋಡುತ । ವನಜನಾಭನು ಸಗ್ಗಕೆತೆರಳಿ । ದನು ಸತ್ರಿಸಹಿತ
ಳಿತುವಿನತಾಸುತನಜೆನ್ನಿನೊಳು ‖ ೨೩ ‖ ಹೊಳೆಹೊಳೆವ ಸುಂದರತ
ಕೃತಿ । ಗಳನು ತಾಳ್ದಿಸವಾವಿಮಾನಂ । ಗಳ ಸಮೂಹಗಳಿಂದಬಳ
ನೇಕಭುವನಗಳ ‖ ಜಲಜಲೋಚನ ನೀಕ್ಷಿಸುತಕಂ । ಗೊಳಪವರ
ಕುರಕೈತಂ । ದಿಳದನಾ ಲಕ್ಷ್ಮಿಯೊಡನೆ ಬಹುಳಹರ್ಷದನುತಾ
‖ ೨೪ ‖ ದಿವಿಜರೆಲ್ಲರನೊಲಿದು ನೋಡುತ । ಜವದೊಳವೈಕುಂಠ
ಳು ವಾ । ಧವನು ತಾನಾರೋಹಿಸಿದನಾ ಸ್ವಪದವನುಬಳಿಕ ‖ ಶಿವ
ವೊವಲೆನಿಪವುರಲೆಲ್ಲರ । ನವರಲೋಕಂಗಳಿಗೆ ಕಳುಹಿದ । ವಿವಿಧ
ವಿನಯೋಕ್ತಿವಚನಗಳಿಂದೆ ಮನ್ನಿಸುತ ‖ ೨೫ ‖ ಪರಮಪೂರುಷನ
ಸಚರಾ । ಚರವಜೀವಿಗಳಂತರಂಗದೊ । ಳಿರುವ ಪಾವನಸಚ್ಚಿದಾನ
ಮಯರೂಪವನು ‖ ಧರಿಸಿದಾಪರಮಾತ್ಮ ನಂದೊಡ । ನುರಗತಲ್ಪ
ಳಿಂದಿರೆಸಹಿತ । ಗರುಡಸೇವಿತನಾಗಿ ಪೂರ್ಣಮನೋರಥ ನೆನಿ
‖ ೨೬ ‖ ಮುನಿಗಳೆಲ್ಲರು ಹೊರಟುಹೋದರು । ವನಜನಾಭನ ಚ
ಕಮಲಕೆ । ಮಣಿದುಪೂಜಿಸಿ ತಮ್ಮತಮ್ಮತಪೋವನಂಗಳಿಗೆ ‖ ಅ
ರೊಳಯೋಧ್ಯಾಪುರವರದ । ಜನಗಳೆಲ್ಲರು ಸೇರಿದರು ಪಾ । ವನತ
ಸಾಂತಾನಿಕ ಮಹಾಲೋಕಗಳನೊಡನೆ ‖ ೨೭ ‖ ಆದಿಲಕ್ಷ್ಮಿಯೊ
ಮಹೀಸುತೆ । ಮೇದಿನೀಮಂಡಲದ ಭಾರವ । ನಾದರದೊಳೀತೆ
ಪರಿಹರಿಸುತ್ತ ಭಕ್ತರನು ‖ ಆದರಿಸಿಸಲಹುತ್ತ ಸಕಲವಿ । ನೋದ
ನಾಗಿಸುತ ಸೇರಿದ । ಳಾದಿನಾರಾಯಣ ನೆಡಗಡೆಯೊಳಾಗಸಗ್ಗದಲಿ ‖೨
ಗರುಡವಾಹನ ವಾಸುಕಿಶಯನ । ಸರಸಿಜನಯನ ದನುಜಮರ್ದ
ಮುರಮಥನ ಲಕ್ಷ್ಮೀರಮಣ ಪೀತಾಂಬರಾವರಣ ‖ ದುರುಳಶಿಕ್ಷ
ಷ್ಟರಕ್ಷಣ । ನಿರುತರಕ್ಷಿಸೆನುತ್ತ ಪದಪಂ । ಕರುಹಕಾನತರಾಗಿ
ಸಿದರಖಿಳ ನಿರ್ಜರರು ‖ ೨೯ ‖ ನೀನೆತಾಯಿಯು ನೀನೆತಂದೆಯು ।
ನೆಬಂಧುವು ನೀನೆಮಿತ್ರನು । ನೀನೆವಿದ್ಯೆಯು ನೀನೆವಿತ್ತವು ನೀನೆಸ
ಸ್ವ ‖ ನೀನೆರಕ್ಷಿಪೆ ಸಕಲಜಗವನು । ಸಾನುರಾಗದೊಳೆನು ತಡಿಗಡಿ
ಸಾನುನಯದಿಂದೆರಗಿ ನುತಿಸಿದುದಮರಸಂದೋಹ ‖ ೩೦ ‖ ಎಲ್ಲರೊ
ನೀಂ ತುಂಬಿರುವೆನಿ । ನ್ನಲ್ಲಿರಿಸಿಕೊಂಡಿಹೆ ಸಮಸ್ತರ । ನೆಲ್ಲ ಕಡೆತ
ಸುವೆ ನಿನ್ನಮಹಾತ್ಮೆಯನು ನೀನು ‖ ಎಲ್ಲರಿಗೆಗತಿನೀನು ಜಗದೊ
ಗಿಲ್ಲನಿನಗೆಣೆಯೆನಿಪ ನಿರ್ಜರ । ರೆಲ್ಲಲೋಕಕೆ ಜನಕನೇನೀನಾಗಿ

ರುತಿಹೆ ॥ ೩೧ ॥ ವಿಶ್ವಪಾಲಕ ವಿಶ್ವರೂಪಕ । ವಿಶ್ವವಂದಿತ ವಿಶ್ವಪೂಜಿತ । ವಿಶ್ವತೋಮಯ ವಿಶ್ವಸಂಶಯ ವಿಶ್ವಮೂರುತಿಯೆ ॥ ವಿಶ್ವಲೋಕನ ವಿಶ್ವಕಾರಣ । ವಿಶ್ವಭೂಷಣ ವಿಶ್ವಪೂರ್ಣ । ವಿಶ್ವಗುಣ ವಿಶ್ವೇಶರಕ್ಷಿಸೆನುತ್ತ ಹೊಗಳಿದರು ॥ ೩೦ ॥ ಆದಿಮಧ್ಯಾಂತರಹಿತ ಸಕಲ । ವೇದಶಾಸ್ತ್ರ ಪುರಾಣಸನ್ನುತ । ಆದಿಲಕ್ಷ್ಮೀರಮಣ ಘನ ಗೋವರ್ಧನೋದ್ಧರಣ ॥ ಆದಿಮೂರ್ತಿಯೆ ಆದಿದೇವನೆ । ಆದಿನಾರಾಯಣ ಸಲಹು ನೀ । ನಾವರವೊಳೆನುತೆರಗಿ ನುತಿಸಿದರಖಿಳ ನಿರ್ಜರರು ॥ ೩೩ ॥ ಜ್ಞಾನದಾಯಕಿ ವಿಷ್ಣುನಾಯಕಿ । ದೀನಪೋಷಿಣಿ ವಿಬುಧತೋಷಿಣಿ । ವಾಣಿಪಂಕಜಪಾಣಿ ಪನ್ನಗವೇಣಿ ಕಲ್ಯಾಣಿ ॥ ದಾನವಾಹಿತೆ ಸುಗುಣಭರಿತೆ ಭ । ವಾನಿಸಂಸ್ತುತೆ ಪಾಣಿಹಿತೆ ಚತು । ರಾನನವಿನುತೆ ರಕ್ಷಿಸೆನ್ನುತ ಸುರರುಜೋಡಿಸಿದರು ॥ ೩೪ ॥ ಜಯಜನಾರ್ದನ ಮುರವಿಮರ್ದನ । ಜಯಮುನಿನಿನುತ ಸದ್ಗುಣಭರಿತ । ಜಯಜಯವಿನುತ ವೇಣುವಾದನಲೋಲ ಸುರಪಾಲ ॥ ಜಯಜಗನ್ಮಯ ಜಯಸುಚಿನ್ಮಯ । ಜಯರಮಾಧವ ಜಯಮಹೀಧವ । ಜಯಜಯಯೆನುತ ಹೊಗಳುತಿದ್ದುದು ದೇವಸಂದೋಹ ॥ ೩೫ ॥ ಜಯಜಗನ್ಮಯೆ ಜಯಮಹಾಭಯೆ । ಜಯವಿಧುವದನೆ ಜಯಶುಭರದನೆ । ಜಯಜಯ ಸುಪೀತಾಂಬರಾವರಣೆ ಸುಗುಣಾಭರಣೆ ॥ ಜಯದಯಾಕರೆ ಜಯಸುಖಾಕರೆ । ಜಯಸುಜನನುತೆ ಜಯವಿಬುಧಹಿತೆ । ಜಯಜಯಯೆನುತ ಹೊಗಳುತಿದ್ದರು ಸುರರುಲಕ್ಷ್ಮಿಯನು ॥ ೩೬ ॥ ಮಂಗಳವು ರಾಜೀವನೇತ್ರನೆ । ಮಂಗಳವು ನೀಲಾಭ್ರಗಾತ್ರನೆ । ಮಂಗಳವು ಗೋವರ್ಧನೋದ್ಧರನೆ ಜಯವರ್ಧನನೆ ॥ ಮಂಗಳವು ಮಧುಕೈಟಭಹರನೆ । ಮಂಗಳವು ಪೀತಾಂಬರಧರನೆ । ಮಂಗಳವು ನಿನಗೆನುತ ಪಾಡಿದರಮರರಡಿಗಡಿಗೆ ॥ ೩೭ ॥ ಮಂಗಳವು ಜಗದಾದಿಮೂರ್ತಿಯೆ । ಮಂಗಳವು ಘನಪುಣ್ಯಕೀರ್ತಿಯೆ । ಮಂಗಳವು ಜಗದಾದಿದೇವಿಯೆ ದೇವಮುನಿನುತೆಯೆ ॥ ಮಂಗಳವು ದನುಜೇಂದ್ರಭೀಷಣೆ । ಮಂಗಳವು ಭಕ್ತಜನಪೋಷಿಣಿ । ಮಂಗಳವು ನಿನಗೆಂದೆನುತ ಹೊಗಳಿದರು ಲಕ್ಷ್ಮಿಯನು ॥ ೩೮ ॥ ಆದಿಕವಿ ವಾಲ್ಮೀಕಿಮುನಿವರ । ನೋದಿಸಿದನಾ ಕುಶಲವರ್ಗೆ ಸ । ಮೋದದಿಂ ಶ್ರೀರಾಮಚರಿತೆಯ ನಂದುಹಿತದಿಂದ ॥ ಸಾಧುನುತರವರೆಮ್ಮ ಜನನಿಯ । ಸಾಧುವೃತ್ತವ ಕೇಳಬೇಕನ । ಲಾದರದೆ ಮುನಿಪೇಳಿದನು ಮೊದಲಿಂದೆಕೊನೆತನಕ ॥ ೩೯ ॥ ಇಂತು ಪೂರ್ಣವೆನಿಸಿಹುದಿಲ್ಲಿಗೆ । ಕಂತುಜನನಿಯ ಕರುಣೆಯಿಂದಾ ।

ತಂಕವಿಲ್ಲದೆ ಧಾರಿಣೀಸುತೆಚರಿತೆ ಕೊನೆತನಕ ॥ ಸಂತತವಿದು ಸ್ಥಿರವೆ
ನಿಸಿಮೆರೆ । ಮಂತೆ ರಕ್ಷಿಸಬೇಕೆನುತ ಮೊ । ಕಾಂತನಂ ಪ್ರಾರ್ಥಿಸುತಿಹೆ
ನಧಿಕ ಭಕ್ತಿಭಾವದಲಿ ॥ ೪೦ ॥ ಇದು ನವೀನಚರಿತ್ರಮಿದು ಪು । ಣ್ಯದ
ನಿವಾಸಮಿದಿಷ್ಟ ಫಲಕರ । ಮಿದುಸಕಲಸೌಖ್ಯಕರಮಿದು ಪಾಪವನುಹ
ರಿಸುವುದು ॥ ಇದುವೆ ಪತಿಭಕ್ತಿಯನಬಲೆಯರಿ । ಗೊದವಿಪುದಿದುಕ್ಷೇಮ
ಕರಮೆನಿ । ಪುದಿದು ಸಕಲಾಭೀಷ್ಟಗಳ ನೆಸಗುತಿಹುದೆಲ್ಲರಿಗೆ ॥ ೪೧ ॥
ಪರಮಪಾವನವೆನಿಪ ಸೀತಾ । ಚರಿತೆಯೊಳು ಮೊದಲಿಂದೆ ಕೊನೆತನ ।
ಕೆರಡು ಸಾವಿರದಾರನೂರಿಪ್ಪತ್ತು ಪದ್ಯಗಳು ॥ ಪರಿಗಣನೆಯಿಂ ದೊಪ್ಪಿ
ಕಾಣಿಸು । ತಿರುವುವಧ್ಯಾಯ ನಲವತ್ತೆಂ । ಟರಲಿ ಭಾಮಿನಿಷಟ್ಪದಿಯ
ರೂಪಿಂದೆ ನುತಿವಡೆದು ॥ ೪೨ ॥ ಭರತಖಂಡದ ದಕ್ಷಿಣಾಶೆಯೊ । ಳಿರುವ
ಶಾಲೀವಾಹನ ಶಕೆಯೊ । ಳೊರೆವ ಸಾವಿರದೆಂಟುನೂರ್ಮೂವತ್ತು ನಾಲ್ಕ
ಕ್ಕೆ ॥ ಸರಿಯುಹ ಪರೀಧಾವಿಸಂವ । ತ್ಸರದ ಚೈತ್ರಬಹುಳ ಬಿದಿಗೆದಿನ ।
ನೆರೆವ ಬುಧವಾಸರದೊಳೀ ಕಥೆಪೂರ್ಣವಾಗಿಹುದು ॥ ೪೩ ॥ ಚೆನ್ನದ
ಗಣಿಯು ಮಧ್ಯಭಾಗದೊ । ಳುನ್ನತವಿಭವದಿಂದೆ ನವಪುರ । ಮೆನ್ನಿಸು
ವರಾಬರ್ಟ್ಸನ್ಪೇಟೆಯೊಳು ಕಂಗೊಳಿಸಿ ॥ ಸನ್ನುತಿವಡೆದು ತೋರು
ವಾಂಗ್ಲೋ । ಕನ್ನಡದ ವಿದ್ಯಾಲಯದೆ ಗುರು । ವೆನ್ನಿಪಣ್ಣಯನಿಂದೆ
ವಿರಚಿತವೆನಿಸಿಪುದೀ ಕಥೆಯು ॥ ೪೪ ॥ ಜನಗಳಿಗೆ ಮಂಗಳಗಳಾಗಲಿ ।
ಮನುಜಪಾಲಕರೆಲ್ಲ ಸಲಹಲಿ । ವನಿತಲವನು ನ್ಯಾಯಮಾರ್ಗವ ನಾವ
ಗಂಬಿಡದೆ ॥ ದನಗಳಿಗೆ ವಿಪ್ರರಿಗೆ ಸಂತತ । ಜನಿಸಲಿ ಸಕಲಶುಭಗಳಿಳೆ
ಯೊಳು । ಘನಸುಖಂಗಳ ನಾಂತಿರುತಿರಲಿ ಸಕಲಲೋಕಗಳು ॥ ೪೫ ॥
ಮಳೆಯುಬೀಳಲಿ ಕಾಲಕಾಲಕೆ । ನೆಲವುಸಸ್ಯಗಳಿಂದೆ ಕೂಡಿರ । ಲಿಳೆ
ಯೊಳು ಕ್ಷೋಭೆಗಳಿಗೊಳಗಾಗದಿರಲೀದೇಶ ॥ ಸಿಲುಕದಿರಲವನೀಸುರ
ರುಭಯ । ಗಳಿಗೆ ಪುತ್ರವಿಹೀನರಿಗೆ ಜನಿ । ಸಲಿ ಸುಪುತ್ರರು ಪೌತ್ರರಾ
ಗಲಿ ಪುತ್ರವಂತರಿಗೆ ॥ ೪೬ ॥ ಧನವಿಹೀನರು ಧನಿಕರಾಗಲಿ । ಜನಗಳೆ
ಲ್ಲರು ನೂರುವತ್ಸರ । ತನಕಬದುಕಲಿ ಪುತ್ರಮಿತ್ರಕಳತ್ರರೊಡವೆರಸಿ ॥
ಮನುಜರ ಮಹಾಪಾಪಗಳು ನಾ । ಶನವನೈದಲಿ ಜನರುಜೊಮ್ಮನ । ಸ
ನಿಪಕ್ಕೈದಲಿ ಬೊಮ್ಮನಿಂದೆ ಪಡೆಯಲಿಪೂಜ್ಯತೆಯ ॥ ೪೭ ॥ ಏಕಭಾವ
ದೊಳರ್ತಿ ಭಕುತಿಯಿಂ । ದೀಕಥೆಯ ನೋದುತಿಹ ಜನಗಳಿ । ಗಾಕಮಲ
ದಳನೇತ್ರನನುದಿನ ವಧಿಕಹರ್ಷದಲಿ ॥ ಬೇಕು ಬೇಕಾದವುಗಳೆಲ್ಲವ ।
ತಾಕರುಣಿಸುತ ಕೊಟ್ಟುಸಲಹುವ । ನೀಕಲಿಯುಗದೊಳವರ ಪಾಪಗ

ಳೆಲ್ಲವನುಹರಿಸಿ ॥ ೪೮ ॥ ಆಯುರಾರೋಗ್ಯ ಧನಧಾನ್ಯಸ । ಹಾಯ ಸತ್ಪಿಸುತ ಬಂಧುಮಿತ್ರ ನಿ । ಕಾಯ ಕನಕಾಭರಣ ಪಶುವಸನಾದಿಗಳ ನೆಲ್ಲ ॥ ಶ್ರೀಯರಸನೊಲಿದಿತ್ತು ಸಂತತ । ಕಾಯುವನಧಿಕ ಭಕ್ತಿಭರ ದಿಂ । ದೀಯವನಿಜಾಕಥೆಯ ನೋದುವ ಮನುಜರೆಲ್ಲರಿಗೆ ॥ ೪೯ ॥ ನಿರುತವೀಕಥೆಯ ನೊಲಿದಾಲಿಸು । ವರಿಗೆ ಹೇಳಸುವರಿಗೆ ಓದುವ । ವರಿಗೆ ಓದಿಸುವರಿಗೆ ಪರಮಾದರದೆ ಬರೆವರಿಗೆ ॥ ಗರುಡವಾಹನ ನೀವ ನತ್ಯಾ । ದರದೊಳಾ ಜನರಘಗಳೆಲ್ಲವ । ಪರಿಹರಿಸಿ ಕಲ್ಪಾಂತವರೆಗಾ ಸ್ವರ್ಗಸೌಖ್ಯವನು ... ... ... ॥ ೫೦ ॥

ಇಂತು ನಲವತ್ತೆಂಟನೆಯ ಅಧ್ಯಾಯ ಸಂಪೂರ್ಣವು

ಪದ್ಯಗಳು ೨೬೨೦.



## ಸೀತಾಚರಿತ್ರೆ ಸಂಪೂರ್ಣವು

---

ಮಂಗಳಾನಿ ಭವಂತು

---

ಕಂದ॥ ವರ ರಾಬರ್ಟ್ಸನ್ ಪೇಟೆಯೊ ।
ಳಿರುವಾಂಗ್ಲೋ ಕನ್ನಡದ ಸುವಿದ್ಯಾಲಯದೊಳ್ ॥
ಮೆರೆವಧ್ಯಾಪಕನೊರ್ವಂ ।
ವಿರಚಿಸಿದಂ ಮುದದೊಳಣ್ಣಯಾಖ್ಯಾತನಿದಂ ॥



*The Town Press Bangalore City,—1914.*

# ಶುದ್ಧಾಶುದ್ಧ ಪತ್ರಿಕೆ.



| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 1 | 8 | ತೋರಭುಜಗ. | ಘೋರಭುಜಗ. |
| 2 | 1 | ಜಾಣೆಯುಪ್ಪಂತೆ. | ಜಾಣನಪ್ಪಂತೆ. |
| ,, | 21 | ಘನತರಕೃಪೆ. | ಘನತರದಕೃಪೆ. |
| 4 | 10 | ಪತಿವ್ರತೆ. | ಹದಿಬದೆ. |
| 5 | 25 | ನಿರ್ದೋಷ. | ನದೋಷ. |
| 7 | 28 | ಬೇಡುವೆನುಸ. | ಬೇಡುವೆನುಸು. |
| 9 | 22 | ನೆಲ್ಲಪರಿಕಿಸಿಡ. | ನೆಲ್ಲವಪರಿಕಿಸಿದ. |
| 11 | 25 | ಮಿಗಿಲುಸಂತಸವ. | ಬಹುಳಸಂತಸವ. |
| 12 | 22 | ಸರರನೆಲ್ಲರ. | ಸುರರನೆಲ್ಲರ. |
| 15 | 2 | ರೂಪೆತಾಂಗ. | ರೂಪೆತಾಂ. |
| ,, | 21 | ವ್ಗಿಗೆಕ್ಕೈಮುಗಿದು. | ವಿಗೆಕ್ಕೈಮುಗಿದು. |
| ,, | ,, | ಪದಗಳ್ತಿಗೆರಗಿ. | ಪದಗಳಿಗೆರಗಿ. |
| 18 | 2 | ದೆಶೆಯು. | ದಶೆಯು. |
| 24 | 16 | ಭುಜಬಲಯುತರುಗಜ ಹುಲಿಸಿಂಹವೃಷಭಗಳ. | ಭುಜಬಲರುಗಜ ಸಿಂಹವ್ಯಾಘ್ರ ವೃಷಭಗಳ. |
| 28 | 15 | ದೊಂದುಸಾವಿರ. | ನೊಂದುಸಾವಿರ. |
| 29 | 16 | ಭುಜಭವ. | ಬುಜಭವ. |
| 36 | 7 | ತಾಂಬೂಲತಟ್ಟೆಗಳ. | ತಾಂಬೂಲಪಾತ್ರೆಗಳ. |
| 40 | 13 | ಕರೆತಹುದೆಂದು. | ಕರೆತರುವುದೆಂದು. |
| ,, | 17 | ತಿಳಿತೊಡನೆ. | ತಿಳಿದೊಡನೆ. |
| 46 | 29 | ಸೀತೆನೊಡಿ. | ಸೀತೆನೋಡಿ. |
| 49 | 14 | ಳೊಳುಗುಪ. | ಳೊಳಗುಪ. |
| 54 | 11 | ಸುಮಂತ್ರಿಗೆ. | ಸುಮಾಂತ್ರಗೆ. |

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| 54 | 23 | ಬಳಿಯೊಳು. | ಬಳಿಯೊಳ. |
| 55 | 18 | ವೃಕ್ಷವನುಸಂ. | ಮರವನುರೆ. |
| 61 | 4 | ಮುಂದಳವನಿಸುತೆ. | ಮೆಂದಳವನಿಸುತೆ. |
| 66 | 22 | ನಾರಿಯೊ. | ನಾರಿಯೋ. |
| 70 | 15 | ಲೆಳಿಸುತ್ತ. | ಲೆಳಸುತ್ತ. |
| 71 | 13 | ಕೂಡುವವುಹೀರುಹ. | ಕೊಡುವವುಹೀರುಹ. |
| 72 | 8 | ಗಿರುತ್ತ. | ಗಿರುತ. |
| 73 | 22 | ಕೊಂಡುಪೊದನು. | ಕೊಂಡುಪೋದನು. |
| 80 | 29 | ಯೆನಿಸುತುರ್ವರೆ. | ಯೆನಿಸುತ್ತುರ್ವರೆ. |
| 83 | 8 | ನವಿಲನಾಟವೆ. | ನವಿಲನಾಟ್ಯವೆ. |
| 87 | 15 | ಳುಷ್ಟ್ರಪಾದಿ. | ಳುಷ್ಟ್ರಪಾದಿ |
| 92 | 20 | ತಿನಿಯುಳನಗಲಿ. | ತಿನಿಯುಳನ್ನಗಲಿ. |
| 98 | 7 | ಮರುತಸಂಭವ. | ಮರುತನಾತ್ಮಜ. |
| 100 | 14 | ಶಾಸ್ತ್ರಂಗಳೊಳರಲು. | ಶಾಸ್ತ್ರಂಗಳೊರಲುವು. |
| 101 | 19 | ಮರುತಸುತನು. | ಪವನಸುತನು. |
| 105 | 23 | ಪಡಿಸುತಲಿಹೆ. | ಪಡಿಸುತ್ತಲಿಹೆ. |
| 110 | 5 | ದಿರೆಲಿ. | ದಿರಲಿ. |
| 116 | 5 | ದುಖಂಗಳೊಳು. | ದುಃಖಂಗಳೊಳು. |
| 124 | 11 | ತಳದು. | ತಳಿದು. |
| 125 | 30 | ಕೃತಿಗಳನು. | ಕೃತಿಗಳನ್ನು. |
| 129 | 13 | ವೋ. | ವೊ. |
| 138 | 3 | ಕೆನುತಕಳುಹಿಸಿದ. | ಕೆನುತವನಕಳುಹಿಸಿದ. |
| 142 | 18 | ರಾವನಾಗವು. | ರಾಮನಾಗವು. |
| 145 | 28 | ಳನುತ. | ಳೆನುತ. |
| 147 | 29 | ಮೆಂದೆನಿಸು. | ಮೆಂದೆನಿಸಿ. |
| 148 | 6 | ಸಂತಸ. | ಸಂಮುದ. |
| ,, | 9 | ಪೆಳ್ದನು. | ಪೇಳ್ದನು. |

| ಪುಟ. | ಪಙ್ತಿ. | ಅಶುದ್ಧ. | ಶುದ್ಧ. |
|---|---|---|---|
| 148 | 18 | ಬಂದಿಸಿ. | ಬಂಧಿಸಿ. |
| 149 | 6 | ದರಣದೊಳಾ. | ದಾರಣದೊಳಾ. |
| 151 | 17 | ನಿತ್ರ. | ನಿತ್ಯ. |
| ,, | 20 | ದಿಂದತಿ. | ದಿಂದಲೆ. |
| 152 | 24 | ರಘುಜನರನು. | ರಘುಜರನು. |
| 154 | 16 | ಗೌರರರವಿಸುತ. | ಗೌರವಿಸುತ. |
| 158 | 6 | ತೀಕ್ಷರದನ. | ತೀಕ್ಷ್ಣರದನ. |
| 159 | 10 | ಸಂತಸ. | ಸಂಮುದ. |
| ,, | 23 | ಹೊದಿಸಿ. | ಹೊಂದಿಸಿ. |
| 160 | 16 | ಕಡುಪರಾಕ್ರಮಿಯೆನಿಪ. | ಕಡುದುರಳನೆಂದೆನಿಪ. |
| ,, | 25 | ವದಿಸಿದ. | ವಧಿಸಿದ. |
| 162 | 3 | ಯೋಷಧಿ. | ಓಷಧಿ. |
| 164 | 25 | ಸಂತಸ. | ಸಂಮುದ. |
| 165 | 23 | ಪೊಡವಿನಂದನೆ. | ಪೊಡವಿಯುಮಗಳು. |
| 166 | 28 | ಸಂಮುುದ. | ಸಂಮುದ. |
| 167 | 9 | ಸಂತಸ. | ಸಂಮುದ. |
| 169 | 22 | ಸಂತಸ. | ಸಂಮುದ. |
| 183 | 4 | ಸಂತಸ. | ಸಂಮುದ. |
| 184 | 4 | ಸಂತಸ. | ಸಂಮುದ. |
| 197 | 12 | ತರತರದೊಳಾಕೃತಿ. | ತರತರದಾಕೃತಿ. |
| ,, | 26 | ವಸಿಷ್ಟ. | ವಸಿಷ್ಠ. |
| 199 | 12 | ಮಷೋತ್ಸವ. | ಮಹೋತ್ಸವ. |
| ,, | 21 | ಹಾರವನಿತ್ತು. | ಹಾರವನಿತ್ತ. |
| 202 | 20 | ದೆಸರ್ವತ್ರ. | ದೆಯೆಸರ್ವತ್ರ. |
| 204 | 21 | ಬಂಧುಸುಹೃ. | ಬಾಂಧವಸುಹೃ. |
| 208 | 12 | ಗಂಗಾವೇಣ. | ಗಂಗಾವೇಣಿ. |
| 210 | 3 | ನೊಂದುತೀರ್ಥವ. | ನೊಂದುಘಟ್ಟವ. |

| | | | |
|---|---|---|---|
| 230 | 21 | ಕಾಮುಧೆನು. | ಕಾಮಧೇನು. |
| 233 | 29 | ಭಗಳಂ. | ಭಂಗಳಂ. |
| 242 | 4 | ಳಲ್ಲಿಯುಚರಿಸುತ. | ಳಲ್ಲಿಚರಿಸುತ್ತ. |
| 244 | 10 | ಗೆಣಯೆನಿ. | ಗೆಣೆಯೆನಿ. |
| 253 | 19 | ಲೆಂತಹ. | ಲೆಂತಹು. |
| 254 | 10 | ಶೀವಿರೂಪವತಿ | ಶೀಲೆರೂಪವತಿ. |
| 263 | 1 | ದಾರವದೊಬ್ಬ. | ದೊಬ್ಬ. |
| 270 | 6 | ಪೊರೆಯುಗಿದ. | ಪರೆಯುಗಿದ. |
| 273 | 29 | ಶಿರರಳನು. | ಶಿರಗಳನು. |
| 274 | 14 | ನವನಿಳೆಯೊಳು. | ನವನಿಯೊಳು. |
| 281 | 24 | ದಣಿದರುದಕ್ಷಿಣೆ. | ದಣಿದರುವಿನುತದಕ್ಷಿಣೆ. |
| 290 | 14 | ವಾರಣಂಗಳನಿ. | ವಾರಣಂಗಳ. |
| 294 | 14 | ತರಿಸಿರುವುವೆನು. | ತರಿಸಿರುವೆವುನು. |
| 300 | 15 | ತಾಗವುದೆಳಾ. | ತಾಗವುದೊಳಾ. |
| 304 | 4 | ಧಾರಿಣಿತಲ. | ಧಾರಿಣೀತಲ. |
| 308 | 4 | ಳೆಯುನನೊಲಿಸಿ. | ಡೆಯುನನೊಲಿಸಿ. |
| ,, | 6 | ಕಾಣಿಕಯುನಾ. | ಕಾಣಿಕೆಯುನಾ. |
| 314 | 1 | ಪುದಿದು. | ಪುದಿದಾ. |
| ,, | 13 | ಮುನೀಂದ. | ಮುನೀಂದ್ರ. |
| ,, | 14 | ಗಂಡನ್ರ | ಗಂಡನ. |
| 324 | 30 | ಹೊಕನ್ಕ. | ಹೊಕ್ಕನು. |

ಪುಸ್ತಕವ್ಯಾಪಾರಿಗಳು,
ಅವೆನ್ಯೂ ರಸ್ತೆ, ಬೆಂಗಳೂರು ಸಿಟಿ.